# Conflict & Transition in Fiction of Poornachandra Tejaswi

# ಪೂರ್ಣಚಂದ್ರ ತೇಜಸ್ವಿಯವರ ಕಥನಗಳಲ್ಲಿ ಸಂಘರ್ಷ ಮತ್ತು ಸ್ಥಿತ್ಯಂತರ

ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ

ಸಂಶೋಧನೆ
**ಕವಿತ ಎಸ್**

ಮಾರ್ಗದರ್ಶನ
**ಪ್ರೊ. ಹಿ ಚಿ ಬೋರಲಿಂಗಯ್ಯ**
ಪ್ರಾಧ್ಯಾಪಕರು
ಕನ್ನಡ ವಿಶ್ವವಿದ್ಯಾಲಯ, ಹಂಪಿ




**ಅಧ್ಯಯನಾಂಗ : ಭಾಷಾ ನಿಕಾಯ**
**ಕನ್ನಡ ವಿಶ್ವವಿದ್ಯಾಲಯ, ಹಂಪಿ**
**ಕುವೆಂಪು ಅಧ್ಯಯನ ಕೇಂದ್ರ, ಕುಪ್ಪಳಿ**
**ತೀರ್ಥಹಳ್ಳಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ**

<u>೨೦೧೫</u>

# Conflict &Transition in fiction of PoornachandraTejaswi

# ಪೂರ್ಣಚಂದ್ರ ತೇಜಸ್ವಿಯವರ ಕಥನಗಳಲ್ಲಿ ಸಂಘರ್ಷ ಮತ್ತು ಸ್ಥಿತ್ಯಂತರ

ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ



ಸಂಶೋಧಕರು
ಕವಿತ ಎಸ್.

ಮಾರ್ಗದರ್ಶಕರು
ಡಾ. ಹಿ. ಚಿ. ಬೋರಲಿಂಗಯ್ಯ
ಪ್ರಾಧ್ಯಾಪಕರು
ಕನ್ನಡ ವಿಶ್ವವಿದ್ಯಾಲಯ, ಹಂಪಿ



ಅಧ್ಯಯನಾಂಗ:ಭಾಷಾನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ಕುವೆಂಪು ಅಧ್ಯಯನ ಕೇಂದ್ರ, ಕುಪ್ಪಳಿ
ತೀರ್ಥಹಳ್ಳಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ

೨೦೧೫

## ಪ್ರಮಾಣ ಪತ್ರ

**ಪೂರ್ಣಚಂದ್ರ ತೇಜಸ್ವಿಯವರ ಕಥನಗಳಲ್ಲಿ ಸಂಘರ್ಷ ಮತ್ತು ಸ್ಥಿತ್ಯಂತರ**

ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯ ಹಂಪಿಗೆ ಸಲ್ಲಿಸಲು ಡಾ. ಹಿ.ಚಿ ಬೋರಲಿಂಗಯ್ಯ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಪ್ರಸ್ತುತ ಮಹಾಪ್ರಬಂಧ ಅಥವಾ ಅದರ ಯಾವುದೇ ಭಾಗವನ್ನು ಹಿಂದೆ ಯಾವುದೇ ಪದವಿ, ಡಿಪ್ಲೊಮೊ, ಫೆಲೊಷಿಪ್‌ಗಳಿಗೆ ಬಳಸಿಕೊಂಡಿಲ್ಲ ಎಂದು ಈ ಮೂಲಕ ಘೋಷಿಸುತ್ತೇನೆ.

Kavitha S.

(ಕವಿತ ಎಸ್)
ಸಂಶೋಧನ ವಿದ್ಯಾರ್ಥಿ
ಕುವೆಂಪು ಅಧ್ಯಯನ ಕೇಂದ್ರ
ಕುಪ್ಪಳಿ

ಸ್ಥಳ : ಕುಪ್ಪಳಿ
ದಿನಾಂಕ : 30-09-2015

# ದೃಢೀಕರಣ ಪತ್ರ

ಕವಿತ ಎಸ್ ಇವರು **'ಪೂರ್ಣಚಂದ್ರ ತೇಜಸ್ವಿಯವರ ಕಥನಗಳಲ್ಲಿ ಸಂಘರ್ಷ ಮತ್ತು ಸ್ಥಿತ್ಯಂತರ'** ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಕನ್ನಡ ವಿಶ್ವವಿದ್ಯಾಲಯ ಹಂಪಿಯ ಭಾಷಾನಿಕಾಯಕ್ಕೆ ಪಿಎಚ್.ಡಿ ಪದವಿಗಾಗಿ ಸಲ್ಲಿಸುತ್ತಿರುವ ಈ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢಪಡಿಸುತ್ತೇನೆ.

ಸ್ಥಳ : ಕುಪ್ಪಳಿ
ದಿನಾಂಕ : 23.09.2015

ಮಾರ್ಗದರ್ಶಕರು
**ಡಾ. ಹಿ. ಚಿ. ಬೋರಲಿಂಗಯ್ಯ**
ಪ್ರಾಧ್ಯಾಪಕರು
ಕನ್ನಡ ವಿಶ್ವವಿದ್ಯಾಲಯ, ಹಂಪಿ

# *Conflict &Transition in fiction of PoornachandraTejaswi*

# ಪೂರ್ಣಚಂದ್ರ ತೇಜಸ್ವಿಯವರ ಕಥನಗಳಲ್ಲಿ ಸಂಘರ್ಷ ಮತ್ತು ಸ್ಥಿತ್ಯಂತರ

**ಪರಿವಿಡಿ** **ಪುಟ ಸಂಖ್ಯೆ**

# ಅಧ್ಯಾಯ ೧

## ಪ್ರವೇಶ

ಒಂದೊಂದು ತಲೆಮಾರು ಬದುಕಿನ ಬಗೆಗಿನ ತನ್ನ ಚಿಂತನೆಯನ್ನು ಪ್ರಸ್ತುತದಲ್ಲಿ ಜೀವಿಸುವ ಸ್ಥಿತಿಯೊಡನೆ ಸಮೀಕರಿಸಿ ವಿಶ್ಲೇಷಣೆ ಮಾಡುವುದಿದೆ. ಸಮಾಜ ಕೇಂದ್ರಿತವಾಗಿ ಬದುಕುವ ಮನುಷ್ಯರು ಪರಂಪರಾಗತ ಮೌಲ್ಯವೆಂದು ಸ್ವೀಕೃತಗೊಂಡ ಅನೇಕ ತತ್ವಗಳು ಮತ್ತು ಸಿದ್ಧಾಂತಗಳನ್ನು ಧಿಕ್ಕರಿಸಿ ತಮ್ಮ ಮೌಲ್ಯವನ್ನು ಸ್ಥಾಪಿಸುವುದಕ್ಕಾಗಿ ಹೋರಾಡುತ್ತಾರೆ. ಹೋರಾಟ ಬಲವಾಗಿದ್ದರೆ ಒಪ್ಪಿತ ಮೌಲ್ಯಗಳನ್ನು ತಿರಸ್ಕರಿಸಿ ಹೊಸದಾದ ವಾದವನ್ನು ಸೃಷ್ಟಿಸುತ್ತಾರೆ. ಇಲ್ಲವಾದರೆ ಒಪ್ಪಿತ ಮೌಲ್ಯಗಳಿಗೆ ತನ್ನನ್ನು ಒಡ್ಡಿಕ್ಕೊಳ್ಳುತ್ತಾರೆ. ಇಂತಹ ಸ್ವೀಕೃತ–ತಿರಸ್ಕೃತ ಮೌಲ್ಯಗಳು ಇಂದು ನೆನ್ನೆಯದಲ್ಲ. ವಿಶ್ವ ಸೃಷ್ಟಿಯೊಂದಿಗೆ ಜನ್ಮ ತಾಳಿದ್ದು ಇದಕ್ಕೆ ಕೊನೆ ಮೊದಲಿಲ್ಲ.

ಬದುಕು ಚಲಿಸಿದಂತೆಲ್ಲಾ ಹಲವಾರು ಮಾರ್ಪಾಡುಗಳಿಗೆ ಅನಿವಾರ್ಯವಾಗಿಯಾದರೂ ತಮ್ಮನ್ನು ಒಡ್ಡಿಕೊಳ್ಳಬೇಕಾಗುತ್ತದೆ. ಈ ಸಂದರ್ಭದಲ್ಲಿ ಸಮಾಜವು ಏಕಕೇಂದ್ರಿತ ಘಟಕವಾಗದೆ ಮನುಷ್ಯರನ್ನು ಆ ನೆಲೆಗೆ ಮುಖಾಮುಖಿಯಾಗಿಸುತ್ತಾ ಸೃಜನಶೀಲವಾಗಿ ಆಲೋಚಿಸುವುದಕ್ಕೆ ಪ್ರೇರೇಪಿಸುತ್ತದೆ. ಈ ಸಂದರ್ಭದಲ್ಲಿ ಎದುರಾಗುವ ಸವಾಲುಗಳನ್ನು ಸಮಸ್ಯೆಗಳನ್ನು ಎದುರಿಸುವ ಸಂದರ್ಭದಲ್ಲಿ ಸಹಜವಾಗಿಯೇ ಸಂಘರ್ಷಕ್ಕಿಳಿಯಬೇಕಾಗುತ್ತದೆ. ಇಂಥಹ ಸಂದರ್ಭಗಳಲ್ಲಿ ಸರಿಯೋ–ತಪ್ಪೋ? ಬೇಕೋ–ಬೇಡವೋ? ಇದೆಯೋ ಇಲ್ಲವೋ ಎಂಬ ಗೊಂದಲ ಹಾಗೂ ದ್ವಂದ್ವದೊಂದಿಗೆ ಮುಂದುವರೆಯುವುದು ನಡೆಯುತ್ತಿರುತ್ತದೆ.

ವಿಶ್ವವ್ಯವಸ್ಥೆಯ ಪ್ರತಿಯೊಂದು ಜೀವಿಯಲ್ಲೂ ಚೈತನ್ಯಶಕ್ತಿ ಅಡಗಿರುತ್ತದೆ. ಎಲ್ಲರೂ ಭೌತಿಕ ಕಾರ್ಯ ಚಟುವಟಿಕೆಯಲ್ಲಿ ತೊಡಗಿರುವಾಗ ಅವುಗಳನ್ನು ಸೂಕ್ಷ್ಮವಾಗಿ ಗಮನಿಸುವ/ಪರಿವೀಕ್ಷಿಸುವ ವ್ಯವಧಾನ ಈ ಯಾಂತ್ರಿಕ ಯುಗದಲ್ಲಿ ಎಷ್ಟು ಜನರಿಗೆ ಇರಲು ಸಾಧ್ಯ? ಇಂತಹ ಸಾಹಸಕ್ಕಿಳಿಯುವ ಪ್ರವೃತ್ತಿ ಜೀವವಿಜ್ಞಾನಿ ಇಲ್ಲವೆ ಜೀವಜಾಲದ ಒಡನಾಟದಲ್ಲಿರುವ ವ್ಯಕ್ತಿಗಳಿಗಷ್ಟೇ ಸಾಧ್ಯ. ಅಂತಹ ವ್ಯಕ್ತಿಗಳು ವಿರಳ. ಪೂರ್ಣಚಂದ್ರತೇಜಸ್ವಿಯವರು ಪ್ರಜ್ಞಾಪೂರ್ವಕವಾಗಿ ಇಂತಹದೊಂದು ಮನಸ್ಥಿತಿಯನ್ನು ನಿರ್ಮಾಣಮಾಡಿಕೊಂಡು ಬಹುಮುಖೀ ಅಧ್ಯಯನದಿಂದ ಪಡೆದುಕೊಂಡ ಜ್ಞಾನದೊಂದಿಗೆ ಬದುಕಿನ ನೇರ ಅನುಭವಗಳನ್ನು ಹೊಸದೊಂದು ಲಯದಲ್ಲಿ ಸಾಹಿತ್ಯ ಜಗತ್ತಿಗೆ ಹರಿಯಬಿಟ್ಟರು.

ಸುಮಾರು ಅರವತ್ತು ಕೃತಿಗಳನ್ನು ಹೊಂದಿರುವ ಪೂರ್ಣಚಂದ್ರ ತೇಜಸ್ವಿಯವರ ಬರಹ, ಆಳವಾದ ರಚನೆ ಮತ್ತು ವಿಸ್ತಾರವಾದ ಹರವನ್ನು ಉಳ್ಳದ್ದು. ನಿಸರ್ಗ ಮತ್ತು ಬದುಕಿನ ಅನಂತ ಆಯಾಮಗಳ ಅನ್ವೇಷಣೆಯಲ್ಲಿ ಅವರ ಸಾಹಿತ್ಯ ವಿಚಾರ ಸಾಗುತ್ತದೆ. ತೇಜಸ್ವಿಯವರ ಕಥೆಗಳ ಹಿಂದಿರುವ ಪ್ರಮುಖ ಆಶಯವೆಂದರೆ ಸಾಮಾನ್ಯ ಮನುಷ್ಯನ ಜೀವನ ಕ್ರಮ ಮತ್ತು ಅದರ ಹಿಂದಿರುವ ಶಕ್ತಿಗಳ ವಸ್ತುನಿಷ್ಠ ಗ್ರಹಿಕೆ. ನವೋದಯ ಸಾಹಿತ್ಯ ಸಂದರ್ಭದಲ್ಲಿ ತೇಜಸ್ವಿಯವರು ಬರವಣಿಗೆಯನ್ನು ಪ್ರಾರಂಭಿಸಿದರೂ ಅಲ್ಲಿನ ಆದರ್ಶ, ವೈಭವೀಕರಣ, ಭಾವುಕತೆ, ಸುಕುಮಾರತೆ ಇವುಗಳನ್ನು ಅನುಸರಿಸದೆ ನಗರಾನುಭವ ಕೇಂದ್ರಿತ ವ್ಯಕ್ತಿ ಪ್ರಜ್ಞೆ, ಅನಾಥ ಪ್ರಜ್ಞೆಗಳ ಅನಾವರಣಕ್ಕೆ

ಹೊಸ ಅಭಿವ್ಯಕ್ತಿ ವಿಧಾನಗಳನ್ನು ಅನುಸರಿಸಿದವರು. ಸಂಪ್ರದಾಯಕ್ಕೆ ಸಿಡಿದೆದ್ದ ಅವರ ಪ್ರತಿಭಟನೆ ಆಕ್ರೋಶಗಳು ಪ್ರಾರಂಭದ ಕಥೆಗಳಲ್ಲಿ ಕಾಣಬರುವುದಿಲ್ಲ. ಆನಂತರದ ಅವರ ಚಿಂತನೆ ವಿಚಾರಗಳು ವಾಸ್ತವ ನಿರೂಪಣೆಯೊಂದಿಗೆ ಗಂಭೀರತೆಗೆ ಒತ್ತು ನೀಡುವ ಅಭಿಪ್ರಾಯಗಳಾಗಿ ತೆರೆದುಕೊಳ್ಳತೊಡಗಿದವು. ವಿದ್ಯಾರ್ಥಿಯಾಗಿದ್ದಾಗಲೇ ಸಾಹಿತ್ಯ ಕೃಷಿಯಲ್ಲಿ ತೊಡಗಿದ ತೇಜಸ್ವಿಯವರು ಸುಧಾರಣೆಗಿಂತ ಬದಲಾವಣೆಗಳನ್ನೆ ಹೆಚ್ಚು ಪ್ರಿಯವಾಗಿಸಿಕೊಂಡು, ಸ್ಥೂಲವಾದ ಧೋರಣೆ, ನಿಲುವುಗಳನ್ನು ತಾಳಿ ನವೋದಯ, ನವ್ಯರಿಂದ ಭಿನ್ನವಾದ ಅಭಿವ್ಯಕ್ತಿ ಕ್ರಮವನ್ನು ತಮ್ಮದಾಗಿಸಿಕೊಂಡರು.

ಪೂರ್ಣಚಂದ್ರ ತೇಜಸ್ವಿಯವರು ಸಾಹಿತಿಯಾಗಿ ಮಾತ್ರವಲ್ಲದೆ ಅಂಕಣಕಾರರಾಗಿಯೂ, ಪ್ರಕೃತಿ ಮತ್ತು ಪರಿಸರ ಜ್ಞಾನದ ಮಹತ್ವವನ್ನೂ, ವಿಜ್ಞಾನದ ಅದ್ಭುತಗಳನ್ನೂ, ವಿಶ್ವದ ರಹಸ್ಯಾತ್ಮಕ ವೈಚಿತ್ರ್ಯಗಳನ್ನೂ ಜನಮನಕ್ಕೆ ಮುಟ್ಟಿಸಿ 'ಗಂಭೀರ ವಿಚಾರವಾದಿ'ಯೆಂದು ಜನಪ್ರಿಯರಾದವರು. ಇದಲ್ಲದೆ ಬರಹಗಳಿಗೆ ಪೂರಕವಾದ ಅವರ ಇನ್ನೊಂದು ಆಸಕ್ತಿ ಫೋಟೋಗ್ರಫಿ, ವಿಜ್ಞಾನ ಹಾಗೂ ಪರಿಸರದ ಬಗೆಗಿನ ಆಸಕ್ತಿ-ಸಮತೋಲನ ಜ್ಞಾನಗಳ ಅಧ್ಯಯನ, ವೀಕ್ಷಣೆಯ ಫಲ ಎಲ್ಲ ಅವರ ಕೃತಿಗಳ ಮೂಲಕವಾಗಿ ಕನ್ನಡ ಸಾಹಿತ್ಯಕ್ಕೆ ಹೊಸ ಆಯಾಮವನ್ನು ಒದಗಿಸಿವೆ.

ಜೀವನಕ್ರಮ ಬದಲಾಗುತ್ತಿದ್ದಂತೆ ಅದನ್ನು ನೋಡುವ ದೃಷ್ಟಿಕೋನ ಬದಲಾಗುತ್ತದೆ. ಆಗ ಅನ್ವೇಷಣಾತ್ಮಕ ಪ್ರಜ್ಞಾವಲಯ ವಿಸ್ತರಣಗೊಳ್ಳುತ್ತದೆ. ಅದರಲ್ಲಿ ಅಸ್ತಿತ್ವದ ಅನೇಕ ಮುಖಗಳತ್ತ, ಅನುಭವದ ರಾಜಕೀಯ-ನೈತಿಕ ಸೂಕ್ಷ್ಮತೆಗಳತ್ತ ದಿಟ್ಟವಾಗಿ, ವಿಶ್ಲೇಷಣಾತ್ಮಕವಾಗಿ ನೋಡುವ ಅಂಶಗಳು ಸೇರ್ಪಡೆಯಾಗಿ ಹೊಸ ನೋಟ ಕಾಣಸಿಗುತ್ತದೆ. ಇದರಂತೆ ತೇಜಸ್ವಿಯವರ ಬೇರೆ ಬೇರೆ ಘಟ್ಟಗಳ ಅನುಭವ ಪ್ರಪಂಚ ಮತ್ತು ದೃಷ್ಟಿಕೋನಗಳಲ್ಲಿ ಬದಲಾವಣೆಗಳನ್ನು ಗುರುತಿಸಬಹುದಾದರೂ ಅವುಗಳಲ್ಲಿನ ಕೆಲವು ಕೇಂದ್ರ ಅಂಶಗಳು ಸಮಾನವಾಗಿವೆ. ತಮ್ಮ ವಿಮರ್ಶಾ ಬರವಣಿಗೆಯಲ್ಲಿ, ಕಥಾಸಂಕಲನದ ಮುನ್ನುಡಿಗಳಲ್ಲಿ ಮಾತ್ರವಲ್ಲದೆ, ತಮ್ಮ ಕಥನಗಳ ಚೌಕಟ್ಟಿನಲ್ಲಿಯೂ ಬರವಣಿಗೆಯ ಸ್ವರೂಪದ ಬಗ್ಗೆ ಕೆಲವು ಸೂಚನೆಗಳನ್ನು ನೀಡಿರುವುದನ್ನು ಗಮನಕ್ಕೆ ತಂದುಕೊಂಡರೆ ತೇಜಸ್ವಿ ಸಾಹಿತ್ಯದ ಪ್ರಾಮುಖ್ಯತೆಯನ್ನು ಗುರುತಿಸುವುದಕ್ಕೆ ಸಾಧ್ಯವಾಗುತ್ತದೆ. ಪೂರ್ಣಚಂದ್ರತೇಜಸ್ವಿಯವರ ಕಥನ ಸಾಹಿತ್ಯದ ಸೃಜನಶೀಲ ಪ್ರಯೋಗ ಪ್ರವೃತ್ತಿಯ ಅಧ್ಯಯನ ಮಾಡುವುದು ಅಗತ್ಯವಾಗಿದೆ.

ಅತ್ಯಂತ ವೈವಿಧ್ಯಮಯವೂ, ಸತ್ವಶಾಲಿಯೂ ಆದ ತೇಜಸ್ವಿಯವರ ಕಥನ ಸಾಹಿತ್ಯದಲ್ಲಿ ಸಂಘರ್ಷ ಮತ್ತು ಸ್ಥಿತ್ಯಂತರಗಳನ್ನು ಕುರಿತಂತೆ ವಿಪುಲವಾದ ವಿಷಯಗಳು ದೊರೆಯುತ್ತವೆ. ಸ್ವತಂತ್ರವಾದ ಅಧ್ಯಯನವನ್ನು ಕೈಗೊಳ್ಳುವ ಉದ್ದೇಶದಿಂದ **ಸಂಘರ್ಷ** ಮತ್ತು **ಸ್ಥಿತ್ಯಂತರ** ಎಂಬ ಪರಿಕಲ್ಪನೆಯನ್ನು ಅಧ್ಯಯನದ ವಿಷಯವಾಗಿ ಆಯ್ದುಕೊಂಡೆನು. ಅದು ಕೂಡಾ ನಮ್ಮ ಆಧುನಿಕ ಚಿಂತನ ಕ್ರಮಕ್ಕೆ ಅನುಗುಣವಾಗಿ, ನಮ್ಮ ಸೈದ್ಧಾಂತಿಕ ನಿಲುವುಗಳಿಗೆ ಅನುಗುಣವಾಗಿ ತೇಜಸ್ವಿ ಕಥನಗಳಲ್ಲಿ ಸಾಮಾಜಿಕ, ಧಾರ್ಮಿಕ, ರಾಜಕೀಯ ಆಯಾಮದೊಳಗಿನ ಸೂಚನೆಗಳನ್ನು ಗುರುತಿಸಬಹುದೇ ಹೊರತು ತೇಜಸ್ವಿಯವರು ಹಾಗೆಲ್ಲಿಯೂ ಪರಿಭಾವಿಸಿ ಕೃತಿ ರಚನೆಯಲ್ಲಿ ತೊಡಗಿದ್ದರು ಎನ್ನಲು ಸಾಧ್ಯವಿಲ್ಲ. ಅಂದರೆ ಬದುಕನ್ನು ಇಡಿಯಾಗಿ ಸ್ವೀಕರಿಸುವ ಒಟ್ಟಾಗಿ ಪರಿಭಾವಿಸುವ ತೇಜಸ್ವಿಯವರು ಯಾವುದೇ ವಿಭಾಗೀಕರಣವನ್ನು ಅನುಸರಿಸದ ಲೇಖಕರು.

ಜನ ಜೀವನ ಕ್ರಮವನ್ನು ಅದರ ದೈನಂದಿನ ಜೀವನದ ದಟ್ಟವಾದ ವಿವರಗಳಲ್ಲಿ ಸೆರೆಹಿಡಿಯುವಂತೆ ಆ ಸಮಾಜದ ವಿಮರ್ಶಾತ್ಮಕ ವಿಶ್ಲೇಷಣೆಯನ್ನು ಮಾಡುವುದೂ ವಾಸ್ತವವಾದೀ ಬರವಣಿಗೆಯ ಒಂದು ಪ್ರಮುಖ ಲಕ್ಷಣ. ಈ ದೃಷ್ಟಿಯಿಂದ ನೋಡಿದಾಗ ತೇಜಸ್ವಿಯವರು ತಮ್ಮ ಸುತ್ತಲ ಸಮಾಜವನ್ನು ವಿಮರ್ಶಿಸಿ, ವಿಶ್ಲೇಷಿಸಿ, ಸಂಶ್ಲೇಷಿಸುತ್ತಿರುವ ಪರಿ ಅಭ್ಯಾಸ ಯೋಗ್ಯವಾದದ್ದು.

## ೧.೧ ಅಧ್ಯಯನದ ಉದ್ದೇಶ-ವ್ಯಾಪ್ತಿ

ಸಂಶೋಧನೆಯ ಪರಿಧಿಯಲ್ಲಿನ ಹುಡುಕಾಟ ನಮಗೆ ಬೇಕಾದ ಸಂಗತಿಗಳನ್ನು ಗುರುತಿಸುವುದು ಮತ್ತು ಅಗತ್ಯ ಅರ್ಥಗಳ ಹೊರಡುವಿಕೆಗಾಗಿ ಕೃತಿ ಶೋಧನೆಯಲ್ಲಿ ತೊಡಗುವುದಷ್ಟೇ ಆಗಿದೆ. ಇದೇ ಕಾರಣವಾಗಿ ಇವರ ಸಾಹಿತ್ಯದಲ್ಲಿ ಅಡಗಿರುವ ಮೂಲಭೂತವಾದ ತಾತ್ವಿಕ ಚಿಂತನೆಗಳನ್ನು ಮತ್ತು ಅವುಗಳ ಅಂತಸ್ವರೂಪದಲ್ಲಿ ಆಗಿರುವ ಮುಖ್ಯ ಸಾಂಸ್ಕೃತಿಕ, ಬದಲಾವಣೆಗಳನ್ನು ಅಧ್ಯಯನ ಮಾಡುವ ಆಶಯವನ್ನು ಹೊಂದಿದ್ದೇನೆ. ಇದಕ್ಕಾಗಿ ಪ್ರತ್ಯೇಕವಾದ ಅಧ್ಯಯನದ ಅವಶ್ಯಕತೆಯಿದೆ. ಇಂತಹ ಅಧ್ಯಯನಕ್ಕಾಗಿ ತೇಜಸ್ವಿಯವರ ಸಂಪೂರ್ಣ ಕೃತಿಗಳನ್ನು ಅಧ್ಯಯನಕ್ಕೆ ಒಳಪಡಿಸಲು ಸಾಧ್ಯವಾಗುವುದಿಲ್ಲ. ಏಕೆಂದರೆ ತೇಜಸ್ವಿ ಸಾಹಿತ್ಯದ ವ್ಯಾಪ್ತಿ ಮತ್ತು ಹರಹು ಹೆಚ್ಚಾಗುವುದರಿಂದ ಸಾಹಿತ್ಯೇತರ ಆಸಕ್ತಿಪೂರ್ಣ ಮಾಹಿತಿಗಳು ನನ್ನ ಅಧ್ಯಯನದ ಸಾಧ್ಯತೆಗಳನ್ನು, ವಿಶಿಷ್ಟತೆಗಳನ್ನು ಮೀರಿ ಸಾಗುತ್ತವೆ. ಆದ್ದರಿಂದ ಅಧ್ಯಯನದ ವ್ಯಾಪ್ತಿ ಕಥನಕ್ಕೆ ಮಾತ್ರ ಸೀಮಿತವಾಗಿದೆ.

ತೇಜಸ್ವಿ ಸಾಹಿತ್ಯದ ಹಲವು ಮಜಲುಗಳಲ್ಲಿ ವ್ಯಕ್ತವಾಗಿರುವ ಧೋರಣೆಗಳು ಅವರ ವೈಚಾರಿಕ ಸ್ಥಿತ್ಯಂತರಗಳಿಗೆ ಕನ್ನಡಿ ಹಿಡಿಯುತ್ತದೆ. ಇವು ಲೇಖಕನ ಆಂತರಂಗಿಕ ಬದಲಾವಣೆಗೆ ಸಂಬಂಧ ಪಟ್ಟಿದ್ದು ಮಾತ್ರವಲ್ಲ ನಾಡಿನ ಸಮಾಜ-ಸಂಸ್ಕೃತಿಯನ್ನು ಅವಲಂಬಿಸಿದ ಹೊಸ ಪ್ರಜ್ಞೆಯೂ ಆಗಿದೆ. ತೇಜಸ್ವಿ ಸಾಹಿತ್ಯ ಕಾಲಕಾಲಕ್ಕೆ ಪಡೆದುಕೊಂಡ ಬದಲಾವಣೆ, ಬೆಳವಣಿಗೆಯ ದೃಷ್ಟಿಯಿಂದ ಪರ್ವಕಾಲ ಹಾಗೂ ಮಹತ್ವಪೂರ್ಣವಾದ ಕಾಣ್ಕೆ. ಇವನ್ನು ಪ್ರಮುಖಧಾರೆಯಾಗಿ ಸ್ವೀಕರಿಸಿದಾಗ ಸಾಹಿತ್ಯ ಲೋಕದ ಬಗೆಗಿರುವ ಅವರ ಅಭಿರುಚಿ ಸಂಸ್ಕರಣಗೊಳ್ಳುತ್ತಾ ಸಾಗಿರುವುದು ಸಾಮಾಜಿಕ ಸಾಂಸ್ಕೃತಿಕ ಸಾಹಿತ್ಯಿಕ ಬದಲಾವಣೆಗಳಿಗೆ ಸಾಕ್ಷಿಯನ್ನು ಒದಗಿಸುತ್ತದೆ. ಸಾಂಸ್ಕೃತಿಕ ಅನನ್ಯತೆಯ ಈ ಚಲನಶೀಲತೆ ಕನ್ನಡ ಸಾಹಿತ್ಯ ಮಾರ್ಗದ ಮೈಲಿಗಲ್ಲಾಗಿದೆ.

ಬದುಕನ್ನು ಕುರಿತ ಆಳವಾದ ಶ್ರದ್ಧೆ, ಜೀವನೋತ್ಸಾಹ, ಆದರ್ಶಮಯತೆ ತೇಜಸ್ವಿಯವರನ್ನು ಸಾಹಿತಿಯಾಗಿ ರೂಪಿಸಿದಂತೆ ರಸಾನುಭವದಲ್ಲಿಯೂ ವಿಶೇಷಾನುಭೂತಿಯ ಮೂಲಕ ತಮ್ಮ ಸಾಹಿತ್ಯ ಶಕ್ತಿಯನ್ನು ಕಾಲಂತರದಲ್ಲಿ ಪರಿವರ್ತಿಸಿಕೊಳ್ಳುತ್ತಾ ಸಮಗ್ರತೆಯತ್ತ ಸರಿದಿರುವುದು ತೇಜಸ್ವಿ ಬದುಕಿನ ವೈಚಾರಿಕ ಸಾಧನೆಗಳಲ್ಲಿ ಒಂದಾಗಿದೆ. ತೇಜಸ್ವಿಯವರ **ವಿಚಾರವಾದಗಳು** ಎಂಬ ಕೃತಿಯಲ್ಲಿ ಸಮಕಾಲೀನ ವಿಚಾರಗಳಿಂದ ಕೂಡಿದ ಜಿಜ್ಞಾಸೆ ಬರಹಗಾರನ ಸಾಹಿತ್ಯಕ ಜವಾಬ್ದಾರಿಯ ಹಿಂದೆ ಅಡಗಿರುವ ಪ್ರವೃತ್ತಿಯು ಸಾಮಾಜಿಕ ಪೂರ್ಣಪ್ರಜ್ಞೆಯ ಮಾನವೀಯ ಸ್ಥಿತಿಯನ್ನು ಧ್ವನಿಸುತ್ತದೆ. ಈ ವಿಚಾರಧಾರೆಗಳು ವೈಚಾರಿಕತೆಯ ನೆಲೆಗಟ್ಟಿನ ಮೇಲೆ ರೂಪಿತವಾದವುಗಳಾಗಿವೆ. ಈ ನಿಟ್ಟಿನಲ್ಲಿ ಕೃತಿಕಾರ ಮತ್ತು ಅವರ ಕೃತಿಗಳೊಳಗೆ ಮಿಳಿತವಾಗಿರುವ ಸಂಬಂಧವನ್ನು ಸಂಘರ್ಷ ಮತ್ತು ಸ್ಥಿತ್ಯಂತರದ ಹಿನ್ನೆಲೆಯಲ್ಲಿ ಚರ್ಚಿಸುವುದು ಅಧ್ಯಯನದ ಉದ್ದೇಶವಾಗಿದೆ.

## ೧.೨ ಅಧ್ಯಯನ ವಿಧಾನ

ಪೂರ್ಣಚಂದ್ರ ತೇಜಸ್ವಿಯವರ ಅನುಭವ ಪೂರ್ಣ ವಿಸ್ತಾರವಾದ ಸಾಹಿತ್ಯಕ್ಕೆ ಸಂಬಂಧಪಟ್ಟಂತೆ ಅನೇಕ ವಿಶ್ಲೇಷಣಾತ್ಮಕ ಚರ್ಚೆಗಳು ನಡೆದಿವೆ. ಅವುಗಳ ಸಮೀಕ್ಷೆ ಮತ್ತು ಸ್ವರೂಪದ ಸಂಕ್ಷಿಪ್ತ ನೋಟ ಈ ಮಹಾಪ್ರಬಂಧಕ್ಕೆ ಪೂರಕವಾಗಿ ಬರುತ್ತದೆ. ಪೂರ್ಣಚಂದ್ರತೇಜಸ್ವಿಯವರ ಸಾಹಿತ್ಯವನ್ನು ಕುರಿತಂತೆ ಈವರೆಗೆ ಬಂದಿರುವ ವಿಮರ್ಶಾತ್ಮಕ ಗ್ರಂಥಗಳು, ಕಿರುಗ್ರಂಥಗಳು, ಬಿಡಿ ಬಿಡಿ ಲೇಖನಗಳು, ಮಹಾಪ್ರಬಂಧಗಳು, ಪ್ರೌಢಪ್ರಬಂಧಗಳ ಉಲ್ಲೇಖದೊಂದಿಗೆ ಕೃತಿಗಳ ಸಮೀಕ್ಷೆಯನ್ನು ಮೊದಲನೆಯ ಅಧ್ಯಾಯದಲ್ಲಿ ನಡೆಸಲಾಗಿದೆ. ವೈವಿಧ್ಯಮಯವಾದ, ವೈಶಿಷ್ಟ್ಯಮಯವಾದ ಅಭಿಪ್ರಾಯಗಳ ಮೂಲಕ ಕೃತಿಕಾರರ/ವಿಮರ್ಶಕರ ಪ್ರತಿಭೆಗಳ ಪರಿಚಯ, ವಿಚಕ್ಷಣ ದೃಷ್ಟಿಯ ಸೂಕ್ಷ್ಮನೋಟ ಇಲ್ಲಿ ನಮಗೆ ದೊರೆಯುತ್ತದೆ. ಹಾಗಾಗಿ ಇಲ್ಲಿನ ಹೆಚ್ಚಿನ ವಿಚಾರ ವಿಮರ್ಶೆಗಳು ಹೊಳಹುಗಳನ್ನು ನೀಡಿ ತೇಜಸ್ವಿ ಸಾಹಿತ್ಯವನ್ನು ಬೇರೆ ಬೇರೆ ದೃಷ್ಟಿಕೋನಗಳಲ್ಲಿ ವೀಕ್ಷಿಸುವುದಕ್ಕೆ ಬೇಕಾದ ಮಾರ್ಗದರ್ಶನವನ್ನು ಮಾಡುತ್ತವೆ. ಅವುಗಳಲ್ಲಿ ಸಾಕಷ್ಟು ಬರಹಗಳನ್ನು ಮತ್ತು ಅವುಗಳ ವೈಶಿಷ್ಟ್ಯಗಳನ್ನು ಈ ದೃಷ್ಟಿಯಿಂದ ಅವಲೋಕಿಸಲಾಗಿದೆ. ತೇಜಸ್ವಿ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಅನೇಕ ಕೃತಿಗಳು ಹಾಗೂ ಲೇಖನಗಳಿದ್ದರೂ ಎಲ್ಲಾ ವಿಮರ್ಶಕರ/ಕೃತಿಕಾರರ ಅಭಿಪ್ರಾಯಗಳ ಬಗ್ಗೆ ಕೂಲಂಕಷವಾಗಿ ಹೇಳಲು ಆಗಿಲ್ಲ. ಅನುಬಂಧದಲ್ಲಿ ಉಲ್ಲೇಖಿಸಲಾಗಿರುವ ತೇಜಸ್ವಿ ಕಥನ, ತೇಜಸ್ವಿ ಸಾಹಿತ್ಯ ಸಂಕಥನ, ತೇಜಸ್ವಿ ಸಾಹಿತ್ಯ ಕೃಷಿ, ಏಕ-ಅನೇಕ ಇವುಗಳನ್ನು ಹೊರತುಪಡಿಸಿ ಮಿಕ್ಕೆಲ್ಲ ಅಧ್ಯಯನಗಳು, ಮತ್ತು ವಿಮರ್ಶಾಪೂರ್ಣವಾದ ಮೂರ್ನಾಲ್ಕು ಬರಹಗಳು ಮತ್ತು ಹತ್ತಾರು ಬಿಡಿಲೇಖನಗಳು ಎಲ್ಲವೂ ಒಂದಿಲ್ಲೊಂದು ರೀತಿಯಲ್ಲಿ, ಬೇರೆ ಬೇರೆ ದೃಷ್ಟಿಕೋನದಲ್ಲಿ ತೇಜಸ್ವಿ ಸಾಹಿತ್ಯದಲ್ಲಿನ ಅಂಶಗಳನ್ನು ದಾಖಲಿಸುವ ಮತ್ತು ವಿಶ್ಲೇಷಿಸುವ ಮಾದರಿಯಲ್ಲಿವೆ. ನನ್ನ ಉದ್ದೇಶಕ್ಕೆ ಮಹತ್ವವೆಂದು ತೋರಿದ ಕೆಲವು ವಿಮರ್ಶಾ ಲೇಖನಗಳ ಅಭ್ಯಾಸದಿಂದ ತೇಜಸ್ವಿ ಸಾಹಿತ್ಯವನ್ನು ವಿಮರ್ಶಕರು ಯಾವ ಯಾವ ದೃಷ್ಟಿಕೋನದಲ್ಲಿ ವಿಶ್ಲೇಷಿಸಿದ್ದಾರೆ ಎಂಬುದನ್ನು ತಿಳಿಯುವುದರ ಜೊತೆಗೆ; ಯಾವ ಹೊಸ ಆಯಾಮಗಳನ್ನು ಬೆಳೆಸುತ್ತವೆ ಅನ್ನುವುದನ್ನು ಈ ಕೃತಿಗಳಿಂದ ಕಂಡುಕೊಳ್ಳಲು ಸಾಧ್ಯವಾಗಿದೆ.

ಎರಡನೆಯ ಅಧ್ಯಾಯದಲ್ಲಿ ಪೂರ್ಣಚಂದ್ರತೇಜಸ್ವಿಯವರ ಬದುಕು ಬರಹ ಕುರಿತ ಸಂಕ್ಷಿಪ್ತವಾದ ವಿವರಣೆಯೊಂದಿಗೆ, ಸ್ವಾತಂತ್ರ್ಯೋತ್ತರ ದಶಕಗಳಲ್ಲಿ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಆದ ಸಾಹಿತ್ಯಿಕ ಬದಲಾವಣೆಗೆ ಪೂರ್ಣಚಂದ್ರ ತೇಜಸ್ವಿಯವರಂತೆ ಅದೇ ಕಾಲಮಾನದಲ್ಲಿನ ಅನೇಕ ಬರಹಗಾರರು ಸಮಾನಧೋರಣೆಗಳಿಂದ ಪ್ರತಿಕ್ರಿಯಿಸಿದ್ದರು. ಅವರಲ್ಲಿ ಪ್ರಮುಖರಾದ ಏಳು ಲೇಖಕರುಗಳನ್ನು ಆಯ್ದುಕೊಂಡು ಅವರುಗಳು ನಿಶ್ಚಿತ ಕಾಲಮಾನದಲ್ಲಿ ತಮ್ಮ ಚಿಂತನೆಯ ಸ್ಥಾಯೀ ಆಕರಗಳನ್ನು ಯಾವ ರೀತಿಯಲ್ಲಿ ಪ್ರಸ್ತುತ ಪಡಿಸಿದರು ಎಂಬುದನ್ನು ಈ ಅಧ್ಯಾಯದಲ್ಲಿ ಗುರುತಿಸಿಕೊಳ್ಳಲಾಗಿದೆ. ಇದರ ಜೊತೆಗೆ ಸಮಕಾಲೀನ ಲೇಖಕರುಗಳಲ್ಲಿ ಸಂವಾದಿಯಾಗಿ ಬೆಳೆದು ಬಂದಿರುವ ಕನ್ನಡ ಕಥಾಸಾಹಿತ್ಯದ ಹಲವು ಮಗ್ಗುಲುಗಳನ್ನು, ಅವುಗಳ ಸೃಜನಶೀಲತೆಯ ಸ್ವರೂಪಗಳನ್ನು ದೊರಕಿಸಿಕೊಡುವುದು ಅಗತ್ಯವೆನಿಸಿದ್ದರಿಂದ ಈ ಲೇಖಕರುಗಳ ಕಥನಗಳ ಪರಿವೀಕ್ಷಣೆಯೊಂದಿಗೆ ಅವುಗಳ ಮೇಲ್ನೋಟವನ್ನು ಕಟ್ಟಿಕೊಡುವ ಪ್ರಯತ್ನವನ್ನು ಈ

ಅಧ್ಯಾಯದಲ್ಲಿ ಮಾಡಲಾಗಿದೆ. ತೇಜಸ್ವಿಯವರ ಕಥನಗಳಲ್ಲಿ ಮೂಡಿಬರುವ ಸಾಮಾಜಿಕ ಮೌಲ್ಯಗಳ ಸೃಷ್ಟಿ ಮತ್ತು ಜೀವನದರ್ಶನದ ತೀವ್ರತೆ ಇತರ ಸಮಕಾಲೀನ ಲೇಖಕರಿಗಿಂತ ಹೇಗೆ ಭಿನ್ನವೆನಿಸುತ್ತದೆ ಎಂಬುದನ್ನು ಕಂಡುಕೊಳ್ಳುವುದು ಮುಖ್ಯವಾಗಿದೆ.

ಮೂರನೆಯ ಅಧ್ಯಾಯ **ಪೂರ್ಣಚಂದ್ರ ತೇಜಸ್ವಿ ಕಥನಗಳಲ್ಲಿ ಸಂಘರ್ಷ** ಮತ್ತು ನಾಲ್ಕನೆಯ ಅಧ್ಯಾಯ **ಪೂರ್ಣಚಂದ್ರ ತೇಜಸ್ವಿ ಕಥನಗಳಲ್ಲಿ ಸ್ಥಿತ್ಯಂತರ** ಇವು ಈ ಮಹಾಪ್ರಬಂಧದ ವಿಷಯಕ್ಕೆ ಪ್ರವೇಶವನ್ನು ಕಲ್ಪಿಸಿರುವಂತಹವು. ಪರಿಕಲ್ಪನೆಯ ಆಧಾರಿತವಾಗಿ ಈ ಅಧ್ಯಾಯಗಳನ್ನು ವಿಂಗಡಿಸಿಕೊಂಡು ತೇಜಸ್ವಿ ಸಾಹಿತ್ಯಾಧ್ಯಯನವನ್ನು ಈ ಎರಡು ಪರಿಕಲ್ಪನೆಗಳ ಹಿನ್ನೆಲೆಯಲ್ಲಿ ವಿವೇಚಿಸಲಾಗಿದೆ. ಸಂಘರ್ಷ ಪರಿಕಲ್ಪನೆಯನ್ನು ನಮ್ಮ ಸಂಸ್ಕೃತಿಯ ಸಂದರ್ಭದಲ್ಲಿಟ್ಟುಕೊಂಡೇ ಪರಿಶೀಲಿಸಬೇಕಾದುದು ಇಲ್ಲಿನ ಬಹುಮುಖ್ಯ ಧ್ಯೇಯವಾಗಿದೆ. ಏಕೆಂದರೆ ಅದರ ಸೀಮಿತಾರ್ಥದಲ್ಲೆ ವ್ಯಾಖ್ಯಾನಕ್ಕೆ ಒಳಪಟ್ಟರೆ ಘರ್ಷಣೆ, ತಿಕ್ಕಾಟ, ಹೊಡೆದಾಟ ಎಂಬ ಅರ್ಥಗಳಿಂದ ಕೂಡಿ ಪ್ರಸ್ತುತ ಪ್ರಬಂಧದಲ್ಲಿ ಬೇರೆಯದೇ ಅರ್ಥ ಶೋಧನೆಯಾಗಿಬಿಡುವ ಆತಂಕವಿದೆ. ಸಂಘರ್ಷವಿಲ್ಲದ ಬದುಕೇ ಇಲ್ಲ. ಬದುಕಲೇಬೇಕೆಂಬ ಮನಸ್ಥಿತಿಯು ವಸ್ತುಸ್ಥಿತಿ ಮತ್ತು ಭೌತಿಕತೆಯ ನಡುವೆ ಘರ್ಷಣೆಯನ್ನುಂಟುಮಾಡುತ್ತದೆ. ಘರ್ಷಣೆ ಎನ್ನುವುದು ಸ್ವಭಾವಜನ್ಯ; ಭಯ–ಸಂಕಟ–ಅಸಹಾಯಕತೆಯ ತೊಳಲಾಟದಲ್ಲಿ ಹೊರಹೊಮ್ಮುವ ರೂಪ. ಸಂಘರ್ಷವೆನ್ನುವುದು ವ್ಯಕ್ತಿ ಹಾಗೂ ಸಮಾಜದ ಚಾಲಕಶಕ್ತಿಯಾಗಿ ಕೆಲಸ ಮಾಡುತ್ತದೆ. ಸಂಘರ್ಷವಿಲ್ಲದೆ ಬದುಕು ಸಾಗುವುದಿಲ್ಲ. ವ್ಯಕ್ತಿ ತಾನು ಜೀವಿಸುವ ಪರಿಸರದಲ್ಲಿ ಚಲನೆಗೊಂಡಾಗ ಒಂದು ಬಗೆಯ ಸಂಘರ್ಷಕ್ಕೂ, ಸಮಾಜದೊಡನೆ ಸಂಪರ್ಕವಿಟ್ಟುಕೊಳ್ಳಲು ಪ್ರಯತ್ನಿಸಿದಾಗ ಮತ್ತೊಂದು ಬಗೆಯ ಸಂಘರ್ಷಕ್ಕೂ ಒಳಗಾಗಬಹುದು. ಸಂಘರ್ಷದ ಸ್ವರೂಪ ಎಷ್ಟೋ ವೇಳೆ ಎದ್ದು ಕಾಣದೆ ಹೋಗುತ್ತದೆ. ಅದು ವ್ಯಕ್ತಿ ಮತ್ತು ಸಾಮಾಜಿಕ ಘರ್ಷಣೆಗಳಲ್ಲಿ ಎದ್ದುಕಾಣುವಂತೆ ಕಾಣುವುದಿಲ್ಲ. ಒಂದು ವೇಳೆ ಕಂಡರೂ ಆ ಸಂಘರ್ಷದ ಸ್ವರೂಪ ವೈಯಕ್ತಿಕ ಕ್ಷೇತ್ರದೊಳಗೆ ಗುಪ್ತಗಾಮಿನಿಯಾಗಿರುವುದರಿಂದ ತೆರೆಮರೆಗೆ ಸರಿದುಬಿಡುವ ಸಾಧ್ಯತೆಯೇ ಹೆಚ್ಚಾಗಿರುತ್ತದೆ. ಸಂಘರ್ಷ ಎನ್ನುವುದು ನಿತ್ಯ ನಿರಂತರವಾಗಿದ್ದು ಒಂದಲ್ಲ ಒಂದು ರೀತಿಯಲ್ಲಿ–ಅಂದರೆ ಮುಕ್ತವಾಗಿಯೋ, ಗುಪ್ತವಾಗಿಯೋ ಅಂತೂ ಎರಡು ವೈರುಧ್ಯಗಳ ಮಧ್ಯೆ ಘಟಿಸುತ್ತಲೇ ಇರುತ್ತದೆ ಎಂಬುದು ಇದರಿಂದ ತಿಳಿದುಬರುತ್ತದೆ. ತೇಜಸ್ವಿ ಸಾಹಿತ್ಯದಲ್ಲಿ ತೆರೆದುಕೊಳ್ಳುವ ಸಂಘರ್ಷದ ಆಯಾಮಗಳನ್ನು ಸಂಘರ್ಷದ ವಿವಿಧ ವಿನ್ಯಾಸಗಳ ಹಿನ್ನೆಲೆಯಲ್ಲಿ ಗ್ರಹಿಸುವ, ಚರ್ಚಿಸುವ, ವಿಶ್ಲೇಷಿಸುವ ಪ್ರಯತ್ನವನ್ನು ಈ ಮೂರನೆಯ ಅಧ್ಯಾಯದಲ್ಲಿ ಕೈಗೊಳ್ಳಲಾಗಿದೆ.

ಸಂಘರ್ಷದಿಂದ ಹೊರಹೊಮ್ಮುವ ಹೋರಾಟ, ಪ್ರತಿಭಟನೆ, ನಿರಾಕರಣೆ ಇವೆಲ್ಲವೂ ಹೊಸ ಸ್ಥಿತಿಯನ್ನು ನಿರ್ಮಾಣ ಮಾಡುವುದು ಸಹಜ. ಸ್ಥಿತ್ಯಂತರಕ್ಕೆ ಇಂತಹದೇ ಕಾರಣವೆಂದೇನೂ ಇಲ್ಲ. ಜೀವನ ವಿಧಾನವನ್ನು ರೂಪಿಸಿಕೊಳ್ಳುವಂತಹ ಸಂದರ್ಭದಲ್ಲಿ ಎದುರಾಗುವ ಸಮಸ್ಯೆಗಳು, ಬಗೆಹರಿಸುವ ವಿಧಾನಗಳು, ಪ್ರೇರಣೆ, ಪ್ರಭಾವ, ಪರಿಸರ, ಬದುಕನ್ನು ಕುರಿತ ತಿಳುವಳಿಕೆ ಹೀಗೆ ಹತ್ತು ಹಲವು ಕಾರಣಗಳು ಪ್ರೇರಕವಾಗಬಹುದು. ಯಾವುದೇ ಸ್ಥಿತಿಯು ಏಕಕಾಲಕ್ಕೆ ಬದಲಾಗದೆ ಸಂದರ್ಭಾನುಸಾರವಾಗಿ ಬದಲಾಗುತ್ತಾ ಬಂದಿರುವುದು ಸೃಜನಶೀಲಗೊಳ್ಳುತ್ತಿರುವ ಸಮಾಜಕ್ಕೆ ಹಿಡಿದ ಕನ್ನಡಿಯಾಗಿದೆ. ಹೊಸ ಸ್ಥಿತಿ ಹಿಂದಿನ ಸ್ಥಿತಿಗಿಂತ ಉತ್ತಮವಾಗಿರಬಹುದು ಇಲ್ಲವೆ ಕಳಪೆಯಾಗಿರಬಹುದು. ಒಟ್ಟಿನಲ್ಲಿ ಇದ್ದ ಸ್ಥಿತಿಗಿಂತ ಆಗುವ

ಸ್ಥಿತಿಯು, ಆಗುವ ಸ್ಥಿತಿಗಿಂತ ಆಗಿಲ್ಲದ ಸ್ಥಿತಿಯ ರೂಪು ರೇಷೆ ವ್ಯಕ್ತಿಯ/ಸಮಾಜದ ನೇತ್ಯಾತ್ಮಕ ಮತ್ತು ಇತ್ಯಾತ್ಮಕ ಮುಖಗಳೆರಡನ್ನೂ ಸ್ಪರ್ಧೆಗೆ ಒಡ್ಡುತ್ತದೆ. ಸ್ಥಿತ್ಯಂತರದ ಹಿನ್ನೆಲೆಯಲ್ಲಿ ತೇಜಸ್ವಿ ಸಾಹಿತ್ಯದ ವಿಶೇಷತೆಗಳನ್ನು ಅರಿಯುವ ಪ್ರಯತ್ನವನ್ನು ಈ ನಾಲ್ಕನೆಯ ಅಧ್ಯಾಯಲ್ಲಿ ನಡೆಸಲಾಗಿದೆ.

ಕಥಾಲೇಖಕರು ಆಯಾ ಕಾಲ ಘಟ್ಟದಲ್ಲಿ ಸಾಹಿತ್ಯದ ದಿಕ್ಕನ್ನು ಜನಪರವಾದ ದಿಕ್ಕಿನತ್ತ ಕೊಂಡೊಯ್ದವರು. ಕಾಲಘಟ್ಟಕ್ಕೆ ಸಂಬಂಧಿಸಿದಂತೆ ಹೇಳುವುದಾದರೆ ಎಪ್ಪತ್ತು ಎಂಭತ್ತರ ದಶಕದಲ್ಲಿ ಜನಪರವಾದ ನಿಲುವಿನಿಂದ ಕೂಡಿದ ಸಾಹಿತ್ಯ ರಚನೆಗೊಂಡಿದ್ದು, ಕಾಲಾನುಕ್ರಮದಲ್ಲಿ ಅನೇಕ ಮಾರ್ಪಾಡುಗಳಿಗೆ ಒಡ್ಡಿಕೊಂಡಿದೆ. ಅದರಂತೆಯೇ ತೇಜಸ್ವಿಯವರ ವೈಯಕ್ತಿಕ, ಸಾಹಿತ್ಯಕ ವಿಚಾರಗಳಲ್ಲಿ ನವೀನ ಪ್ರಯೋಗಗಳು ಮೊದಲುಗೊಂಡಿವೆ. ಹೊಸ ಹೊಸ ಸಾಧನೆ ಹಾಗೂ ವಸ್ತು ಹುಡುಕಾಟಗಳಿಂದ ಸಾಹಿತ್ಯದ ಪ್ರಬುದ್ಧತೆ ಮತ್ತು ಸಮೃದ್ಧತೆಗೆ ಕಾರಣವಾಗಿರುವ ಪ್ರಭಾವ ಪ್ರೇರಣೆಗಳ ಪ್ರಾಸಂಗಿಕ ಉಲ್ಲೇಖದೊಡನೆ ತೇಜಸ್ವಿಯವರ ಕಥನಗಳಲ್ಲಿ ಈ ಪರಿಕಲ್ಪನೆಗಳನ್ನು ಅರಿಯುವ ಪ್ರಯತ್ನವೇ ಪ್ರಸ್ತುತ ಅಧ್ಯಯನದ ಆಶಯವಾಗಿದೆ. ಅಂತೆಯೇ ತೇಜಸ್ವಿಯವರು ವಿವೇಕಿಸುವ ವಿಭಿನ್ನ ನೆಲೆಗಳನ್ನೂ, ಈ ನೆಲೆಗಳನ್ನು ಕಂಡುಕೊಳ್ಳಲು ಅವರು ಅನುಸರಿಸುವ ತಾತ್ವಿಕ ದೃಷ್ಟಿಕೋನವನ್ನು ಅರ್ಥ ಮಾಡಿಕೊಳ್ಳಲು ಪ್ರಯತ್ನಿಸಿದ್ದೇನೆ.

ವ್ಯಕ್ತಿ ಕೇಂದ್ರಿತ ದೃಷ್ಟಿಯನ್ನು ಹೊರತುಪಡಿಸಿ ಆ ವ್ಯಕ್ತಿಯನ್ನೇ ವಿಶ್ಲೇಷಿಸುವ ಅನೇಕ ಅಧ್ಯಯನಗಳು ನಡೆದಿವೆ. ಕಥನಕಾರನಾಗಿ, ವ್ಯಕ್ತಿಯಾಗಿ ಸಮಾಜ ಸಂಬಂಧದ ವಿವಿಧ ಮುಖಗಳನ್ನು ಗ್ರಹಿಸಿ ಅವನ್ನು ಕೇಂದ್ರ ಪ್ರಜ್ಞೆಯಾಗಿ ನಿಲ್ಲಿಸಿದರೆ ಅದು ಕೇವಲ ಮೇಲೆ ಕಾಣುವ ವ್ಯಕ್ತಿತ್ವಕ್ಕೆ ಮಾತ್ರ ಸೀಮಿತಗೊಳ್ಳುವುದಿಲ್ಲ ಅಥವಾ ವೈಯಕ್ತಿಕ ಬದುಕನ್ನು ಅದರ ಬೆಳವಣಿಗೆಯನ್ನು ಮೂಲಸಾಮಗ್ರಿಯನ್ನಾಗಿ ಮಾಡಿಕೊಂಡು ಆ ಸಾಮಗ್ರಿಯ ನೆರವಿನಿಂದ ಕಥಾಸ್ವರೂಪ, ಬರವಣಿಗೆಯ ಕ್ರಮ, ಆಲೋಚನೆಯ ದಿಕ್ಕು ಇವುಗಳನ್ನು ಹೇಳಲಾಗುವುದಿಲ್ಲ. ಆದರೆ ವಿಶ್ಲೇಷಣೆಯ ಮೂಲಕ ಕೃತಿಯ ಎಲ್ಲ ಮುಖಗಳನ್ನೂ ಸಮಕಾಲೀನ ಸಂದರ್ಭದಲ್ಲಿ ತೆರೆದು ತೋರುವುದು ಸಾಧ್ಯ, ಏಕೆಂದರೆ ಕೃತಿಗಳು ಯಾವುದಾದರೊಂದು ಮುಖವನ್ನು ನಮ್ಮ ಸಮಕಾಲೀನ ಅಗತ್ಯದ ಕಡೆಗೆ ತಿರುಗಿಸಿವೆಯೆನ್ನಬಹುದು. ಆಯಾ ಕಾಲದ ಸಮಾಜದಲ್ಲಿ ಪ್ರಚಲಿತವಿದ್ದ ವಿಚಾರಧಾರೆಗಳಲ್ಲಿ ಯಾವುದಾದರೊಂದನ್ನು ಆಯಾ ಕೃತಿಯ ಆಂತರ್ಯದಲ್ಲಿಟ್ಟು ಕೊಂಡಿರಬಹುದು ಎಂಬುದನ್ನು ನೆನಪಿಸಿಕೊಳ್ಳಬಹುದು.

## ೧.೩ ಇದುವರೆಗಿನ ಅಧ್ಯಯನಗಳ ಸಮೀಕ್ಷೆ

ಪೂರ್ಣಚಂದ್ರತೇಜಸ್ವಿಯವರನ್ನು ಕುರಿತು ಈಗಾಗಲೇ ಅನೇಕರು ತಮ್ಮ ವಿಚಾರಗಳನ್ನು ಹಲವಾರು ರೀತಿಯಲ್ಲಿ ಪ್ರಸ್ತುತ ಪಡಿಸಿದ್ದಾರೆ. ಇಂತಹ ಮಹತ್ವದ ಲೇಖಕನನ್ನು ಕುರಿತು ಚಿಂತಿಸುವ, ಚರ್ಚಿಸುವ ಅನೇಕ ಗೋಷ್ಠಿಗಳು, ವಿಚಾರಸಂಕಿರಣಗಳು ನಡೆದಿವೆ. ಇವುಗಳ ಉಲ್ಲೇಖವನ್ನು ಅನುಬಂಧದಲ್ಲಿ ನೀಡಿದ್ದೇನೆ. ಇದಲ್ಲದೆ ವಿವಿಧ ವಿಶ್ವವಿದ್ಯಾಲಯಗಳ ಪಿ.ಹೆಚ್.ಡಿ ಮಹಾಪ್ರಬಂಧಗಳು ಮತ್ತು ಎಂ.ಫಿಲ್ ಪ್ರೌಢ ನಿಬಂಧಗಳು ಇವೆ.

ಗೀತಾಬಾಲಿ ಮು.ರಾ ಅವರ **ಪೂರ್ಣಚಂದ್ರತೇಜಸ್ವಿಯವರ ಕಥಾಸಾಹಿತ್ಯ ಒಂದು ಅಧ್ಯಯನ**: ತಾರಾಮಣಿ ಆರ್ ಅವರ **ಕೆ ಪಿ ಪೂರ್ಣಚಂದ್ರ ತೇಜಸ್ವಿ ಕಥೆಗಳಲ್ಲಿ 'ಪ್ರಕೃತಿ ಮತ್ತು ಪರಿಸರ'**: ಪಡೆಪ್ಪನವರ್ ಬಿಕೆ ಅವರ **ಕೆ ಪಿ ಪೂರ್ಣಚಂದ್ರ ತೇಜಸ್ವಿ ಸಾಹಿತ್ಯ-ಒಂದು ಅಧ್ಯಯನ**: ಪುಟ್ಟರಾಜು ವಿ **ಆಧುನಿಕ ಕನ್ನಡ ಸಾಹಿತ್ಯ ಮತ್ತು ರಾಮಮನೋಹರ ಲೋಹಿಯಾ ಚಿಂತನೆಗಳು** (ಯು.ಆರ್ ಅನಂತಮೂರ್ತಿಯವರ ಅವಸ್ಥೆ ಮತ್ತು ಕೆ ಪಿ ಪೂರ್ಣಚಂದ್ರ ತೇಜಸ್ವಿಯವರ ಚಿದಂಬರ ರಹಸ್ಯ ಕಾದಂಬರಿಗಳ ಹಿನ್ನೆಲೆಯಲ್ಲಿ): ಬಿರನಹಳ್ಳಿ ಸುನಿತಾ **ಪೂರ್ಣಚಂದ್ರ ತೇಜಸ್ವಿ ಅವರ ಸಮಗ್ರ ಸಾಹಿತ್ಯ ಒಂದು ಅಧ್ಯಯನ**: ಶಶಿಕಲಾ ಎಚ್ **ಆಧುನಿಕ ಕನ್ನಡ ಸಾಹಿತ್ಯ-ಸಂಸ್ಕೃತಿ: ಗ್ರಹಿಕೆಗಳು** (ಪೂರ್ಣಚಂದ್ರ ತೇಜಸ್ವಿಯವರ ಸಾಹಿತ್ಯದ ಹಿನ್ನೆಲೆಯಲ್ಲಿ-ಏಕ ಅನೇಕ ಹೆಸರಿನ ಪ್ರಕಟಿತ ಸಂಶೋಧನ ಪ್ರಬಂಧ): ಸುಮಲತಾ ಬಿಕೆ ಯವರ **ಪೂರ್ಣಚಂದ್ರ ತೇಜಸ್ವಿ ಮತ್ತು ಬಿ.ಜಿ.ಎಲ್ ಸ್ವಾಮಿಯವರ ಪರಿಸರದ ಬಗೆಗಿನ ಚಿಂತನೆಗಳು** ಇವು ಬೇರೆ ಬೇರೆ ವಿಶ್ವವಿದ್ಯಾಲಯಗಳಿಗೆ ಸಲ್ಲಿಸಿದ ಮಹಾಪ್ರಬಂಧಗಳಾಗಿವೆ.

ಪೂರ್ಣಚಂದ್ರತೇಜಸ್ವಿಯವರನ್ನು ಕುರಿತಂತೆ ಹಲವಾರು ಪ್ರೌಢ ಸಂಶೋಧನ ಪ್ರಬಂಧಗಳು ಹಂಪಿ ವಿಶ್ವವಿದ್ಯಾಲಯಕ್ಕೆ ಸಮರ್ಪಿಸಲ್ಪಟ್ಟವು ಇವೆ. ಅವುಗಳಲ್ಲಿ ಈ ರಮೇಶ್-**ಮಾಯಾಲೋಕ ಮೊದಲ ಓದು**: ಎನ್ ತಿಪ್ಪೇಸ್ವಾಮಿ-**ತೇಜಸ್ವಿಯವರ ಕಾದಂಬರಿಗಳಲ್ಲಿ ನಿಗೂಢತೆ**: ವಿಜಯಶ್ರೀ.ಡಿ-**ತೇಜಸ್ವಿಯವರ ಪರಿಸರದ ಕಥೆಗಳು**: ಅಂಬರೀಶ.ವಿ-**ಕೆಪಿ ಪೂರ್ಣಚಂದ್ರತೇಜಸ್ವಿಯವರ ಕಾದಂಬರಿಗಳಲ್ಲಿ ಭಾಷೆ ಮತ್ತು ಸಾಂಸ್ಕೃತಿಕ ಒಳನೋಟಗಳು**: ಕೃಷ್ಣೋಜಿರಾವ್ ಟಿ ಎಮ್-**ತೇಜಸ್ವಿ ಅವರ ಕಥಾಸಾಹಿತ್ಯದಲ್ಲಿ ಮಾನವೀಯ ಸೌಂದರ್ಯಗಳ ಅನಾವರಣ**: ಸುಜಾತ ಎ-**ಕೆ ಪಿ ಪೂರ್ಣಚಂದ್ರ ತೇಜಸ್ವಿ ಕಥೆಗಳಲ್ಲಿ ಹಾಸ್ಯಪ್ರಜ್ಞೆ**: ಗೋಪಾಲ್ ಸಿ-**ತೇಜಸ್ವಿ ಕಾದಂಬರಿಗಳಲ್ಲಿ ಸಾಮಾಜಿಕ ಪ್ರಜ್ಞೆ**: ಸರ್ವಮಂಗಳ ಬಿ ಕೆ-**ತೇಜಸ್ವಿ ಅವರ ಕಥಾಸಾಹಿತ್ಯದಲ್ಲಿ ಪ್ರಕೃತಿ**: ಅರುಣ್‌ಕುಮಾರ್‌ಎಚ್.ಎಸ್-**ತೇಜಸ್ವಿ ಕಥೆಗಳಲ್ಲಿ ಸ್ತ್ರೀ ಸಂವೇದನೆ: ತೇಜಸ್ವಿ ಕಥೆಗಳಲ್ಲಿ ಅಲಕ್ಷಿತ ಪ್ರತಿಭೆಗಳ ಶೋಧನೆಯ ಆಯಾಮಗಳು**-ಕಲೀಂ ಉಲ್ಲಾ ಇವುಗಳನ್ನು ಹೆಸರಿಸಬಹುದು.

ಈ ಪಿ.ಹೆಚ್.ಡಿ, ಎಂ.ಫಿಲ್ ಅಧ್ಯಯನಗಳ ಜೊತೆಗೆ ಬೆಲೆಯುಳ್ಳ ಇತರೆ ಕಿರು ಗ್ರಂಥಗಳೂ, ಕಿರುಕೃತಿಗಳೂ, ಬಿಡಿಲೇಖನಗಳೂ ಇವೆ. ಅವುಗಳಲ್ಲಿ ಟ.ಪಿ.ಅಶೋಕರ **ತೇಜಸ್ವಿ ಕಥನ**, ಡಾ.ಎನ್.ಎಚ್ ಶಂಕರಗೌಡರ **ತೇಜಸ್ವಿ ಸಾಹಿತ್ಯ ಸಂಕಥನ**, ಪ್ರೊ. ಜಿ. ಟಿ. ವೀರಪ್ಪ, ಡಾ. ಎಂ ಬೈರೇಗೌಡ ಇವರಿಬ್ಬರ **ಸಂಪಾದಕತ್ವದಲ್ಲಿ ತೇಜಸ್ವಿ-ಸಾಹಿತ್ಯ ಕೃಷಿ**: ಡಿ ವಿ ಪ್ರಹ್ಲಾದ್ ಸಂಪಾದಿತ **ತೇಜಸ್ವಿ ಲೋಕ; ಪೂರ್ಣಚಂದ್ರತೇಜಸ್ವಿಯವರನ್ನು ಕುರಿತ ಬದುಕು ಬರಹವನ್ನು** ಕರೀಗೌಡ ಬೀಚನಹಳ್ಳಿ ಡಾ. ಎಚ್.ಎಂ.ಮಹೇಶ್ವರಯ್ಯ, ಆರ್ ಡಿ ಹೆಗಡೆ ಆಲ್ಮನೆ, ಕಲೀಂ ಉಲ್ಲಾ, ಬೆಳವಾಡಿ

ಮಂಜುನಾಥ ಹಾಗೂ ಇನ್ನೂ ಅನೇಕರು ತೇಜಸ್ವಿ ವ್ಯಕ್ತಿತ್ವ ಮತ್ತು ಬರಹದ ಬಗ್ಗೆ ಚಿಂತನೆಯನ್ನು ನಡೆಸಿದ್ದಾರೆ.

ಪ್ರಸಾದ್ ರಕ್ಷಿದಿಯ **ನಮ್ಮ ನಡುವಿನ ತೇಜಸ್ವಿ**, ಶ್ರೀಮತಿ ಆರ್. ರಾಜೇಶ್ವರಿ ತೇಜಸ್ವಿಯವರ **ನನ್ನ ತೇಜಸ್ವಿ**, ಕಡಿದಾಳು ಶಾಮಣ್ಣರ **ಕಾಡ ತೊರೆಯ ಜಾಡು**, ಧನಂಜಯ ಜೀವಾಳ ಬಿ.ಕೆ ಇವರ **ಕಾಡಿನ ಸಂತ ತೇಜಸ್ವಿ**, ನರೇಂದ್ರ ರೈ ದೇರ್ಲ ಇವರ **ತೇಜಸ್ವಿಯೊಳಗೊಬ್ಬ ಕಲಾವಿದ ಮತ್ತು ನಮ್ಮೆಲ್ಲರ ತೇಜಸ್ವಿ**, ಬಿ.ಎಸ್. ಸಂಪತ್‌ಕುಮಾರ ಬೆಟ್ಟಗೆರೆಯವರ ಸಂಪಾದಕತ್ವದಲ್ಲಿ **ಮೂಡಿಗೆರೆಯ ಮುದ್ದು ಹಕ್ಕಿ ಪೂರ್ಣಚಂದ್ರತೇಜಸ್ವಿ** (ನೆನಪಿನಂಗಳದ ಪುಸ್ತಿಕೆ): ಅರುಣ ನಾರಾಯಣರವರ **ಮಾಯಾಲೋಕ ಸಂಕ್ಷಿಪ್ತ ಸಂಗ್ರಹ**; ರಾಜು ಬಿ.ಕನ್ನಲಿಯವರ **ತೇಜಸ್ವಿ ಇಲ್ಲೆ ಎಲ್ಲೋ ಇರಬೇಕು**: ಕೀರ್ತಿ ಕೊಲ್ಗಾರ್ **ತೇಜಸ್ವಿ ಬದುಕಿದ್ದಾರೆ** (ಗೆಳೆಯರು ಕಂಡ ಚಂದ್ರಲೋಕ); ಆರ್.ಜಿ.ಡಿಯವರ ಸಂಪಾದಕತ್ವದಲ್ಲಿ **ತೇಜಸ್ವಿಯವರನ್ನು ಹುಡುಕುತ್ತಾ......**: ಇವು ಪೂರ್ಣಚಂದ್ರ ತೇಜಸ್ವಿಯವರ ಸಂಸ್ಮರಣೆಯ ಆತ್ಮೀಯ ಒಡನಾಟದ ಸಹೃದಯರ ಅನುಭವಗಳನಷ್ಟೇ ಅಲ್ಲದೇ ತೇಜಸ್ವಿಯವರ ಬದುಕಿನ ವಾಸ್ತವಗಳ ಜೊತೆಗೆ ಅವರ ಅನುಭಾವೀ ಬದುಕಿನ ವೈಚಾರಿಕತೆಗಳನ್ನು ಸಾದ್ಯಂತವಾಗಿ ವಿವರಿಸುವ ಕೃತಿಗಳಾಗಿವೆ.

**ಪೂರ್ಣಚಂದ್ರತೇಜಸ್ವಿ: ವ್ಯಕ್ತಿ ಮತ್ತು ಸಾಹಿತ್ಯವನ್ನು ಕುರಿತ ಬಿಡಿ ಲೇಖನಗಳು**: ಗಿರಡ್ಡಿ ಗೋವಿಂದರಾಜು **ಸಣ್ಣಕಥೆಯ ಹೊಸ ಒಲವುಗಳು**, ದೊಡ್ಡರಂಗೇಗೌಡರ **ಕನ್ನಡದ ನಾಟಕ ವಿಮರ್ಶೆಯಲ್ಲಿನ ಲೇಖನ**, ಕೆ ನರಸಿಂಹ ಮೂರ್ತಿಯವರ **ದಶವಾರ್ಷಿಕ ಸಾಹಿತ್ಯ ಸಮೀಕ್ಷೆ: ಪೂರ್ಣಚಂದ್ರತೇಜಸ್ವಿ, ಕರ್ವಾಲೋ, ಸ್ವಸ್ತಿ**, ಜಿ. ಟಿ ನಾರಾಯಣರಾವ್‌ರ **ತೇಜಸ್ವಿಯವರ ಸಾಹಿತ್ಯ, ಅನಿವಾರ್ಯ**, ಜಿ. ಎಚ್ ನಾಯಕ, ರಾಜೇಂದ್ರ ಚೆನ್ನಿಯವರ **ಅಧ್ಯಯನ ಕೃತಿಯಲ್ಲಿನ ಲೇಖನ ಚಿದಂಬರ ರಹಸ್ಯ**, ಎಂ.ಎಚ್ ಕೃಷ್ಣಯ್ಯನವರ ಕೆ.ಪಿ ಪೂರ್ಣಚಂದ್ರ ತೇಜಸ್ವಿ, ಟಿಪಿ ಅಶೋಕರ **ಪುಸ್ತಕ ಪ್ರೀತಿ**, ಚಿದಂಬರ ರಹಸ್ಯ: ಕರೀಗೌಡ ಬೀಚನಹಳ್ಳಿಯವರ **ವ್ಯಷ್ಟಿ-ಸಮಷ್ಟಿಯಲ್ಲಿನ** ಸಹಜದಾರಿಗಳ ಕಡೆಗೆ, ಡಾ. ಕೆ.ಎಲ್ ಗೋಪಾಲಕೃಷ್ಣಯ್ಯನವರ **ತೇಜಸ್ವಿ ಸಾಹಿತ್ಯ ಮತ್ತು ಸಿದ್ಧಾಂತ**, ಜಿ.ಎಸ್. ಆಮೂರರ **'ತೇಜಸ್ವಿ ಕಾದಂಬರಿಗಳಲ್ಲಿ ಅನ್ವೇಷಣೆಯ ಸ್ವರೂಪ'**, ಎಚ್.ಎಸ್.ಮುರಳೀಧರರ **ಪ್ರತಿಕ್ರಿಯೆ**ಯಲ್ಲಿನ ಕರ್ವಾಲೋ ಮತ್ತು ಪ್ರಾಮಾಣಿಕತೆ, ಕೆ.ವಿ.ನಾರಾಯಣ ಅವರ **ಬೇರು, ಕಾಂಡ ಮತ್ತು ಚಿಗುರು**: ಕರ್ವಾಲೊ: ಪೂರ್ಣಚಂದ್ರ ತೇಜಸ್ವಿ, ಮಣಿಪಾಲ ಆರ್. ಕೆ ಅವರ **ವಿಮರ್ಶೆಯ ಸವಾಲು**, ಎರಡು ದಶಕಗಳ ವಿಮರ್ಶಾ ಲೇಖನಗಳ ಸಂಕಲನ; ಸಮೂಹ ಸಂಕಲ್ಪದ ಸಾರ್ಥಕ ಕಾದಂಬರಿ: ಕರ್ವಾಲೊ, ಸುಮತೀಂದ್ರ ನಾಡಿಗರ **ವಿಮರ್ಶೆಯ ದಾರಿಯಲ್ಲಿ** ಪೂರ್ಣಚಂದ್ರ ತೇಜಸ್ವಿಯವರ 'ವ್ಯಕ್ತಿ ವಿಶಿಷ್ಟ ಸಿದ್ಧಾಂತ', ಪಿ. ಲಂಕೇಶ್‌ರ **ಸಾಹಿತಿ ಸಾಹಿತ್ಯ ವಿಮರ್ಶೆ** ಕೃತಿಯಲ್ಲಿ ಬಂದಿರುವ ಮೂರು ಲೇಖನಗಳು ಕಾದಂಬರಿ 'ಕರ್ವಾಲೋ:' ತೇಜಸ್ವಿಗೆ ವಿಮರ್ಶಾ ಪತ್ರ, 'ಜುಗಾರಿಕ್ರಾಸ್ ಮತ್ತು ರಾಕ್ಷಸ ಪ್ರಪಂಚ', 'ಅಣ್ಣನ ನೆನಪು'ಕೆಲವು ಸಂಶಯಗಳು, ಕಾಳೇಗೌಡ ನಾಗವಾರರ **ಸೃಜನಶೀಲ ವೈಚಾರಿಕತೆ ವಿಮರ್ಶಾ ಲೇಖನಗಳು**: ಪೂರ್ಣಚಂದ್ರ ತೇಜಸ್ವಿ, ಡಾ. ಕೆ.ಎಲ್ ಗೋಪಾಲಕೃಷ್ಣಯ್ಯ **ತೇಜಸ್ವಿ ಸಾಹಿತ್ಯ ಮತ್ತು ಸಿದ್ಧಾಂತ**, ನಟರಾಜ್ ಮೈ ಶ್ರೀ ಅವರ **ಕನ್ನಡ ಕಾದಂಬರಿ ಲೋಕದಲ್ಲಿ... ಹೀಗೆ ಹಲವು: ಮಾನವೀಯ ಮಾಯಾಲೋಕ**, ಚಂದ್ರಶೇಖರ ನಂಗಲಿ ಅವರ **ಈಗಳೆ ಸಾಧ್ಯ** ಲೋಹಿಯಾ-ಕುವೆಂಪು-ಕಾರಂತ-ತೇಜಸ್ವಿ ಎಂಬ ಚತುರ್ಮುಖ ಸೌಂದರ್ಯ ಮತ್ತು

'ಮಾಯಾಲೋಕ'ದೊಳಗೊಂದು ಸುತ್ತಾಟ, ರಹಮತ್ ತರೀಕೆರೆ ತೇಜಸ್ವಿಯವರ ವೈಜ್ಞಾನಿಕ ಬರಹಗಳು–ನಿಗೂಢ ಭಾಗವಾಗಿ ವೈಜ್ಞಾನಿಕ ವಿಸ್ಮಯ ಮತ್ತು ತೇಜಸ್ವಿಯವರ 'ಮಾಯಾಲೋಕ' ಹಾಗೂ **ಕತ್ತಿಯಂಚಿನ ದಾರಿಯಲ್ಲಿ** ಒಂದು ಲೇಖನ **ಜುಗಾರಿ ಕ್ರಾಸ್,** ಬೆಳವಾಡಿ ಮಂಜುನಾಥರ **ನವ್ಯ ಕಥನ,** ಜಿ ಎಚ್ ನಾಯಕರ ವಿನಯ ವಿಮರ್ಶೆಯಲ್ಲಿನ ಲೇಖನ–**ತೇಜಸ್ವಿ ಅವರ ನಿಗೂಢ ಮನುಷ್ಯರು,** ಅನಿವಾರ್ಯದಲ್ಲಿನ **ತೇಜಸ್ವಿಯವರ ಸಾಹಿತ್ಯ,** ರಾ. ವೆಂಕಟೇಶ ಇಂದ್ವಾಡಿಯವರ **ಕೆ.ಪಿ ಪೂರ್ಣಚಂದ್ರತೇಜಸ್ವಿ,** ಡಿ. ಎಸ್. ನಾಗಭೂಷಣ **ಕರ್ವಾಲೋ ವಿಧಾನದ ಮೂಲಕ ಅಧ್ಯಾತ್ಮ, ಗಮನ ಮತ್ತು ಬೇರು ಬಿಳಲು ಲೇಖನ ಹಾಗೂ ಈ ಭೂಮಿಯಿಂದ ಆ ಆಕಾಶದವರೆಗೆ** ಇವುಗಳಲ್ಲಿನ ಲೇಖನಗಳು ಡಾ.ಪ್ರಶಾಂತ್‌ನಾಯಕ್‌ರ **ಚಿಂತನ ಚಿತ್ತ:** ಎಸ್ ಆರ್ ವಿಜಯಶಂಕರ **ಒಳದನಿ:** ಕಾವ್ಯ, ಕೃತಿ ವಿಮರ್ಶೆ ಮತ್ತು ಸಂಸ್ಕೃತಿ ಕುರಿತ ಬರಹಗಳು, ಪ್ರದೀಪ್ ಮಾಲ್ಗುಡಿಯ **ಧರ್ಮಾತೀತ ನೆಲೆಯನ್ನು ಮಂಡಿಸುವ ಚಿದಂಬರ ರಹಸ್ಯ,** ಬಿ ಎನ್ ಸುಮಿತ್ರಾಬಾಯಿ ಅವರ ಸ್ತ್ರೀವಾದಿ ಓದು–**ಕಿರುಗೂರಿನ ಗಯ್ಯಾಳಿಗಳು,** ಒ ಎಲ್ ನಾಗಭೂಷಣ ಸ್ವಾಮಿಯವರ **ಓದುವ ದಾರಿಗಳು** ಸಾಹಿತ್ಯ ಅಧ್ಯಯನಾಸಕ್ತರಿಗೆ ಮಾರ್ಗದರ್ಶನ ನೀಡುವ ಸಲುವಾಗಿ ಆಯೋಜಿತಗೊಂಡ ವಿಚಾರ ಸಂಕಿರಣದಲ್ಲಿ ಮಂಡನೆಯಾದ ವಿಚಾರಗಳ ಬರಹರೂಪ. ಇವು ಅನ್ವಯಿಕ ವಿಮರ್ಶೆಯ ಓದುವ ದಾರಿಗಳನ್ನು ರೂಪಿಸಿರುವಂತಹವು.

## ಪೂರ್ಣಚಂದ್ರತೇಜಸ್ವಿಯವರನ್ನು ಕುರಿತ ಅಧ್ಯಯನಗಳ ವಿವರಣಾತ್ಮಕ ನೋಟ;

ಪೂರ್ಣಚಂದ್ರ ತೇಜಸ್ವಿ ಕಥನಗಳನ್ನು ಆಳವಾದ ಅಭ್ಯಾಸದೊಂದಿಗೆ ಅಧ್ಯಯನ ಮಾಡಿರುವ ಟಿ.ಪಿ.ಅಶೋಕ ಅವರು, ತೇಜಸ್ವಿವರ ಸಮಗ್ರ ವಾಙ್ಮಯವನ್ನು ಅವರ ಕೃತಿಗಳ ಅಂತರ ಸಂಬಂಧಗಳ ನೆಲೆಯಲ್ಲಿ ವಿಮರ್ಶಿರುವ ಬರವಣಿಗೆಯ ರೂಪವೇ **ತೇಜಸ್ವಿ ಕಥನ**[7]. ಆಧುನಿಕ ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ಸಮಕಾಲೀನ ವಿದ್ಯಮಾನಗಳಾದ ಧರ್ಮ, ಪರಂಪರೆ, ಸಂಸ್ಕೃತಿ, ಸಮಾಜಗಳನ್ನು ಕುರಿತು ತೇಜಸ್ವಿ ತೆಗೆದುಕೊಳ್ಳುವ ತಾತ್ವಿಕ ನಿಲುವುಗಳು ಎಂತಹವು ಎಂಬ ಚರ್ಚೆ ಈ ಕೃತಿಯಲ್ಲಿ ವಿಶಿಷ್ಟವಾಗಿ ಮೂಡಿಬಂದಿದೆ. ತೇಜಸ್ವಿ ಸಾಹಿತ್ಯ ಕೃಷಿಯ ನಿರಂತರ ಚಲನೆಯಲ್ಲಾದ ಬದಲಾವಣೆಗಳನ್ನು, ಆ ಹಂತದಲ್ಲಿನ ಅನೇಕ ವಿಚಾರಗಳನ್ನು ಸಂಶ್ಲೇಷಿಸುತ್ತಾ ತೇಜಸ್ವಿ ಕೃತಿಗಳಲ್ಲಿನ ಹೊಸ ಕಾಣ್ಕೆಯನ್ನು ಮನಗಾಣಿಸಲು ಪ್ರಯತ್ನಿಸಿದ್ದಾರೆ. ಅವುಗಳನ್ನು ಸಮರ್ಥಿಸಲು ತೇಜಸ್ವಿ ಸಾಹಿತ್ಯದ ಉಧೃತಭಾಗಗಳನ್ನು ಉಲ್ಲೇಖಿಸಿ ಪುರಾವೆಯನ್ನು ಒದಗಿಸಿದ್ದಾರೆ. ತೇಜಸ್ವಿ ಸಾಹಿತ್ಯದ ವಿಮರ್ಶಾತ್ಮಕ ನೋಟ ಈ ಕೃತಿಯಲ್ಲಿ ಸಂಪೂರ್ಣವಾಗಿ ಒಡಮೂಡಿದೆ. ೨೦೦೪ ರಲ್ಲಿ ಪ್ರಕಟವಾದ ಈ ಹೊತ್ತಿಗೆಯಲ್ಲಿ ಇಲ್ಲದ ತೇಜಸ್ವಿ ಕಥನಗಳ ವಿಮರ್ಶೆಯ ಮತ್ತೊಂದು ನೋಟ ೨೦೧೩ರ 'ಜನಸಂಸ್ಕೃತಿ' ಮಾಸಿಕದಲ್ಲಿ ಕಾಣಸಿಗುತ್ತದೆ. ತೇಜಸ್ವಿ ಕಥನ ಸ್ವರೂಪದ ಭೂಮಿಕೆಯೊಂದಿಗೆ ಮಾಯಾಲೋಕ ಕಾದಂಬರಿ ಮತ್ತು ಡೇರ್ ಡೆವಿಲ್ ಮುಸ್ತಾಫ, ಗಾಂಧೀಜಿದೆಸೆಯಿಂದ ಈ ಕಥನಗಳನ್ನು ಕುರಿತ ಸಮಗ್ರ ವಿವೇಚನೆ ನಡೆಸಿ ಕಥನದ ಒಳನೋಟಗಳನ್ನು ಸಮರ್ಥವಾಗಿ ಸೆರೆಹಿಡಿದ್ದಾರೆ.

**ಏಕ–ಅನೇಕ**[8] ಎಂಬ ಶೀರ್ಷಿಕೆಯಲ್ಲಿ ೨೦೦೫ ರಲ್ಲಿ ಪ್ರಕಟಿತವಾದ 'ಆಧುನಿಕ ಕನ್ನಡ ಸಾಹಿತ್ಯ ಸಂಸ್ಕೃತಿ: ಗ್ರಹಿಕೆಗಳು (ತೇಜಸ್ವಿಯವರ ಸಾಹಿತ್ಯದ ಹಿನ್ನೆಲೆಯಲ್ಲಿ) ಎಚ್. ಶಶಿಕಲಾ ಅವರ ಪಿ.ಹೆಚ್.ಡಿ ಮಹಾಪ್ರಬಂಧ. ಪೂರ್ಣಚಂದ್ರ ತೇಜಸ್ವಿಯವರನ್ನು ಕೇಂದ್ರವಾಗಿರಿಸಿಕೊಂಡು

ಸ್ವಾತಂತ್ರ್ಯೋತ್ತರ ಕಥನಸಾಹಿತ್ಯದಲ್ಲಿ ಅಭಿವ್ಯಕ್ತಗೊಂಡ ಬೇರೆ ಬೇರೆ ದೃಷ್ಟಿಕೋನದ ವೈಚಾರಿಕ ಚಿಂತನೆಗಳನ್ನು ಈ ಪ್ರಬಂಧದಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಸ್ವಾತಂತ್ರ್ಯೋತ್ತರ ಕಾಲಘಟ್ಟದಲ್ಲಿ ಕಂಡುಬರುವ ವೈಚಾರಿಕ ಸಾಹಿತಿಗಳಲ್ಲಿ ಪ್ರಮುಖವಾದ ಕೆಲವು ಸಾಹಿತಿಗಳ ಚಿಂತನೆಗಳನ್ನು ಅವರ ಕೃತಿಗಳ ಮೂಲಕ ಶೋಧನೆಗೆ ಒಳಪಡಿಸಲಾಗಿದೆ. ಜೊತೆಗೆ ಪ್ರತಿಯೊಂದು ಕಾಲಘಟ್ಟದ ಭಿನ್ನವಾದ ಚಿಂತನೆಗಳನ್ನು ಅದು ತನ್ನಲ್ಲೇ ಕಟ್ಟಿಕೊಳ್ಳುವ ತಾತ್ವಿಕ ಆಯಾಮಗಳನ್ನು ಸಮಕಾಲೀನ ಸಂದರ್ಭಗಳನ್ವಯ ಪರಿಶೀಲನೆಗೆ ಒಡ್ಡಿದಾಗ ಅದು ಹೊರಡಿಸುವ ಸೃಜನಶೀಲ ತತ್ವವನ್ನು ಗುರುತಿಸುವುದು ಈ ಅಧ್ಯಯನದಲ್ಲಿ ನಡೆದಿದೆ. ಸಾಮಾಜಿಕವಾಗಿ ತಂತಾನೇ ಪಡೆದುಕೊಳ್ಳುವ ಭಿನ್ನ ಸಾಧ್ಯತೆಗಳನ್ನು ಸಮಕಾಲೀನ ಲೇಖಕರ ತುಲನಾತ್ಮಕ ಅಧ್ಯಯನದಲ್ಲಿ ಅವರ ಕಥೆ ಕಾದಂಬರಿಗಳ ಹಿನ್ನೆಲೆಯಲ್ಲಿ ತೀವ್ರ ದೃಷ್ಟಿಯಿಂದ ಒರೆಹಚ್ಚಿ ನೋಡಿದ್ದಾರೆ. ಸಾಹಿತ್ಯ ಮತ್ತು ಸಂಸ್ಕೃತಿಗಳ ಚಲನಶೀಲ ಸಂವಾದದ ಮೂಲಕ ಅನಾವರಣಗೊಳ್ಳುವ ಗ್ರಹಿಕೆಯ ಅಂಶಗಳನ್ನು ಪ್ರತ್ಯೇಕವಾಗಿ ವಿವೇಚಿಸಿ ಅಲ್ಲಿಯ ಧೋರಣೆಗಳನ್ನು ನಿಲುವುಗಳನ್ನು ಸಕಾರಣವಾಗಿ ವಿಶ್ಲೇಷಿಸಿ ಚರ್ಚಿಸಿದ್ದಾರೆ. ಶೋಧನಾತ್ಮಕ ಬರಹವಾದ 'ಏಕ-ಅನೇಕ' ಹಲವು ವಿಶಿಷ್ಟತೆಗಳನ್ನು ತನ್ನೊಳಗೆ ಹುದುಗಿಸಿಕೊಂಡ ವಿಮರ್ಶಾಕೃತಿ.

ಶಂಕರೇಗೌಡ ಅವರ **ತೇಜಸ್ವಿ ಸಾಹಿತ್ಯ ಸಂಕಥನ**[5] **ದ**ಲ್ಲಿ ಎಂಟು ಲೇಖನಗಳಿವೆ. ವ್ಯಷ್ಟಿ-ಸಮಷ್ಟಿ ಸಂಘರ್ಷದ ನೆಲೆಯಲ್ಲಿ 'ಸ್ವರೂಪ', ಪ್ರಕೃತಿ ಮತ್ತು ಮನುಷ್ಯ ಸಂಬಂಧಗಳ ಶೋಧದೊಳಗೆ 'ನಿಗೂಢ ಮನುಷ್ಯರು', ಜೀವ ತತ್ತ್ವದ ವಿಕಾಸಪಥದಲ್ಲಿ 'ಕರ್ವಾಲೊ' ಕಾದಂಬರಿಯ ವೈಜ್ಞಾನಿಕ ಪ್ರಜ್ಞೆ, ಪ್ರಕೃತಿ ಮತ್ತು ಮನುಷ್ಯನ ಆತ್ಮದ ಅವನತಿಯ ಸಾಮಾಜಿಕ ದುರಂತದ ಸಂಕೇತವಾಗಿ 'ಚಿದಂಬರ ರಹಸ್ಯ', ಸಾಮಾಜಿಕ ಸವಾಲುಗಳ ಮಹಾಪೂರದೊಳಗೆ 'ಜುಗಾರಿ ಕ್ರಾಸ್', ಜೀವನ ದೃಷ್ಟಿ ಮತ್ತು ಕೌಟುಂಬಿಕ ಪರಿಸರದ ಸುತ್ತ 'ಹುಲಿಯೂರಿನ ಸರಹದ್ದು', ಹೊಸ ದಿಗಂತದೆಡೆಗೆ ಮುಖ ಮಾಡಿ ನಿಂತ 'ಅಬಚೂರಿನ ಪೋಸ್ಟಾಫೀಸು', ಜೀವನಪರ ಮೌಲ್ಯಗಳ ಹಾದಿಯಲ್ಲಿ 'ಕಿರುಗೂರಿನ ಗಯ್ಯಾಳಿಗಳು'. ಎಂದು ತೇಜಸ್ವಿ ಕಥನಗಳನ್ನು ಪ್ರತ್ಯೇಕವಾಗಿ ವಿವೇಚಿಸಿ ಅಲ್ಲಿನ ಧೋರಣೆಗಳನ್ನು ವಸ್ತುನಿಷ್ಠವಾಗಿ ಚರ್ಚಿಸಿದ್ದಾರೆ. ಈ ಕೃತಿಯು ತೇಜಸ್ವಿಯವರ ಸಾಮಾಜಿಕ ಪ್ರಜ್ಞೆಯ ಅನಂತ ಮುಖಗಳನ್ನು ಪರಿಚಯಿಸಿಕೊಡುತ್ತದೆ. ಈ ಕೃತಿಯಲ್ಲಿ ಬರುವ ವಿಚಾರ ವಿಮರ್ಶೆ ಹೀಗಿದೆ.

> ಚಿರ ನಿಗೂಢ ಅನ್ವೇಷಣೆಗೆ ಸಂಬಂಧಿಸಿದಂಥ ತಾತ್ವಿಕ ಧೋರಣೆಗೆ ನವುರಾಗಿ ಇನ್ನೊಂದು ಆಯಾಮವನ್ನು ಮೈಗೂಡಿಸುವ ಹವಣಿಕೆಯೂ ಕರ್ವಾಲೋ ದಲ್ಲಿ ಇರುವಂತೆನಿಸುತ್ತದೆ. ಹಾರುವ ಓತಿಯ ಅನ್ವೇಷಣೇಗೆ ಸಂಬಂಧಿಸಿದ ನಿರೂಪಣೆಯ ಸಂದರ್ಭಗಳಲ್ಲಿ ಅಲ್ಲಲ್ಲಿ ತೇಜಸ್ವಿಯವರು ಅಧ್ಯಾತ್ಮಿಕ ಪರಿಭಾಷೆಯನ್ನು ಬಳಸುತ್ತಾ ಬಂದಿರುವುದನ್ನು ಗುರುತಿಸಬೇಕು ಜೊತೆಗೆ, ದೇವರ ಅಸ್ತಿತ್ವವನ್ನು ಕುರಿತಂಥ ಚಿಕ್ಕ ಚರ್ಚೆಯನ್ನು ತಂದಿದ್ದಾರೆ. ಅವುಗಳ ಹಿನ್ನೆಯಲ್ಲಿ ನೋಡಿದಾಗ, ಬ್ರಹ್ಮಾಂಡದ ಚಿದಂಬರ ರಹಸ್ಯವನ್ನು ಭೇದಿಸಲು ಹೊರಡುವ ಕರ್ವಾಲೋನ ವೈಜ್ಞಾನಿಕ ಮಾರ್ಗಕ್ಕೂ, ಆಸ್ತಿಕ ಅಥವಾ ಅಧ್ಯಾತ್ಮಿಕ ಮಾರ್ಗಕ್ಕೂ ತಿರುಳಿನ ದೃಷಿಯಿಂದ ಅಲ್ಲದಿದ್ದರೂ ಸ್ವರೂಪದ ದೃಷ್ಟಿಯಿಂದ ತಾತ್ವಿಕ ನೆಲೆಯಲ್ಲಿ ಒಂದು ಸಂಬಂಧವನ್ನು ಸೂಚಿಸುವ ಯತ್ನವಿದೆಯೇನೋ ಅನಿಸುತ್ತದೆ. ಇಂತಹುದೇ ಅಭಿಪ್ರಾಯವನ್ನು ಟಿ.ಪಿ.ಅಶೋಕ ಅವರು ವ್ಯಕ್ತಪಡಿಸುತ್ತಾರೆ. ಆದರೆ ಮೇಲಿನ ಅಭಿಪ್ರಾಯದಲ್ಲಿ ಹುರುಳಿಲ್ಲ ಎನಿಸುತ್ತದೆ ಎಂದು ತಮ್ಮ ಅಭಿಪ್ರಾಯವನ್ನು ಶಂಕರೇಗೌಡರು ಉಲ್ಲೇಖಿಸಿದ್ದಾರೆ. ಅದೆಂದರೆ ಕರ್ವಾಲೊ ಪ್ರಕೃತಿ ಮತ್ತು ಮನುಷ್ಯ ಸಂಬಂಧಗಳ ವಿಶ್ಲೇಷಣೆಗೆ ಹೊರಡುವ ವೈಜ್ಞಾನಿಕ ಕೃತಿ. ಕಾದಬರಿಯಲ್ಲಿ ಬರುವ ಆಧ್ಯಾತ್ಮಿಕ ಅಂಶಗಳು ಕಥಾಭಿತ್ತಿಯಲ್ಲಿ ಬರುವ ಆಂಶಿಕ ವಿಚಾರಗಳಾಗಿವೆ. ಇವುಗಳು ಎಂದೂ ಕೃತಿಯ ಪ್ರಧಾನ ಧಾರೆಯೊಂದಿಗೆ ಬೆರೆಯುವುದಿಲ್ಲ. ಪ್ರಕೃತಿಯ

ನಿಗೂಢತೆಗೂ ಆಧ್ಯಾತ್ಮಿಕತೆಗೂ ಸಂಬಂಧವಿದೆ ಎಂಬುದನ್ನು ಭೌತ ವಿಜ್ಞಾನ ನಿರಾಕರಿಸುತ್ತದೆ. ಆದ್ದರಿಂದ ವಾಸ್ತವವಾದಿ ನೆಲೆಯಲ್ಲಿ ಕಾದಂಬರಿಯನ್ನು ಪರಿಶೀಲಿಸುವುದು ಅರ್ಥಪೂರ್ಣವಾದುದು.[೪]

ಎಂಬ ಡಾ. ಎನ್ ಎಸ್ ಶಂಕರೇಗೌಡರ ಅಭಿಪ್ರಾಯದಂತೆ ಕರ್ವಾಲೋದಲ್ಲಿ ಬರುವ ಆಧ್ಯಾತ್ಮಿಕ ಪರಿಭಾಷೆಯನ್ನು ಕುರಿತು ಟಿ.ಪಿ ಅಶೋಕ ಮತ್ತು ಜಿ ಎಚ್ ನಾಯಕರ ಮಾತುಗಳನ್ನು ಅಲ್ಲಗಳೆಯುತ್ತಾ ತಮ್ಮದೇ ಆದ ಅಭಿಪ್ರಾಯ ಮಂಡಿಸುತ್ತಾರೆ. ಆದರೆ ಯಾವುದೇ ನಿಟ್ಟಿನಲ್ಲಿ ಆಲೋಚಿಸಿದರೂ ಟಿ.ಪಿ ಅಶೋಕ ಮತ್ತು ಜಿ ಎಚ್ ನಾಯಕರದು ಸಮ್ಮತವಾದ ಮಾತು ಎನಿಸುತ್ತದೆ. ಭೌತ ವಿಜ್ಞಾನ ದೃಗೊಚರವಾದ ಭೌತಿಕ ವಸ್ತುಗಳ ಮೇಲೆ ತನ್ನ ಹಕ್ಕನ್ನು ಸ್ಥಾಪಿಸುತ್ತದೆಯೇ ಹೊರತು ಅಮೂರ್ತವಾದ ಅರಿವಿನ ಬಗೆಗಲ್ಲ. ಇನ್ನು ವಾಸ್ತವವಾದಿ ನೆಲೆಯಲ್ಲಿ ಕಾದಂಬರಿಯನ್ನು ಪರಿಶೀಲಿಸುವುದು ಅರ್ಥಪೂರ್ಣವಾದುದು ಎಂದಾಗ ಬೌದ್ಧಿಕತೆಯನ್ನೂ ಮೀರಿದ ವಿಶ್ವರಹಸ್ಯ ಅರಿವಿನ ಮೂಲವನ್ನೂ ಸೋಕದೆ ಉಳಿದುಬಿಟ್ಟಾಗ ಅತೀತವಾದ ಶಕ್ತಿಯ ಬಗೆಗೇ ವಿಸ್ಮಯ ಮೂಡಿ ಉತ್ತರ ಸಿಗದ ಅನೇಕ ಪ್ರಶ್ನೆಗಳು (ಪ್ರಶ್ನೆಗಳಾಗಿಯೇ) ಉಳಿದುಬಿಡುವುದು ಸತ್ಯವಲ್ಲವೇ! ಹಾಗಿದ್ದಾಗ ನಿಗೂಢವಾಗಿಯೇ ಇರುವ (ಈ ವಾಸ್ತವವನ್ನೂ ಒಪ್ಪಿಕೊಳ್ಳುವುದು) ಲೋಕರಹಸ್ಯವನ್ನು ತಿಳಿಯಲಾಗದ ಅಸಹಾಯಕತೆಯ ಮೂಸೆಯಲ್ಲಿ ದರ್ಶನ ತತ್ವ ಹೊರಬಂದಿರಲಿಕ್ಕೂ ಸಾಧ್ಯ. ಅದು ಕಾದಂಬರಿಕಾರನ ದೃಷ್ಟಿಯಲ್ಲಿ ಅನ್ಯವೆಂದಿರಬಹುದು. ಸಹೃದಯನ ಗ್ರಹೀತ ನೆಲೆಯಲ್ಲಿ ಅಥವಾ ತಾತ್ವಿಕ ನೆಲೆಯಲ್ಲಿ ಒಂದು ಸಂಬಂಧವನ್ನು ಸೂಚಿಸುವ ಯತ್ನ ಎಂದೆನಿಸುತ್ತದೆ.

ಕನ್ನಡ ಸಾಹಿತ್ಯದ ಅನೇಕ ವಿದ್ವಾಂಸರು ತೇಜಸ್ವಿ ಅವರ ಸಮಗ್ರ ಸಾಹಿತ್ಯವನ್ನು ವಿಭಿನ್ನ ನೆಲೆಗಳಲ್ಲಿ ವ್ಯಾಖ್ಯಾನಿಸಿದ್ದಾರೆ. ಅವುಗಳನ್ನು ಕ್ರೋಢೀಕರಿಸಿ ಡಿ.ವಿ ಪ್ರಹ್ಲಾದ್‌ರ ಸಂಪಾದಕತ್ವದಲ್ಲಿ ಸಂಚಯ, ಬನಶಂಕರಿ ಬೆಂಗಳೂರು ಇವರು **ತೇಜಸ್ವಿ ಲೋಕ**[೫] ಎಂಬುದಾಗಿ ಸಾಹಿತ್ಯ ಲೋಕಕ್ಕೆ ಪರಿಚಯಿಸಿದ್ದಾರೆ. ಇದರಲ್ಲಿನ ಹದಿನೈದು ಲೇಖನಗಳು ಮತ್ತು ಪ್ರೊ. ಜಿ. ಟಿ. ವೀರಪ್ಪ ಮತ್ತು ಡಾ. ಎಂ ಬೈರೇಗೌಡ ಇವರ ಸಂಪಾದಕತ್ವದಲ್ಲಿ ಕರ್ನಾಟಕ ಸಾಹಿತ್ಯ **ಅಕಾಡೆ**ಮಿಯವರು ಮತ್ತು ಇದರ ಸಹಯೋಗದಲ್ಲಿ ಕೆ.ಎಸ್.ಮುದ್ದಪ್ಪ ಸ್ಮಾರಕ ಟ್ರಸ್ಟ್ ನಡೆಸಿದ್ದ ವಿಚಾರಸಂಕಿರಣಗಳಲ್ಲಿ ಮಂಡಿಸಲಾದ ಉಪನ್ಯಾಸಗಳನ್ನು ಒಂದೆಡೆ ಸೇರಿಸಿ ಹೊರ ತಂದಿರುವ **ತೇಜಸ್ವಿ ಸಾಹಿತ್ಯ ಕೃಷಿ**[೬] ಈ ಕೃತಿಯಲ್ಲಿ ಒಂಭತ್ತು ಲೇಖನಗಳು ತೇಜಸ್ವಿ ಸಾಹಿತ್ಯದ ವಿಶ್ಲೇಷಣೆಯನ್ನು ಮಾಡುವುದರ ಜೊತೆಗೆ ಅನೇಕ ಮಾಹಿತಿಗಳನ್ನು ನೀಡುತ್ತವೆ.

ಹೂವಿನ ಹಡಗಲಿಯಲ್ಲಿ ಹಮ್ಮಿಕೊಂಡಿದ್ದ **ತೇಜಸ್ವಿ ನೆನಪು**[೭] ಕಾರ್ಯಕ್ರಮದಲ್ಲಿ ಕನ್ನಡ ಸಾಹಿತ್ಯದ ಅನೇಕ ದಿಗ್ಗಜರು ತೇಜಸ್ವಿಯೊಂದಿಗಿನ ತಮ್ಮ ನೆನಪುಗಳನ್ನು ಹಂಚಿಕೊಳ್ಳುವುದರೊಂದಿಗೆ ತೇಜಸ್ವಿಯವರ ಸಮಗ್ರ ಸಾಹಿತ್ಯವನ್ನು ವಿಭಿನ್ನ ನೆಲೆಗಳಲ್ಲಿ ವ್ಯಾಖ್ಯಾನಿಸಿದ್ದಾರೆ. ಅವುಗಳನ್ನು ಕ್ರೋಢೀಕರಿಸಿ ಬಿ. ಚಂದ್ರೇಗೌಡ, ಬಿ ಎಲ್. ರಾಜುರ ಸಂಪಾದಕತ್ವದಲ್ಲಿ ಸಭೆಯ ಮಾತುಗಳನ್ನು ಸಂಗ್ರಹಿಸಿ **ತೇಜಸ್ವಿ ನೆನಪು** ಹೆಸರಿನಲ್ಲಿ ಸಂಗ್ರಹಿಸಿ ಪ್ರಕಟಿಸಿದ್ದಾರೆ. ಇಲ್ಲಿನ ಮೂವತ್ತೈದು ಲೇಖನಗಳು ತೇಜಸ್ವಿ ಸಾಹಿತ್ಯದ ಸ್ಥೂಲ ಪರಿಚಯವನ್ನು ಮಾಡಿಕೊಡುತ್ತವೆ.

ಮೂಡಿಗೆರೆಯ ಹಳೆಕೋಟೆಯ ರಮೇಶ್‌ರವರು ಪೂರ್ಣಚಂದ್ರತೇಜಸ್ವಿಯವರನ್ನು ಮೂರು ದಶಕಗಳ ಕಾಲದಿಂದ ಹತ್ತಿರದಿಂದ ಕಂಡ ತಮ್ಮ ಅನುಭವವನ್ನು **ನೆನಪಿನಂಗಳದಲ್ಲಿ ತೇಜಸ್ವಿ**[೮] ಎಂಬ ಕೃತಿಯಲ್ಲಿ ಅಭಿವ್ಯಕ್ತಿಸಿ ಇದನ್ನು ೨೦೧೦ ಶಾರದಾಂಬ ಎಸ್ಟೇಟ್‌ನ ಪ್ರಕಾಶನದಿಂದ ಹೊರತಂದಿದ್ದಾರೆ. ಪೂರ್ಣಚಂದ್ರತೇಜಸ್ವಿಯವರೊಂದಿಗಿನ ಮೂವತ್ತು ವರ್ಷಗಳ ಆತ್ಮೀಯ ಒಡನಾಟ ಮತ್ತು ಅವರ ಸಾರ್ವಕಾಲಿಕವಾದ ಚಿಂತನೆಗಳು ತಮ್ಮ ಮೇಲೆ ಪ್ರಭಾವ ಬೀರಿದ ಸಂದರ್ಭಗಳೊಂದಿಗೆ ಅವರ ಜೊತೆಗಿನ ಸಾಮೀಪ್ಯದ ಅನುಭವವನ್ನು ಈ ಕೃತಿಯಲ್ಲಿ ಹಂಚಿಕೊಂಡಿದ್ದಾರೆ

ಶ್ರೀಮತಿ ಆರ್.ರಾಜೇಶ್ವರಿ ತೇಜಸ್ವಿಯವರು ತಮ್ಮ ಬಾಳ ಸಂಗಾತಿಯಾದ ಪೂರ್ಣಚಂದ್ರ ತೇಜಸ್ವಿಯವರನ್ನು ಕುರಿತ ಬರೆದ **ನನ್ನ ತೇಜಸ್ವಿ**[೯] ಕೃತಿಯು ೨೦೧೧ನೇ ಇಸವಿಯಲ್ಲಿ ಮೈಸೂರಿನ ಪುಸ್ತಕ ಪ್ರಕಾಶನದಲ್ಲಿ ಪ್ರಕಟಣೆಗೊಂಡಿದ್ದು, ಈ ಕೃತಿಯ ಒಳನೋಟದಲ್ಲಿ ಪೂರ್ಣಚಂದ್ರ ತೇಜಸ್ವಿ ಮತ್ತು ರಾಜೇಶ್ವರಿಯವರ ಐದು ದಶಕಗಳ ದಾಂಪತ್ಯ ಜೀವನದ ಅಮೂರ್ತವಾದ ಪಾರಮಾರ್ಥಿಕ ಬದುಕಿನ ಜೀವಸತ್ವದ ದರ್ಶನವಿದೆ.

ಪೂರ್ಣಚಂದ್ರತೇಜಸ್ವಿಯವರು ಕೂಡ ಸಾಮಾನ್ಯರು, ಅವರ ವ್ಯಕ್ತಿತ್ವ ಸಾಮಾನ್ಯತೆಯಿಂದ ಅಸಾಮಾನ್ಯತೆಯತ್ತ ಸಾಗಲು ಕಾರಣವಾದ ಸಂದರ್ಭಗಳ ಚಿತ್ರಣ, ಅವರ ಸೂಕ್ಷ್ಮಗ್ರಾಹಿತನ ವಿವಿಧ ರೀತಿಯಲ್ಲಿ ತೆರೆದುಕೊಳ್ಳುವುದಕ್ಕೆ ಕಾರಣವಾದ ಅಭೂತಪೂರ್ವ ಹಿನ್ನೆಲೆಗಳು, ವಿಭಿನ್ನ ವಿಷಯಗಳ ಬಗೆಗಿನ ಆಸಕ್ತಿ ಮತ್ತು ಆಳವಾದ ಅಧ್ಯಯನ ಹಾಗೂ ಜೀವ ಜಗತ್ತಿನ ಸತ್ಯಾನ್ವೇಷಣೆಗಳ ಕೌತುಕವನ್ನು ವಿಶೇಷ ರೀತಿಯಲ್ಲಿ ಕಟ್ಟಿಕೊಡುವುದರ ಜೊತೆಗೆ ತಮ್ಮ ದಿಟ್ಟ ನೇರಾನೇರ ನುಡಿಗಳಿಂದ ತಮ್ಮ ಬದುಕಿನ ವಾಸ್ತವ ಚಿತ್ರಣವನ್ನು ರಾಜೇಶ್ವರಿಯವರು ಅನಾವರಣಗೊಳಿಸುತ್ತಾರೆ. ತಮ್ಮ ಸೃಜನಶೀಲ, ವೈಚಾರಿಕ ಬರಹಗಳಿಂದ ತರುಣ ತಲೆಮಾರಿಗೆ ರೋಲ್ ಮಾಡೆಲ್ ಆಗಿದ್ದ ತೇಜಸ್ವಿಯವರ ಬಗೆಗೆ (ಅನೇಕ ರೀತಿಯ ವದಂತಿಗಳನ್ನು ಹುಟ್ಟುಹಾಕಿದ್ದ ವೈಯಕ್ತಿಕ ಜೀವನದ ಬಗ್ಗೆ) ಮತ್ತು ಅವರ ಕಥನಗಳಲ್ಲಿ ಕಾಣದ ಕೌಟುಂಬಿಕ ಸಂಬಂಧಗಳ ಬಗ್ಗೆ ಓದುಗ ವಲಯಕ್ಕೆ ಒಂದು ರೀತಿಯ ಕೌತುಕ ಇದ್ದೇ ಇತ್ತು. ಆ ಕುತೂಹಲವನ್ನು ರಾಜೇಶ್ವರಿಯವರು ತಣಿಸಿದ್ದಾರೆಂದೇ ಹೇಳಬೇಕು. ತೇಜಸ್ವಿಯವರಂತೆ ರಾಜೇಶ್ವರಿಯವರಲ್ಲೂ ಕೂಡ ದೃಗೋಚರವಾಗುವುದು ಪಾರದರ್ಶಕತೆ.

ರಾಜೇಶ್ವರಿಯವರಲ್ಲಿ ವ್ಯಕ್ತವಾಗುವುದು ಆರಾಧನೆಯ ದೃಷ್ಟಿ ಎನ್ನುವುದಕ್ಕಿಂತಲೂ ಪರಸ್ಪರರು ಅರ್ಥೈಸಿಕೊಂಡು ಒಮ್ಮತದಿಂದ ಬದುಕಿದ ರೀತಿ, ಕೃತಿ ಮತ್ತು ಬದುಕಿನ ಸಮೀಕರಣದಲ್ಲಿ ಪ್ರಮುಖವಾಗಿ ಗೋಚರವಾಗುವ ನಿರ್ವ್ಯಾಜ್ಯ ಪ್ರೀತಿ, ಕಾಳಜಿ ಮತ್ತು ಅಮೂರ್ತ ಪ್ರೇಮ, ಇದರ ಜೊತೆಗೆ ಬಾಳಿನ ಜೊತೆಯಾದ ಬಂಧು ಬಾಂಧವರೊಡನೆ ಇರುವ ನಂಟು, ಬದುಕಿನ ಸಿಹಿ ಕಹಿ ನೆನೆಪುಗಳನ್ನು ಹೊದಿರುವ ರಾಜೇಶ್ವರಿಯವರ ಆತ್ಮಕಥನ ಓದುಗ ವಲಯದಲ್ಲಿ ವಿಶಿಷ್ಟವಾದ ಛಾಪನ್ನು ಒತ್ತುವುದರಲ್ಲಿ ಆಶ್ಚರ್ಯವಿಲ್ಲ.

ಕಡಿದಾಳು ಶಾಮಣ್ಣನವರ ಆತ್ಮಕಥನವನ್ನು ಕೆ ಅಕ್ಷತಾರವರು ಸಂಗ್ರಹಿಸಿ ಕೃತಿರೂಪಕ್ಕೆ ಅಳವಡಿಸಿ **ಕಾಡತೊರೆಯ ಜಾಡು**[೧೦] ಎಂದು ಶಾಮಣ್ಣನವರ ಬದುಕಿನ ಹೋರಾಟಗಳನ್ನೇ ಕಥನವಾಗಿಸಿ ಸಾಹಿತ್ಯ ಲೋಕಕ್ಕೆ ಅರ್ಪಿಸಿದ್ದಾರೆ ಇದು ೨೦೧೧ರಲ್ಲಿ, ಅಭಿನವ ಪ್ರಕಾಶನ

ವಿಜಯನಗರ ಬೆಂಗಳೂರಿನಿಂದ ಪ್ರಕಟನೆಗೊಂಡಿದೆ. ತೇಜಸ್ವಿಯವರಂತಹುದೇ ವ್ಯಕ್ತಿತ್ವವನ್ನು ಹೊಂದಿದ ಶಾಮಣ್ಣನವರು ಸಾಹಿತ್ಯಲೋಕದಲ್ಲಿ ಗುರುತಿಸಿಕೊಂಡದ್ದಕ್ಕಿಂತ ರೈತ, ಕೂಲಿಕಾರ ವರ್ಗದಲ್ಲಿ ಸೈ ಎನಿಸಿಕೊಂಡವರು. ಸಮಾಜವಾದಿಯಾಗಿ ರಾಜಕೀಯ ವಲಯದಲ್ಲಿ ಗುರುತಿಸಿಕೊಳ್ಳುವ ಚೈತನ್ಯವಿದ್ದರೂ ತಮ್ಮ ಸಿದ್ಧಾಂತಕ್ಕೆ ಒಳಪಟ್ಟು ಕೃಷಿ ಬದುಕನ್ನು ಪ್ರಾಮಾಣಿಕವಾಗಿ ತಾತ್ವಿಕವಾಗಿ ಸ್ವೀಕರಿಸಿದವರು. ಈ ದಿಸೆಯಲ್ಲಿ ಭಗವತೀಕೆರೆಯಲ್ಲಿನ ಅವರ ಜೀವನದ ಸ್ವಚ್ಛಂದತೆ, ಸಮೃದ್ಧತೆಯ ಸಾರವನ್ನು ಈ ಕೃತಿಯಲ್ಲಿ ಬಿಂಬಿಸಲಾಗಿದೆ. ಶಾಮಣ್ಣನವರು ಸಂಕಲ್ಪ, ಛಲ, ತತ್ವನಿಷ್ಠೆಯನ್ನು ಬದುಕಿನ ಕೇಂದ್ರವಾಗಿಸಿಕೊಂಡದ್ದರ ವಿವರಣೆಯೊಂದಿಗೆ ತಮ್ಮ ಗಟ್ಟಿತನವನ್ನು ರೈತಬೆಂಬಲಕ್ಕೆ ಉಪಯೋಗಿಸಿದ ಪರಿಯನ್ನು ಅದಕ್ಕೆ ಬೆಂಗಾವಲಾದ ತೇಜಸ್ವಿಯವರ ಸ್ಮರಣೆಯನ್ನೂ ಕೃತಿಯುದ್ದಕ್ಕೂ ಹಾಸುಗಲ್ಲಾಗಿಸಿದ್ದಾರೆ. ಅದರ ಮೇಲೆ ನಡೆದು ಹೋಗಿ ಶಾಮಣ್ಣನವರಂತ ಮೇರು ಪರ್ವತವನ್ನು ತಲುಪಬೇಕಾಗುತ್ತದೆ.

ಹೊಸಗನ್ನಡ ಸಾಹಿತ್ಯ ಮತ್ತು ಸಂಸ್ಕೃತಿ ಚಿಂತನೆಯನ್ನು ಕುರಿತ ವಿ. ಚಂದ್ರಶೇಖರ ನಂಗಲಿಯವರ ಬರಹರೂಪದ **ಈಗಳೆ ಸಾಧ್ಯ**[೧೧] ವಿಮರ್ಶಾ ಸಂಕಲನವನ್ನು ೨೦೧೦ ರಲ್ಲಿ ಕ್ರೆಸ್ಟ್ ಯೂನಿವರ್ಸಿಟಿ ಕನ್ನಡ ಸಂಘ, ಬೆಂಗಳೂರು ಇವರು ಪ್ರಕಟಪಡಿಸಿದ್ದು ಇದರಲ್ಲಿ ಪೂರ್ಣಚಂದ್ರತೇಜಸ್ವಿಯವರನ್ನು ಕುರಿತಂತೆ ಮೂರು ಲೇಖನಗಳಿವೆ. ಲೋಹಿಯಾ-ಕುವೆಂಪು-ಕಾರಂತ-ತೇಜಸ್ವಿ ಎಂಬ ಚತುರ್ಮುಖ ಸೌಂದರ್ಯ, 'ಮಾಯಾಲೋಕ'ದೊಳಗೊಂದು ಸುತ್ತಾಟ, ಪ್ಯಾಪಿಲಾನ್: ಬಹುಮಹಡಿಗಳ ಸಂಕೀರ್ಣ ಕಥನ.

'ಮಾಯಾಲೋಕ'ದೊಳಗೊಂದು ಸುತ್ತಾಟವು ವಿ. ಚಂದ್ರಶೇಖರ ನಂಗಲಿಯವರು ದಿನಾಂಕ ೦೭-೦೧-೨೦೦೭ ರಂದು ಸಮುದಾಯ ಮತ್ತು ಕಾವ್ಯಮಂಡಲದ ಸಂಯುಕ್ತ ಆಶ್ರಯದಲ್ಲಿ ನಡೆದ **ತೇಜಸ್ವಿ ಕಥನ ಸಾಹಿತ್ಯ**-ವಿಚಾರಸಂಕಿರಣದಲ್ಲಿ ಮಾಡಿದ ಭಾಷಣವನ್ನಾಧರಿಸಿದ ಲೇಖನ. ಇದರಲ್ಲಿ ವಿ. ಚಂದ್ರಶೇಖರ ನಂಗಲಿಯವರು ಸಾಮಾನ್ಯವಾದ ಸಾಂಪ್ರದಾಯಿಕ ಶೈಲಿಕಥೆಗಳಿಗಿಂತ ಬೇರೆಯೇ ಆದ ತೇಜಸ್ವಿ ಕಥನಗಳನ್ನು 'ಕ್ರಿಯಾಮಥನಗಳು' ಎಂದು ಕರೆದು ಅದನ್ನು ವಿಶಿಷ್ಟವಾದ ರೀತಿಯಲ್ಲಿ ವ್ಯಾಖ್ಯಾನಿಸುತ್ತಾರೆ.

> ತೇಜಸ್ವಿಯವರು ತಾವು ಕಂಡ ಜೀವನ ಸಮುದ್ರದಲ್ಲಿ 'ಡೌನ್ ಟು ಅರ್ಥ್' ಎಂಬ ದೃಷ್ಟಿಕೋನದ ಆಮೆಯ ಬೆನ್ನ ಮೇಲೆ ದೃಢಚಿತ್ತವೆಂಬ ಪರ್ವತವನ್ನಿಟ್ಟು, ಪ್ರತಿಭೆಯೆಂಬ ಸಹಸ್ರ ನಾಲಗೆಗಳ ಸರ್ಪದ ನೆರವಿನಿಂದ, ಒಳಿತು ಕೆಡುಕುಗಳನ್ನು ಸಮಭಾವನೆ ಯಿಂದ ತೊಡಗಿಸಿ ಕಡೆದು ತೆಗೆದ ಮಹಾಕೃತಿಯೇ ಮಾಯಾಲೋಕ! ಇದರಲ್ಲಿ ಜಲಕ್ಷಾಮದ ಹಾಲಾಹಲವಿದೆ ಮತ್ತು ಜಲಧಾರೆಯ ಅಮೃತವಿದೆ. ಒಂದು ಸ್ವಯಂಕೃತಾಪರಾಧ ಮತ್ತೊಂದು ನಿಸರ್ಗದ ವರಪ್ರಸಾದ [೧೨]

ಎಂದು ಮಾಯಾಲೋಕ ಕೃತಿಯ ಕೆಲವು ಸಾರಭೂತ ವಿಚಾರಗಳನ್ನು ಪೌರಾಣಿಕ ವಸ್ತುವಿನ ಹಿನ್ನೆಲೆಯಲ್ಲಿ ಚರ್ಚಿಸಿರುವುದು ಅಭಾಸವೆನಿಸುತ್ತದೆ. ಸರಳವಾಗಿ ಅರ್ಥವಾಗುವ ವಿಷಯಗಳಿಗೆ ಪೌರಾಣಿಕತೆಯ ಲೇಪದ ಆವಶ್ಯಕತೆ ಇದೆ ಎನಿಸುವುದಿಲ್ಲ. **ತರಕಾರಿ ಅಗಂಡಿ ಮತ್ತು ಮೀನಂಗಡಿಯ ನಿರೂಪಣೆ, ಕರಾಟೆ ಮಂಜನ ವ್ಯಕ್ತಿತ್ವದ ನಿರೂಪಣೆ, ಸುಭಾಷ್ ಚಂದ್ರಬೋಸ್ ಮತ್ತು ಜವಾಹರ್ ಲಾಲ್ ನೆಹರೂ ಕಟೌಟುಗಳು** ಎಂದು ವಿಂಗಡಿಸಿ ಹಲವು ಉದಾಹರಣೆಗಳೊಂದಿಗೆ 'ಮಾಯಾಲೋಕ'ದುದ್ದಕ್ಕೂ ಹೆಣೆದುಕೊಂಡಿರುವ ಕ್ರಿಯಾಮಥನಗಳೇ 'ಸತ್ಯದರ್ಶನ ಮಾಡಿಸುವ ಧ್ವನಿಪೂರ್ಣದ ಕಾವ್ಯ ಪ್ರತಿಮೆಗಳು' ಎಂದು ತಮ್ಮ ಅಭಿಪ್ರಾಯವನ್ನು

ಸಹೃದಯ ವರ್ಗದವರು ಅರ್ಥೈಸಿಕೊಳ್ಳಬೇಕಾದ ಅವಶ್ಯಕತೆಯನ್ನು ಒತ್ತಿಹೇಳಿದ್ದಾರೆ. ಹೀಗೆ ತಮ್ಮದೇ ದೃಷ್ಟಿಕೋನವನ್ನು ವಿಚಾರ ವಿಮರ್ಶೆಯನ್ನು ವ್ಯಕ್ತಪಡಿಸಿರುವುದಕ್ಕೆ ಖುದ್ದು ತೇಜಸ್ವಿಯವರ ಆಕ್ಷೇಪಕ್ಕೂ[೧೩] ಗುರಿಯಾಗಿದ್ದಾರೆ.

ನರೇಂದ್ರ ರೈ ದೇರ್ಲ ಅವರು ಪೂರ್ಣಚಂದ್ರತೇಜಸ್ವಿಯವರ ಸಂದರ್ಶನ ಮತ್ತು ದರ್ಶನ ಎಂಬ ಉಪಶೀರ್ಷಿಕೆಯಲ್ಲಿ **ನಮ್ಮೆಲ್ಲರ ತೇಜಸ್ವಿ**[೧೪] ಎಂಬ ನೆನಪಿನ ಮಾಲೆಯನ್ನು ಅಕ್ಷರಗಳಲ್ಲಿ ಕಟ್ಟಿಕೊಟ್ಟಿದ್ದಾರೆ. ಧನಂಜಯ ಜೀವಾಳ ಬಿ.ಕೆ ಇವರ **ಕಾಡಿನ ಸಂತ ತೇಜಸ್ವಿ**[೧೫] ಕೆಲವು ನೆನಪುಗಳು ಈ ಹೊತ್ತಿಗೆಯು ತೇಜಸ್ವಿ ಬದುಕಿನ ನೈಜ ಘಟನೆಗಳನ್ನು ಆತ್ಮೀಯವಾದ ಸಂದರ್ಭಗಳೊಂದಿಗೆ ಪರಿಚಯಿಸುತ್ತದೆ.

ಜಿ.ಎಚ್. ನಾಯಕರ ವಿಮರ್ಶಾಕೃತಿಗಳಲ್ಲಿ ಒಂದಾದ **ಕನ್ನಡ ಸಣ್ಣಕತೆಯ ಒಲವು ನಿಲುವುಗಳು** ವಿಮರ್ಶಾ ಲೇಖನದಲ್ಲಿ 'ನವ್ಯ ಪಂಥದ ಕಥಾ ಸಾಹಿತ್ಯ ಸಮೀಕ್ಷೆ'ಯಡಿಯಲ್ಲಿ ಅನೇಕ ಲೇಖಕರ ಜೊತೆ ಕೆ.ಪಿ ಪೂರ್ಣಚಂದ್ರ ತೇಜಸ್ವಿ ಕಥನಗಳಲ್ಲಿ ಕಂಡು ಬರುವ ಮುಖ್ಯ ಕಾಳಜಿಗಳನ್ನು ವಿಮರ್ಶಾತ್ಮಕ ದೃಷ್ಟಿಯಿಂದ ಪರಿಶೀಲನೆ ನಡೆಸಿ ಹೊಸ ನೋಟವನ್ನು ಕ್ರಮಿಸಿದ್ದಾರೆ. ಜಿ.ಎಚ್. ನಾಯಕರು ತಮ್ಮ ಮತ್ತೊಂದು ವಿಮರ್ಶಾ ಕೃತಿಯಾದ 'ಸಮಕಾಲೀನ'ದಲ್ಲಿಯೂ ತೇಜಸ್ವಿಯವರ ಸಮಗ್ರ ಕಥಾಸಾಹಿತ್ಯದ ಬಗ್ಗೆ ತಮ್ಮ ವಿಮರ್ಶಾತ್ಮಕ ನೋಟವನ್ನು ಹರಿಸಿದ್ದಾರೆ. **ಸಮಕಾಲೀನ** ಕೃತಿಯ ಕೊನೆಯ ಲೇಖನ 'ತೇಜಸ್ವಿಯವರ ಸಾಹಿತ್ಯ' ಇತರ ಲೇಖನಗಳಿಗಿಂತ ದೀರ್ಘವಾಗಿದ್ದು 'ಕರ್ವಾಲೋ' ಕೃತಿಯ ಬಗ್ಗೆ ಹೆಚ್ಚಿನ ಚರ್ಚೆಯನ್ನು ಒಳಗೊಂಡಿದೆ. ಈ ಲೇಖನದಲ್ಲಿ ಪೂರ್ಣಚಂದ್ರ ತೇಜಸ್ವಿಯವರು ಕಥೆ ಕಾದಂಬರಿ ನಾಟಕ-ಸಾಹಿತ್ಯದಲ್ಲಿ ಬಳಸಿಕೊಂಡಿರುವ ತಾತ್ವಿಕ ಧೋರಣೆ, ತಂತ್ರವಿಧಾನ, ನಿರೂಪಣಾದಾಟ, ಸ್ಥಾಯಿಭಿತ್ತಿಗಳ ಸೂಕ್ಷ್ಮಾವಲೋಕನ ನಡೆದಿದೆ. ನವ್ಯೋತ್ತರ ಮಿಮರ್ಶಕರಿಗೆ ಇವರ ವಿಮರ್ಶಾಗ್ರಂಥಗಳು ಮಾದರಿಯಾಗಿವೆ ಎಂದೇ ಹೇಳಬಹುದು.

ಪ್ರೊ. ಶಿವರಾಮಯ್ಯರ **ಸಾಹಿತ್ಯ ಪರಿಸರ-ತೇಜಸ್ವಿ ನಿಗೂಢ ಮನುಷ್ಯರು**[೧೬] ಎಂಬ ಲೇಖನ; ಈ ವಿಶ್ಲೇಷಣೆಯಲ್ಲಿ ಪ್ರೊ. ಶಿವರಾಮಯ್ಯನವರು ತೇಜಸ್ವಿಯವರ 'ಅನ್ವೇಷಣೆಯ ದೃಷ್ಟಿಗೆ ಏನೆಲ್ಲವೂ ವಸ್ತುವಾಗುತ್ತದೆ. ಉದಾ: ಇಬ್ಬನಿ...ಮಿಂಚುಹುಳ[೧೭] ಇತ್ಯಾದಿ' ಎಂದಿದ್ದಾರೆ. ಅವರ ಈ ಅಭಿಪ್ರಾಯವು ಸಂಪೂರ್ಣ ಸಮ್ಮತವಾಗುವುದು ವಿವೇಕಯುತವಾಗಿ, ಹೃದಯವಂತಿಕೆಯಿಂದ ಹಾಗೂ ಮಕ್ಕಳ ಕುತೂಹಲದಂಥ ದೃಷ್ಟಿಯಿಂದ ನೋಡಿದಾಗ ಮಾತ್ರ. ಪ್ರತಿಯೊಂದು ಕೃತಿಯೂ ತನ್ನತನವನ್ನು ಉಳಿಸಿಕೊಂಡು ನಾವೀನ್ಯತೆಯನ್ನೂ ಪಡೆದುಕೊಂಡು ಸಹೃದಯರ ಮನದಕದತಟ್ಟಬಲ್ಲದೆಂಬುದು ನನ್ನ ಅಭಿಪ್ರಾಯ.

ಶಿವರಾಮಯ್ಯನವರ ದೃಷ್ಟಿಯಲ್ಲಿ ತೇಜಸ್ವಿಯವರು ಕಥೆಯಲ್ಲಿ ಬಳಸಿರುವ ಪ್ರತಿಯೊಂದು ಘಟನೆಯೂ ಇನ್ನೊಂದಕ್ಕೆ ಪ್ರತಿಮೆಯೆಂಬಂತೆ. ಅವರ ದೃಷ್ಟಿಯಲ್ಲಿ ಪ್ರತಿಯೊಂದು ಮಾರ್ಗವನ್ನು ಸ್ವತಃ ಕಂಡುಕೊಳ್ಳಬೇಕು. ತೇಜಸ್ವಿಯವರ ಪ್ರತಿಯೊಂದು ಸೃಷ್ಟಿಯಲ್ಲಿಯೂ ನಾವೀನ್ಯತೆಯನ್ನ ಹುಡುಕಿಕೊಳ್ಳುವ ಪ್ರಯತ್ನ ಇದೆ. ಉಗ್ರಗಿರಿಯೆಂಬುದು ಮಲೆನಾಡಿನ ಮೃತ್ಯುಛಾಯೆ. ಸದಾ ಬೆಂಬಿಡದ ನಿತ್ಯ ಸತ್ಯ, ಬೆನ್ನಹಿಂದಿನ ಮೌನ/ಸಾವು. ಅಲ್ಲಿ ಬರುವ ಭೂಕಂಪ, ಸುರಿಮಳೆ, ಬಿರುಗಾಳಿ, ಇವುಗಳು ಕಥೆಯಲ್ಲಿ ವಿಶೇಷ ಪಾತ್ರವಹಿಸುತ್ತವೆಯೆಂಬುದು ಅವರ ಅಭಿಪ್ರಾಯ.

ಆದರೆ ವಿಶೇಷ ಪಾತ್ರವಹಿಸುವುದಕ್ಕಿಂತ ಹೆಚ್ಚಿನದಾಗಿ ಆ ಕಥೆಯು ತನ್ನತನವನ್ನು ಉಳಿಸಿಕೊಂಡು ಅರ್ಥವಂತಿಕೆಯಿಂದ ಕೂಡಿರಬೇಕೆಂದರೆ ಅಂತಹ ಸನ್ನಿವೇಶ ಸೃಷ್ಟಿ ಅನಿವಾರ್ಯವೆಂಬುದು ನನ್ನ ಅಭಿಪ್ರಾಯ.

ಆದರೆ ಶಿವರಾಮಯ್ಯನವರು ಹೇಳುವ ರಂಗಪ್ಪ, ಗೋಪಾಲಯ್ಯ ಮತ್ತು ಜಗನ್ನಾಥ ಇವರು ಪ್ರಧಾನರು ಉಳಿದ ಶಾರಿ, ಪಂಚಮರು, ದೂರ್ಜ ಪರ್ಬುಗಳ ಪಾತ್ರ ಗೌಣ ಎಂಬ ಮಾತನ್ನು ನಾನು ಒಪ್ಪಲಾರೆ. ಕಥೆಯ ರಹಸ್ಯ ಎನ್ನುವುದಕ್ಕಿಂತಲೂ ಹೆಚ್ಚಾಗಿ ನಿಗೂಢಮನುಷ್ಯರು ಮಲೆನಾಡಿನ ಯಾವುದೋ ಒಂದು ಕಡೆ ನಡೆದ ಕೇವಲ ಘಟನೆಯಲ್ಲ. ಬದಲಾಗಿ ಛಿದ್ರ ವಿಚ್ಛಿದ್ರ ಬದುಕನ್ನು ಬದುಕುತ್ತಿರುವ, ಮೃತ್ಯುವಿನ ಕರಾಳ ಛಾಯೆಯನ್ನು ಹೆಗಲಮೇಲಿನ ಭೂತದಂತೆ ಬಗೆದು ಜೀವನವನ್ನೇ ದುರ್ಭರಗೊಳಿಸುವ ಹಾಗೂ ಕೇವಲ ಜನ್ಮದಿಂದ ಮಾತ್ರ ಮಾನವರಾಗದೇ ಪ್ರವೃತ್ತಿಯಿಂದಲೂ ಮಾನವರಾಗಬೇಕಾದ ಅನಿವಾರ್ಯತೆ, ಎಂಥ ಕಷ್ಟಗಳಲ್ಲಿಯೂ ಸರಿಯಾದ ನಿರ್ಣಯ ಅನ್ನಿಸುವಂಥ ನಿರ್ಣಯ, ಮಾನವ ಮಾನವೀಯತೆಯನ್ನು ಮರೆತಾಗ ತೋರಬೇಕಾದ ಕರುಣೆ, ಆ ಕರುಣೆಗೆ ಕೃತಜ್ಞತೆ ಇವೆಲ್ಲವೂ ಕಥಾ ಸನ್ನಿವೇಶ ಮಾತ್ರವಲ್ಲ ನಮ್ಮ ಸಮಾಜದಲ್ಲಿಯೇ, ನಮ್ಮಲ್ಲಿಯೇ ಇರುವ ಸಂವೇದನೆಗಳು. ಈ ಪಂಚಮರು ಬೇರೆ ಯಾರೋ ಅಲ್ಲ, ನಮ್ಮ ಮನಸ್ಸಿನ ವಿಕೃತಿಗಳು. ಮಾನವನ ನಿರ್ಲಾಚಿಕೆಯ ಪ್ರವೃತ್ತಿಗೆ ಅಥವಾ ಪಾಶವೀ ಕೃತ್ಯಕ್ಕೆ ಹಿಡಿದ ಕೈಗನ್ನಡಿ ಅಷ್ಟೇ. ಪ್ರತಿಯೊಂದೂ ಮುಖ್ಯವಾಗುವ ಈ ಪರಿಸರ ಮತ್ತು ಸಮಾಜದಲ್ಲಿ ಯಾರೂ ಹೆಚ್ಚಲ್ಲ. ಯಾರೂ ಕಡಿಮೆಯಲ್ಲ. ಯಾರೂ ಮೇಲಲ್ಲ. ಯಾರೂ ಕೀಳಲ್ಲ. ಅನುಭವಗಳಿಗಾಗಿ ಹೋರಾಡುವ ನಾವು ನಮ್ಮಲ್ಲಿರುವ ಸುಪ್ತಭಾವನೆಗಳನ್ನು ಅಥವಾ ಮನಸ್ಸನ್ನೇ ಅರ್ಥಮಾಡಿಕೊಳ್ಳದ ನಾವು ಇನ್ನೆಲ್ಲೋ ಅನುಭವ ಬೇಕೆಂದು ಹೊರಟರೆ ಬಹುಶಃ ಹೀಗೆಯೇ ಆದೀತು. ಏಕೆಂದರೆ ಇಂಥ ಪ್ರತಿಯೊಂದು ಸನ್ನಿವೇಶಗಳೂ, ಪಾತ್ರಗಳೂ ಸುಪ್ತಮನಸ್ಸಿನಲ್ಲಿ ಟೆಕ್ಕೆಹಾಕಿ ಮಲಗಿರುತ್ತವೆ. ಅಂಥ ವಿಕೃತ ಭಾವನೆಗಳನ್ನ ಹೊರಹಾಕಬೇಕಾದ ಸೂಕ್ಷ್ಮಪ್ರಜ್ಞೆ ಮಾನವನಿಗಿರಬೇಕು. ಇಲ್ಲಿ ಬರುವ ಪಂಚಮರು, ಶಾರಿ, ದೂಜ ಪರ್ಬುಗಳು ಬೇರೆಲ್ಲೂ ಇಲ್ಲ; ನಮ್ಮಲ್ಲೇ ನಮ್ಮದೇ ಸುತ್ತಮುತ್ತ ಇದ್ದಾರೆ. ಕಥಾಹಂದರಕ್ಕೆ ಪ್ರತಿಯೊಂದು ಮುಖ್ಯವೇ. ಇಲ್ಲವಾದಲ್ಲಿ ಕಥೆಯ ಸ್ವಾರಸ್ಯ ಉಳಿಯಲಾರದೆಂಬುದೇ ನನ್ನ ನಿಲುವು.

**ಕೊನೆಟಿಪ್ಪಣಿಗಳು**

೧ **ತೇಜಸ್ವಿ ಕಥನ** ಅಶೋಕ ಟಿ ಪಿ ೨೦೦೪ ಅಕ್ಷರ ಪ್ರಕಾಶನ, ಹೆಗ್ಗೋಡು ಸಾಗರ ೫೭೭೪೧೭.

೨ **ಏಕ–ಅನೇಕ** **ಶಶಿಕಲಾ** ಎಚ್ ಸಿವಿಜಿ ಪಬ್ಲಿಕೇಷನ್ಸ್ ಬೆಂಗಳೂರು

೩ **ತೇಜಸ್ವಿ ಸಾಹಿತ್ಯ ಸಂಕಥನ** ಡಾ ಎನ್ ಎಸ್ ಶಂಕರೇಗೌಡ

೪ **ಅದೇ ಪುಟ** ೫೦

೫ **ತೇಜಸ್ವಿ ಲೋಕ** ಸಂ: ಡಿ.ವಿ. ಪ್ರಹ್ಲಾದ್ ೨೦೦೭ ಸಂಚಯ, ಬನಶಂಕರಿ ಬೆಂಗಳೂರು

೬ **ತೇಜಸ್ವಿ ಸಾಹಿತ್ಯ ಕೃಷಿ** ಸಂ: ಪ್ರೊ.ಜಿ.ಟಿ. ವೀರಪ್ಪ, ಡಾ.ಎಂ. ಬೈರೇಗೌಡ ೨೦೦೪ ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು

೭ **ತೇಜಸ್ವಿ ನೆನಪು** ಚಂದ್ರೇಗೌಡ ಬಿ, ರಾಜು ಬಿ.ಎಲ್(ಸಂ) ೨೦೦೭, ರಂಗಭಾರತಿ(ರಿ)ಪ್ರಕಾಶನ, ಹೂವಿನಹಡಗಲಿ, ಬಳ್ಳಾರಿ.

೮ **ನೆನಪಿನಂಗಳದಲ್ಲಿ ತೇಜಸ್ವಿ** ಹಳೆಕೋಟೆ ರಮೇಶ್ ೨೦೧೦

೯ **ನನ್ನ ತೇಜಸ್ವಿ** ಶ್ರೀಮತಿ ಆರ್. ರಾಜೇಶ್ವರಿ ತೇಜಸ್ವಿ ೨೦೧೧ ಪುಸ್ತಕ ಪ್ರಕಾಶನ, ಮೈಸೂರು

೧೧ **ಕಾಡತೊರೆಯಜಾಡು,** ಕಡಿದಾಳು ಶಾಮಣ್ಣ ಸಂ: ಅಕ್ಷತಾ ಬದುಕು ಹೋರಾಟಗಳ ಕಥನ, ೨೦೧೧, ಅಭಿನವ ವಿಜಯನಗರ ಬೆಂಗಳೂರು

೧೨ **ಈಗಳೆ ಸಾಧ್ಯ** ಚಂದ್ರಶೇಖರ ನಂಗಲಿ ೨೦೧೦ ಕ್ರೈಸ್ಟ್ ಯೂನಿವರ್ಸಿಟಿ ಕನ್ನಡ ಸಂಘ, ಬೆಂಗಳೂರು

೧೩ **ಅದೇ ಪುಟ ಸಂ** ೯೯

ಅ) **ತೇಜಸ್ವಿ ಲೋಕ** (ಸಂ) ಡಿವಿ ಪ್ರಹ್ಲಾದ್ ಸಂಚಯ ಬನಶಂಕರಿ ಬೆಂಗಳೂರು ಪು ಸಂ ೧೨೦

ಆ) **ಕೆ ಪಿ ಪೂರ್ಣಚಂದ್ರ ತೇಜಸ್ವಿ ಬದುಕು ಬರಹ** ಕರೀಗೌಡ ಬೀಚನಹಳ್ಳಿ ಸಾಹಿತ್ಯ ಅಕಾಡೆಮಿ ೨೦೧೦ ಪು ೧೫೨–೧೫೩

೧೪ **ನಮ್ಮೆಲ್ಲರ ತೇಜಸ್ವಿ** ನರೇಂದ್ರ ರೈ ದೇರ್ಲ ೨೦೧೨ ಕನಸು ಪ್ರಕಾಶನ ಪುತ್ತೂರು ದ. ಕ.ಜಿಲ್ಲೆ

**ಕಾಡಿನ ಸಂತ ತೇಜಸ್ವಿ** ಅಂಕಿತ ಪುಸ್ತಕ ಬಸವನಗುಡಿ ಬೆಂಗಳೂರು ೨೦೧೧

೧೫ **ಸಾಹಿತ್ಯ ಪರಿಸರ–ಶಿವರಾಮಯ್ಯ** ತೇಜಸ್ವಿ ನಿಗೂಢ ಮನುಷ್ಯರು ಅಜಂತ ಎಂತರ್ ಪ್ರೈಸಸ್‌ಬೆಂಗಳೂರು ೨೦೦೫

೧೭ **ಅದೇ ಪುಟ**

# ಅಧ್ಯಾಯ ೨

## ೨.೧ ಪೂರ್ಣಚಂದ್ರತೇಜಸ್ವಿಯವರ ವಿಭಿನ್ನ ಆಯಾಮಗಳ ಸೃಜನಶೀಲತೆ

ಮಲೆನಾಡಿನ ಸಹ್ಯಾದ್ರಿ ಶ್ರೇಣಿಯಲ್ಲಿರುವ ಶಿವಮೊಗ್ಗ ಜಿಲ್ಲೆಗೂ ಕನ್ನಡ ಸಾಹಿತ್ಯಕ್ಕೂ ಇರುವ ವಿಶೇಷವಾದ ನಂಟು ಶತಶತಮಾನಗಳಿಂದ ಬೆಳೆದು ಬಂದಿದೆ. ಅಕ್ಕಮಹಾದೇವಿ, ಕುವೆಂಪು, ಹಾ.ಮಾ.ನಾಯಕ, ಎಸ್.ವಿ.ಪರಮೇಶ್ವರಭಟ್ಟ, ಎಂ.ಕೆ.ಇಂದಿರಾ, ಜಿ.ಎಸ್.ಶಿವರುದ್ರಪ್ಪ, ಕೆ.ವಿ.ಸುಬ್ಬಣ್ಣ, ಯು.ಆರ್. ಅನಂತಮೂರ್ತಿ, ಪಿ. ಲಂಕೇಶ್, ಹೇಮಲತಾ ಮಹಿಷಿ, ನಾ.ಡಿಸೋಜ, ಪೂರ್ಣಚಂದ್ರ ತೇಜಸ್ವಿ ಹೀಗೆ ಸಾಲು ಸಾಲಾಗಿ ಈ ಯಾದಿ ಬೆಳೆಯುತ್ತಲೇ ಇದೆ. ಕಾಡು-ಹೊಳೆ-ಬೆಟ್ಟ ಗುಡ್ಡಗಳಂತೆಯೇ ಸಾಹಿತ್ಯದ ಫಸಲು ಕೂಡ ಸಮೃದ್ಧತೆಯಿಂದ ಕೂಡಿದೆ. ಈ ಮಣ್ಣಿನ ಗುಣಕ್ಕೆ ಅನುಗುಣವಾಗಿ ಪೂರ್ಣಚಂದ್ರ ತೇಜಸ್ವಿ ಅಪರೂಪದ ಲೇಖಕರೂ, ನಿಸರ್ಗ ಪ್ರೇಮಿಯೂ ಆದರು. ಇವರ ಮತ್ತೊಂದು ಅಪ್ಪಟ ಕನ್ನಡ ಹೆಸರು ಪೂಚಂತೇ.

ಪೂರ್ಣಚಂದ್ರ ತೇಜಸ್ವಿ ೧೯೩೮ರ ಸೆಪ್ಟೆಂಬರ್ ೮ ರಂದು ತೀರ್ಥಹಳ್ಳಿ ತಾಲ್ಲೂಕಿನ ಕುಪ್ಪಳಿಯಲ್ಲಿ ಜನಿಸಿದರು. ಇವರ ತಂದೆ ರಾಷ್ಟ್ರಕವಿ ಖ್ಯಾತಿಯ ಕೆ.ವಿ.ಪುಟ್ಟಪ್ಪನವರು (ಕುವೆಂಪು), ತಾಯಿ ಹೇಮಾವತಿ. ಇವರ ಒಡಹುಟ್ಟಿದವರೆಂದರೆ ಕೋಕಿಲೋದಯ ಚೈತ್ರ, ಇಂಜಿನಿಯರ್ ಪದವೀಧರರಾಗಿ ಸದ್ಯ ಆಸ್ಟ್ರೇಲಿಯಾದಲ್ಲಿ ನೆಲೆಸಿದ್ದಾರೆ. ಒಬ್ಬ ಸಹೋದರಿ ಇಂದುಕಲಾ, ಇನ್ನೊಬ್ಬ ಸಹೋದರಿ ತಾರಿಣಿ[೧]

ಪೂರ್ಣಚಂದ್ರ ತೇಜಸ್ವಿಯವರು ಪ್ರಾಥಮಿಕ ಮತ್ತು ಪ್ರೌಢಶಾಲಾ ವ್ಯಾಸಂಗವನ್ನು ಶಿವಮೊಗ್ಗದ ಅಜ್ಜಿ ಮನೆಯಲ್ಲಿದ್ದುಕೊಂಡು ಪೂರೈಸಿದರು. ಆನಂತರದ ವಿದ್ಯಾಭ್ಯಾಸವೆಲ್ಲವೂ ಮೈಸೂರಿನಲ್ಲಿಯೇ. ೧೯೬೧ ರಲ್ಲಿ ಮೈಸೂರು ವಿಶ್ವವಿದ್ಯಾಲಯದಿಂದ ಕನ್ನಡ ಎಂ.ಎ ಪದವಿ ಪಡೆದರು. ಆನಂತರ ಅದೇ ವರ್ಷದಲ್ಲಿ ಚಿಕ್ಕಮಗಳೂರು ಜಿಲ್ಲೆಯ ಮೂಡಿಗೆರೆ ಸಮೀಪದಲ್ಲಿ ಶ್ರೀ ಬೆಳ್ಳಿಯಪ್ಪ ಎಂಬುವವರ ತೋಟಕ್ಕೆ ಸೇರಿದ ಅರವತ್ತು ಎಕರೆ ಕಾಡನ್ನು ಖರೀದಿಸಿ ಅಲ್ಲೊಂದು ಸಾಧಾರಣ ಮನೆ ಕಟ್ಟಿಕೊಂಡರು. ಕುವೆಂಪು ಅದಕ್ಕೆ 'ಚಿತ್ರಕೂಟ' ಎಂದು ನಾಮಕರಣ ಮಾಡಿದರು. ೧೯೬೧ರ ಆನಂತರ ತಾವು ಕೊಂಡ ಆ ಕಾಡನ್ನು ಕೃಷಿಗೆ ಅನುಕೂಲವಾಗುವಂತೆ ಮಾರ್ಪಡಿಸಿಕೊಳ್ಳುತ್ತಾ ನಾನಾ ಪ್ರಯೋಗಗಳನ್ನು ಮಾಡುತ್ತಾ ಲಾಭ-ನಷ್ಟಗಳಿಗೆ ಎಡತಾಕುತ್ತಾ ಹೊಸ ಹೊಸ ಅನುಭವಗಳಿಗೆ ಪಕ್ಕಾದರು. ಅವು ಅವರ ಪಾಲಿನ ಅವಿಸ್ಮರಣೀಯ ಗ್ರಹಿಕೆಗಳಾದವು. ಕೃಷಿ ಬದುಕು ಕಾಡು-ಜಲ, ಜೀವ-ಜಂತು, ಚರಾಚರಗಳು ಇವೆಲ್ಲವುಗಳ ಹತ್ತಿರದ ಒಡನಾಟದಿಂದ ಕಂಡುಂಡ ಅನುಭವ ದ್ರವ್ಯವೇ ರಸಪಾಕವಾಗಿ ಸಹೃದಯದ ಜ್ಞಾನದಾಹಕ್ಕೆ ಅಮೃತ ಸಿಂಚನವನ್ನು ಒದಗಿಸಿತು. ೧೯೬೬ ರಲ್ಲಿ ಆರ್. ರಂಗಪ್ಪನವರ ಮಗಳು, ತತ್ವಶಾಸ್ತ್ರ ಎಂ.ಎ ಪದವೀಧರೆಯೂ ಆದ ಆರ್.ರಾಜೇಶ್ವರಿಯವರನ್ನು, ತಮ್ಮ ಕೆಲವೇ ಆತ್ಮೀಯ ಬಂಧು-ಬಳಗದವರ ಸಮ್ಮುಖದಲ್ಲಿ ಮಂತ್ರಮಾಂಗಲ್ಯದಿ[೨] ವರಿಸಿದರು. ಇವರಿಗೆ ಇಬ್ಬರು ಹೆಣ್ಣುಮಕ್ಕಳು. ಮೊದಲನೆಯವಳು ಸುಶ್ಮಿತಾ, ಎರಡನೆಯವಳು ಈಶಾನ್ಯೆ.

೧೯೯೭ರಲ್ಲಿ 'ಚಿತ್ರಕೂಟ'ದ ತೋಟದ ಮನೆಯನ್ನು ಮಾರಾಟ ಮಾಡಿ ನಿಂಬೆ ಮೂಲೆ ಎಂಬಲ್ಲಿ ತೋಟ ಖರೀದಿಸಿ ಅಲ್ಲಿನ ಮನೆಗೆ **ನಿರುತ್ತರಾ**[೩] ಎಂದು ಹೆಸರಿಸಿ ಅಲ್ಲಿಯೇ ನೆಲೆ

ನಿಂತರು. ಅಲ್ಲಿ ಆಗಾಗ ಕೂಗುವ ಹಕ್ಕಿ, ಜೀರುಂಡೆಗಳ ನಡುವೆ ಸದ್ದುಗದ್ದಲಗಳಿಂದ ತೋಟದ ಮನೆ, ಪ್ರಕೃತಿಯ ಮುಗ್ಧತೆ ಮತ್ತು ನಿಗೂಢತೆಗೆ ಸಾಕ್ಷಿಯಾಗಿ ನಿಂತ ಮಲೆನಾಡು ಎಲ್ಲವೂ ತೇಜಸ್ವಿಯವರ ಮೇಲೆ ಅಪಾರ ಪ್ರಭಾವವನ್ನು ಬೀರಿದವು. ಅಷ್ಟೇ ಅಲ್ಲದೆ ಅವರ ಕುತೂಹಲಪೂರ್ಣ ದೃಷ್ಟಿಗೆ, ಸಂಶೋಧನಾತ್ಮಕ ಪ್ರವೃತ್ತಿಗೆ ವಸ್ತುಗಳಾದವು. ಅವರ ವೈಜ್ಞಾನಿಕ ಮನೋಭಾವನೆಗೆ ಅನುಕೂಲಕರ ವಾತಾವರಣವನ್ನು ಕಲ್ಪಿಸಿದ್ದಲ್ಲದೇ ಸಹೃದಯರಿಗೆ ಜೀವವಿಜ್ಞಾನದ ರಹಸ್ಯಗಳ ಶೋಧರೂಪವಾಗಿ ಸಾಹಿತ್ಯ ನಿಧಿಯೇ ದೊರೆಯಿತು.

**ಪ್ರೇರಣೆ ಪ್ರಭಾವ –**

ಬಾಲ್ಯದಲ್ಲಿ ಪೂರ್ಣಚಂದ್ರ ತೇಜಸ್ವಿಯವರ ಮೇಲೆ ಎಲ್ಲರಿಗಿಂತ ಹೆಚ್ಚಿನ ಪ್ರಭಾವ ಬೀರಿದವರೆಂದರೆ ತಂದೆ ಕುವೆಂಪು. ಇದನ್ನು ಅಣ್ಣನ ನೆನಪು ಕೃತಿಯಲ್ಲಿ ಉಲ್ಲೇಖಿಸುತ್ತಾ ತಮ್ಮ ಮೇಲೆ ಉಂಟಾದ ಸಾಹಿತ್ಯ ಪ್ರಭಾವದ ಬಗ್ಗೆ ನೆನಪಿಸಿಕೊಳ್ಳುವ ತೇಜಸ್ವಿ

> ನಾನು ಮಿಡಲ್ ಸ್ಕೂಲ್ ನಾಲ್ಕನೇ ಕ್ಲಾಸಿಗೆ ಬರುವ ಹೊತ್ತಿಗೆ ಕನ್ನಡ ಪುಸ್ತಕಗಳನ್ನು ಓದುವ ಅಭ್ಯಾಸ, ಖಾಯಿಲೆ ಎನ್ನುವಷ್ಟು ಬಲವಾಗಿ ಹಿಡಿದುಬಿಟ್ಟಿತು. ನಮ್ಮ ಮನೆಯಲ್ಲಿ ರಾಶಿ ರಾಶಿ ಪುಸ್ತಕಗಳಿದ್ದವು. ಅಲ್ಲದೇ ಕನ್ನಡದ ಎಲ್ಲಾ ಲೇಖಕರ ಪುಸ್ತಕಗಳ ಗೌರವ ಪ್ರತಿಗಳು ಪ್ರಕಟವಾದ ಕೂಡಲೆ ಅಣ್ಣನ ಅವಗಾಹನೆಗಾಗಿ ಬರುತ್ತಿದ್ದವು. ಅವನ್ನೆಲ್ಲಾ ಯಾವುದು, ಏನು, ಎಂದು ನೋಡದೆ ನಾನು ತಗೊಂಡು ಮನೆಯ ಯಾವುದಾದರೂ ಮೂಲೆಯಲ್ಲಿ ಓದುತ್ತ ಕುಳಿತು ಬಿಡುತ್ತಿದ್ದೆ. ಇಹಪರದ ಪರಿವೆಯೇ ಇಲ್ಲದೆ ಓದುತ್ತ ಕುಳಿತಿರುತ್ತಿದ್ದ ನನ್ನನ್ನೂ, ಅಮ್ಮ ಹುಡುಕಿ ಎಬ್ಬಿಸಿ ಊಟಕ್ಕೆ ಕಳಿಸುತ್ತಿದ್ದರು. ಆಗೊಮ್ಮೆ ಕಾನೂರು ಹೆಗ್ಗಡತಿ ಪುಸ್ತಕ ಸಿಕ್ಕಿತು. ಅದು ನಾಲ್ಕು ಭಾಗದಲ್ಲಿ ಪ್ರಕಟವಾಗಿತ್ತು. ಅದನ್ನು ಸಹ ಯಾರು ಬರೆದದ್ದು? ಎಂದೂ ಸಹ ತಿಳಿಯದೆ ಓದತೊಡಗಿದೆ. ನನಗೆ ಏನೋ ಒಂದು ಆತ್ಮೀಯ ಪರಿಚಿತ ಪ್ರಪಂಚ ಹೊಕ್ಕಂತೆನಿಸಿತು. ಅದರ ಕೊನೆಯ ಭಾಗ ತಕ್ಷಣ ಸಿಕ್ಕದೆ ಮನೆಯಲ್ಲೇ ಹುಡುಕುತ್ತಿದ್ದೆ. ಆಗ ಅಮ್ಮ 'ಇದನ್ನು ಬರೆದಿದ್ದು ನಿಮ್ಮ ಅಣ್ಣನೇ ಕಣೋ' ಎಂದು ಹೇಳಿದರು. ನನಗಾಗ ಕಾಲ್ಪನಿಕ ಕಥೆ, ಕಾದಂಬರಿಯೂ ನಿಜವಾಗಿ ನಡೆದ ಘಟನೆಗಳೆಂದೇ ತಿಳಿದಿದ್ದೆ.[9]

ಎಂದು ಪೂರ್ವದ ಘಟನೆಗಳನ್ನು ಸ್ಮರಿಸುತ್ತಾರೆ. ಬಾಲ್ಯ ಕಾಲದಲ್ಲಿ ತೇಜಸ್ವಿಯವರಿಗೆ ಸಾಹಿತ್ಯ, ಓದಿನ ಬಗೆಗಿದ್ದ ಆಸಕ್ತಿ, ಶಾಲಾ ವ್ಯಾಸಂಗದಲ್ಲಿರಲಿಲ್ಲ. ಶಾಲೆಯ ಬಗ್ಗೆ ಉತ್ಸಾಹ ಕಡಿಮೆಯಾದಾಗಲೆಲ್ಲ ಕುವೆಂಪು 'ವಿದ್ಯಾಭ್ಯಾಸ ಇಲ್ಲದವನು ಜಲಗಾರ ರಾಮನ ಕೆಲಸ ಮಾಡಿಕೊಂಡಿರಬೇಕಾಗುತ್ತದೆ' ಎಂಬ ಹಿತನುಡಿಯನ್ನು ನುಡಿಯುತ್ತಿದ್ದರಂತೆ. ಇದು ಕನ್ನಡದ ಮೇಲೆ ಪ್ರೀತಿ ಹುಟ್ಟಲು ಕಾರಣವಾಗಿದ್ದಲ್ಲದೆ ಹತ್ತು ಹಲವು ಹವ್ಯಾಸಗಳಲ್ಲಿ ತೊಡಗಿಕೊಳ್ಳುವುದಕ್ಕೆ ಪ್ರೇರಣೆಯಾಯಿತು. **ಅಣ್ಣನ ನೆನಪು** ಎಂಬುದು ತೇಜಸ್ವಿ ನೆನಪಿನ ಯಾನದಲ್ಲಿ ಮಹತ್ವದ ಸಂಗತಿಯೆನಿಸುತ್ತದೆ.

ಪ್ರಾಥಮಿಕ ಮತ್ತು ಪ್ರೌಢಶಾಲಾ ಶಿಕ್ಷಣ ಶಿವಮೊಗ್ಗೆಯಲ್ಲಿ ನಡೆದದ್ದು, ಸಹಪಾಠಿಯಾಗಿ ಪಿ. ಲಂಕೇಶ್ ಮತ್ತು ಮೇಷ್ಟ್ರಾಗಿ ಯು.ಆರ್.ಅನಂತಮೂರ್ತಿಗಳು ದೊರೆತದ್ದು ಕೂಡ ತಮ್ಮ ಸಾಹಿತ್ಯ ಆಸಕ್ತಿಗೆ ಕಾರಣವಾಗಿದ್ದವೆಂದು ಹೇಳಿಕೊಳ್ಳುತ್ತಾರೆ. ಅಲ್ಲಿ ನಡೆಯುತ್ತಿದ್ದ ಸಾಹಿತ್ಯ ಚಟುವಟಿಕೆಗಳು, ವಿಚಾರಗೋಷ್ಠಿಗಳು ಹಾಗೂ ಲೋಹಿಯಾವಾದದ ನಿಕಟ ಪರಿಚಯ ಎಲ್ಲವೂ ಸಾಹಿತ್ಯದೊಂದಿಗೆ ಬೆಳೆಸುವುದಕ್ಕೂ, ಸಾಹಿತ್ಯೋದ್ಯೋಗದ ತೀವ್ರತೆಗೂ ಕಾರಣವಾಯಿತು.

## ವಿಭಿನ್ನತೆಯೇ ವ್ಯಕ್ತಿವೈಶಿಷ್ಟ್ಯವಾದಾಗ–

ಕನ್ನಡ ಸಾಹಿತ್ಯದ ವಿಶಿಷ್ಟ ಬರಹಗಾರರು ಪೂರ್ಣಚಂದ್ರ ತೇಜಸ್ವಿ. ಅವರ ಪ್ರತಿಭೆಯನ್ನು ಯಾವುದೇ ಒಂದು ಪ್ರಚಲಿತ ಪದದಿಂದ ಪರಿಚಯಿಸಲು ಸಾಧ್ಯವಿಲ್ಲ. ಸಾಮಾನ್ಯ ವಿಜ್ಞಾನ, ಪರಿಸರ, ಕೃಷಿ, ಫೋಟೋಗ್ರಫಿ, ಕಂಪ್ಯೂಟರ್ ಚಿತ್ರಕಲೆ, ಸ್ಕೂಟರ್ ರಿಪೇರಿ, ಶಿಕಾರಿ, ಸಮಕಾಲೀನ ವಸ್ತುಸ್ಥಿತಿ, ರಾಜಕೀಯ ಪ್ರಜ್ಞೆ, ಪ್ರವಾಸ ಕೈಗೊಳ್ಳುವಿಕೆ, ಕಾಲಕಾಲಕ್ಕೆ ಎದುರಾದ ಎಲ್ಲಾ ವಾಗ್ವಾದಗಳು, ಚಳುವಳಿಗಳು ಹೀಗೆ ಆಸಕ್ತಿಯ ವಿಚಾರಗಳು ಹತ್ತು ಹಲವಾರು. ಪರಿಸರದ ಕಾಳಜಿಯೊಂದಿಗೆ ಬೇರೆ ಬೇರೆ ಕ್ಷೇತ್ರಗಳಲ್ಲಿ ತೊಡಗಿಸಿಕೊಂಡ ಡಾ. ಶಿವರಾಮ ಕಾರಂತರ ಜೊತೆಗೆ ಅಲಲ್ಲಿ ತೇಜಸ್ವಿಯವರನ್ನು ಹೋಲಿಸಿ ನೋಡುವ ಸಂದರ್ಭಗಳೂ ಇವೆ. ಹಾಗಿದ್ದೂ ಕಾರಂತರಿಗೆ ಕಾರಂತರೇ ಸರಿಸಾಟ ಅಂತೆಯೇ ತೇಜಸ್ವಿಗೆ ತೇಜಸ್ವಿಯೇ ಸರಿಸಾಟಿ. ತಂದೆ ರಾಷ್ಟ್ರಕವಿ ಕುವೆಂಪು, ತಮ್ಮ ಕನಸನ್ನು ನನಸಾಗಿಸಿಕೊಳ್ಳಲು ಕುಪ್ಪಳಿಯನ್ನು ತೊರೆದು ಮೈಸೂರಿಗೆ ಹೋಗಿ ನೆಲೆಸಿದರೆ, ಮಗ ತೇಜಸ್ವಿ ಅದಕ್ಕೆ ವಿರುದ್ಧವಾಗಿ, ಮೈಸೂರಿನಿಂದ ಮೂಡಿಗೆರೆ ಬಂದು ನೆಲೆಸಿದರು. ಎಲ್ಲ ದೃಷ್ಟಿಯಿಂದಲೂ ತಂದೆಗಿಂತ ಭಿನ್ನ ರೀತಿಯ ಜೀವನಶೈಲಿಯಲ್ಲಿ ಬದುಕಿದವರು ಪೂರ್ಣಚಂದ್ರ ತೇಜಸ್ವಿ.

ಶಾಲಾ ವ್ಯಾಸಂಗದ ಸಮಯದಲ್ಲಿ ಪೂರ್ಣಚಂದ್ರ ತೇಜಸ್ವಿಯವರಿಗೆ ನಿಕಟವರ್ತಿಗಳಾಗಿದ್ದ ಕಡಿದಾಳ್ ಶಾಮಣ್ಣ, ಸುಂದರೇಶ್, ಜಿ.ಎಚ್. ನಾಯಕ, ಬಿ.ಎಸ್.ಆಚಾರ್, ಶ್ರೀರಾಮ್, ಎಂ.ಡಿ. ನಂಜುಂಡಸ್ವಾಮಿ ಮುಂತಾದವರ ಸ್ನೇಹ ಅವರಿಗೆ ಜೀವನದಲ್ಲಿ ಅತ್ಯಂತ ದೀರ್ಘಕಾಲ ಉಳಿದುಕೊಂಡಿತು. ಇಷ್ಟೊಂದು ಗೆಳೆಯರಿದ್ದರೂ ಕೂಡ ಆಸಕ್ತಿಯ ನೆಲೆಯ ಹುಡುಕಾಟ ನಡೆದೇ ಇತ್ತು. ನಾನಾ ಕ್ಷೇತ್ರಗಳಲ್ಲಿ ಆಸಕ್ತಿ ಹೊಂದಿದ್ದು ಪ್ರಯೋಗಶೀಲತೆಯಲ್ಲಿ ತಲ್ಲೀನರಾದ ತೇಜಸ್ವಿ ತಮ್ಮನ್ನು ಮೊದಲಿಗೆ ಮೈಸೂರಿನ ಆದಿಕವಿ ಪಂಪ ರಸ್ತೆಯಲ್ಲಿ 'ನೃಪತುಂಗ' ಮುದ್ರಣಾಲಯ' ಪ್ರಾರಂಭಿಸಿ ಅದರಲ್ಲಿ ತೊಡಗಿಸಿ ಕೊಂಡರು. ೧೯೬೪ರಲ್ಲಿ ಲಹರಿ" ಎಂಬ ಹೆಸರಿನಲ್ಲಿ ಪ್ರಕಟ ಪಡಿಸಿರುವ ಸಂಚಿಕೆಗಳಲ್ಲಿ ಉದಯೋನ್ಮುಖ ಕವಿಗಳ ಕವನಗಳು ಮತ್ತು ಕೆಲವೊಂದು ವಿಮರ್ಶೆಗಳು ಅಚ್ಚುಗೊಂಡಿವೆ. ಸ್ವತಃ ಪರಿಶ್ರಮದ ಈ ಮುದ್ರಣಕಾರ್ಯ ಆ ಕಾಲದಲ್ಲಿನ ಅನೇಕ ವಿಮರ್ಶಕರ ಶ್ಲಾಘನೆಗೂ, ಅಸೂಯೆಗೂ ಕಾರಣವಾಗಿದೆ. ಇದರ ಜೊತೆಗೆ 'ನೃಪತುಂಗ' ಎಂಬ ಮಾಸಿಕ ಪತ್ರಿಕೆ ತರುವ ಇರಾದೆ ಕೂಡ ಇತ್ತು. ಮುದ್ರಣಾಲಯ ಕೆಲಸದಿಂದ ಬೇಸತ್ತು ಅದರಿಂದ ಹಿಂದೆ ಸರಿದ ತೇಜಸ್ವಿಯವರಿಗೆ 'ಇದು ತಮ್ಮ ಬರವಣಿಗೆಯ ಸೃಷ್ಟಿಕ್ರಿಯೆಯನ್ನು ನಿರ್ನಾಮ ಮಾಡಿ ಬಿಡುತ್ತೆ' ಎಂಬ ಆತಂಕ ಎದುರಾಗಿ ಪ್ರೆಸ್ಸು ಮಾರಿಬಿಟ್ಟರು. ಆಗಲೇ ತೋಟ ಮಾಡುವ ಹೊಸ ಬಯಕೆಯೂ ಹುಟ್ಟಿತ್ತು.

ಮೈಸೂರಿನ ಚಾಮರಾಜೇಂದ್ರ ಚಿತ್ರಕಲಾ ಶಾಲೆಗೆ ದಾಖಲಾತಿ ಪಡೆದಿದ್ದ ತೇಜಸ್ವಿ ಚಿತ್ರಕಲೆಯ ಬಗ್ಗೆ ಭ್ರಮನಿರಸನಗೊಂಡು ಅಲ್ಲಿಂದ ಹೊರಬಂದಿದ್ದರೂ ಆನಂತರ ಕಲಾವಿದ ಎಸ್.ಎನ್ ಶಿವಸ್ವಾಮಿಯ ಹತ್ತಿರ ಮತ್ತೆ ಕಲಾಭ್ಯಾಸಕ್ಕೆ ತೊಡಗಿದ್ದನ್ನು ನೋಡಿದರೆ ಅವರ ಮನಸ್ಸು ಬಹುಶಃ ಶಿಕ್ಷಣದ ಸಾಂಪ್ರದಾಯಿಕ ಶಿಸ್ತಿಗೆ ಒಗ್ಗಿಕೊಳ್ಳುತ್ತಿರಲಿಲ್ಲವೆಂದು ತೋರುತ್ತದೆ. ಕಲಾವಿದ ತಿಪ್ಪೇಸ್ವಾಮಿ ಕೂಡ ಅವರ ಚಿತ್ರಕಲೆಯ ಆಸಕ್ತಿ ಮರುಕಳಿಸಲು ನೆರವಾದರು. ಓದಿದವರೆಲ್ಲಾ ಹಳ್ಳಿಬಿಟ್ಟು ಪಟ್ಟಣದತ್ತ ನೌಕರಿ ಅರಸಿ ಹೊರಡುತ್ತಿದ್ದ ಹಪಹಪಿಕೆಯ ಕಾಲದಲ್ಲಿ ತಮಗೆ

ಸುಲಭವಾಗಿ ದೊರೆಯುವಂತಿದ್ದ ಎಲ್ಲಾ ಬಗೆಯ ನೌಕರಿಗಳ ವ್ಯಾಮೋಹವನ್ನು ಕಿತ್ತೆಸೆದು ನಿರ್ಜನವೂ ಹಿತಕರವೂ ಆದ ಮೂಡಿಗೆರೆಯ ಸಮೀಪ ಕಾಡನ್ನು ಖರೀದಿಸಿ ಕೃಷಿ ಜೀವನವನ್ನು ತಮ್ಮದಾಗಿಸಿಕೊಂಡರು. ಕಾಫಿಬೆಳೆ, ಜೇನು, ಬೇಸಾಯ, ಏಲಕ್ಕಿ ಬೆಳೆ, ಇನ್ನೂ ಮುಂತಾದವುಗಳನ್ನು ಬೆಳೆದು ಕೃಷಿಯಾಧಾರಿತ ಬದುಕಿನ ಬವಣೆಗಳನ್ನು ಅರ್ಥೈಸಿಕೊಂಡು ಅವುಗಳನ್ನು ಪರಿಹರಿಸುವತ್ತ ಕಾರ್ಯೋನ್ಮುಖರಾದರು. ಈ ಸಂದರ್ಭದಲ್ಲೇ ವಿನಾಶದ ಅಂಚಿನಲ್ಲಿರುವ ಕಾಡು, ಹದಗೆಡುತ್ತಿರುವ ಪರಿಸರ, ಅದಕ್ಕೆ ಕಾರಣರಾಗಿರುವ ವ್ಯಕ್ತಿಗಳು ಎಲ್ಲದರ ಬಗ್ಗೆ ಆಕ್ರೋಶ ವ್ಯಕ್ತಪಡಿಸಿದರು. ಸಮಾಜಮುಖಿ ಚಿಂತಕರಾಗಿದ್ದ ತೇಜಸ್ವಿಯವರು ಬರವಣಿಗೆಯ ಜೊತೆಜೊತೆಯಲ್ಲಿಯೇ ತಮ್ಮ ಸುತ್ತಲಿನ ರೈತಚಳುವಳಿ, ಸಮಾಜವಾದಿ ಚಳುವಳಿ, ಬೂಸಾ ಪ್ರಕರಣ, ತುರ್ತುಪರಿಸ್ಥಿತಿ, ಜೆ.ಪಿ ಚಳುವಳಿ, ಬರಗಾರರ ಒಕ್ಕೂಟ ಹೀಗೆ ಅನೇಕ ಚಳುವಳಿಗಳಲ್ಲಿ ಸಕ್ರಿಯವಾಗಿ ಪಾಲ್ಗೊಂಡು ಸಾಂಸ್ಕೃತಿಕ ಸನ್ನಿವೇಶಗಳಿಗೆ ಸ್ಪಂದಿಸಿದ್ದಾರೆ.

ತೇಜಸ್ವಿಯವರಿಗೆ ಶಿಕಾರಿಯೆಂದರೆ ಪಂಚಪ್ರಾಣ. ತಮ್ಮ ಬಿಡುವಿನ ವೇಳೆಯಲ್ಲಿ ಕೋವಿಯನ್ನು ಹೆಗಲಿಗೇರಿಸಿ ಬೇಟೆಯಾಡಲು ಕಾಡುಮೇಡುಗಳನ್ನು ಸುತ್ತುವುದರ ಜೊತೆಗೆ ಸುತ್ತಲಿನ ಜಗತ್ತನ್ನು ಆಸ್ವಾದಿಸುವುದಕ್ಕೂ ಅವಕಾಶ ದೊರೆಯಿತು. ಶಿಕಾರಿಯ ನೆಪದಲ್ಲಿ ತಮ್ಮಾಪ್ತ ಕವಿಯೊಡನೆ ನಿರಂತರವಾಗಿ ಕಾಡಿನಲ್ಲಿ ಸುತ್ತಿದ ಅವರಿಗೆ ಶಿಕಾರಿ ಜೊತೆಗೆ ಕಾಡಿನ ಬೇರೆ ಬೇರೆ ವಿಷಯಗಳೂ ಆಪ್ತವಾದವು. ಆ ಮೂಲಕ ಪ್ರಾಣಿ, ಪಕ್ಷಿ, ಕೀಟಗಳು ಹತ್ತಿರದ ಬಂಧುಗಳಾದವು. ಇವುಗಳನ್ನೆಲ್ಲಾ ಸೂಕ್ಷ್ಮವಾಗಿ ಗಮನಿಸುವುದು, ಗ್ರಹಿಸುವುದೇ ಅವರ ನಿಜವಾದ ಶಿಕಾರಿಯಾಗಿರುತ್ತಿತ್ತು. ನಂತರದ ದಿನಗಳಲ್ಲಿ ಕಾಡಿನ ಪ್ರಾಣಿಗಳ ಅಗತ್ಯತೆ ಹಾಗೂ ಅವುಗಳು ತ್ವರಿತಗತಿಯಲ್ಲಿ ಕಾಡಿನಿಂದ ಕಣ್ಮರೆಯಾಗುತ್ತಿರುವುದರ ದುರಂತವನ್ನು ಅರಿತ ತೇಜಸ್ವಿ ಶಿಕಾರಿ ಮಾಡುವುದನ್ನು ಸಂಪೂರ್ಣವಾಗಿ ನಿಲ್ಲಿಸಿದರು.

ತೇಜಸ್ವಿ ಅಧ್ಯಾಪನ ಕ್ಷೇತ್ರವನ್ನು ತಮ್ಮದಾಗಿಸಿಕೊಳ್ಳದೆ ಸ್ವತಂತ್ರ ಜೀವನದ ಹೆದ್ದಾರಿಯನ್ನು ಆರಿಸಿಕೊಂಡು ಸಾಹಿತ್ಯ ಕ್ಷೇತ್ರದಲ್ಲಿ ಮಹತ್ವದ ಸಾಧನೆಯನ್ನು ಮಾಡಿ ತಮ್ಮದೇ ಆದ ಹಾದಿಯನ್ನು ನಿರ್ಮಿಸಿಕೊಂಡು ವಿಶಿಷ್ಟವಾದ ಛಾಪನ್ನು ಒತ್ತಿ ಯಶಸ್ಸನ್ನು ಪಡೆದವರು. ಯಾವುದೇ ಪಂಥದ ಹಣೆಪಟ್ಟಿಯನ್ನು ಅಂಟಿಸಿಕೊಳ್ಳದೆ ನವೋದಯ ನವ್ಯ ನವ್ಯೋತ್ತರ ಹೀಗೆ ಎಲ್ಲಾ ಘಟ್ಟಗಳಲ್ಲೂ ತಮ್ಮ ಸಾಹಿತ್ಯ ಕೃತಿಗಳನ್ನು ರಚಿಸಿದ್ದಾರೆ. ಎಪ್ಪತ್ತರ ದಶಕದ ಆರಂಭದಲ್ಲಿಯೇ ತಮ್ಮ ಜೀವನ ವಿಧಾನ, ಆಲೋಚನೆ, ಗ್ರಹಿಕೆಯ ಕ್ರಮ ಹಾಗೂ ಅಭಿವ್ಯಕ್ತಿಯ ವಿಧಾನವನ್ನು ಪ್ರಜ್ಞಾಪೂರ್ವಕವಾಗಿ ಬದಲಾಯಿಸಿಕೊಂಡವರು. ಲೋಹಿಯಾರ ಸಾಮಾಜಿಕ ರಾಜಕೀಯ ಚಿಂತನೆಗಳು, ಶಿವರಾಮ ಕಾರಂತರ ಆಳವಾದ ಜೀವನ ದೃಷ್ಟಿ, ಕುವೆಂಪುರವರ ತಾತ್ವಿಕ ದರ್ಶನ; ಇವುಗಳಿಂದ ಪ್ರಭಾವಿತರಾಗಿ ವೈಜ್ಞಾನಿಕ ಮನೋಧರ್ಮ ಮತ್ತು ವೈಚಾರಿಕ ದೃಷ್ಟಿಕೋನವನ್ನು ಬೆಳೆಸಿಕೊಂಡ ತೇಜಸ್ವಿಯವರು ವೈವಿಧ್ಯಮಯವಾದ ಶ್ರೇಷ್ಠ ಬರಹಗಳನ್ನು ಸಮಾಜಕ್ಕೆ ಕೊಡುಗೆಯಾಗಿ ಇತ್ತಿದ್ದಾರೆ.

ಸ್ವಾತಂತ್ರ್ಯನಂತರದ ಸಮಾಜದಲ್ಲಿ ಉಂಟಾದ ಬದಲಾವಣೆಗಳ ಬಗೆಗೆ ತಮ್ಮ ವೈಚಾರಿಕ ನಿಲುವುಗಳನ್ನು ವಿವಿಧ ದೃಷ್ಟಿಕೋನಗಳ ಮೂಲಕ ಪ್ರಕಟಪಡಿಸಿದ ತೇಜಸ್ವಿಯವರು ಅರವತ್ತರ ದಶಕದಲ್ಲಿ **ಬೃಹನ್ನಳೆ ಸೋಮುವಿನ ಸ್ವಗತ ಲಹರಿ** ಎಂಬ ಕವನಸಂಕಲನ ಮತ್ತು **ಹುಲಿಯೂರಿನ ಸರಹದ್ದು** ಎಂಬ ಕಥಾಸಂಕಲನದೊಂದಿಗೆ ತಮ್ಮ ಬರವಣಿಗೆಯನ್ನು ಪ್ರಾರಂಭಿಸಿದರು.

ಕ್ರಮೇಣವಾಗಿ ಐವತ್ತಕ್ಕೂ ಹೆಚ್ಚು ಕೃತಿಗಳನ್ನು ರಚಿಸಿ, ವಿಶಿಷ್ಟವಾದ ನಿರೂಪಣಾ ಶೈಲಿಯಿಂದ ಸಾಹಿತ್ಯಾಭಿಮಾನಿಗಳನ್ನು ಗಳಿಸುವುದರೊಂದಿಗೆ ಕನ್ನಡ ಸಾಹಿತ್ಯ ಕ್ಷೇತ್ರವನ್ನು ಸಮೃದ್ಧಗೊಳಿಸಿದರು.

ತೇಜಸ್ವಿಯವರ ಯಾವುದೇ ಕೃತಿಯನ್ನು ಗಮನಿಸಿದರೂ ನಮಗೆ ಅವರ ಪ್ರತಿಭೆಯ ಪರಾಕಾಷ್ಠೆ ಯಾವ ಮಟ್ಟದ್ದು ಎಂಬುದು ಸ್ಪಷ್ಟವಾಗುತ್ತದೆ. ಮಾನವ ಜೀವನದ ರಸಚಿಂತನೆಗಳು, ಅವರ ಶಕ್ತಿ ದೌರ್ಬಲ್ಯಗಳ ಬಗ್ಗೆ ಅಬಚೂರಿನಪೋಸ್ಟಾಫೀಸಿನ ಮುನ್ನುಡಿಯಲ್ಲಿ ಸ್ಪಷ್ಟಗೊಳಿಸುತ್ತಾರೆ.

> ಬರಹಗಾರನಾದ ನಾನು ಹಳ್ಳಿಯಲ್ಲಿ ಒಂದು ಅತಿ ವಿಚಿತ್ರ ಸಂದರ್ಭದಲ್ಲಿ ಸಿಲುಕಿಕೊಂಡೆನು..... ಸರಳವಾಗಿ ನೇರವಾಗಿ ನೋಡುವ, ಕೇವಲ ದೃಷ್ಟಿಕೋನವಾಗಿ ಮಾತ್ರ ಸಾಹಿತಿ, ಕಥೆಗಳಲ್ಲಿ ವ್ಯಕ್ತವಾಗುವ ಹೊಸದೊಂದು ಶಿಸ್ತನ್ನು ಬರವಣಿಗೆಯಲ್ಲಿ ನಾನು ಅಭ್ಯಾಸ ಮಾಡಬೇಕಾಯ್ತು. ಇದಕ್ಕೆ ನಮ್ಮ ಗ್ರಾಮಗಳಲ್ಲಿ ಕೇವಲ ವೀಕ್ಷಕನಾಗಿ ಮಾತ್ರವೇ ಇರಬೇಕಾಗಿ ಬಂದ ನನ್ನ ಜೀವನ ಸಂದರ್ಭವೂ ಒಂದು ಕಾರಣ. ಆದ್ದರಿಂದ ಕಲಾವಿದನ ಪ್ರಜ್ಞೆಯೊಳಗೆ ವಿಕಾಸವಾಗುವ ಅಥವಾ ಕಲಾವಿದನ ಪ್ರಜ್ಞೆಯೇ ಕೇಂದ್ರವಾಗಿರುವ ಅಥವಾ ಸಾಹಿತಿಯೇ ನಾಯಕನಾದ, ಒಂದು ರೀತಿಯ ಆತ್ಮನಿಷ್ಠ ಬರಹಗಾರರಾದ ಯು.ಆರ್. ಅನಂತಮೂರ್ತಿ ಮತ್ತು 'ಗತಿಸ್ಥಿತಿ'ಯ ಗಿರಿ ಒಂದು ಕೊನೆಯಾದರೆ ಈ ಕಥಾಸಂಕಲನದ ನಾನು ಇನ್ನೊಂದು ಕೊನೆ............. ಭಾರತೀಯ ಪರಿಸ್ಥಿತಿಯಲ್ಲಿ ಎಂಥ ಅಸಂಬದ್ಧತೆಯ ಪರಮಾವಧಿಯಾಗಿದೆ ಎಂಬುದು ನನಗೆ ಅರಿವಾಯ್ತು. ಈ ನಿಗೂಢ, ಅಪರಿಚಿತ ಭಾರತದ ಬಗ್ಗೆ ನನ್ನ ಕಣ್ಣು ತೆರೆಸಿದ್ದು ಲೋಹಿಯಾ. ನಮ್ಮ ನವ್ಯ ಸಾಹಿತ್ಯ ಸಂಪ್ರದಾಯದ ಸಾಂಕೇತಿಕ ಮಾರ್ಗ ಠಕ್ಕಿನ ಪ್ರೌಢ ವಿಮರ್ಶೆ ಇವೆಲ್ಲಾ ಈ ಅವ್ಯಕ್ತ ಭಾರತದ ಎದುರು ಅಸಂಬದ್ಧವಾಗಿ ಹೋದವು. ಆದರೆ ಇದರೊಡನೆಯೇ ಲೋಹಿಯಾರವದ ಕಾಣ್ಕೆ, ತತ್ವ, ಚಿಂತನೆಗಳು ಮತ್ತು ಹಳ್ಳಿಯ ಜೀವನದ ಹೊಸ ಪರಿಸ್ಥಿತಿಗಳು ನನಗೆ ಇನ್ನೊಂದು ಬಗೆಯ ಶ್ರದ್ಧೆಯನ್ನು ತಂದಿತ್ತವು.[1]

ತೇಜಸ್ವಿಯವರ ಈ ಮಾತುಗಳಲ್ಲಿ ಸಾಹಿತ್ಯಕೃತಿಯನ್ನು ಜೀವನದ ಹತ್ತಿರಕ್ಕೆ ತರುವ ಹಂಬಲವಿದೆ. ಆದರೆ ನಮ್ಮಲ್ಲಿ ಜೀವನವೆಂದಾಗ ಅದರ ಸಾಮಾಜಿಕ ಸೂಕ್ಷ್ಮಗಳನ್ನು ಆಯಾಮಗಳನ್ನು ಗಮನಿಸುವುದು ಅಪರೂಪ.

ವಿಜ್ಞಾನ ಮತ್ತು ಸಾಹಿತ್ಯೇತರ ಕ್ಷೇತ್ರಗಳಲ್ಲಿ ತೊಡಗಿಸಿಕೊಂಡ ತೇಜಸ್ವಿಯವರು ಪ್ರಾಕೃತಿಕ ಜಗತ್ತಿನಿಂದ ಸ್ವೀಕರಿಸಿದ ಅದ್ವಿತೀಯ ಜ್ಞಾನಸಂಪತ್ತನ್ನು, ಸಾಮಾಜಿಕ ಪರಿಸರದಿಂದ ಪಡೆದ ಆಳವಾದ ಬೌದ್ಧಿಕ, ತಾತ್ವಿಕ ಅನುಭವಗಳನ್ನು ತಮ್ಮ ಸೃಜನಶೀಲ ಬರವಣಿಗೆಯ ಮೂಲಕ ಕಲಾಜಗತ್ತಿಗೆ ಹರಿಯಬಿಟ್ಟರು. ಪ್ರಾಣಿ-ಪಕ್ಷಿ, ಕೀಟಜಗತ್ತು, ಸಸ್ಯಲೋಕ, ಆಕಾಶಕಾಯ, ತಾರಾಮಂಡಲ, ನದಿ-ಸಮುದ್ರಗಳು ಇದರ ಜೊತೆಗೆ ಸಾಮಾನ್ಯ ಮನುಷ್ಯನ ಸ್ವಭಾವ, ಅವನ ಆ ಜಗತ್ತಿನ ವಾಸ್ತವ ಮತ್ತು ಸ್ವಾಸ್ಥ್ಯಯುತವಾದ ಮನಸ್ಸು ಎಲ್ಲವನ್ನೂ ಸಂಮಿಶ್ರಗೊಳಿಸಿ ಮನುಷ್ಯನ ಅವಸ್ಥೆಯನ್ನೂ; ಏಕಕಾಲದಲ್ಲಿ ವಿಶ್ವಾತ್ಮಕ ವ್ಯವಸ್ಥೆಯನ್ನೂ ಹಲವು ಆಯಾಮಗಳಲ್ಲಿ ಸಾಕ್ಷಾತ್ಕಾರಗೊಳಿಸಿದರು. ಅದಕ್ಕಾಗಿಯೇ ಅವರ ಸಾಹಿತ್ಯ ಕೃತಿಗಳನ್ನು ಒಂದೇ ಕೇಂದ್ರಪ್ರಜ್ಞೆಯಲ್ಲಿ ಗ್ರಹಿಸುವುದು ಕಷ್ಟ. ವಿವಿಧ ಮಜಲುಗಳಿಂದ ಕೂಡಿದ ಅವರ ಸಾಹಿತ್ಯ ಅನೇಕ ಸಿದ್ಧಾಂತಗಳ ಮೂಲಕ ತಾತ್ವಿಕತೆಯನ್ನು ಪ್ರಚುರಪಡಿಸಿದ ರೀತಿ ವಿಶಿಷ್ಟವಾದುದು. ಇದಲ್ಲದೆ ನಿರ್ದಿಷ್ಟ ಕಾಲಘಟ್ಟದ ಪ್ರಮುಖ ಚಹರೆಗಳನ್ನು ತನ್ನ ಸೃಜನಶೀಲ ಸಾಹಿತ್ಯದಲ್ಲಿ ದಾಖಲಿಸುವುದರ ಮೂಲಕ ವಾಸ್ತವ ಜಗತ್ತನ್ನು ಓದುಗರಿಗೆ ತಲುಪಿಸಿದರು. ಕಥೆಯಲ್ಲಿನ ಘಟನೆಯನ್ನು/ಕಥಾಚರಿತ್ರೆಯನ್ನು ಭೌತವಾದಿ ದೃಷ್ಟಿಕೋನದಿಂದ ನೋಡುವುದರೊಂದಿಗೆ ವೈಜ್ಞಾನಿಕವಾಗಿ ಪರಿಶೀಲನೆಗೆ ಒಳಪಡಿಸುತ್ತಾ ವಸ್ತುವಿನ ಮೇಲೆ ಹಿಡಿತ ಸಾಧಿಸಿ, ಬರವಣಿಗೆಯಲ್ಲಿ ಹೊಸ ಶಿಸ್ತೊಂದನ್ನು ಮೈಗೂಡಿಸಿಕೊಂಡು ತಮ್ಮ ವಾಸ್ತವವಾದಿ ಆಲೋಚನೆಯನ್ನು ಓದುಗರಿಗೂ ದಾಟಿಸಿದರು.

ಆ ಶಿಸ್ತು ಯಾವುದೆಂದರೆ ಛಾಯಾಗ್ರಾಹಕನ ಶಿಸ್ತು. ಹೌದು, ಹಲವಾರು ಕ್ಷೇತ್ರಗಳಲ್ಲಿ ನಾನಾವಿಧದ ಹವ್ಯಾಸಗಳಲ್ಲಿ ತೊಡಗಿಸಿಕೊಂಡಿದ್ದ ತೇಜಸ್ವಿಯವರು ಪೋಟೋಗ್ರಫಿಯ ಕೆಲವು ಶಿಸ್ತುಗಳನ್ನು ಬರವಣಿಗೆಗೂ ಅನ್ವಯಿಸಿಕೊಂಡರು. ಒಂದು ಛಾಯಾಗ್ರಾಹಕನ ಕಾರ್ಯ ಕೌಶಲ್ಯ ಕೇವಲ ಕ್ಯಾಮರಾದ ಹಿಂದೆ ಅಷ್ಟೇ! ಅದನ್ನೇ ಕೃತಿಗಳಲ್ಲಿ ಅಳವಡಿಸಿದ್ದು; ಬರಹಗಾರ ನೇರ ನೇರವಾಗಿ ಪಾತ್ರಪ್ರಮುಖನಾಗಿ ವಿಜೃಂಭಿಸದೆ ನಿರೂಪಕನಾಗಿ, ವ್ಯಾಖ್ಯಾನಕಾರನಾಗಿ ಸೇರ್ಪಡೆಗೊಂಡಿರುವುದು. ಎರಡನೆಯದಾಗಿ ವಾಸ್ತವ ಜಗತ್ತಿನ ಸರ್ವೇಸಾಧಾರಣ ದೃಶ್ಯ ವಿಶಿಷ್ಟ ದೃಷ್ಟಿಕೋನದ ಚೌಕಟ್ಟಿನೊಳಗೆ ಸೆರೆಹಿಡಿಯಲ್ಪಟ್ಟಾಗ ಅನೇಕ ಧ್ವನ್ಯಾರ್ಥಗಳಿಂದ ಪ್ರತಿಮೆ ಅನಾವರಣಗೊಳ್ಳುವಂತೆ ಆ ಸಾಧ್ಯತೆಯನ್ನು ಸಾಹಿತ್ಯ ಕೃತಿಗಳಲ್ಲಿ ಬಳಕೆ ಮಾಡಿದ್ದು. ಹೀಗೆ ಅನ್ಯ ಕಲಾ ಮಾಧ್ಯಮಗಳ ಶಿಸ್ತನ್ನೆಲ್ಲಾ ಅಬಚೂರಿನ ಪೋಸ್ಟಾಫೀಸು ಕಥಾ ಸಂಕಲನದೊಳಗೆ ಪ್ರಯೋಗಿಸಿದರು. ಇತರ ಜ್ಞಾನಶಿಸ್ತುಗಳು ಕ್ರಮೇಣ ಸಾಹಿತ್ಯ ಕೃತಿಗಳೊಡನೆ ಸೇರ್ಪಡೆಯಾಗಿ ಬದಲಾದ ಪರಿಸರಕ್ಕೆ ಅನುಗುಣವಾಗಿ ಸಾಹಿತ್ಯ ಶೈಲಿಯ ಕಲ್ಪನೆಯೂ ಹಿರಿದಾಗತೊಡಗಿತು.

ತೇಜಸ್ವಿ ಸಾಹಿತ್ಯದ ಯಾವುದೇ ಪಾತ್ರಗಳು ಕೂಡ ಸಾಮಾಜಿಕ ಬಂಧನದಲ್ಲಿ ಬಂಧಿಸಲ್ಪಡುವುದಿಲ್ಲ. ಅವರ ಆಲೋಚನೆ, ವ್ಯವಹಾರಗಳು ಮತ್ತೊಬ್ಬರನ್ನು ಆಶ್ರಯಿಸಿರುವುದಿಲ್ಲ. ಬದುಕಿನ ಪ್ರತಿಯೊಂದು ಗಳಿಗೆಯನ್ನೂ ಮುಕ್ತವಾಗಿ ಆಸ್ವಾದಿಸುವ ಗುಣವುಳ್ಳಂತಹವು. ಆ ಪಾತ್ರಗಳು ಎದುರಿಸುವ ಸಮಸ್ಯೆಗಳು ಸಹಜವಾಗಿಯೇ ಇದ್ದರೂ ಸಂಕೀರ್ಣವಾದ ಲೋಕ ಒಂದನ್ನು ನಿರ್ಮಿಸಿ, ಇಡೀ ಜಗತ್ತಿನ ವಿದ್ಯಮಾನಗಳನ್ನು ತಮ್ಮದೇ ಕ್ರಮದಲ್ಲಿ ಬಣ್ಣಿಸುತ್ತಾ ಸಾಗುತ್ತವೆ. ತೇಜಸ್ವಿ ಕಥನಗಳಲ್ಲಿ ಸದ್ಯದ ವರ್ತಮಾನವೇ ಪಾತ್ರಗಳ ಮುಖಾಮುಖಿಗೆ ಹಿನ್ನೆಲೆ ಒದಗಿಸುತ್ತಾ ಹೋಗುತ್ತದೆ. ಈ ಕಾರಣಗಳ ಮೂಲಕ ಸಾಮಾಜಿಕ ಸಂದರ್ಭವೇ ಮಾನವೀಯ ಸಂಬಂಧಗಳ ವಿಘಟನೆಗೆ ಕಾರಣವೆಂದು ಹೇಳಲಾಗಿದೆ. ಹಾಗಾಗಿ ಜುಗಾರಿಕ್ರಾಸ್, ಕರ್ವಾಲೊ, ಚಿದಂಬರ ರಹಸ್ಯ ........ಮಾಯಾಲೋಕ ಈ ಕಥಾನಕಗಳ ನಿಜಕಾಲ ಹಾಗೂ ದೇಶ ವ್ಯಾಪ್ತಿಗಳು ವಿಕಾಸವಾಗುತ್ತಾ ಹೋದ ಕಡೆಗಳಲ್ಲಿ ಇಂಥದೇ ಮಾದರಿಯನ್ನು ಕಾಣುತ್ತೇವೆ. ತೇಜಸ್ವಿಯವರ ಅನುಭವ, ವಿಚಾರಗಳ ವ್ಯಾಪ್ತಿ ವಿಸ್ತಾರವಾಗಿದ್ದು ಸಾಮಾಜಿಕ ಬದುಕಿನ ಸ್ಥಿತ್ಯಂತರಗಳ ಜೊತೆ ಇಡೀ ರಾಷ್ಟ್ರದ ಚಿಂತನೆಯನ್ನೂ ನಡೆಸುತ್ತಾರೆ.

'ತೇಜಸ್ವಿಯವರು ದೃಷ್ಟಿಯಲ್ಲಿ ವಾಸ್ತವವಾದಿಯಾಗಿದ್ದರೂ ವಾಸ್ತವಾದದ ಅರ್ಥವನ್ನು ಬಹಳ ವ್ಯಾಪಕವಾಗಿ ಬಳಸುತ್ತಾರೆ. ಅದರ ಸಂಬಂಧವು ಜಿಜ್ಞಾಸೆಯೊಂದಿಗೆ ಸೇರಿ, ಆ ಜಿಜ್ಞಾಸೆಯ ಸಂಬಂಧವು ಸಾಮಾಜಿಕ ವಿಷಯಗಳಿಂದ ಬದುಕಿನ ಮೂಲ ಮತ್ತು ಹೆಚ್ಚು ಗಂಭೀರ ಸಮಸ್ಯೆಗಳತ್ತ ಪ್ರಯಾಣ ಕೈಗೊಳ್ಳುವುದು ಕಂಡುಬರುತ್ತದೆ. ಸಾಮಾಜಿಕ ವಾಸ್ತವಗಳ ಜೊತೆಯಲ್ಲಿ ವ್ಯಕ್ತಿನಿಷ್ಠತೆ ಮತ್ತು ವೈಯಕ್ತಿಕತೆ ಹೆಚ್ಚು ಮಹತ್ವ ಪಡೆದಿವೆ.' ಎಂಬ ಶ್ಲಾಘನೆಗೆ ಒಳಪಡುವ ತೇಜಸ್ವಿ ವ್ಯಕ್ತಿತ್ವ ಮತ್ತು ಸಾಹಿತ್ಯಕ್ಕೆ ಯಾರೂ ಸರಿಸಾಟಿಯಾಗಲಾರರು.

## ಅನ್ವೇಷಣಾದೃಷ್ಟಿಗೆ ಎಲ್ಲವೂ ವಸ್ತುಗಳೇ:

**ಕಿರು ಕಾದಂಬರಿಗಳು**

**ಸ್ವರೂಪ:** ೧೯೭೩ ರಲ್ಲಿ ಪ್ರಕಟನೆಯಾದ ಸ್ವರೂಪ ಮತ್ತು ನಿಗೂಢಮನುಷ್ಯರು ನೀಳ್ಗಥೆ ರೂಪದ ಕಿರು ಕಾದಂಬರಿಗಳು, ಇವೆರಡು ಕಾದಂಬರಿಗಳಲ್ಲಿ ತಮ್ಮ ವ್ಯಕ್ತಿತ್ವದ ಮತ್ತು ಪ್ರಜ್ಞೆಯ ನಿರ್ಮಾಣವು ನಿರೂಪಕನ ನೋಟದಲ್ಲಿ ವಿಶ್ಲೇಷಣೆಗೆ ಒಳಪಡುತ್ತದೆ. ಬದುಕಿನ ಆಳವಾದ ವಿಶ್ಲೇಷಣೆ ವರ್ತಮಾದಲ್ಲಿ ನಿಂತು ಭೂತದ ಪ್ರತಿಕ್ರಿಯೆಗಳೊಂದಿಗೆ ಸಂಘರ್ಷಕ್ಕಿಳಿಯುತ್ತದೆ. ಸ್ವರೂಪದ ನಾಯಕ ಎಂ.ಡಿ ಶ್ರೀನಿವಾಸ ತನ್ನ ಗೆಳೆಯ ಹೇಮಂತನೆದುರಿಗೆ ತನ್ನ ಬದುಕಿನ ನೀರಸ ಕ್ಷಣಗಳನ್ನು ಭೂತಕಾಲೀನ ಘಟನೆಗಳ ಅಪ್ರಸ್ತುತೀಕರಣವನ್ನು ನಿವೇದಿಸಿಕೊಳ್ಳುವುದು ಅಸಂಗತವೆನಿಸುತ್ತದೆ. ವ್ಯಕ್ತಿ ತನ್ನ ಮನಸ್ಸಿನ ಒಳಲೋಕವನ್ನು ವಸ್ತು ನಿಷ್ಠವಾಗಿ ಪರಿಶೀಲನೆಗೆ ಒಡ್ಡಿದಾಗ ದೊರೆತ ಹೊಸ ತಿಳುವಳಿಕೆ ವ್ಯಕ್ತಿತ್ವದ ಬೇರೆ ಬೇರೆ ಸ್ವರೂಪಗಳನ್ನು ಅನಾವರಣಗೊಳಿಸುತ್ತದೆ.

**ನಿಗೂಢ ಮನುಷ್ಯರು:** ವಿಸ್ಮಯ, ಕುತೂಹಲ, ರೋಚಕತೆ, ರಹಸ್ಯಗಳನ್ನು ಒಳಗೊಂಡ ಪ್ರಕೃತಿ; ಮಾನವರ ಬದುಕಿಗೆ ನಿರಂತರ ಸವಾಲನ್ನು ಒಡ್ಡುತ್ತದೆ. ಈ ಕಥೆಯಲ್ಲಿ ಪ್ರಕೃತಿ ಮತ್ತು ಮನುಷ್ಯ, ಮನುಷ್ಯ ಮತ್ತು ಮನುಷ್ಯ ಸಂಬಂಧಗಳ ಅನ್ವೇಷಣೆ ಪ್ರಮುಖವಾಗುತ್ತದೆ. ರಂಗಪ್ಪ-ಜಗನ್ನಾಥ-ಗೋಪಾಲಯ್ಯ ಈ ಮೂವರ ಬದುಕು ಬೇರೆ ಬೇರೆಯಾಗಿದ್ದುದು ಕಥೆ ಮುಂದುವರಿದಂತೆ ಒಂದೇ ಕೇಂದ್ರಕ್ಕೆ ಬಂಧಿತವಾಗುತ್ತದೆ. ಅವರು ಏರ್ಪಡಿಸಿಕೊಳ್ಳುವ ಸಂಬಂಧಗಳು ಮತ್ತು ಅಲ್ಲಿರುವ ತೊಡಕುಗಳು, ವಿಶ್ಲೇಷಣೆಯಲ್ಲಿ ತೊಡಗುವ ನಿರೂಪಣೆಯು ವ್ಯಕ್ತಿತ್ವ ವಿದಳನದತ್ತ ಸರಿಯುತ್ತದೆ. ಯಾವುದೇ ವ್ಯಕ್ತಿತ್ವದೊಳಗೂ ಸ್ಥಿರವಾಗಿ ಉಳಿಯಲು ಬಿಡದ ಲೌಕಿಕದ ಆಶಯಗಳಿಗೆ ಪ್ರಕೃತಿಯ ಅಗಮ್ಯ ಶಕ್ತಿ ಒಡ್ಡುವ ಸವಾಲು ವ್ಯಕ್ತಿಯ ಅಹಂನ್ನು ಕರಗಿಸಿಬಿಡುತ್ತದೆ. ಪ್ರಕೃತಿ ಮತ್ತು ಮಾನವನ ನಿರಂತರ ಸಂಘರ್ಷದಲ್ಲಿ ಪ್ರಕೃತಿಯದೇ ಮೇಲುಗೈ ಎಂಬುದನ್ನು ಈ ಕಥನವು ಸಾಬೀತುಗೊಳಿಸುತ್ತದೆ.

**ಕಥಾಸಂಕಲನಗಳು**

ಹುಲಿಯೂರಿನ ಸರಹದ್ದು ಆರು ಕಥೆಗಳನ್ನು ಒಳಗೊಂಡಿದ್ದು ತೇಜಸ್ವಿಯವರ ಆರಂಭದ ಕಥೆಗಳು ಇದರಲ್ಲಿ ಸಂಕಲಿತಗೊಂಡಿವೆ. 'ಲಿಂಗಬಂದ', 'ಪಂಜ್ರೊಳ್ಳಿ ಪಿಶಾಚಿಯ ಸವಾಲು', 'ಗುಡುಗು ಹೇಳಿದ್ದೇನು? 'ಊರ್ವಶಿ', 'ಹುಲಿಯೂರಿನ ಸರಹದ್ದು' ಮತ್ತು 'ಗಾಂಧೀಜಿ ದೆಸೆಯಿಂದ'.

ಪೂರ್ಣಚಂದ್ರ ತೇಜಸ್ವಿಯವರ ಮೊದಲನೆಯ ಕತೆ 'ಲಿಂಗಬಂದ' ಪ್ರಕಟವಾದದ್ದು ೧೯೫೭ರಲ್ಲಿ. ಇದು ಪ್ರಜಾವಾಣಿ ದೀಪಾವಳಿ ಕಥಾಸ್ಪರ್ಧೆಯಲ್ಲಿ ಮೊದಲನೆಯ ಬಹುಮಾನ ಪಡೆದುಕೊಂಡಿತ್ತು. ಇದರ ಜೊತೆಗೆ ತೀರ್ಪುಗಾರರ ಮೆಚ್ಚುಗೆ ಪಡೆದ ಕಥೆಯಾಗಿ 'ಗುಡುಗು ಹೇಳಿದ್ದೇನು' ಕಥೆಯೂ ಕನ್ನಡ ಸಾಹಿತ್ಯದಲ್ಲಿ ತೇಜಸ್ವಿಯವರಿಗೆ ಹೆಸರನ್ನೂ, ಹುರುಪನ್ನೂ, ತಂದುಕೊಟ್ಟಿದ್ದವು. ಲಿಂಗಬಂದ ಕತೆಯ ವಸ್ತು ಸಂಕೀರ್ಣವಾಗಿದೆಯಾದರೂ ಕತೆ ಮಾತ್ರ ತನ್ನ ಮಿತಿಯಲ್ಲಿಯೇ ಮುಂದುವರೆಯುತ್ತದೆ. ಮಕ್ಕಳ ಮನಸಿನಲ್ಲಿ ಬೇರೂರಿದ ಭಯ ಅವರ

ವರ್ತನೆಗಳಲ್ಲಿ ಪ್ರಕಟವಾಗುತ್ತದೆ. ಬಾಲ್ಯ ಸಹಜ ಕುತೂಹಲದ ಪ್ರಶ್ನೆಗೆ ಉತ್ತರ ಕಂಡುಕೊಳ್ಳಲಾಗದ ಮುಗ್ಧತೆ ಒಂದಡೆಯಾದರೆ, ಹುಟ್ಟುತ್ತಿರುವ ಆತಂಕವನ್ನು ಆಳು ಲಿಂಗನ ಕಮರಿಹೋಗುತ್ತಿರುವ ವ್ಯಕ್ತಿತ್ವದಲ್ಲಿ ಶೋಧಿಸುವ, ಹೋಲಿಸುವ ಆಶಯ ಕಂಡುಬರುತ್ತದೆ.

**ಪಂಜ್ರೊಳ್ಳಿ ಪಿಶಾಚಿಯ ಸವಾಲು**–೧೯೫೮: ಹಾಸ್ಯ ಮನಸ್ತಾಪ, ಸೋಮಾರಿತನ, ಕಳ್ಳತನ ಮುಂತಾದವು ವಿದ್ಯಾರ್ಥಿದೆಸೆಯಲ್ಲಿನ ಮೋಜಿನ ಪ್ರಸಂಗಗಳಾಗಿ ಬದಲಾಗುವ ಸುಂದರ ಚಿತ್ರಣಗಳ ಪ್ರಪಂಚ ಈ ಕಥೆಯಲ್ಲಿದೆ. ಬದುಕನ್ನು ಇದ್ದಂತೆ ಸ್ವೀಕರಿಸಲು ಸಾಧ್ಯವಿಲ್ಲದೆ ಅದರ ವಿರುದ್ಧ ಹೋರಾಡಲೂ ಸಾಧ್ಯವಿಲ್ಲದ ದ್ವಂದ್ವ ಸ್ಥಿತಿಯಲ್ಲಿ ಯಾವುದಾದರೂ ಒಂದನ್ನು ವಶಪಡಿಸಿಕೊಳ್ಳುವ ಘಟಕಕ್ಕೆ ಎದುರಾಗುವಂತಹ ವಿದ್ಯಾರ್ಥಿಗಳ ಭಾವಾಂತರಂಗದ ಅನಾವರಣವೇ ಈ ಕಥೆಯ ವಸ್ತು. ಪಂಜ್ರೊಳ್ಳಿ ಪಿಶಾಚಿಯ ಸವಾಲು ೧೯೫೮ ರಲ್ಲಿ ಪ್ರಕಟನೆಯಾದ ಕಥೆ.

ವಿದ್ಯಾಭ್ಯಾಸದ ಹಂತದಲ್ಲಿ ಕಲಿಕೆಯ ಬೇಸರ ಇರುವ ಸ್ಥಿತಿಯನ್ನು ನಿರಾಕರಿಸಿ, ಬೇಸರಿಕೆಯನ್ನು ಹೊಡೆದೋಡಿಸುವ ಕಾಯಕಕ್ಕೆ ಮುಂದಾಗುತ್ತದೆ. ಸಪ್ಪೆಯಾದ ಕ್ಷಣಗಳನ್ನು ಉತ್ಸಾಹದ ಚೈತನ್ಯದ ಕ್ಷಣಗಳನ್ನಾಗಿ ಪರಿವರ್ತಿಸಲು ಹೊರಟ ವಿದ್ಯಾರ್ಥಿಗಳ ಗುಂಪು ಪೇಚಿಗೆ ಸಿಕ್ಕು ಬೇಸ್ತು ಬೀಳುವುದು ಕಥೆಯ ಹೂರಣವಾಗಿವೆ. ಪರೀಕ್ಷೆಗಾಗಿ ಓದಿಕೊಳ್ಳುವ ಸಮಯದಲ್ಲಿ ಆವರಿಸುವ ಆಲಸ್ಯ–ಸೋಮಾರಿತನದ ಪರಿಣಾಮವಾಗಿ ಪರಭಾಷೆಯ ಕಲಿಕೆ ದುಸ್ತರವೆನಿಸಿರುತ್ತದೆ. ಕಲಿಕೆಯಲ್ಲಿ ಹುರುಪು ತರುವ ಉದ್ದೇಶದಿಂದ ಅಜ್ಜಿ ಮನೆಯಿಂದ ಕಾಫಿ ಕದ್ದು ತರುವ ಯೋಜನಾ ಕ್ರಿಯೆಯಲ್ಲಿ ತೊಡಗಿಕೊಳ್ಳುವ ಗೆಳೆಯರು ಕಾಫಿ ಕದ್ದು ತಂದು ಕುಡಿಯುವುದರಲ್ಲಿ ಯಶಸ್ಸನ್ನು ಪಡೆಯುತ್ತಾರೆ. ಓದುವ ಶ್ರಮವನ್ನು ಆ ಕ್ಷಣದ ಮಟ್ಟಿಗೆ ತಪ್ಪಿಸಿಕೊಂಡರೂ ಕಾಫಿ ಕದಿಯುವ ಪ್ರಸಂಗದಲ್ಲಿ ತಮ್ಮಿಂದಾದ ಪ್ರಮಾದ ಒಂದು ರೀತಿ ಅಸಹ್ಯ ಭಾವ ಭಿತ್ತಿ ಕತೆಯನ್ನು ಕೊನೆಗಾಣಿಸುತ್ತದೆ. ಜೀವನದಲ್ಲಿ ಎದುರಾಗುವ ಪರೀಕ್ಷೆಗಳು ಸಾಧಾರಣವಾದುದಾದರೂ ಅಸಾಧಾರಣವೆನ್ನುವ ಸವಾಲನ್ನು ಸ್ವೀಕರಿಸುವುದು ತಾರುಣ್ಯದ ಸಹಜ ಬಯಕೆಯಾಗಿರುತ್ತದೆ. ವಿದ್ಯಾರ್ಥಿ ದೆಸೆಯಲ್ಲಿದ್ದಾಗ ನಡೆಸುವ ತುಂಟಾಟಗಳು ಸೃಜನಶೀಲತೆಯ, ಕ್ರಿಯಾಶೀಲತೆಯ ಮಾದರಿಯಾಗಿ ನೆನಪುಗಳಲ್ಲಿ ಸುಳಿಯುತ್ತದೆ.

**ಗುಡುಗು ಹೇಳಿದ್ದೇನು?**: ೧೯೫೭ ರಲ್ಲಿ ಪ್ರಕಟಗೊಂಡ ಈ ಕಥೆ ಸ್ವಾರ್ಥಲೋಲುಪತೆಯಿಂದ ಮನುಷ್ಯತ್ವವನ್ನು ಮರೆತು ಸಾಕಿ ಸಲಹಿದ ಅಜ್ಜಿಯನ್ನು ಅಮಾನವೀಯವಾಗಿ ಕಾರಿನ ಚಕ್ರಕ್ಕೆ ದೂಡಿ ಸಾಯಿಸುವುದು ನೈತಿಕ ಅಧಃಪತನವನ್ನು ಸೂಚಿಸುತ್ತದೆ. ಸೋಮಾರಿತನದ ಪರಮಾವಧಿಯೇ ಕ್ರೌರ್ಯವಾಗಿ ಬದಲಾಗುವುದಾದರೆ ದುಡಿಮೆಯ ಫಲಕ್ಕೆ ಅರ್ಥವಿರುವುದಿಲ್ಲ. ದುಡಿತ ಶ್ರಮದ ಬೆವರು ಕಣ್ಮರೆಯಾಗಿ ಅನಾಯಾಸವಾಗಿ ದೊರೆಯುವ ಹಣದ ಆಮಿಷ ಅಣ್ಣತಮ್ಮಂದಿರನ್ನು ಆಕ್ರಮಿಸುವುದು ಆಧುನಿಕ ಮನಸ್ಥಿತಿಯನ್ನು ಬಿಂಬಿಸುತ್ತದೆ.

**ಊರ್ವಶಿ;** ಈ ಕಥೆಯು ಪುರೂರವ ಮತ್ತು ಊರ್ವಶಿಯರನ್ನು ಕುರಿತು ಇರುವ ಪ್ರಖ್ಯಾತವಾದ ಪುರಾಣದ ಪ್ರೇಮ ಕಥೆಯನ್ನು ಹಿನ್ನೆಲೆಯಾಗಿಟ್ಟುಕೊಂಡು ೧೯೬೦ ರಲ್ಲಿ ರಚಿತವಾದ ಕಥೆ. ಶಾಪ, ವಿರಹ, ಮಿಲನ ಎಂದು ಮೂರು ಭಾಗಗಳಲ್ಲಿ ಈ ಕಥೆ ಬೆಳೆಯುತ್ತದೆ. ಸೋಮು ಮತ್ತು ಸುಭದ್ರೆಯರ ಪ್ರೇಮ ಕಥೆಯಂತೆ ತೋರಿಬಂದರೂ, ಸೋಮುವಿನ ಪ್ರೇಮ ಸುಭದ್ರೆಯಲ್ಲಿ

ನಿವೇದನೆಗೊಳ್ಳದೆ ಆತನ ಪ್ರಣಯ ಭ್ರಮನಿರಸಕ್ಕೆ ಒಳಗಾಗುತ್ತದೆ. ಪುರಾಣದ ಪುರೂರವನೊಂದಿಗೆ ತನ್ನನ್ನು ಹೋಲಿಸಿಕೊಳ್ಳುವ ಸೋಮು ದಿಕ್ಕುಗೆಟ್ಟ ಪ್ರೇಮಿಯಂತೆ ಅಲೆಯುತ್ತಾನೆ. ತಾನು ಅಲೆಯುತ್ತಿರುವುದಕ್ಕೆ ಕಾರಣವನ್ನು ಹುಡುಕುವ ಸೋಮುವಿಗೆ ಸುಭದ್ರೆಯೊಂದಿಗಿನ ಪ್ರೇಮ ಏಕಮುಖವಾದದ್ದು ಎಂಬ ಸಂಶಯ ಕಾಡುತ್ತದೆ. ಸುಭದ್ರಾಳ ಸಲುಗೆಯುಕ್ತ ವ್ಯವಹಾರದಿಂದ ತಾನು ಪುರೂರವ, ಸುಭದ್ರೆ ಊರ್ವಶಿಯೆಂದು ಭಾವಿಸಿಕೊಂಡು ಪ್ರೀತಿಯ ಭ್ರಮೆಯಲ್ಲಿ ಸಿಲುಕಿದ್ದವನಿಗೆ ಪುರೂರವನಂತೆ ತಾನೂ ಚಿರವಿರಹಿ ಎಂದುಕೊಳ್ಳುತ್ತಾನೆ. ಆಕಸ್ಮಿಕವಾಗಿ ನಾಯಿ ಕಡಿದು ಯಮಯಾತನೆಯನ್ನು ಅನುಭವಿಸುತ್ತಾನೆ. ತನ್ನನ್ನು ಕಚ್ಚಿದ ನಾಯಿ ಹುಚ್ಚುನಾಯಿಯೆಂದು ರೇಬಿಸ್‌ಗೆ ಒಳಗಾಗಿ ಸಾಯಬಹುದೆಂದು ಕೊಂಡಿದ್ದವನಿಗೆ ಬದುಕುವ ಇಚ್ಛೆ ಪ್ರಬಲವಾಗುತ್ತದೆ. ತನ್ನನ್ನು ಕಚ್ಚಿದ್ದ ನಾಯಿಯನ್ನು ಹುಡುಕಾಟದ ಸಂದರ್ಭದಲ್ಲಿ ಸುಭದ್ರೆ ಆತನಿಗೆ ಬರೀ ಮರೀಚಿಕೆಯಂತೆ ಕಂಗೊಳಿಸಿ ಅದೇ ವೇಳೆಗೆ ಕಚ್ಚಿದ್ದ ನಾಯಿಯೂ ಕಣ್ಣಿಗೆ ಬೀಳುತ್ತದೆ. ಸೋಮು ನಾಯಿ ಮತ್ತು ಸುಭದ್ರಳ ಹುಚ್ಚಿನಿಂದ ಏಕಕಾಲಕ್ಕೆ ಬಿಡುಗೊಳ್ಳುತ್ತಾನೆ.

**ಹುಲಿಯೂರಿನ ಸರಹದ್ದು:** ಅಡಿಗರ ಪದ್ಯದೊಂದಿಗೆ ಪ್ರಾರಂಭಗೊಳ್ಳುವ ಕಥನ ಬದುಕಿಗಾಗಿ–ಅಸ್ತಿತ್ವಕ್ಕಾಗಿ ಹೋರಾಟ ಮಾಡುವ ಪ್ರವೃತ್ತಿ 'ಆಜನ್ಮ ಸಿದ್ಧ ಹಕ್ಕು' ಎಂಬಂತೆ ಪ್ರತಿಪಾದಿತವಾಗುತ್ತದೆ. ಪರಂಪರೆ ಮತ್ತು ವೈಚಾರಿಕತೆಯ ನಡುವಣ ಸಂಘರ್ಷ ಸಂಕೇತಗಳ ಮೂಲಕ ಅಭಿವ್ಯಕ್ತಗೊಳ್ಳುತ್ತದೆ. ಕಥನವು ಸ್ವತಂತ್ರವಾದ ಬದುಕಿಗೆ ಹಾತೊರೆಯುವ ಸೋಮುವಿನ ವ್ಯಕ್ತಿತ್ವಕ್ಕೆ ಆತನ ನಿಬಿಡವಾದ ಆಲೋಚನೆಗಳಿಗೆ ಗಂಭೀರವಾದ ತರ್ಕಗಳಿಗೆ ಸೂಕ್ತವಾದ ವೇದಿಕೆಯಾಗಿದೆ. ಹುಲಿಯುರಿನಂತಹ ಸರಹದ್ದನ್ನು ದಾಟಿ ಹೋಗಬೇಕು ಎನ್ನುವ ಸೋಮುವಿನ ಬಯಕೆಯು ಅನೇಕ ರೀತಿಯ ಸಂಕೋಲೆಗಳಿಂದ ಬಂಧಿತವಾಗಿದೆ. ಅವುಗಳನ್ನು ಕಿತ್ತೊಗೆದು ಗರುಡನಂತೆ ಸ್ವಚ್ಛಂದವಾಗಿ ಬದುಕಬೇಕು ಎಂಬ ಆಶಯಕ್ಕೆ ಸರಹದ್ದುಗಳು ತಡೆಯೊಡ್ಡುತ್ತವೆ. ಅಂತಹ ಸರಹದ್ದುಗಳನ್ನು ದಾಟುವ ಪ್ರಯತ್ನಕ್ಕೆ 'ಗರುಡನ ಹತ್ಯೆ' ಪ್ರಮುಖ ಹಾದಿಯನ್ನು ನಿರ್ಮಾಣ ಮಾಡುತ್ತದೆ. ಕೌಟುಂಬಿಕ ಕೇಂದ್ರದಲ್ಲಿ ಬದಲಾವಣೆ ತರಬೇಕೆನ್ನುವ ಕನಸು ನೆರವೇರದೆ ಹೋದರೂ ಹುಲಿಯೂರಿನ ಪರಿಧಿಯನ್ನು ದಾಟಿ ಹೊರ ಹೋಗುವತ್ತ ಆತನ ಆಶಯ ಸ್ಥಿರಗೊಳ್ಳುತ್ತದೆ.

**ಗಾಂಧೀಜಿ ದೆಸೆಯಿಂದ:** ಕೆ. ಜಿ ಮೋಹನ ದಾಸ ಎಂದು ಗಾಂಧೀಜಿಯ ಹೆಸರು ಹೊಂದಿದ ಕಲ್ಲುಹಳ್ಳಿಯ ಹುಡುಗ ಗಾಂಧಿಯ ಮಹತ್ವದ ನಡವಳಿಕೆಗಳನ್ನು ಬದುಕಿನಲ್ಲಿ ಅಳವಡಿಸಿಕೊಳ್ಳಲು ಹೋಗಿ, ತಂದೆಯಿಂದ ಅವಹೇಳನಕ್ಕೆ ಗುರಿಯಾಗುವ ಪ್ರಸಂಗವೇ ಈ ಕಥೆಯ ವಸ್ತು. ಶಾಲೆಯ ಪಠ್ಯಪುಸ್ತಕವನ್ನು ಓದುತ್ತಿದ್ದ ಮೋಹನದಾಸ, 'ಗಾಂಧೀಜಿಯ ಕಥೆಯಿಂದ' ಪ್ರಭಾವಿತನಾಗಿ, ಅದೇ ಆದರ್ಶಗಳನ್ನು ಪಾಲಿಸುವ ಮನಸ್ಥಿತಿಯವನಾಗುತ್ತಾನೆ. ತನ್ನಿಂದಾದ ಪ್ರಮಾದಗಳನ್ನು ಸವಿವರವಾಗಿ ಪತ್ರದಲ್ಲಿ ಬರೆದು ಅಂಚೆಗೆ ಹಾಕಿ ಎರಡು ದಿನ ಬೇರೆಲ್ಲೋ ಕಳೆದು ಮನೆಗೆ ಹಿಂತಿರುಗುತ್ತಾನೆ. ಮನೆಗೆ ಬಂದಾಗ ಕುಪಿತ ತಂದೆಯ ಆಕ್ರೋಶದ ಪರಿಣಾಮವನ್ನು ಎದುರಿಸುತ್ತಾನೆ. ಹುಡುಗನ ಮುಗ್ಧ ಪ್ರಾಮಾಣಿಕ ಆದರ್ಶಗಳು ಹೇಳ ಹೆಸರಿಲ್ಲದಂತೆ ಕರಗಿಹೋಗುತ್ತವೆ. ಗಾಂಧೀಜಿಯ ಆದರ್ಶಗಳು, ಮೌಲ್ಯಗಳು ಒಂದರ್ಥದಲ್ಲಿ ವಿಡಂಬನೆಗೆ ಗುರಿಯಾಗಿವೆ.

ಅಬಚೂರಿನ ಪೋಸ್ಟಾಫೀಸು ಕಥಾಸಂಕಲನದಲ್ಲಿ ಒಟ್ಟು ಏಳು ಕಥೆಗಳಿವೆ. ಅಬಚೂರಿನ ಪೋಸ್ಟಾಫೀಸು, ಅವನತಿ, ಕುಬಿ ಮತ್ತು ಇಯಾಲ, ತುಕ್ಕೋಜಿ, ಡೇರ್ ಡೆವಿಲ್ ಮುಸ್ತಾಫಾ, ತಬರನ ಕಥೆ, ತ್ಯಕ್ತ.....ಇವುಗಳು ಸಾಮಾಜಿಕ ನೆಲೆಯಲ್ಲಿ ಮನುಷ್ಯನ ಮೂಲಭೂತ ಭಾವನೆಗಳನ್ನು ವಿವರಿಸುತ್ತವೆ.

**ಅಬಚೂರಿನ ಪೋಸ್ಟಾಫೀಸು:** ಅಬಚೂರಿಗೆ ಬಂದ ಅಂಚೆಕಛೇರಿಯಿಂದಾಗಿ ಹಂಗಾಮಿ ಪೋಸ್ಟ್ ಮಾಸ್ತರನಾದ ಬೋಬಣ್ಣ, ಮತ್ತವನ ಸಾಂಸಾರಿಕ ಬದುಕು ತಲ್ಲಣಕ್ಕೂ, ಅಶಾಂತಿಗೂ ಒಳಗಾಗುವುದು ಕಥೆಯ ವಸ್ತು. ಆಧುನಿಕತೆಯ ರೂಪದಲ್ಲಿ ಹಳ್ಳಿಗೆ ಸೇರ್ಪಡೆಯಾದ ಅಂಚೆಕಛೇರಿಯಿಂದಾಗಿ ಅಬಚೂರಿನ ಜನಜೀವನದಲ್ಲಿ ಅನೇಕ ಬದಲಾವಣೆಗಳಾಗುತ್ತವೆ. ಪ್ರತ್ಯಕ್ಷ ಮತ್ತು ಪರೋಕ್ಷ ಕಾರಣಗಳಿಂದಾಗಿ ಬೋಬಣ್ಣ ಇವುಗಳಲ್ಲಿ ಭಾಗೀದಾರನಾಗಬೇಕಾಗುತ್ತದೆ. ಬೋಬಣ್ಣನ ಮುಗ್ಧತೆ ಮತ್ತು ಪೆದ್ದುತನದಿಂದಾಗಿ ವೈಯಕ್ತಿಕ ಜೀವನ ಮತ್ತು ಸಾಮಾಜಿಕ ಜನಜೀವನ ಎರಡೂ ಅಸ್ತವ್ಯಸ್ತಗೊಳ್ಳುತ್ತದೆ. ಬೋಬಣ್ಣನ ಅದುವರೆಗಿನ ವ್ಯಕ್ತಿತ್ವವನ್ನು ಒಪ್ಪಿಕೊಂಡಿದ್ದ ಅದೇ ಸಮಾಜ ಆನಂತರದಲ್ಲಿ ಸಂಶಯದಿಂದ ನೋಡುತ್ತದೆ. ಕುಟುಂಬ-ಸಮಾಜ-ವ್ಯಕ್ತಿಗತ ಆಲೋಚನೆಗಳಲ್ಲಿ ತೀವ್ರತರವಾಗಿ ನರಳುವ ಬೋಬಣ್ಣನಿಗೆ ಯಾವುದನ್ನು ಆಯ್ಕೆ ಮಾಡಿಕೊಳ್ಳಬೇಕು ಎಂಬ ಸಂದಿಗ್ಧತೆ ಎದುರಾಗುತ್ತದೆ. ಹೆಂಡತಿ ಕಾವೇರಿಯ ಅಸಹಕಾರ ವರ್ತನೆ, ಅತ್ತೆ ಮಾಚಮ್ಮಳ ಅಧಿಕಾರಯುತ ನಡವಳಿಕೆ, ಸಮಾಜದ ವ್ಯಗ್ರತೆ ಇವುಗಳ ಏಕಪಕ್ಷೀಯ ನಿರ್ಧಾರಗಳು ಆತನನ್ನು ಕಂಗೆಡಿಸುತ್ತವೆ. ಅಸಹಾಯಕನಾದ ಬೋಬಣ್ಣ ಅಬಚೂರನ್ನು ತೊರೆದು ಓಡಿಹೋಗುತ್ತಾನೆ.

**ಅವನತಿ:** ಗ್ರಾಮೀಣ ಪರಿಸರದಲ್ಲಿ ಶ್ರೇಷ್ಠ ಕಲೆ ಅವನತವಾಗುವುದರ ಜೊತೆಗೆ ಚಲನಶೀಲ ಬದುಕಿನ ಹಲವು ಸ್ತರಗಳು ವರ್ತಮಾನದಲ್ಲಿ ಜಡಗೊಳ್ಳುತ್ತಿರುವುದಕ್ಕೆ ಸಾಕ್ಷಿಯಾಗಿ ನಿಲ್ಲುವುದು ಈ ಕಥೆ. ಹಳೇಬೀಡಿನ ಹತ್ತಿರದ ಪನ್ನಾಪುರದ ಸೂರಾಚಾರಿ ಕೆತ್ತನೆಯ ಕಸುಬುನಿಂದಾಗಿ ಇಸ್ಲಾಪುರಕ್ಕೆ ಬಂದವನು. ಹೊಯ್ಸಳರ ಕಾಲದ ಶ್ರೇಷ್ಠ ಕಲಾವಂತಿಕೆ ಸಿದ್ಧಿಸಿದ್ದರೂ ಇಸ್ಲಾಪುರದ ಸುತ್ತಮುತ್ತಲಿನ ಪರಿಸರದಲ್ಲಿ ತನ್ನ ಶಿಲ್ಪ ನೈಪುಣ್ಯಕ್ಕೆ ಬೆಲೆಯಿಲ್ಲದೆ ಹೊಟ್ಟೆ ಪಾಡಿಗಾಗಿ ಅರ್ಥಹೀನ ಕಸುಬುಗಳನ್ನು ಅವಲಂಬಿಸುವ ಸ್ಥಿತಿ ಎದುರಾಗುತ್ತದೆ. ಕ್ರಮೇಣ ಅಲ್ಲಿನ ಜನರ ಅಭಿರುಚಿ ನಿರೀಕ್ಷೆಗಳಿಗೆ ತಕ್ಕಂತೆ ಬದಲಾಗುವ ಸೂರಾಚಾರಿ ತನ್ನ ಪ್ರತಿಭೆಯನ್ನು ಕೊಂದುಕೊಂಡು ಬದುಕುವಂತಾಗುತ್ತದೆ.

ಇದಕ್ಕೆ ಸಮಾಂತರವಾಗಿ ಇತ್ತಾವರದ ಸುಬ್ಬೇಗೌಡನ ಹೆಂಡತಿ ಗೌರಿಯ ಜೀವನದಲ್ಲಿ ಘಟನೆಗಳು ನಡೆದಿರುತ್ತವೆ. ಅದ್ಭುತ ಸಾಮರಸ್ಯದಲ್ಲಿ ಮಿಳಿತವಾಗಿದ್ದ ಗೌರಿಯ ಸೌಂದರ್ಯ ಊರಿನವರ ಆಶ್ಚರ್ಯಕ್ಕೂ, ವಕ್ರದೃಷ್ಟಿಗೂ ಇಂಬು ಕೊಡುತ್ತದೆ. ಎತ್ತಿನ ವ್ಯಾಪಾರಕ್ಕೆಂದು ಬಂದ ಸುಬ್ಬಯ್ಯ-ತಮಗೆ ಮೂರು ಮಕ್ಕಳಾಗಿಯೂ ದಕ್ಕದೆ ಹೋಗುತ್ತಿರುವುದಕ್ಕೆ ಸೂರಾಚಾರಿಯ ಬಳಿ ಪರಿಹಾರ ಕೇಳುತ್ತಾನೆ. ಮೂಲತಃ ವೈದ್ಯನಲ್ಲದ ಸೂರಾಚಾರಿ ಅದಕ್ಕೆ ಗೌರಿಯ 'ಮಲೆಯ ದೋಷ' ಕಾರಣವೆಂದು ಅರಿಶಿನ ಕೊಂಬಿನ ಕೆಂಡ ಮಾಡಿ ಅದನ್ನು ಸುಟ್ಟು ತೆಗಿಯಬೇಕು ಎಂದು ಸಲಹೆ ನೀಡುತ್ತಾನೆ. ಗ್ರಾಮೀಣ ಜನಜೀವನದಲ್ಲಿನ ಅಂತರಾಳದ ಮೌಢ್ಯ, ಬದುಕಿನ ಬಗೆಗಿನ ಅಸಹನೆ, ಸೌಂದರ್ಯವನ್ನು ಕುರೂಪಗೊಳಿಸುವ ಕಾಯಕ, ಕಲೆಗಾರಿಕೆ ಅರ್ಥಪೂರ್ಣವಾದುದನ್ನು

ಸೃಷ್ಟಿಸಲಾರದೆ ಪತನ ಹೊಂದುತ್ತಿರುವುದು ಈ ಕ್ರಿಯೆಗಳು ಸಾಂಕ್ರಾಮಿಕವಾಗಿ ಜಡತೆಗೆ ಕೊಂಡೊಯ್ಯುತ್ತಿರುವುದು ಬದುಕಿನ ವ್ಯಂಗ್ಯವಾಗಿದೆ.

**ಕುಬಿ ಮತ್ತು ಇಯಾಲ:** ಜ್ಞಾನ ಮತ್ತು ಅಜ್ಞಾನ, ಮೌಢ್ಯ ಮತ್ತು ವೈಚಾರಿಕತೆ ಇವುಗಳ ನಡುವಿನ ಘರ್ಷಣೆ, ತಿಕ್ಕಾಟದಲ್ಲಿ ಮೂಢನಂಬಿಕೆ ಮೇಲುಗೈ ಸಾಧಿಸುತ್ತಾ ಸಾಮಾಜಿಕವಾಗಿ ಪತನಹೊಂದುವುದನ್ನು ಈ ಕಥನವು ವಿಶ್ಲೇಷಿಸುತ್ತದೆ. ವೈಜ್ಞಾನಿಕ ಮನೋಭಾವದ ವಿಚಾರವಾದಿಯೂ ಆದ ಡಾ. ಕುಬೇರಪ್ಪ ಯಾರೂ ಬರಲು ಒಪ್ಪದ ಭೈರಾಪುರಕ್ಕೆ ವೈದ್ಯಾಧಿಕಾರಿಯಾಗಿ ಬರುತ್ತಾನೆ. ಭೈರಾಪುರದ ಜನರ ರೋಗ-ರುಜಿನಗಳಿಗೆ ಚಿಕಿತ್ಸೆ ಮಾಡುವುದಲ್ಲದೆ ಅಲ್ಲಿನ ಮೌಢ್ಯ ತುಂಬಿದ ಸಮಾಜದೊಡನೆ ವ್ಯವಹರಿಸುವಷ್ಟರಲ್ಲಿ ಆಕಸ್ಮಿಕ ಅವಗಡ ಸಂಭವಿಸುತ್ತದೆ. ಊರಿನ ಮುಗ್ಧ ಹುಡುಗಿ ಇಯಾಲಳ ಮೇಲೆ ಅತ್ಯಾಚಾರ ನಡೆದು, ಆಕೆಯನ್ನು ಕೊಲೆಮಾಡಿ ಅಲ್ಲಿದ್ದ ಬಂಡೆಯ ಪಕ್ಕ ಎಸೆದು ಹೋಗಿರುತ್ತಾರೆ. ಇಯಾಲಳ ಕೊಲೆ ಯಾರಿಂದ, ಯಾಕೆ ನಡೆಯಿತು ಎಂಬುದು ಗೊತ್ತಾಗದೆ ಅದು ರಾಜಕೀಯ ಬಣ್ಣ ಪಡೆಯುತ್ತದೆ. ಮೌಢ್ಯ ತುಂಬಿದ ಕೊಳಕು ಸಮಾಜದಲ್ಲಿ ಆಕೆಯ ಸಾವಿನ ಸುತ್ತ ಬೆಳೆಯುವ ಕಥೆಯು ಗೂಢವಾಗುತ್ತಾ ಸಾಗುತ್ತದೆ. ಆನಂತರ ಡೈನಮೇಟ್ ನಿಂದ ಬಂಡೆ ಸಿಡಿದು ಸಾವಿನಂಚಿನಲ್ಲಿದ್ದ ಲೋರಿ ಎಂಬಾತನಿಂದ ಇಯಾಲಳ ಕೊಲೆ ವಿಚಾರ ಬಹಿರಂಗಗೊಳ್ಳುತ್ತದೆ. ಕೊಲೆಯ ಹಿಂದಿನ ಕಾರಣ ಮರೆಮಾಚಿ ಹೋಗಿ ಕುಬೇರಪ್ಪ ಅತಿಮಾನುಷನೆಂದು ಸತ್ತು ಹೋಗಿದ್ದ ಲೋರಿಯನ್ನು ಎಬ್ಬಿಸಿ ಮಾತನಾಡಿಸಿದನೆಂದು ಪ್ರಚಾರಕ್ಕೆ ಬರುವಂತಾಗುತ್ತದೆ. ವೈಜ್ಞಾನಿಕ ಮನೋಭಾವನೆಯನ್ನು ಭೈರಾಪುರದ ಜನತೆಯಲ್ಲಿ ಬೆಳೆಯಬೇಕೆಂದು ಬಂದ ಕುಬೇರಪ್ಪ ಪ್ರತಿಯೊಂದು ಸಂದರ್ಭದಲ್ಲೂ ಸೋಲಿಗೆ ಒಳಗಾಗುತ್ತಾನೆ. ಅವೈಜ್ಞಾನಿಕ ಅಸಂಬದ್ಧ ತಿಳುವಳಿಕೆಯನ್ನು ಬದಲಾಯಿಸಲಾಗದ ಈ ನಿರ್ದಿಷ್ಟ ಸಾಮಾಜಿಕ ಸನ್ನಿವೇಶದಲ್ಲಿ ಕುಬೇರಪ್ಪನ ವಿಚಾರವಾದದ ಅಸಹಾಯಕತೆ, ಸೋಲು-ಸಮಾಜದ ಎಂದೂ ಬದಲಾಗದಂತಹ ಶಾಶ್ವತವಾದ ವಸ್ತುಸ್ಥಿತಿಯನ್ನು ಪ್ರತಿಬಿಂಬಿಸುತ್ತಾ ಮುಕ್ತಾಯಗೊಳ್ಳುತ್ತದೆ.

**ತುಕ್ಕೋಜಿ:** ಆಧುನಿಕತೆಯ ಪ್ರವೇಶದಿಂದ ಗ್ರಾಮೀಣ ಪರಿಸರದಲ್ಲುಂಟಾದ ತಲ್ಲಣಗಳ ಚಿತ್ರಣವೇ 'ತುಕ್ಕೋಜಿ' ಕಥೆಯ ವಸ್ತು. ಗುರುಗಳ್ಳಿಯಲ್ಲಿ ಹೊಲಿಗೆಯ ದರ್ಜಿಯಾಗಿದ್ದ ತುಕ್ಕೋಜಿ ನಾಗರಿಕತೆಯ ಆಕ್ರಮಣದಿಂದ ಎದುರಿಸಿದ ವೈಪರೀತ್ಯಗಳು ಮತ್ತು ವೈಯಕ್ತಿಕ ದುರಂತದಿಂದಾಗಿ ಸಮಾಜದ ಮೇಲಾದ ಪರಿಣಾಮವನ್ನು ಕಥೆಯು ಸ್ವಾರಸ್ಯಕರವಾಗಿ ಬಿಚ್ಚಿಡುತ್ತದೆ.

**ಡೇರ್ ಡೆವಿಲ್ ಮುಸ್ತಾಫಾ:** ಕಾಲೇಜಿನ ಪರಿಸರದ ವಿದ್ಯಾರ್ಥಿಗಳಲ್ಲಿನ ವೈಷಮ್ಯ, ಜಾತಿಪದ್ಧತಿಯಂತಹ ಸಮಸ್ಯೆಗಳ ಸುತ್ತ ಹೆಣೆಯಲಾಗಿರುವ ಈ ಕತೆಯು ಕಲಾತ್ಮಕವಾಗಿ ಮೂಡಿಬಂದಿದೆ. ಮುಸ್ತಾಫ ಆ ಕಾಲೇಜಿನಲ್ಲಿರುವ ಒಬ್ಬನೇ ಮುಸ್ಲಿಂ ವಿದ್ಯಾರ್ಥಿಯಾಗಿದ್ದು, ತಮ್ಮೊಳಗಿನ ಬಿಗುಮಾನದಿಂದ ಇತರ ವಿದ್ಯಾರ್ಥಿಗಳು ಆತನೊಡನೆ ಗೆಳತನದಿಂದ ಇರಲು ಹಿಂಜರಿಯುತ್ತಾರೆ. ಪರಸ್ಪರ ಅನುಮಾನ, ಸಂಘರ್ಷಗಳಿಗೆ ಜಾತೀಯತೆ ಕಾರಣವಾದರೂ ಕ್ರಮೇಣ ಮುಸ್ತಾಫನ 'ಡೇರ್ ಡೆವಿಲ್' ಎಂಬ ಸ್ವಬಿರುದು ಸಾಂದರ್ಭಿಕವಾಗಿ ಪುನರ್‌ಸ್ಥಾಪನೆಯಾಗುತ್ತದೆ. ವಿದ್ಯಾರ್ಥಿ ದೆಸೆಯಲ್ಲಿನ ಸಹಜ ಸಂಘರ್ಷಗಳಿಗೆ ಜಾತೀಯತೆಯು ಸೇರಿ ಹೋದಾಗ ಉಂಟಾಗುವ ಪರಿಣಾಮಗಳನ್ನು, ಕೈಮೀರಿ ಹೋಗುವಂತಿದ್ದ ವಸ್ತುಸ್ಥಿತಿಯನ್ನು

ಬಿಗಡಾಯಿಸದಂತೆ ಮುಸ್ತಾಫನ ಧೈರ್ಯ-ಸ್ಥೈರ್ಯ ಕಾಪಾಡುತ್ತದೆ. ವೈಷಮ್ಯ ಕಳೆದು, ಪ್ರೀತಿ-ವಿಶ್ವಾಸದ ಭಾವನಾತ್ಮಕ ಸಂಬಂಧ ಬೆಸದು ಸೌಹಾರ್ದಯುತವಾಗಿ ಬೆರೆಯುವುದು ಮುಂದುವರಿಯುತ್ತದೆ. ವಿನೋದಾತ್ಮಕವಾದ ಲೇಪದೊಂದಿಗೆ ಇಲ್ಲಿನ ಸಾಮಾಜಿಕ ಸಮಸ್ಯೆಗಳನ್ನು ಪರಿಹರಿಸಿದ ಚಿತ್ರಣ ಈ ಕಥೆಯಲ್ಲಿದೆ.

**ತಬರನ ಕಥೆ**: ರಾಜಕೀಯ, ಅರಾಜಕತೆ, ವ್ಯವಸ್ಥೆಯ ದುರಾಡಳಿತದಿಂದ ಸಮಾಜಕ್ಕೆ ತುಕ್ಕು ಹಿಡಿಯುತ್ತಿರುವುದು ಇಂದು ನಿನ್ನೆಯಿಂದೇನಲ್ಲ. ನಾಲ್ಕು ದಶಕದ ಹಿಂದೆಯೇ ಈ ಕಥೆ ರಚನೆಯಾಗಿದ್ದು ಭ್ರಷ್ಟ ವ್ಯವಸ್ಥೆಗೆ ಹಿಡಿದ ಕನ್ನಡಿಯಾಗಿದೆ. ಈ ಕಥೆ ಸರ್ಕಾರಿ ನೌಕರನಾಗಿದ್ದ ತಬರಟ್ಟಿಯು ಅಧಿಕಾರಿಶಾಹಿಯ ಅಡಕತ್ತರಿಗೆ ಸಿಲುಕಿ ನರಳುತ್ತಾ ತನ್ನದೆಲ್ಲವನ್ನೂ ಕಳೆದುಕೊಂಡು ಮತಿಹೀನನಾಗುವ ದುರಂತವನ್ನು ಚಿತ್ರಿಸುತ್ತದೆ

**ತ್ಯಕ್ತ**: ಆತ್ಮ ನಿಷ್ಠ ಬರವಣಿಗೆಯ ದಾಟಿಯನ್ನು ಹೊಂದಿರುವ ತ್ಯಕ್ತ ಕಥೆಯ ರಚನೆಯಾದದ್ದು ೧೯೬೪ ರಲ್ಲಿ ಅಬಚೂರಿನ ಪೋಸ್ಟಾಫೀಸು ಕಥಾಸಂಕಲನದ ಕೊನೆಯ ಕಥೆ. ೧೯೭೨-೧೯೭೪ ರಲ್ಲಿ ಪ್ರಕಟನೆಯಾದ ಈ ಸಂಕಲನದ ಇತರ ಕಥೆಗಳಿಂದ ಪ್ರತ್ಯೇಕವಾಗಿ ನಿಲ್ಲುವ ಕಥೆ **'ತ್ಯಕ್ತ'**. ಈ ಕಥೆಯ ನಾಯಕ ಸೋಮು ಬರಹಗಾರ, ಭಾಷೆಗೆ ಅತೀತವಾದುದನ್ನು ಭಾಷೆಯಲ್ಲಿ ಹೇಳಬೇಕು ಎಂಬುದು ಸೋಮುವಿನ ಆಶಯ. ಅದಕ್ಕೆ ಬದ್ಧನಾಗಿ ಅವನಾಡುವ ಭಾಷೆ/ಮಾತು ಇತರರಲ್ಲಿ ಅಸಂಬದ್ಧವಾಗಿ ಕಂಡುಬಂದಂತೆ ಇತರರ ಮಾತು ಆತನಿಗೆ ಅಸಂಬದ್ಧವೆನಿಸುತ್ತದೆ. ಬೇಸಿಗೆ ರಜೆ ಕಳೆಯಲು ಶಿವಮೊಗ್ಗದ ಅಜ್ಜಿಯ ಮನೆಗೆ ಬಂದಿದ್ದ ಸೋಮುವಿಗೆ ಮಾವ ತನ್ನ ಪ್ರೇಮದ ಕುರಿತು ವಿಚಾರಣೆ ನಡೆಸಿದ್ದು ಅಸಮಾಧಾನಕ್ಕೆ ಕಾರಣವಾಗಿ ಅಲ್ಲಿನ ಪರಿಸರದೊಂದಿಗೆ ಸಂವಾದ ಸಾಧ್ಯವಾಗದೆ ಅಪರಿಚಿತ ಅನುಭವಕ್ಕೆ ಈಡಾಗುತ್ತಾನೆ.

**ಕಿರುಗೂರಿನ ಗಯ್ಯಾಳಿಗಳು ಕಥಾಸಂಕಲನ**ದಲ್ಲಿ ಒಟ್ಟು ನಾಲ್ಕು ಕಥೆಗಳಿವೆ. ಕಿರುಗೂರಿನ ಗಯ್ಯಾಳಿಗಳು, ಕೃಷ್ಣೇಗೌಡನ ಆನೆ, ಮಾಯಾಮೃಗ, ರಹಸ್ಯ ವಿಶ್ವ

**ಕಿರುಗೂರಿನ ಗಯ್ಯಾಳಿಗಳು**: ಸಾಮಾಜಿಕ ನೆಲೆಯಲ್ಲಿ ತೆರೆದುಕೊಳ್ಳುವ ನೀಳ್ಗತೆಯಾದ ಕಿರುಗೂರಿನ ಗಯ್ಯಾಳಿಗಳು ಕಥೆಯ ಪ್ರಾರಂಭದಲ್ಲಿನ ಬಿರುಗಾಳಿಯು ಸಂಘರ್ಷಮಯವಾದ ವಾತವರಣವನ್ನೊಡ್ಡಿ ಸಂಪೂರ್ಣ ವ್ಯವಸ್ಥೆಯೇ ತಲೆಕೆಳಗಾಗುತ್ತದೆ. ಮನುಷ್ಯ ಮನುಷ್ಯರ ನಡುವಿನ ಸಂಘರ್ಷದೊಂದಿಗೆ ಬದುಕಿನ ಹಲವು ಆಯಾಮಗಳನ್ನು ಪರಿಚಯಿಸುವುದರೊಂದಿಗೆ ಬಿರುಗಾಳಿಯು ಇಡಿ ವ್ಯವಸ್ಥೆಯೊಂದು ಬದಲಾವಣೆಗೆ ಒಳಪಡುತ್ತಿರುವುದಕ್ಕೆ, ಒಳಪಡುವುದಕ್ಕೆ ಸಾಂಕೇತಿಕವಾಗಿ ಬರುತ್ತದೆ. ಮೂರು ಹಗಲು ಮೂರು ರಾತ್ರಿಯ ಭಯಂಕರವಾದ ಬಿರುಗಾಳಿಯೊಂದಿಗೆ ಆರಂಭವಾದ ಕಥೆ ಮೌಖಿಕವಾಗಿ ಮುಕ್ತಾಯಗೊಂಡರೂ ಎಂದೂ ಮುಗಿಯದ ಕಥೆಯಾಗಿ ನಿರೂಪಿತವಾಗಿದೆ. ಕಿರುಗೂರಿನ ಸುರದ್ರೂಪಿ ಹೆಣ್ಣುಮಕ್ಕಳು ಮೌನಿಗಳಾದರೂ ಗಯ್ಯಾಳಿಗಳು. ಇವರಿಗೆ ತದ್ವಿರುದ್ಧ ಸ್ವಭಾವ ಗಂಡಸರು ಮಹಾಸೋಮಾರಿಗಳು. ಕೋಪಿಷ್ಠ ಸ್ವಭಾವದವರಾದ ಹೆಂಗಸರಿಗೆ ಕಿರುಗೂರಿನ ಗಂಡಸರಾದಿಯಾಗಿ ಎಲ್ಲರೂ ಹೆದರುತ್ತಾರೆ. ಗ್ರಾಮ ಸೇವಕ ಶಂಕರಪ್ಪ ಸಾಂದ್ರ ಬೇಸಾಯ ಪದ್ಧತಿಯನ್ನು ಪ್ರಯೋಗಿಸಲು ಹೋಗಿ ಆದ ಅವಾಂತರದಿಂದ ಕಿರುಗೂರಿನ ಐವರು ಪೋಲೀಸ್ ಸ್ಟೇಷನ್‌ನಲ್ಲಿ ನರಕ ದರ್ಶನ ಪಡೆದು ಬರುತ್ತಾರೆ. ಬಿರುಗಾಳಿಯಿಂದ ಒಂದು ಹೆಬ್ಬಲಸಿನ ಮರ

ಉರುಳಿ ಬಿದ್ದು ಅದನ್ನು ತೆಗೆಸಿ ಹಾಕಲು ಪಟ್ಟ ಶ್ರಮದ ಜೊತೆಗೆ ಕಿರುಗೂರಿನ ಗಂಡಸರ ನಡುವಿನ ವೈಷಮ್ಯಕ್ಕೆ ಕಾರಣವಾಗಿ ದಾನಮ್ಮನಿಂದ ಆ ವೈಷಮ್ಯಕ್ಕೆ ವಿರಾಮ ದೊರೆಯುತ್ತದೆ. ಕಾಳೇಗೌಡನ ಹೆಂಡತಿ ನಾಗಮ್ಮ ಗಂಡನಿಗೆ ಔಷಧಿ ನೀಡಲು ಬಂದಿದ್ದ ನಂಬೂದರಿ ಪಂಡಿತನೊಂದಿಗೆ ಓಡಿಹೋದದ್ದೇ ಕಾರಣವಾಗಿಸಿ ಪುರುಷ ಪ್ರಧಾನ ಸಮಾಜ ತಮ್ಮ ದೌರ್ಬಲ್ಯಗಳನ್ನು ಮುಚ್ಚಿಕೊಳ್ಳಲು ಪಂಚಾಯತಿ ಕರೆಯುತ್ತದೆ. ಪಂಚಾಯತಿಯಲ್ಲಿ ನಾಗಮ್ಮನ ಪ್ರಕರಣವನ್ನು ತಮ್ಮ ಹಿತಾಸಕ್ತಿಗೆ ಬಳಸಿಕೊಳ್ಳುವ ಪುರುಷರ ಚಿತಾವಣೆ ದಾನಮ್ಮನಿಗೆ ಕ್ರೂರವಾಗಿ ತೋರುತ್ತದೆ. ಅಲ್ಲದೆ ಅವರದೇ ರೀತಿಯಲ್ಲಿ ಬಿಸಿ ಮುಟ್ಟಿಸುವುದರ ಮೂಲಕ ಮಿತಿಮೀರುತ್ತಿರುವ ಪರಿಸ್ಥಿತಿಯನ್ನು ದಾನಮ್ಮ ಆತ್ಮಗೌರವದಿಂದ ಪ್ರತಿಭಟಿಸುತ್ತಾಳೆ. ಅವಳ ಈ ಹೋರಾಟದ ಪ್ರಕ್ರಿಯೆಯಿಂದ ಜಾಗೃತಗೊಳ್ಳುವ ಕಿರುಗೂರಿನ ಮಹಿಳೆಯರಲ್ಲಿ ತಮ್ಮ ಪರವಾಗಿ ತಾವೇ ಹೋರಾಡಬೇಕೆಂಬ ನಿರ್ಧಾರ ಗಟ್ಟಿಗೊಳ್ಳುತ್ತದೆ. ಇವರ ಹೋರಾಟದ ಪ್ರತೀಕವಾಗಿ ಸುತ್ತಮುತ್ತಲ ಹಳ್ಳಿಗಳಲ್ಲೂ ಸ್ಫೂರ್ತಿಯ ಕಿಡಿ ಹೊತ್ತಿಕೊಳ್ಳುತ್ತದೆ. ಕಿರುಗೂರಿನ ಗಯ್ಯಾಳಿಗಳು ಕಥೆ ಅಲ್ಲಿಗೆ ಮುಕ್ತಾಯಗೊಳ್ಳದೆ ಹರಿವ ಜೀವ ನದಿಯಂತೆ ಕ್ರಿಯಾಶೀಲತೆಯಿಂದ ಪ್ರವಹಿಸುತ್ತದೆ.

**ಕೃಷ್ಣೇಗೌಡನ ಆನೆ:** ಭಾರತೀಯ ಸಮಾಜದ ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ಹಾಗೂ ಅಧಿಕಾರಶಾಹಿ ವ್ಯವಸ್ಥೆಯ ಕರಾಳ ಸತ್ಯದ ಚಿತ್ರಣ ಈ ಕಥನದಲ್ಲಿದೆ. ಮೂಕ ಜೀವಿಯಾದ ಆನೆಯ ನೆಪದಲ್ಲಿ ಮೂಡಿಗೆರೆಯಲ್ಲಿ ನಡೆಯುವ ಎಲ್ಲಾ ದುರಂತ ಘಟನೆಗಳಿಗೆ ವಿಚಿತ್ರವಾದ ಸಂಬಂಧಗಳು ಬೆಳೆದು ನಿಗೂಢವಾಗಿ ಮನುಷ್ಯ ಮತ್ತು ಪರಿಸರದ ನಡುವಿನ ಸಂಘರ್ಷಕ್ಕೆ ಕಾರಣವಾಗುತ್ತದೆ. ಮೂಡಿಗೆರೆಯಲ್ಲಿ ನಡೆಯುವ ಎಲ್ಲಾ ಘಟನೆಗಳು ದುರಂತದಲ್ಲಿ ಕೊನೆಗೊಳ್ಳುತ್ತಿರುವುದಕ್ಕೆ ಪ್ರಮುಖ ಹೊಣೆಯಾಗಿ ಕೃಷ್ಣೇಗೌಡನ ಆನೆಯನ್ನು ಆರೋಪಿಸುವುದು ಮತ್ತು ಅದರ ವಿರುದ್ಧ ಪಿತೂರಿ ಮಾಡುವುದು ನಡೆಯುತ್ತದೆ. ಊರಿನ ಯಾವುದೇ ಅನಾಹುತಗಳಿಗೆ, ದುರಂತಗಳಿಗೆ, ಸಾವು-ನೋವುಗಳಿಗೆ, ಎಲ್ಲಾ ಅವ್ಯವಹಾರಿಗಳಿಗೂ, ಆನೆಯೇ ಕಾರಣವೆಂದು ಅದರ ಮೇಲೆ ಕ್ರಮ ತೆಗೆದುಕೊಳ್ಳಬೇಕೆಂದು ಫಾರೆಸ್ಟರ್ ನಾಗರಾಜನ ನೇತೃತ್ವದಲ್ಲಿ ತೀರ್ಮಾನವಾಗುತ್ತದೆ. ಆನೆಯನ್ನು ಕೊಲ್ಲಲು ಹೋದ ನಾಗರಾಜನ ಕಣ್ಮರೆ ಮನುಷ್ಯನಿಂದ ನಡೆಯುವ ಪಿತೂರಿ, ತಂತ್ರ, ಅವಗಡಗಳಿಗೆ ಆನೆಯೇ ಅಪರಾಧಿಯಂತೆ ಗೋಚರವಾಗುವುದು. ಸಾಮಾಜಿಕ ಪರಿಸ್ಥಿತಿಯ ದಾರುಣ ವ್ಯಂಗ್ಯವಾಗಿದೆ.

**ಮಾಯಾಮೃಗ:** ರಾಷ್ಟ್ರದ ಅತ್ಯುತ್ತಮ ಕಥೆಗಳಲ್ಲಿ ಒಂದು ಎಂದು ಪ್ರಶಸ್ತಿ ಪಡೆದ ಕಥೆ ಇದಾಗಿದ್ದು ದೆವ್ವದ ಅಸ್ತಿತ್ವ ಮತ್ತು ಸ್ವರೂಪವನ್ನು ಕುರಿತು ಸ್ವಾರಸ್ಯಕರವಾದ ಚರ್ಚೆಯೊಂದಿಗೆ ಆರಂಭಗೊಳ್ಳುತ್ತದೆ. ಸ್ಮಶಾನ ಮತ್ತು ಅದಕ್ಕೆ ಹತ್ತಿರದ ಮನೆಯಲ್ಲಿ ನಡೆಯುವ ಘಟನೆಗಳು ನಿಗೂಢವಾದ, ಸಂಶಯವಾದ, ವಸ್ತುವನ್ನು ಕೇಂದ್ರವಾಗಿಟ್ಟುಕೊಂಡು ಓದುಗನಿಗೆ ಕುತೂಹಲವನ್ನುಂಟುಮಾಡುತ್ತದೆ. ದೆವ್ವದ ಅಸ್ತಿತ್ವದ ಬಗ್ಗೆಯೇ ಸಂಶಯ ಮತ್ತು ಪ್ರಶ್ನೆಗಳು ಎದ್ದಾಗ ಅದನ್ನು ಪರಿಹರಿಸಲು ಅಂತೇ ಸಂಶಯ ನಿವಾರಣೆಗೆ ಗೆಳೆಯರಿಬ್ಬರೂ ಸ್ಮಶಾನದ ಹಾದಿ ಹಿಡಿಯುತ್ತಾರೆ. ಕುತೂಹಲ ಪ್ರಶ್ನೆಗೆ ಉತ್ತರ ಹುಡುಕುತ್ತ ಸ್ಮಶಾನಕ್ಕೆ ಹೋದಾಗ ಭೂತಾಕಾರ ತಳೆದಿದ್ದ ನಾಯಿ ಮರಿಯೊಂದು ಅವರಿಬ್ಬರನ್ನೂ ಬೆಸ್ತುಬೀಳುವಂತೆ ಮಾಡುತ್ತದೆ. ಅಲ್ಲಿಂದ ಹೊರ ಬರುವಾಗ ತಮ್ಮನ್ನು ಹಿಂಬಾಲಿಸುವ ನಾಯಿಮರಿಯೇ ಮಾಯಾಮೃಗವಾಗಿ ಕಾಡುತ್ತದೆ. ಅದರಿಂದ ಬೆನ್ನು ಬಿಡಿಸಿಕೊಳ್ಳುವ ಸಲುವಾಗಿ ಹತ್ತಿರದ ಮನೆಯ ಕಾಂಪೌಂಡಿನ ಒಳಗೆ ಹಾಕಿದ್ದು

ಆ ಮನೆಯ ಮಾಲಿಕನ ಸಾವಿಗೆ ಕಾರಣವಾಗಿಬಿಡುತ್ತದೆ. ಸುಮ್ಮನೆ ನಮ್ಮ ಮನಸ್ಸಿನೊಳಗೆ ಸಾವಿನ ಸಂಕೇತವಾಗಿ ಸ್ವೀಕೃತವಾದ ನಾಯಿ ಹೀಗೆ ಸಾವಿಗೆ ಕಾರಣವಾಗುತ್ತದೆ ಎನ್ನುವುದನ್ನು ತಾರ್ಕಿಕ ನೆಲೆಯಲ್ಲಿ ಕಾಣಿಸಲು ಹೊರಡುವ ಈ ಕಥೆ ಉಳಿದ ಕಥೆಗಳಿಗಿಂತ ಪ್ರತ್ಯೇಕವಾಗಿ ನಿಲ್ಲುತ್ತದೆ.

**ರಹಸ್ಯ ವಿಶ್ವ:** ಮನಸ್ಸಿನಾಳದಲ್ಲಿ ಹುದುಗಿರುವ ಭಯಗಳಿಗೂ ಅದರಂತೆ ನಡೆಯುವ ಕ್ರಿಯೆಗಳಿಗೂ ಇರುವ ಮನೋವೈಜ್ಞಾನಿಕ ಸಂಬಂಧಗಳನ್ನು ವಿಶ್ಲೇಷಿಸುವ ಕಥೆ **'ರಹಸ್ಯ ವಿಶ್ವ'**. ಬಾಲಕನೊಬ್ಬ ಸೈಕಲ್ ಕಲಿಯಲು ಹೋಗಿ ಹೆಂಗಸಿಗೆ ಢಿಕ್ಕಿ ಹೊಡೆದು ಪೇಚಿಗೆ ಸಿಕ್ಕಿಕೊಳ್ಳುವ ಸಾಮಾನ್ಯ ಸಮಸ್ಯೆಯಿಂದ ಆರಂಭವಾಗುವ ಕಥೆ ಸಂಭವ-ಅಸಂಭವದಿಂದ ತಾರ್ಕಿಕ ಅಸಮಾನ್ಯತೆಯ ಕಡೆಗೆ ಚಲಿಸುತ್ತದೆ. ಸಾಮಾನ್ಯ ಘಟನೆಗಳು ಮಾನವನ ಲೆಕ್ಕಾಚಾರಕ್ಕೂ ಸಿಕ್ಕದೆ, ಸಾಮಾನ್ಯ ತರ್ಕಕ್ಕೂ ನಿಲುಕದೆ ರಹಸ್ಯವಿಶ್ವವಾಗುತ್ತದೆ.

### ಕಾದಂಬರಿಗಳು

**ಕರ್ವಾಲೊ:** ೧೯೮೦ ರಲ್ಲಿ ಪ್ರಕಟವಾದ **ಈ** ಕಾದಂಬರಿ ಇಪ್ಪತ್ತಕ್ಕಿಂತ ಹೆಚ್ಚು ಮುದ್ರಣಗಳನ್ನು ಕಂಡು ತೇಜಸ್ವಿಯವರಿಗೆ ಹೆಚ್ಚಿನ ಜನಪ್ರಿಯತೆ ತಂದುಕೊಟ್ಟ ಕೃತಿ ವಿಜ್ಞಾನ ಮತ್ತು ಪ್ರಕೃತಿಯೆರಡರ ಅವಿನಾಭಾವ ಸಂಬಂಧವನ್ನು ತೆರೆದಿಡುವ ಹೊಸ ಪ್ರಯೋಗ ಈ ಕೃತಿಯದಾಗಿದೆ. ಹಿಂದಿನ ಕಥೆ-ಕಾದಂಬರಿಗಳಿಗಿಂತ ವಿನೂತನವಾಗಿ ವಿಶಿಷ್ಟ ಬಗೆಯ ಕಥಾನಕವನ್ನು ಹೊಂದಿರುವ ಈ ಕೃತಿಯಲ್ಲಿ ಜೀವವಿಜ್ಞಾನ, ಸಮಾಜ ವಿಜ್ಞಾನ, ಪ್ರಕೃತಿ ವಿಜ್ಞಾನ, ಮಾನವಶಾಸ್ತ್ರ ಎಲ್ಲವೂ ಸಮ್ಮಿಳಿತಗೊಂಡಿವೆ.

**ಚಿದಂಬರರಹಸ್ಯ:** ೧೯೮೫ರಲ್ಲಿ ಪ್ರಕಟವಾದ **ಈ** ಕಾದಂಬರಿ ರಾಜ್ಯಸಾಹಿತ್ಯ ಅಕಾಡೆಮಿ ಹಾಗೂ ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿಗಳನ್ನು ಪಡೆದುಕೊಂಡಿದೆ. ಪ್ರಸ್ತುತ ಕಾದಂಬರಿಯಲ್ಲಿ ಮನುಷ್ಯ ಮನುಷ್ಯರ ನಡುವಣ ಸಂಬಂಧಗಳು ಪರಸ್ಪರ ಭಾವನಾತ್ಮಕ ಸಂವೇದನೆಗಳಿಲ್ಲದೆಯೇ ನಿರ್ಮಾಣಗೊಂಡವು. ಕಾದಂಬರಿಯು ಪತ್ತೇದಾರಿ ಶೈಲಿಯಲ್ಲಿ ಸಂಭಾಷಣಾ ಕ್ರಿಯೆಯನ್ನು ಮುಂದುವರೆಸುತ್ತಾ ಕೆಸರೂರಿನ ವೈವಿಧ್ಯಮಯವಾದ ಬದುಕು ಮತ್ತು ಕೆಸರೂರಿನ ಸಂಸ್ಕೃತಿಯ ನಿಶ್ಚಿತ ಅವನತಿಯನ್ನು ಪ್ರತಿಯೊಂದು ಹಂತದಲ್ಲೂ ಚಿತ್ರಿಸುತ್ತದೆ. ಬದುಕಿನ ಸಂಕೀರ್ಣವಾದ ಸಮಸ್ಯೆಗಳನ್ನು ಒಳಗೊಂಡ ಕೆಸರೂರು ತನ್ನ ಕ್ಷುದ್ರತೆಗಳಿಂದಾಗಿ ಅವನತಿಯತ್ತ ಸರಿಯುತ್ತದೆ. ಕೆಸರೂರನ್ನು ಕೇಂದ್ರವಾಗಿರಿಸಿಕೊಂಡು ಸ್ವಲ್ಪವೇ ಕಾಲಾವಧಿಯಲ್ಲಿ ನಡೆಯುವ ಊರ ವಿದ್ಯಮಾನಗಳನ್ನು ಈ ಕಾದಂಬರಿ ವರ್ಣಿಸಿದರೂ ಆ ಊರಿನ ಹಿಂಸೆ, ಕ್ರೌರ್ಯ ಮತ್ತು ಸಾವು ಇಡೀ ವ್ಯವಸ್ಥೆಯನ್ನೇ ತಲ್ಲಣಗೊಳಿಸುತ್ತದೆ. ಪರಸ್ಪರರಲ್ಲಿ ಹುಟ್ಟುವ ವೈರತ್ವ-ದ್ವೇಷ-ಹಿಂಸೆ ದುರಂತದಲ್ಲಿ ಕೊನೆಗಾಣುತ್ತದೆ.

ಗೋಸಾಯಿಗಳು, ಸುಲೇಮಾನ್ ಬೇರಿ ಗುಂಪುಗಳು, ರಾಮಚಂದ್ರ ಮತ್ತವನ ಗುಂಪು, ಕೃಷ್ಣೇಗೌಡ ಮತ್ತು ಆತನ ಅನುಚರರು ಇವರೆಲ್ಲರ ಅನೈತಿಕ ವ್ಯವಹಾರಗಳು, ಕ್ಷುದ್ರ ರಾಜಕಾರಣ, ಜಾತಿಕಲಹ ಕೋಮುಗಲಭೆ, ಅಭಿವೃದ್ಧಿಯ ಹೆಸರಲ್ಲಿ ನಡೆಯುವ ಪರಿಸರ ನಾಶ ಎಲ್ಲವೂ ಕೆಸರೂರನ್ನು ಹಂತ ಹಂತವಾಗಿ ಅವನತಿಯತ್ತ ದೂಡುತ್ತದೆ. ಇದು ಕೆಸರೂರಿನ ಕಥೆ ಮಾತ್ರವಾಗದೆ ಇಡೀ ರಾಷ್ಟ್ರದ, ಗ್ರಾಮೀಣ ಪರಿಸರದ ಸಾಂಸ್ಕೃತಿಕ ಛಿದ್ರೀಕರಣದ ದೃಶ್ಯವನ್ನು

ನೈಜವಾಗಿ ಕಟ್ಟಿಕೊಡುತ್ತದೆ. ಕೆಸರೂರಿನ ಆರ್ಥಿಕತೆಗೆ, ಸಂಸ್ಕೃತಿಗೆ, ಏಲಕ್ಕಿಗೆ ಹತ್ತಿದ್ದ ರೋಗ ಉಲ್ಬಣಗೊಳುತ್ತದೆ. ಇಡೀ ಊರನ್ನು ಆವರಿಸಿಕೊಂಡಿದ್ದ ಲಂಟಾನದ ಜಿಗ್ಗಿನಂತೆಯೇ ತನ್ನ ಮಡಿಲಲ್ಲಿ ಹುದುಗಿಸಿಕೊಂಡಿದ್ದ ಜ್ವಲಂತ ಸಮಸ್ಯೆಗಳಿಂದ ಕೆಸರೂರು ಬೆಂಕಿಗಾಹುತಿಯಾಗುತ್ತದೆ. ಸಾಂಸ್ಕೃತಿಕ ಸಂಘರ್ಷದ ಕೆಸರೂರು ಅವನತಿಯನ್ನು ಕಂಡುಕೊಂಡರೂ ಪ್ರತಿಸಂಸ್ಕೃತಿಯ ಆಶಾಕಿರಣವನ್ನು ಬಿತ್ತಿ ಕೊನೆಗಾಣುತ್ತದೆ. ಸಮಕಾಲೀನ ಸ್ಥಿತಿಗತಿಗಳ ವೈಜ್ಞಾನಿಕ ಅರಿವಿನಿಂದ ಬದುಕನ್ನು ಕಾಣುವ ಕ್ರಿಯೆ ಸಾಗಬೇಕು ಎಂಬ ಆಶಯದೊಂದಿಗೆ ಕೆಸರೂರಿನ ಸಂಸ್ಕೃತಿ ಪತನಗೊಂಡರೂ ಮತ್ತೊಂದು ಸಂಸ್ಕೃತಿಯ ಉಗಮಕ್ಕೆ ನಾಂದಿಹಾಡುತ್ತದೆ.

**ಜುಗಾರಿ ಕ್ರಾಸ್:** ೧೯೯೪ರಲ್ಲಿ ಪುಸ್ತಕ ರೂಪದಲ್ಲಿ ಪ್ರಕಟವಾದ ಕಾದಂಬರಿ. ಭೂಗತ ಜಗತ್ತಿನ ಭಯ ತಲ್ಲಣಗಳೊಂದಿಗೆ ಮುಗ್ಧ ಜನರ ಬದುಕು ಸೇರ್ಪಡೆಗೊಂಡು ಮನುಷ್ಯ ಇಡೀ ಬದುಕು ಯಾವುದೋ ಕಾಣದ ಕೈಯೊಳಗಿನ ಸೂತ್ರದ ಬೊಂಬೆಯಂತೆ ಆಡುತ್ತಿರುವುದರ ರೂಪಕವನ್ನು ಈ ಕಾದಂಬರಿ ಜೂಜುಕೋರರು, ಕಳ್ಳಸಾಗಾಣಿಕೆದಾರರು, ಭೂಗತ ಜಗತ್ತಿನ ದರೋಡೆಕೋರರು, ಗಾಂಜಾ ಮತ್ತು ಮಾದಕ ದ್ರವ್ಯ ಸಾಗಾಣಿಕೆದಾರ ಗುಪ್ತಜಾಲ, ಅರಣ್ಯಸಂಪತ್ತಿನ ಲೂಟಿ, ಅದರ ಬೆನ್ನಿಗಿರುವ ರಾಜಕೀಯ ಚಟುವಟಿಕೆ ಎಲ್ಲವೂ ಭಯಾನಕ ವಾಸ್ತವವನ್ನು ತೆರೆದಿಡುತ್ತದೆ.

ಏಲಕ್ಕಿ ಮಾರಲು ಹೊರಟ ಸುರೇಶ ಗೌರಿಯರನ್ನು ಭೂಗತ ಜಗತ್ತಿನ ಕಾಳದಂಧೆ ಹಿಡಿ ಹಿಡಿಯಾಗಿ ಸುತ್ತಿಕೊಳ್ಳುವ ತಂತ್ರವನ್ನು ಕಾದಂಬರಿಯಲ್ಲಿ ವಿಶಿಷ್ಟವಾಗಿ ಹೆಣೆಯಲಾಗಿದೆ. ಮತ್ತು ಕಾದಂಬರಿಯ ಅನುಭವಗಳು, ಪಾತ್ರಗಳು, ಸನ್ನಿವೇಶಗಳು, ಘಟನೆಗಳು ಮತ್ತು ಇತರ ವಿವರಗಳು ಹೆಚ್ಚು ದಟ್ಟವಾಗಿಯೂ ವಿಸ್ತಾರವಾಗಿಯೂ ಸಮೃದ್ಧಗೊಂಡಿವೆ. ಜುಗಾರಿ ಕ್ರಾಸ್‌ನಲ್ಲಿ ನಡೆಯುವ ಸನ್ನಿವೇಶದ ಸಹಜ ಒತ್ತಡಗಳಿಗೆ ಒಳಗಾಗಿ ಕಾಳದಂಧೆಯ ಚಕ್ರವ್ಯೂಹದೊಳಗೆ ಸಿಲುಕಿ ಹೋಗುವ ಸುರೇಶ ಗೌರಿಯರು ಅದರಿಂದ ಹೊರಬರುವ ಸಂದರ್ಭವೇ ಈ ಕಥೆಯ ವಸ್ತು. ಎರಡೇ ದಿನಗಳಲ್ಲಿ ನಡೆದುಹೋಗುವ ಘಟನೆಗಳು ಬೇರೆಯ ಲೋಕಕ್ಕೆ ಕೊಡೊಯ್ಯುತ್ತದೆ.

**ಮಾಯಾಲೋಕ:** ೨೦೦೬ ರಲ್ಲಿ ಪ್ರಕಟಗೊಂಡ ಈ ಕಾದಂಬರಿಯು ತೇಜಸ್ವಿಯವರ ಕೊನೆಯ ಕಾದಂಬರಿ. ಮಲೆನಾಡಿನ ರೈತಾಪೀ ವರ್ಗದ ಬವಣೆಗಳನ್ನು, ದಿನನಿತ್ಯದ ಜಂಜಾಟಗಳನ್ನು ಮನುಷ್ಯ ಜೀವನಕ್ರಮದೊಳಗೆ ಕಟ್ಟಿಕೊಡುವ ಕಾದಂಬರಿ. ಸುತ್ತಲ ಜಗತ್ತಿನ ಸೂಕ್ಷ್ಮನೋಟದೊಂದಿಗೆ ವ್ಯಕ್ತಿಗಳ ವಿಶಿಷ್ಟ ಚಹರೆಗಳು ಮತ್ತು ಜೀವಸಂಕುಲಗಳ ಹೋರಾಟದ ಬದುಕು ಕಥನ ರೂಪದಲ್ಲಿ ಸಂಯೋಜನೆಗೊಂಡಿದೆ. ಈ ಕಾದಂಬರಿಯ ವಿಶಿಷ್ಟತೆಯೆಂದರೆ ಕರ್ವಾಲೋದಲ್ಲಿರುವಂತೆ ತೇಜಸ್ವಿಯವರೇ ಸ್ವತಃ ನಿರೂಪಕರಾಗಿ ಮಲೆನಾಡಿನ ಗೊಂದಲಗೇರಿ, ಮಕ್ಕಿಗದ್ದೆ, ಹೀಗೆ ಸುತ್ತ ಮುತ್ತ ನಡೆಯುವ ಜೀವನ ನಾಟಕದ ವಿಸ್ಮಯಕರ ಅಂಶಗಳನ್ನು ವೀಕ್ಷಿಸುತ್ತಾ, ಭಾಗವಹಿಸುತ್ತಾ, ಮೌನವಾಗಿ ಪ್ರತಿಕ್ರಿಯಿಸುತ್ತಾ ಸಾಗುತ್ತಾರೆ. ಅಣ್ಣಪ್ಪಣ್ಣನ ನೇತೃತ್ವದಲ್ಲಿ ನೀರಿನ ವಿಷಯಕ್ಕಾಗಿ ನಡೆಯುವ ಊರಳ್ಳಿ ಮಕ್ಕಿಗದ್ದೆಯ ನಡುವಣ ಕುಸ್ತಿ ಮತ್ತು ಇಕ್ಬಾಲ್ ಸಾಬಿ ಹಾಗೂ ಅಣ್ಣಪ್ಪಣ್ಣನ ಮಾರಾಮಾರಿ. ರೈತ ಸಂಘದ ಹೋರಾಟ, ಕರಾಟೆ ಮಂಜನ ಅವಾಂತರಗಳು, ನೀರಿನ ಸಮಸ್ಯೆ, ವಿದ್ಯುತ್ ಸಮಸ್ಯೆ, ಪತ್ರಿಕೆಯ ಅವಾಂತರ, ಬರಗಾಲದಲ್ಲಿ ಎದರಾಗುವ ಕುಡಿಯುವ ನೀರಿನ ಸಮಸ್ಯೆ, ಆಡಳಿತ ಸಮಸ್ಯೆ, ರೈತರ ಕಾಫಿ ಹಾಗೂ ಏಲಕ್ಕಿ ಬೆಳೆಯ ದುರಂತ, ಜಾನ್ ಬೆಟ್ಟಯ್ಯನ ಮತಾಂತರ, ಮಲೆನಾಡಿನ ಕೃಷಿ ಸಂಬಂಧಿತ ವಿವರಣೆ,

ಹುಂಡುಕೋಳಿಯ ಜೀವನಕ್ರಮ, ಹಂದಿಬೇಟೆಯ ಪ್ರಸಂಗಗಳು, ಮಳೆ ಬರುವ ದೃಶ್ಯದ ವರ್ಣನೆ, ಅಣ್ಣಪ್ಪಣ್ಣನ ಏಡಿಶಿಕಾರಿ ಹೀಗೆ ಕ್ಷುದ್ರ ಎನಿಸುವ ವಿವರಗಳ ಮೂಲಕವೇ ಮಲೆನಾಡಿನ ಮನುಷ್ಯ ಬದುಕಿನ ಕ್ರಮವನ್ನು ಅವನ ಹೋರಾಟವನ್ನು, ನಿತ್ಯ ಬದುಕಿನ ಕಥನವನ್ನು ಸೂಕ್ಷ್ಮಾತಿಸೂಕ್ಷ್ಮವಾಗಿ ಕಟ್ಟಿಕೊಡುವ ಪ್ರಯೋಗ ಮಾಯಾಲೋಕದ ಪ್ರಧಾನ ಅಂಶವಾಗಿದೆ.

**ಕಾಡು ಮತ್ತು ಕ್ರೌರ್ಯ:** ೨೦೧೨ ರಲ್ಲಿ ಪ್ರಕಟಗೊಂಡ ಈ ಕಾದಂಬರಿಯು ತೇಜಸ್ವಿಯವರ ಮೊದಲ ಕಾದಂಬರಿ. ತಮ್ಮ ಎಂ.ಎ ವಿದ್ಯಾಭ್ಯಾಸದ ನಂತರ ರಚನೆಯಾಗಿದ್ದು ಪ್ರಕಟಣೆ ತಡವಾಗಿದೆ. ಇಲ್ಲಿ ಪ್ರಕೃತಿ ಮತ್ತು ಮನುಷ್ಯ ಸಂಬಂಧಗಳ ಅನ್ವೇಷಣೆ ಪ್ರಮುಖವಾಗುತ್ತದೆ. ವರ್ತಮಾದಲ್ಲಿ ನಿಂತು ಭೂತದ ಪ್ರತಿಕ್ರಿಯೆಗಳೊಂದಿಗೆ ಸಂಘರ್ಷಕ್ಕಿಳಿಯುವ ಮನಸ್ಸು ಬದುಕಿನ ಆಳವಾದ ವಿಶ್ಲೇಷಣೆಗೆ ತೊಡಗುತ್ತದೆ. 'ಈ ಕಾದಂಬರಿಯಲ್ಲಿ ಅಂತರ್ಗಾಮಿಯಾಗಿ ಹೆಣದುಕೊಂಡಿರುವ ಒಂದು ವಿಷಯ ಎಂದರೆ ವ್ಯಕ್ತಿತ್ವದಲ್ಲಿ ಉಂಟಾಗುವ ಛಿದ್ರತೆಗಳು ಹಾಗೂ ಅದರ ವಿರುದ್ಧದ ಘರ್ಷಣೆ.' ಅಮೂರ್ತವಾದ ಸಾಮಾಜಿಕ ಆವರಣದ ಹಿಡಿತದಿಂದ ಹೊರಬರುವ, ಸ್ವಾತಂತ್ರ್ಯವನ್ನು ವಿಶಿಷ್ಟತೆಯ ಸಾಧನೆಗೆ ಬಳಸಿಕೊಳ್ಳಬೇಕೆಂಬ ಆಶಯ ಪ್ರಧಾನವಾಗಿದೆ.

**ಕವನಸಂಕಲನ**

**ಬೃಹನ್ನಳೆ ಸೋಮುವಿನ ಸ್ವಗತ ಲಹರಿ:** ೧೯೬೨ ರಲ್ಲಿ ಪ್ರಕಟವಾದ ಏಕಮಾತ್ರ ಕವನಸಂಕಲನ. ಈ ಸಂಕಲನದಲ್ಲಿ ಒಟ್ಟು ಹದಿನಾರು ಕವನಗಳಿವೆ. ನಾಲ್ಕು ಭಾಗಗಳಲ್ಲಿರುವ ದೀರ್ಘವಾದ ಕವನ ಸಂಕಲನದ ಮೊದಲನೆಯ ಕವನ 'ಭೂವನಿತೆಗೆ'. ಸಂಕಲನದಲ್ಲಿರುವ ಇನ್ನಿತರ ಕವನಗಳು ಪಾಠ ಶಾಲೆ, ಬಚ್ಚಲು ಜಗತ್ತು, ಇಲ್ಲದ ನಮ್ಮ ಪುನರ್ಜನ್ಮಕ್ಕೆ, ಪೋಲೀಸ್ ಮತ್ತು ಪಾನವಿರೋಧ, ಬೇಲಿ ಎದ್ದು ಹೊಲ ಮೇದಂತೆ, ಪದದ ಪದವಿ, ಅನುಮಾತೀರದಲ್ಲಿ, ಟಾರು ಮಾರ್ಗ ಮತ್ತು ಪ್ರಣಯ ಕವಿತೆ, ಅಂತ್ಯಗಾನ, ಕನ್ನಡಿಗರು, ವಿಶ್ವಮೇಧ, ಕವನದ ಹುಟ್ಟು, ಅರೋರಾ. ಈ ಕವನಗಳು ತೇಜಸ್ವಿಯವರ ವೈವಿಧ್ಯಮಯ ಭಾವನೆ ಆಲೋಚನೆಗಳನ್ನು ವ್ಯಕ್ತಪಡಿಸುತ್ತವೆ.

**ವೈಚಾರಿಕ ಬರಹ**

**ವ್ಯಕ್ತಿ ವಿಶಿಷ್ಟ ಸಿದ್ಧಾಂತ:** ತೇಜಸ್ವಿಯವರ ಈ ವೈಚಾರಿಕ ಬರಹಗಳ ಸಂಕಲನವು ೧೯೬೪ರಲ್ಲಿಯೇ ಪ್ರಕಟವಾಗಿದೆ. ವ್ಯಕ್ತಿ ವಿಶಿಷ್ಟ ಸಿದ್ಧಾಂತ, ವ್ಯಕ್ತಿ ವಿಶಿಷ್ಟವಾದಿ ವಿವಾಹ ಮತ್ತು ಅಲಕ್ಷ್ಯ ಮತ್ತು ಸಂಸ್ಕೃತಿ ಸ್ಥಿತಿ–ಎನ್ನುವ ಮೂರು ಲೇಖನಗಳನ್ನು ಇದು ಒಳಗೊಂಡಿದೆ. ಇದರ ನಂತರ ತೇಜಸ್ವಿಯವರು ತಾತ್ವಿಕ ಚಿಂತನೆಯ ಮಾತು ಸೈದ್ಧಾಂತಿಕ ಚರ್ಚೆಯ ಮೋಹಕ್ಕೆ ಬೀಳುವುದಿಲ್ಲ. ವಾಸ್ತವತಾವಾದಿಯಾಗಿ ಸೃಜನಶೀಲ ಬರವಣಿಗೆಯನ್ನು ಮಾಡುತ್ತ, ಪರಿಸರದ ಚರಿತ್ರೆಯಲ್ಲಿ ಕುತೂಹಲವನ್ನು ಬೆಳೆಸಿಕೊಳ್ಳುತ್ತ 'ತನಗೆ ಕಂಡು ಬರುವ ಪ್ರಪಂಚವೇ ತನ್ನ ತಾತ್ವಿಕ ನಿಲುವಿನ ಅಭಿವ್ಯಕ್ತಿ' ಎನ್ನುವಂತೆ ಇದ್ದುಬಿಟ್ಟರು.

## ನಾಟಕ

**ಯಮಳ ಪ್ರಶ್ನೆ:** ತೇಜಸ್ವಿಯವರ ಏಕಮಾತ್ರ ನಾಟಕ. ನವ್ಯಕಾವ್ಯ ತುಂಬ ಜೋರಾಗಿದ್ದ ಕಾಲದಲ್ಲಿ ಅಂದರೆ ೧೯೬೪ ರಲ್ಲಿ ಇದು ಪ್ರಕಟವಾಯಿತು. ಆಗ ಉದಯೋನ್ಮುಖ ವಿಮರ್ಶಕರೆಂದು ಗುರುತಿಸಲ್ಪಟ್ಟಿದ್ದ ಜಿ.ಎಚ್. ನಾಯಕರು ಇದಕ್ಕೆ ಮುನ್ನುಡಿ ಬರೆದರು. ಈ ನಾಟಕದ ವಸ್ತು ಬದುಕಿನ ಅಸಾಂಗತ್ಯ, ಬದುಕು ಬೋಳು ಬೋಳಾಗಿ ಪೋಲಾಗಿ ಹೋಗುವುದನ್ನು ನಿರೂಪಿಸುತ್ತದೆ. ಇಬ್ಬರು ಯುವಕರು ಅರ್ಥಹೀನ ಕೆಲಸ ಮಾಡುತ್ತ ವ್ಯರ್ಥ ಮಾತುಗಳಲ್ಲಿ ದಿನ ನೂಕುವುದು ಈ ನಾಟಕದಲ್ಲಿದೆ. ಇತ್ಯಾತ್ಮಕ ದೈನಂದಿನ ಕೆಲಸಗಳಲ್ಲಿ ಮುಳುಗಿದ ಮನುಷ್ಯನನ್ನು ಮೇಲೆತ್ತಿ ಸಂದಿಗ್ಧತೆಯ ಕುರಿತು ಚಿಂತಿತನಾಗುವಂತೆ ಮಾಡುವ ಸಲುವಾಗಿ ಈ ನಾಟಕದಲ್ಲಿ 'ಸತ್ತವರು ಯಾರು?' 'ಬದುಕಿರುವವರು ಯಾರು' ಎನ್ನುವಂಥ ತಾತ್ವಿಕ ಪ್ರಶ್ನೆಗಳು ಆವರ್ತನೆಗೊಳ್ಳುತ್ತವೆ. ಇದೇ, ನಾಟಕದಲ್ಲಿ ಯಮಳ ಪ್ರಶ್ನೆ ಅಥವಾ ಜೋಡಿ ಪ್ರಶ್ನೆ, ಆರಂಭದಿಂದ ಕೊನೆಯವರೆಗೂ ಉಳಿದುಕೊಳ್ಳುವ ಸಂದಿಗ್ಧತೆಗೆ ತೇಜಸ್ವಿ ಇಲ್ಲಿ ತಾತ್ವಿಕ ಅಸ್ತಿತ್ವವನ್ನು ತಂದುಕೊಡುತ್ತಾರೆ.

## ಪರಿಸರ ಮತ್ತು ವೈಜ್ಞಾನಿಕ ಕಥಾಸಂಕಲನಗಳು

**ಅಲೆಮಾರಿಯ ಅಂಡಮಾನ್ ಹಾಗೂ ಮಹಾನದಿ ನೈಲ್:** ಈ ಪುಸ್ತಕ ೧೯೯೦ ರಲ್ಲಿ ಪ್ರಕಟವಾಯಿತು. ಇದರಲ್ಲಿ 'ಅಲೆಮಾರಿಯ ಅಂಡಮಾನ್, ಶುದ್ಧ ಪ್ರವಾಸ ಸಾಹಿತ್ಯ ಪ್ರಕಾರಕ್ಕೆ ಸೇರುತ್ತದೆಯಾದರೂ ಇದರಲ್ಲಿಯೇ ಸೇರ್ಪಡೆಗೊಂಡ 'ಮಹಾನದಿ ನೈಲ್' ಒಂದು ಅಧ್ಯಯನ ಪ್ರಬಂಧ. 'ಮಹಾನದಿ ನೈಲ್' ನೈಲ್ ನದಿಯ ಶೋಧಕ್ಕಾಗಿ ಅದರ ನೆಲೆಯ ಅನ್ವೇಷಣೆಗಾಗಿ ಆಫ್ರಿಕೆಯಲ್ಲಿ ಅನೇಕ ಸಾಹಸಿ ಪ್ರವಾಸಿಗರು ಕೈಗೊಂಡ ಪ್ರವಾಸಗಳ ಸಾಹಸದ ಕತೆ.

ಅಂಡಮಾನ್ ದ್ವೀಪಗಳಿಗೆ ತೇಜಸ್ವಿ ಕೆಲವು ಗೆಳೆಯರ ಜೊತೆಗೆ ಪ್ರವಾಸಕ್ಕೆ ಹೋಗಿದ್ದರ ಅನುಭವ 'ಅಲೆಮಾರಿಯ ಅಂಡಮಾನ್'ದಲ್ಲಿದೆ. ಅಂಡಮಾನ್ ಹಲವು ಅದ್ಭುತಗಳ ವಿಚಿತ್ರ ದ್ವೀಪ ಸಮೂಹ. ಆದರೆ ತೇಜಸ್ವಿ ಆ ಅದ್ಭುತಗಳನ್ನು ಮಾತ್ರ ಇಲ್ಲಿ ದಾಖಲಿಸುತ್ತಾರೆ ಎಂದೇನೂ ಅಲ್ಲ. ತೇಜಸ್ವಿಯವರಲ್ಲಿ ಅಂಡಮಾನದ ಮಡಿಲಿನಲ್ಲಿರುವಾಗ ಸುಳಿದು ಹೋಗುವ ರಾಜಕೀಯ ಚಿಂತನೆಗಳು ಹಾಗೂ ತಾತ್ವಿಕ ಆಲೋಚನೆಗಳು ಇದರಲ್ಲಿ ಪ್ರಾಸಂಗಿಕವಾಗಿ ಕಾಣಿಸಿಕೊಳ್ಳುತ್ತವೆ.

'ಮಹಾನದಿ ನೈಲ್': ನೈಲ್ ನದಿಯ ಕತೆ ಎನ್ನುವುದು ಹೆಸರಿನಲ್ಲಿಯೇ ಸ್ಪಷ್ಟವಾಗುತ್ತದೆ. ಇದನ್ನು ಒಂದು ವ್ಯವಸ್ಥಿತವಾದ ಅಧ್ಯಯನಪೂರ್ಣ ಪ್ರಬಂಧ ಎಂದು ಕರೆಯಬೇಕಾಗುತ್ತದೆಯಾದರೂ ಇದನ್ನು ಪ್ರವಾಸ ಸಾಹಿತ್ಯವೆಂದೇ ಪರಿಗಣಿಸಲಾಗುತ್ತದೆ. ಏಕೆಂದರೆ ಆಫ್ರಿಕಾ ಖಂಡದಲ್ಲಿ ನೈಲ್ ನದಿಯ ಗುಂಟ ಅದರ ಮೂಲ ಸೆಲೆಯನ್ನು ಹುಡುಕಾಡುತ್ತ ಹಲವಾರು ಜನ ಪ್ರವಾಸ ಮಾಡಿದ್ದು, ತಮ್ಮ ಸಾಹಸದಲ್ಲಿ ಪ್ರಾಣ ಕಳೆದುಕೊಂಡವರು ಚರಿತ್ರೆಯಲ್ಲಿ ಸೇರಿಹೋಗಿದ್ದಾರೆ. ನೈಲ್ ನದಿಯ ದಂಡೆಯ ಮೇಲೆ ಈಜಿಪ್ತಿನ ನಾಗರಿಕತೆ ವಿಕಾಸಗೊಂಡಿದೆ. ಆಫ್ರಿಕಾ ಖಂಡದ ರಹಸ್ಯಗಳನ್ನು ಅನ್ವೇಷಣೆ ಮಾಡಿದ ಹಾಗೂ ಅದರಲ್ಲಿಯೇ ಕೊನೆಯುಸಿರೆಳೆದ ಡಾ.ಡೇವಿಡ್ ಲಿವಿಂಗ್ ಸ್ಟೋನ್ ಅವರ ಅನುಭವಗಳನ್ನು, ನೈಲ್ ನದಿಯ ಉಗಮಸ್ಥಾನವನ್ನು ಶೋಧಿಸಿದ ಸಾಹಸಿ ಅಮೆರಿಕನ್ ಪತ್ರಕರ್ತ ಸ್ಟಾನ್ಲಿಯನ್ನು ಕುರಿತು ವಿವರಗಳನ್ನು ತೇಜಸ್ವಿ ಇದರಲ್ಲಿ ನೀಡಿದ್ದಾರೆ.

**ಪರಿಸರ ಕಥೆ:** ಪ್ರತಿಯೊಂದು ಜೀವಿಗಳಲ್ಲೂ ಚೈತನ್ಯ ಶಕ್ತಿ ಅಡಗಿರುತ್ತದೆ. ಮಾನವೀಯ ಘಟನೆಗಳ ಹಿನ್ನೆಲೆಯಲ್ಲಿ ಜೀವಿಗಳ ಪಾತ್ರ ಮಹತ್ತರವಾದದ್ದು. ಹಾಗಿದ್ದೂ ಅವುಗಳನ್ನು ಸೂಕ್ಷ್ಮವಾಗಿ ಗಮನಿಸುವ ಅಥವಾ ವಿಶ್ಲೇಷಿಸುವ ಕಾರ್ಯದಲ್ಲಿ ಮನುಷ್ಯ ಅಪರಿಚಿತನಂತೆ ಉಳಿದುಬಿಟ್ಟಿದ್ದಾನೆ ಎನ್ನುವ ವಿಷಾದ **ಪರಿಸರದ ಕಥೆ**ಯಲ್ಲಿ ವ್ಯಕ್ತವಾಗುತ್ತದೆ. ಮಾನವರು, ಆಧುನಿಕ ವಿದ್ಯಾಭ್ಯಾಸದಿಂದ ರೂಪಿತಗೊಂಡ ಮಾನವರ ಬೌದ್ಧಿಕತೆಯು ಪರಂಪರಾಗತವಾದ ದೇಸಿಯ ನಂಬಿಕೆಗಳೊಡನೆ ಸಮರಕ್ಕಿಳಿದು ಹೊಸ ದರ್ಶನವನ್ನು ಪಡೆಯಬೇಕಾದ ಮಹತ್ವವನ್ನು ಇಲ್ಲಿನ ಕಥೆಗಳು ತಿಳಿಸುತ್ತವೆ.

**ಕಿರಿಯರಿಗಾಗಿ ಪರಿಸರ:** ಈ ಪುಸ್ತಕ ಕೂಡ ೧೯೯೧ರಲ್ಲಿಯೇ ಪ್ರಕಟವಾಯಿತು. ಪರಿಸರದ ಬರಹಗಾರರೆಂದು ಪ್ರಖ್ಯಾತರಾದ ನಾಗೇಶ ಹೆಗಡೆ ಮತ್ತು ಪಿ.ಎಸ್. ವಿವೇಕಾನಂದ ಅವರ ಸಹಯೋಗದಲ್ಲಿ ಇದನ್ನು ತೇಜಸ್ವಿ ಬರೆದಿದ್ದಾರೆ. ಇದು ಮಕ್ಕಳ ಸಲುವಾಗಿಯೇ ಬರೆದಿರುವ ಪುಸ್ತಕ.

**ಸಹಜ ಕೃಷಿ:** ಜಗತ್ತಿನಾದ್ಯಂತ ಇಂದು 'ಸಹಜ ಕೃಷಿ' ಎಂದು ಹೆಸರು ಪಡೆದಿರುವ ಕೃಷಿ ಪದ್ಧತಿಯನ್ನು ಜಪಾನಿನಲ್ಲಿ ಯಶಸ್ವಿಯಾಗಿ ಪ್ರಯೊಗ ಮಾಡಿರುವ ಕೃಷಿಕ ಮಸಾನೊಬು ಫುಕೋಕನ ಪ್ರಯೋಗ ಮತ್ತು ಫಲಿತಾಂಶಗಳನ್ನು ತೇಜಸ್ವಿ 'ಸಹಜ ಕೃಷಿ' ಒಂದು ಪರಿಚಯ'ದಲ್ಲಿ ಲೇಖನ ರೂಪದಲ್ಲಿ ಬರೆದಿದ್ದಾರೆ. ಮೊದಲನೆಯ ಬಾರಿಗೆ ೧೯೯೧ರಲ್ಲಿ ಮುದ್ರಣಗೊಂಡಿದೆ. ಮಸಾನೊಬು ಫುಕೋಕಾನ ಕೃಷಿ ಪದ್ಧತಿ 'ಕೇವಲ ಬೆಳೆ ತೆಗೆಯುವ ಒಂದು ಪದ್ಧತಿಯಲ್ಲದೆ ಒಂದು ಜೀವನಮಾರ್ಗವನ್ನೆ ಬೋಧಿಸುವ ತತ್ವ ಚಿಂತನೆ' ಎಂದು ತೇಜಸ್ವಿ ಗುರುತಿಸುತ್ತಾರೆ. ಕೃಷಿ ಭೂಮಿಯನ್ನು ಉಳದೆ, ರಾಸಾಯನಿಕ ಗೊಬ್ಬರಗಳನ್ನು ಗದ್ದೆಗೆ ಬೀರದೆ, ಶತ್ರುವಿನೋಪಾದಿಯಲ್ಲಿ ಕಳೆ ತೆಗೆದು ಎಸೆಯದೆ, ಕ್ರಿಮಿನಾಶಕಗಳನ್ನು ದೂರವೇ ಇಟ್ಟು, ಬೀಜಬಿತ್ತಿ ಫಸಲು ತೆಗೆಯುವುದು ಫುಕೋಕಾನ ಕೃಷಿ ಪದ್ಧತಿಯ ಪ್ರಧಾನ ಲಕ್ಷಣ, ಆಧುನಿಕ ಕೃಷಿ ಪದ್ಧತಿಯಿಂದ ಆರ್ಥಿಕವಾಗಿ ಹಾಗೂ ಅನಗತ್ಯವಾಗಿ ಸೋತು ಬಸವಳಿದ ಭಾರತೀಯ ರೈತನಿಗೆ ಫುಕೋಕಾ ಕೃಷಿ ಪದ್ಧತಿ ಒಂದು ಉತ್ತಮವಾದ ಮಾರ್ಗದರ್ಶಿ.

**ಮಿಸ್ಸಿಂಗ್ ಲಿಂಕ್:** ಮಾನವಶಾಸ್ತ್ರದ ಕ್ಷೇತ್ರಕ್ಕೆ ಸಂಬಂಧಿಸಿದ ಈ ಪುಸ್ತಕವನ್ನು ತೇಜಸ್ವಿ, ೧೯೯೩ ರಲ್ಲಿ ಬರೆದು ಪ್ರಕಟಿಸಿದರು. ಈ ಪುಸ್ತಕ ಅನೇಕ ಬಾರಿ ಮರು ಮುದ್ರಣಗೊಂಡಿದೆ. ಇದಕ್ಕೆ ೧೯೯೪ ರಲ್ಲಿ ಡಾ.ಶಿವರಾಮ ಕಾರಂತ ಪ್ರಶಸ್ತಿ ಸಿಕ್ಕಿದೆ. ಎಲ್ಲ ಪ್ರಾಣಿಗಳಂತೆ ಮನುಷ್ಯ ಕೂಡ ನಾಲ್ಕು ಕಾಲಿನ ಪ್ರಾಣಿಯಾಗಿದ್ದವನು. ಹೇಗೆ ಮತ್ತು ಎಂದಿನಿಂದ ಎರಡು ಕಾಲುಗಳ ಮೇಲೆ ನಿಲ್ಲುವ, ನಡೆಯಬಲ್ಲ, ಮನುಷ್ಯನಾದ ಎನ್ನುವ ಜೀವವಿಕಾಸದ ರೋಮಾಂಚಕ ಕತೆಯನ್ನು ತೇಜಸ್ವಿ ಈ ಪುಸ್ತಕದಲ್ಲಿ ಪತ್ತೇದಾರಿ ತಂತ್ರವನ್ನು ಬಳಸಿ ಹೇಳುತ್ತಾರೆ. ಈ ಪುಸ್ತಕದಿಂದ ತೇಜಸ್ವಿಯವರ ಸೃಜನಶೀಲತೆಯ ಮತ್ತೊಂದು ಆಯಾಮದ ಪರಿಚಯವಾಗುತ್ತದೆ. ವಿಜ್ಞಾನಿ ಚಾರ್ಲ್ಸ್ ಡಾರ್ವಿನ್ ನಿರಂತರವಾದ ಸಂಶೋಧನೆ, ಅಧ್ಯಯನ ಮತ್ತು ಸಾಕ್ಷ್ಯಾಧಾರಗಳ ಬಲದಿಂದ ವಿಕಾಸವಾದದ ನವಸಿದ್ಧಾಂತವನ್ನು ಮಂಡಿಸಿದ ಹಾಗೂ 'ಜೀವಸಂಕುಲಗಳ ಉಗಮ' ಎಂಬ ಮಹಾಗ್ರಂಥವನ್ನು ಬರೆದ ನಂತರ ಅನಿರೀಕ್ಷಿತವಾಗಿ ನಮಗೆ ವಂಶಾವಳಿ ಮತ್ತು ನಮ್ಮ ಪ್ರಾಚೀನತೆಯ ಕುರಿತು ಇರುವ ತಿಳಿವಳಿಕೆ ತಲೆಕೆಳಗಾಯಿತು. ಡಾರ್ವಿನ್ ಮಂಡಿಸಿದ ಹೊಸವಾದದ ಆಧಾರದ ಮೇಲೆ ತೇಜಸ್ವಿ ಮನುಷ್ಯನ ಮಿಸ್ಸಿಂಗ್ ಲಿಂಕ್ ಹುಡುಕುವ,

ಸತ್ಯಾನ್ವೇಷಣೆಯ, ಪತ್ತೇದಾರಿ ಕತೆಗಳನ್ನು ಇದರಲ್ಲಿ ಬರೆದಿದ್ದಾರೆ. ಈ ಪುಸ್ತಕದಲ್ಲಿ ಒಟ್ಟು ಹದಿನೆಂಟು ಕತೆಗಳಿವೆ.

**ಏರೋಪ್ಲೇನ್ ಚಿಟ್ಟೆ ಮತ್ತು ಇತರ ಕತೆಗಳು:** ೧೯೯೩ರಲ್ಲಿ ಪ್ರಕಟವಾದ ಈ ಪುಸ್ತಕದ ಕುರಿತು ಇದರ ಪ್ರಕಾಶಕರು 'ಮಕ್ಕಳ ಮನಶ್ಶಕ್ತಿಯನ್ನು ಕ್ರಾಂತಿಕಾರಕವಾಗಿ ಬದಲಾವಣೆ ಮಾಡುವಂಥ ಅಪೂರ್ವ ಕೃತಿ' ಎಂದು ಹೇಳುತ್ತಾರೆ. ಇದಕ್ಕೆ ಸಮರ್ಥನೆಯೂ ಇದೆ. ಇಂದಿನ ಅಧುನಿಕ ಜೀವನ ವಿಧಾನ ಮತ್ತು ಧಾವಂತದ ದೈನಂದಿನ ಚಟುವಟಿಕೆಗಳು ಮನುಷ್ಯನನ್ನು ಅವನ ಪರಿಸರದಿಂದ ಪ್ರತ್ಯೇಕಿಸಿ ಬಿಡುತ್ತವೆ. ವಿಶೇಷವಾಗಿ ನಮ್ಮ ಮುಗ್ಧ ಎಳೆಯರು ಈ ಪ್ರತ್ಯೇಕತೆಗೆ ಬಲಿಯಾಗುವವರಲ್ಲಿ ಮೊದಲನೆಯವರು. ಅವರಿಗೆ ನಮ್ಮ ಸುತ್ತಲಿನ ಜೀವ ಜಗತ್ತಿನ ಬಗ್ಗೆ ದೃಷ್ಟಿ ಹರಿಸಲು ಸಮಯವೆ ಇರುವುದಿಲ್ಲ. ಅವುಗಳ ಕುರಿತು ಕುತೂಹಲವೂ ಹುಟ್ಟುವುದಿಲ್ಲ. ಇದನ್ನೆಲ್ಲ ಗಮನದಲ್ಲಿರಿಸಿಕೊಂಡು ತೇಜಸ್ವಿ ಈ ಕಥಾರೂಪದ ಲೇಖನಗಳನ್ನು ಬರೆದಿದ್ದಾರೆ. ಇವುಗಳಲ್ಲೊಂದಾದ 'ಒಂದು ಝುರಿಯ ಕಾಡಿನಲ್ಲಿ' ಅಪೂರ್ವ ಕಥಾಲೇಖನ, ಒಂಟಿ ಹುಳು, ಏರೋಪ್ಲೇನ್ ಚಿಟ್ಟೆ, ಬಾವಲಿಗಳ ಅತೀಂದ್ರಿಯ ವಿಸ್ಮಯ, ಸರ್ಪದೃಷ್ಟಿ, ಚೇಂಕ್ರ ಮೇಸ್ತ್ರಿ ಮತ್ತು ಅರಿಸ್ಟಾಟಲ್, ಹಾವು ಮೀನು, ಅಕ್ಕಮ್ಮ ಹೇಳಿದ ಕಥೆ, ಹಲ್ಲಿಯ ಪ್ರಾಣ ಬಾಲದಲ್ಲಿ, ನಾವು ಕೊಂದ ಹಕ್ಕಿ ಮೊದಲಾದ ವೈಜ್ಞಾನಿಕ ಕುತೂಹಲದ ಕತೆಗಳು ಈ ಸಂಕಲನದಲ್ಲಿವೆ.

**ಕಾಡಿನ ಕಥೆಗಳು** ಎನ್ನುವ ಹೆಸರಿನಲ್ಲಿ ಪ್ರಸಿದ್ಧ ಬೇಟೆಗಾರ ಕೆನೆತ್ ಆ್ಯಂಡರ್‌ಸನ್ ಅವರ ಬೇಟೆಯ ಅನುಭವಗಳನ್ನು, ತೇಜಸ್ವಿ ಸಂಗ್ರಹವಾಗಿ ರೂಪಾಂತರಿಸಿಕೊಟ್ಟಿದ್ದಾರೆ. 'ಕಾಡಿನ ಕಥೆಗಳು' ಭಾಗ-೧ ಮತ್ತು ಭಾಗ-೨ ಇವೆರಡೂ ೧೯೯೨ರಲ್ಲಿ ಪ್ರಕಟವಾದವು. ಪೆದ್ದಚೆರುವಿನ ರಾಕ್ಷಸ (ಕಾಡಿನ ಕಥೆಗಳು ಭಾಗ ೨) **ಕಾಡಿನ ಕಥೆಗಳು ಭಾಗ-೧:** ಪ್ರಸಿದ್ಧ ಬೇಟೆಗಾರ ಕೆನೆತ್ ಆ್ಯಂಡರ್‌ಸನ್ ಅವರ ಬೇಟೆಯ ಅನುಭವಗಳನ್ನು ಸಂಗ್ರಹವಾಗಿ ಗ್ರಹಿಸಿ ಮಾಡಿದ ರೂಪಾಂತರ. ಇದರಲ್ಲಿ ನಾಲ್ಕು ಅಧ್ಯಾಯಗಳಿವೆ. ನಾಲ್ಕು ಅಧ್ಯಾಯಗಳಿಂದ ಒಟ್ಟೂ ಹತ್ತು ಕತೆಗಳಿವೆ. ಬೆಳ್ಳಂದೂರಿನ ನರಭಕ್ಷಕ, ಷೇರ್‌ಖಾನ್, ವೈನಾಡಿನ ನರಭಕ್ಷಕ ಮೊದಲಾದ ಉಪಶೀರ್ಷಿಕೆಗಳನ್ನು ಈ ಅಧ್ಯಾಯಗಳಿಗೆ ಕೊಡಲಾಗಿದೆ.

**ಕಾಡಿನ ಕಥೆಗಳು ಭಾಗ-೨:** ಇದು ಸಹ ಕೆನೆತ್ ಆ್ಯಂಡರ್‌ಸನ್‌ರ ಬೇಟೆಯ ಅನುಭವಗಳ ಸಾರ ಕಥನ, ಈ ಭಾಗಕ್ಕೆ ೧೯೯೪ರ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ಬಂದಿದೆ. ಇದರಲ್ಲಿ ಒಟ್ಟು ಒಂಬತ್ತು ಕತೆಗಳಿದ್ದು ಅವು ಮೂರು ಶೀರ್ಷಿಕೆಗಳಲ್ಲಿ ಹಂಚಿ ಹೋಗಿವೆ. ಪೆದ್ದು ಚೆರುವಿನ ರಾಕ್ಷಸ, ತಾಳವಾಡಿಯ ಮೂಕ ರಾಕ್ಷಸ ಮತ್ತು ಲಕ್ಕವಳ್ಳಿಯ ಹೆಬ್ಬುಲಿ ಇವು ಇಲ್ಲಿಯ ಶೀರ್ಷಿಕೆಗಳು.

**ಕಾಡಿನ ಕಥೆಗಳು ಭಾಗ-೩:** ಇದು ಸಹ ಯುರೋಪಿನ ಬೇಟೆಗಾರ ಕೆನೆತ್ ಆ್ಯಂಡರ್‌ಸನ್‌ರ ಬೇಟೆಯ ಅನುಭವದ ಮೃಗಯಾ ಸಾಹಿತ್ಯದ ಸಾರಸಂಗ್ರಹವಾಗಿದೆ. ಈ ಭಾಗ ೧೯೯೪ರಲ್ಲಿ ಪ್ರಕಟವಾಯಿತು, ಇದರಲ್ಲಿ 'ಮಂಚಿಹಳ್ಳಿಯ ಮುಗ್ಧರು', 'ಭಯಾನಕ ಮಮ್ಮಟಿವಾಯನ್' ಹಾಗು 'ಜಾಲಹಳ್ಳಿಯ ಕುರ್ಕ' ಮೊದಲಾದ ಒಂಭತ್ತು ಕಥೆಗಳಿವೆ.

**ಕಾಡಿನ ಕಥೆಗಳು ಭಾಗ-೪:** ಇದು ೧೯೯೮ರಲ್ಲಿ ಪ್ರಕಟವಾಗಿದೆ. 'ಮುನಿಶಾಮಿ ಮತ್ತು ಮಾಗಡಿ ಚಿರತೆ' ಎನ್ನುವ ಹೆಸರಿನಲ್ಲಿ ಈ ಭಾಗವನ್ನು ತೇಜಸ್ವಿ ಅನುವಾದಿಸಿದ್ದಾರೆ. ಇದು ಕೂಡ ಕೆನೆತ್ ಆ್ಯಂಡರ್‌ಸನ್ ಅವರ ಶಿಕಾರಿಯ ಅನುಭವಗಳ ಭಾವಾನುವಾದ.

**ರುದ್ರಪ್ರಯಾಗದ ಭಯಂಕರ ನರಭಕ್ಷಕ:** ಈ ಪುಸ್ತಕ ೧೯೯೫ ರಲ್ಲಿ ಪ್ರಕಟವಾಯಿತು. ಜಿಮ್ ಕಾರ್ಬೆಟ್ ಮತ್ತು ಕೆನೆತ್ ಆ್ಯಂಡರ್‌ಸನ್ ಇಬ್ಬರೂ ಭಾರತದಲ್ಲಿ ನರಭಕ್ಷಕ ಪ್ರಾಣಿಗಳನ್ನು ಬೇಟೆಯಾಡಿ ಜನರಿಗೆ ನೆಮ್ಮದಿಯನ್ನು ತಂದುಕೊಟ್ಟ ಯುರೋಪಿಯನ್ ಸಾಹಸಪ್ರಿಯರು. ಇವರಲ್ಲಿ ಜಿಮ್ ಕಾರ್ಬೆಟ್ ರುದ್ರಪ್ರಯಾಗದಲ್ಲಿ ನೂರಾರು ಜನರನ್ನು ಹತ್ಯೆಮಾಡಿ ಭಕ್ಷಿಸಿದ ನರಭಕ್ಷಕ ಚಿರತೆಯನ್ನು ಬೇಟೆಯಾಡಿ ಇಡೀ ದೇಶದಲ್ಲಿ ಹೆಸರುವಾಸಿಯಾದ. ಅವನು ಬರೆದ ಆ ಚಿರತೆಯ ಅನುಭವವಿರುವ ಮೃಗಯಾ ಸಾಹಿತ್ಯವನ್ನು ತೇಜಸ್ವಿ ಕನ್ನಡದಲ್ಲಿ ರೂಪಾಂತರಿಸಿಕೊಟ್ಟಿದ್ದಾರೆ. ಜಿಮ್ ಕಾರ್ಬೆಟ್ 'ಒಚಿಟ ಜಚಿಣಜಡಿ ಠಜ ಏಣಟಚಿಠಟ......'ಮೊದಲಾದ ಇನ್ನು ಹಲವು ಪುಸ್ತಕಗಳನ್ನು ಬರೆದಿದ್ದು, ಕನ್ನಡದಲ್ಲಿ ಅವುಗಳ ಬೇರೆ ಬೇರೆ ಅನುವಾದಗಳು ಬಂದಿವೆ. ಅದರೆ ಜಿಮ್ ಕಾರ್ಬೆಟ್ ಭಾಷೆಯ ಮಾನವೀಯತೆಯ ಸ್ಪರ್ಶ, ಬೇಟೆಗಾರಿಕೆಯ ಸಂಯಮದ ಅಭಿವ್ಯಕ್ತಿ ಮುಂತಾದವನ್ನು ತೇಜಸ್ವಿಯವರಷ್ಟು ಮುಕ್ಕಾಗದಂತೆ ಅನುವಾದಿಸಿದವರು ಯಾರೂ ಇಲ್ಲ.

**ಫ್ಲೈಯಿಂಗ್ ಸಾಸರ್ಸ್ ಭಾಗ ೧ ಮತ್ತು ೨:** ೧೯೯೩ರಲ್ಲಿ ಇದನ್ನು ಪುಸ್ತಕರೂಪದಲ್ಲಿ ಪ್ರಕಟಿಸುವ ಮೊದಲು ತೇಜಸ್ವಿ 'ಲಂಕೇಶ್ ಪತ್ರಿಕೆ'ಯಲ್ಲಿ ಸರಣಿ ಅಂಕಣವಾಗಿ ಬರೆದರು. ಫ್ಲೈಯಿಂಗ್ ಸಾಸರ್ಸ್ ಅಂದರೆ ಹಾರಾಡುವ ತಟ್ಟೆಗಳು. ಬುದ್ಧಿಬಲದಿಂದ ವೈಜ್ಞಾನಿಕವಾಗಿ ಬಹಳ ಮುನ್ನಡೆ ಸಾಧಿಸಿರುವ ೨೦ನೆಯ ಶತಮಾನದಲ್ಲಿ ಹಾರುವ ತಟ್ಟೆಗಳ ರಹಸ್ಯವನ್ನು ಕಂಡುಹಿಡಿಯಲು ಹಲವಾರು ಬಾರಿ ಹಲವಾರು ರೀತಿಯಲ್ಲಿ ಪ್ರಯತ್ನಿಸಲಾಗಿದೆ. ಇದಕ್ಕೆ ಆ ಆ ಕಾಲಗಳಲ್ಲಿ ಚಿತ್ರ-ವಿಚಿತ್ರವಾದ ಪ್ರತಿಕ್ರಿಯೆಗಳನ್ನು ಜಗತ್ತಿನಾದ್ಯಂತ ತೋರಿಸಲಾಗಿದೆ. ಇಂತಹ ಹಲವಾರು ಘಟನೆಗಳನ್ನು ಚಿತ್ರಸಹಿತ ವಿವರಿಸುವ ಪ್ರಯತ್ನ ಫ್ಲೈಯಿಂಗ್ ಸಾಸರಿನ ಈ ಎರಡೂ ಸಂಪುಟಗಳಲ್ಲಿದೆ. ಎರಡನೆಯ ಭಾಗದ ವಿಶೇಷತೆಯಿಂದರೆ ಹಾರುವ ತಟ್ಟೆಯೊಡನೆ ನೇರ ಸಂಪರ್ಕಕ್ಕೆ ಬಂದಿದ್ದ ದಂಪತಿಗಳು ಸಮಯದ ಪ್ರಜ್ಞೆಯನ್ನು ಕಳೆದುಕೊಂಡ ಅನುಭವದ ದಾಖಲೆಯಿದೆ ಮತ್ತು ಹಾರುವ ತಟ್ಟೆಯಲ್ಲಿ ಬಂದ ಪರಲೋಕದ ಜೀವಿಯೊಡನೆ ಸನ್ನೆಗಳ ಮೂಲಕ ಸಂಭಾಷಣೆ ನಡೆಸಿದ ವ್ಯಕ್ತಿಯೊಬ್ಬನ ಅನುಭವಗಳನ್ನು ವಿವರವಾಗಿ ಕೊಡಲಾಗಿದೆ.

**ವಿಸ್ಮಯ ಭಾಗ-೧ ೨ ಮತ್ತು ೩:** ಈ ಪುಸ್ತಕದ ಮೊದಲನೆಯ ಮತ್ತು ಎರಡನೆಯ ಭಾಗಗಳು ೧೯೯೩ರಲ್ಲಿಯೂ ಮೂರನೆಯ ಭಾಗವು ೧೯೯೪ರಲ್ಲಿಯೂ ಪ್ರಕಟವಾಗಿದೆ. ಮೂರೂ ಭಾಗಗಳನ್ನು ಸಚಿತ್ರ ಪ್ರಕಟಿಸಲಾಗಿದೆ. ಕನ್ನಡದಲ್ಲಿ ಇದೊಂದು ಅದ್ವಿತೀಯ ಪ್ರಯೋಗ. ಇದನ್ನು ರಾಜ್ಯ ಸಾಹಿತ್ಯ ಅಕಾಡೆಮಿಯು ವಿಜ್ಞಾನ ಸಾಹಿತ್ಯದ ವಿಶಿಷ್ಟ ಕೃತಿಯೆಂದು ಗುರುತಿಸಿ ೧೯೯೪-೯೫ನೇಯ ಸಾಲಿನ ಪುಸ್ತಕ ಬಹುಮಾನವನ್ನು ಇದಕ್ಕೆ ನೀಡಿದೆ. ಈ ಸಂಪುಟಗಳ ಪ್ರಕಾಶಕರು ಇದನ್ನು ಇಕಾಲಜಿ ಸಂಬಂಧದ ಲೇಖನ ಮಾಲೆ ಎಂದು ಸುಲಭವಾಗಿ ಪರಿಚಯಿಸುತ್ತಾರೆ ಆದರೂ ವಾಸ್ತವವಾಗಿ ಇದೊಂದು ಪುಟ್ಟ ಸಚಿತ್ರ ವಿಶ್ವಕೋಶ.

'ವಿಸ್ಮಯ'ದ ಎರಡನೆಯ ಭಾಗದಲ್ಲಿ, ಮನುಷ್ಯ ನಿರ್ಮಿಸಿಕೊಂಡ ನಾಗರಿಕತೆ, ಕೈಗಾರಿಕೀಕರಣ, ತಂತ್ರಜ್ಞಾನ ಮುಂತಾದವುಗಳ ಹಿನ್ನೆಲೆಯಲ್ಲಿ ಪರಿಸರದ ವಿಚಾರಗಳನ್ನು ಹೇಳಲಾಗಿದೆ. ಇದೇ ಭಾಗದಲ್ಲಿ 'ಪರಿಸರ ಹಾಗೂ ಜನಸಂಖ್ಯೆ' ಎಂಬ ಸ್ವಾರಸ್ಯಪೂರ್ಣವಾದ ಚರ್ಚೆಯೂ ಇದೆ. ಆಫ್ರಿಕಾದ ಭೀಕರ ಕ್ಷಾಮದ ಕತೆ, ಆಸುಪಾಸಿನ ಜೀವಿಗಳನ್ನು ನಿರ್ನಾಮ ಮಾಡಿದ ಪೆಡಂಭೂತ, ಭೋಪಾಲ್ ಅನಿಲ ದುರಂತ, ಕೊಲ್ಲಿ ಯುದ್ಧದಿಂದ ಆದ ಪರಿಸರನಾಶ, ಒಂದು ಹಡಗು ದುರಂತ, ಇಂತಹ ಚಾರಿತ್ರಿಕ ಸಂಗತಿಗಳ ಮೇಲೆ ವಿಮರ್ಶಾತ್ಮಕ ಬರವಣಿಗೆಗಳೂ ಇದರಲ್ಲಿವೆ.

'ವಿಸ್ಮಯ'ಭಾಗ ಮೂರರಲ್ಲಿ ಹಲವಾರು ಆಸಕ್ತಿ ಹುಟ್ಟಿಸುವ ಕತೆಗಳ ಮೂಲಕ ಮನುಷ್ಯನು ಪರಿಸರವನ್ನು, ಪರಿಸರವು ಮನುಷ್ಯನನ್ನು ರಕ್ಷಣೆ ಮಾಡಿದ ಸೋಜಿಗಗಳನ್ನು ವಿವರಿಸಲಾಗಿದೆ. ಜೊತೆಗೆ ಹಲವು ಸಮಸ್ಯೆಗಳಿಗೆ ಉತ್ತರವನ್ನು ಹುಡುಕಲು ಯತ್ನಿಸಲಾಗಿದೆ.

**ಅಣ್ಣನ ನೆನಪು:** ಪೂರ್ಣಚಂದ್ರ ತೇಜಸ್ವಿಯವರು ತಮ್ಮ ತಂದೆ ಕುವೆಂಪು ಅವರನ್ನು ಕೇಂದ್ರವಾಗಿರಿಸಿಕೊಂಡು ದಾಖಲಿಸಿರುವ ನೆನಪುಗಳ ಸಂಗ್ರಹ. ೧೯೯೬ ರಲ್ಲಿ ಪ್ರಕಟಗೊಂಡು ನಲವೊತ್ತೊಂದು ಅಧ್ಯಾಯಗಳನ್ನು ಒಳಗೊಂಡಿರುವ ಈ ಕೃತಿ ಕುವೆಂಪುವಿನಂತಹ ಮೇರುವ್ಯಕ್ತಿತ್ವವನ್ನು ಅರ್ಥಮಾಡಿಕೊಂಡಿರುವ ಪರಿಯನ್ನು ಸೊಗಸಾಗಿ ಚಿತ್ರಿಸುತ್ತದೆ. ಕುವೆಂಪು ಏನು? ಎನ್ನುವ ಪ್ರಶ್ನೆಯನ್ನು ಇಟ್ಟುಕೊಂಡು ದಶಕಗಳ ಒಡನಾಟದಲ್ಲಿ ತನಗೆ ಹೇಗೆ ಅರ್ಥವಾದರು ಎಂಬುದನ್ನು ಉಲ್ಲೇಖಿಸುವ ತೇಜಸ್ವಿಯವರು ತಂದೆಯ ವ್ಯಕ್ತಿತ್ವದ ಆತ್ಮೀಯ ಮುಖಗಳನ್ನು, ವೈವಿಧ್ಯಪೂರ್ಣವಾದ ಅಂಶಗಳನ್ನು ಅನಾವರಣ ಮಾಡಿದ್ದಾರೆ. ಅಣ್ಣನ ನೆನಪು ಕುವೆಂಪು ಜೀವನ ಚರಿತ್ರೆಯೇ, ತೇಜಸ್ವಿಯವರ ಆತ್ಮ ಚರಿತ್ರೆಯೋ ಎಂಬ ಅನುಮಾನವನ್ನು ಮೂಡಿಸುತ್ತದೆಯಾದರೂ ಇದರಲ್ಲಿನ ಗಂಭೀರ ವಿಚಾರಗಳು ತಂದೆ ಮತ್ತು ಮಗ ಇಬ್ಬರ ಧವಲ ಚಾರಿತ್ರ್ಯಕ್ಕೆ ನಿದರ್ಶನವಾಗಿದೆ.

**ಮಿಲನಿಯಂ ಪುಸ್ತಕ ಸರಣಿ:** ತೇಜಸ್ವಿಯವರ ಮಿಲಿನಿಯಂ ಪುಸ್ತಕ ಸರಣಿಯನ್ನು ಕನ್ನಡದಲ್ಲಿ ಅದ್ಭುತವಾದ ಒಂದು ಬರವಣಿಗೆಯ ಸಾಹಸ ಎಂದು ವರ್ಣಿಸಿದರೆ ಏನೇನೂ ಸಾಲದು. ೧೯೯೯ರ ಡಿಸೆಂಬರ್ ತಿಂಗಳಲ್ಲಿ ಮುಕ್ತಾಯಗೊಂಡ ಈ ಸರಣಿ ಪುಸ್ತಕಗಳ ಬರಣಿಗೆಯನ್ನು ತೇಜಸ್ವಿ ಹದಿನಾರು ತಿಂಗಳ ಅವಧಿಯಲ್ಲಿ ಮುಗಿಸಿದ್ದಾರೆ. ಎರಡನೆಯ ಸಹಸ್ರಮಾನದ ಅಂತ್ಯದಲ್ಲಿ ನಿಂತು ಇಪ್ಪತ್ತನೆಯ ಶತಮಾನದಲ್ಲಿ ಆಗಿಹೋದ ವಿದ್ಯಮಾನಗಳ ವೀಕ್ಷಣೆ ಮಾಡುತ್ತಿದ್ದ ತೇಜಸ್ವಿಯವರಿಗೆ ಆ ವಿದ್ಯಮಾನದ ಬೇರುಗಳು ಇಡೀ ಸಹಸ್ರಮಾನದ ತುಂಬ ಇಳಿದುಹೋಗಿರುವುದು ಗೋಚರಿಸುತ್ತದೆ. ಅವುಗಳ ಜಾಡಿನಲ್ಲಿ ಯೋಚಿಸುತ್ತ, ನೋಡುತ್ತ ಹೊರಟ ಅವರು ತಾನು ಎದುರಾದ ಅದ್ಭುತಗಳನ್ನೆಲ್ಲ ತಿಂಗಳಿಗೆ ನೂರು ಪುಟಗಳ ಒಂದು ಪುಸ್ತಕದಂತೆ ಹದಿನಾರು ಪುಸ್ತಕಗಳ ಸರಣಿಯನ್ನಾಗಿ ಬರೆದು ಪ್ರಕಟಿಸಿದ್ದಾರೆ. ಪ್ರತಿಯೊಂದು ಮಿಲಿನಿಯಂ ಸರಣಿಯ ಪುಸ್ತಕಕ್ಕೂ ಒಂದು ಪ್ರತ್ಯೇಕ ಶೀರ್ಷಿಕೆಯನ್ನು ಕೊಡಲಾಗಿದೆ. ಹುಡುಕಾಟ, ಜೀವನಸಂಗ್ರಾಮ, ಪೆಸಿಫಿಕ್ ದ್ವೀಪಗಳು, ಚಂದ್ರನ ಚೂರು, ನೆರೆಹೊರೆಯ ಗೆಳೆಯರು, ಮಹಾಯುದ್ಧ ಭಾಗ ೧, ೨ ಮತ್ತು ೩ ದೇಶವಿದೇಶ ಭಾಗಗಳು ೧ ರಿಂದ ೪, ವಿಸ್ಮಯ ವಿಶ್ವ – ೧ ಮಹಾಪಲಾಯನ, ವಿಸ್ಮಯ ವಿಶ್ವ ೨ ಮತ್ತು ಅಡ್ವೆಂಚರ್ ಹೀಗೆ ಹದಿನಾರು ಸರಣಿ

ಸಂಪುಟಗಳಲ್ಲಿ ವಿಜ್ಞಾನ, ದ್ವೀಪ, ನಾಗರಿಕತೆಯ ನಾಶಕ್ಕೆ ಕಾರಣವಾದ ಭಯಂಕರ ಕಾಯಿಲೆ, ರಕ್ತಕ್ರಾಂತಿಗಳು, ಭೀಕರ ಕ್ಷಾಮಗಳು, ಕೊಲೆಗಡುಕ ಜೇನುಗಳು, ಅನೇಕ ಸಾಹಸಯಾತ್ರೆಗಳು, ಅಂತರಿಕ್ಷಯಾನ ಮೊದಲಾದ ವಿಸ್ಮಯಕಾರಿ ಸಂಗತಿಗಳನ್ನು ವಿವರವಾಗಿ ತೇಜಸ್ವಿ ನಿರೂಪಿಸುತ್ತಾರೆ. ಆದರೆ ಲೇಖಕರಾಗಿ ಅವರು ಯಾವ ಸಂಪುಟಕ್ಕೂ ಪ್ರಸ್ತಾವನೆಯನ್ನಾಗಲಿ, ಔಪಚಾರಿಕ ಮಾತುಗಳನ್ನಾಗಲೀ ಬರೆಯದೆ ಪುಸ್ತಕಗಳನ್ನು ನೇರವಾಗಿ ಓದುಗರಿಗೆ ತಲುಪಿಸಿದ್ದಾರೆ. ಹದಿನಾರನೆಯ ಸಂಪುಟಕ್ಕೆ ಮಾತ್ರ ಮೊದಲ ಮಾತನ್ನಾಗಿ 'ದಾಟುವ ಮುನ್ನ' ಬರೆದಿದ್ದಾರೆ.

**ಪ್ಯಾಪಿಲಾನ್: ಇದು ಸಂಗ್ರಹಾನುವಾದ**. ಇಪ್ಪತ್ತನೆಯ ಶತಮಾನದ ಅತಿಶ್ರೇಷ್ಠ ಮಹಾಪಲಾಯನದ ಕೃತಿ ಎಂದು ಹೆಸರು ಪಡೆದ ಇದನ್ನು ಬರೆದವರು ಹೆನ್ರಿ ಛಾಸರೆ. ಸ್ವಾತಂತ್ರ್ಯಕ್ಕಾಗಿ ಮನುಷ್ಯನೊಬ್ಬ ನಡೆಸಿದ ತೀವ್ರ ಹೋರಾಟದ ಸತ್ಯಕಥೆ ೨೦೦೪ರಲ್ಲಿ ಪ್ರಕಟನೆಗೊಂಡಿದೆ.

**ಲೋಹಿಯಾ:** ರಾಮಮನೋಹರ ಲೋಹಿಯಾ ಅವರ ಸಾಮಾಜಿಕ ಹಾಗು ರಾಜಕೀಯ ಚಿಂತನೆಗಳನ್ನು ಇದರಲ್ಲಿ ತೇಜಸ್ವಿಯವರು ಪ್ರೊ.ಎಂ.ಡಿ.ನಂಜುಂಡಸ್ವಾಮಿಯವರ ಸಹಯೋಗದೊಡನೆ ಕನ್ನಡಕ್ಕೆ ಯಥಾವತ್ತಾಗಿ ಅನುವಾದಿಸಿದ್ದಾರೆ.

## ೨.೨ ಪೂರ್ಣಚಂದ್ರತೇಜಸ್ವಿ ಮತ್ತು ಸಮಕಾಲೀನ ಲೇಖಕರು

ಸ್ವಾತಂತ್ರ್ಯಪೂರ್ವ ಮತ್ತು ಸ್ವಾತಂತ್ರ್ಯೋತ್ತರ ಎರಡರ ನಡುವಿನ ಕಾಲಾವಧಿಯಲ್ಲಿ ಆದ ಸಾಮಾಜಿಕ ಬದಲಾವಣೆಗಳು ಇದ್ದ ಸ್ಥಿತಿಗಿಂತ ಬೇರೆಯದೆ ಆದ ಮೌಲ್ಯಗಳನ್ನು ಸೃಷ್ಟಿಸಿದವು. ಸ್ವಾತಂತ್ರ್ಯದಿಂದ ದೊರೆತ ಬಿಡುಗಡೆ ದೇಸಿಗೊಂಡು ವೈಯಕ್ತಿಕವಾಗಿ, ಸಾಮಾಜಿಕವಾಗಿ ದ್ವಂದ್ವಕ್ಕೆ ಈಡುಮಾಡಿದ್ದು ಹೊಸ ಮಾರ್ಗಾನ್ವೇಷಣೆಗೆ ಕಾರಣವಾಯಿತು. ಅನ್ವೇಷಣೆಗೆ ಅನುಕೂಲಕರವಾಗಿ ಪಾಶ್ಚಿಮಾತ್ಯ ಜಗತ್ತು ಮತ್ತು ಸಾಹಿತ್ಯ ಹೊಸ ಮಾರ್ಗವನ್ನು ಸೃಷ್ಟಿಸಿದವು. ವೈಯಕ್ತಿಕವಾಗಿ, ಸಾಮಾಜಿಕವಾಗಿ ಘರ್ಷಣೆಗೆ ಒಳಗಾದ ಹಲವಾರು ತರುಣರನ್ನು ವಸಾಹತು ಶಿಕ್ಷಣದಿಂದ ದೊರೆತ ತಾತ್ವಿಕತೆ ಮತ್ತು ಚಿಂತನೆಗಳು ತಮ್ಮ ಮಾರ್ಗವನ್ನು ಅನುಸರಿಸುವಂತೆ ಪ್ರೇರೇಪಿಸಿದವು. ಇದರ ಪ್ರಭಾವದಿಂದಾಗಿ ಇದುವರೆಗೂ ಭಾವನಾತ್ಮಕವಾಗಿ ಮಾನವೀಯ ಸ್ತರಗಳಲ್ಲಿ ಶೋಧನೆಗೆ ಒಳಪಡುತಿದ್ದುದನ್ನು ಸಾಮಾಜಿಕ-ಸಾಂಸ್ಕೃತಿಕ ಜಿಜ್ಞಾಸೆಗೆ ಒಳಪಡಿಸಿ ಹೊಸದರ್ಶನವನ್ನು ಕಾಣುವ-ಕಾಣಿಸುವ ಆವೇಶ ಹುಟ್ಟುಕೊಂಡಿತು. ಸ್ವಾತಂತ್ರ್ಯಾನಂತರದ ಆದರ್ಶ-ನಂಬಿಕೆಗಳು ಸಾಂಸ್ಕೃತಿಕವಾಗಿ ಕೇಂದ್ರೀಕರಣ ಗೊಳ್ಳುವುದರ ಬದಲು ನಿಷ್ಕ್ರಿಯವಾಗಿ ಭ್ರಮನಿರಸನವನ್ನು ಉಂಟುಮಾಡಿದ್ದು ಮತ್ತು ಸ್ವೀಕೃತಗೊಂಡಿದ್ದ ಮೌಲ್ಯಗಳು-ಅಪಮೌಲ್ಯೀಕರಣಗೊಂಡದ್ದು ಈ ಆವೇಶವನ್ನು ಬಲಗೊಳಿಸಿತು.

ಸ್ವಾತಂತ್ರ್ಯಪೂರ್ವದ ರಾಷ್ಟ್ರೀಯ ಆಂದೋಲನಗಳು, ಸಿದ್ಧಾಂತಗಳು, ಸೃಷ್ಟಿಸಿದ್ದ ವಿಚಾರಧಾರೆಗಳು ಕ್ರಮೇಣ ಅಸಂಗತಗಳಾಗಿ ಕಂಡುಬಂದದ್ದು ತರುಣರನ್ನು ರೊಚ್ಚಿಗೆಬ್ಬಿಸಿದವು. ಗಾಂಧಿತತ್ವಗಳ ಅವಗಣನೆ, ಪರಂಪರೆ, ಆಧುನಿಕತೆ, ಜಾತೀಯತೆ, ಹಿಂಸೆ-ಕ್ರೌರ್ಯ ಹೀಗೆ ಹತ್ತು ಹಲವಾರು ಸಮಸ್ಯೆಗಳಿಂದ ಸಾಮಾಜಿಕ ವಾತಾವರಣ ಹದಗೆಟ್ಟಿದ್ದು ಸಂವೇದನಾಶೀಲವಾಗಿ ತೆರೆದುಕೊಳ್ಳುವುದಕ್ಕೆ ಅವಕಾಶ ಕಲ್ಪಿಸಿಕೊಟ್ಟಿತ್ತು. ಇಂತಹ ಕ್ರಿಯಾಶೀಲತೆಗಳು ಸಾಹಿತ್ಯಿಕವಾಗಿ, ಸಾಮಾಜಿಕವಾಗಿ ಹೊಸ ಹಾದಿಯನ್ನು ಸೃಷ್ಟಿಸಲು ಕಾರಣವಾಗಿ ಅಸ್ತಿತ್ವವಾದ ಮತ್ತು ವಾಸ್ತವವಾದದ ಹಿನ್ನೆಲೆಯಲ್ಲಿ ಇವರ ವೈಚಾರಿಕ ಚಿಂತನೆಗಳು ಅಭಿವ್ಯಕ್ತಗೊಳ್ಳಲು ಕಾರಣವಾಯಿತು. ಎಪ್ಪತ್ತರ ದಶಕದಲ್ಲಿ ಇಂಥ ಮಾದರಿಯಲ್ಲಿ ಮನುಷ್ಯನ 'ಇರುವಿಕೆ'ಯನ್ನು ಗುರುತಿಸುವ, ಶೋಧಿಸುವ ವೈಖರಿ ಮಹತ್ತರವೆನಿಸಿತು. ಈ ಪ್ರಣಾಲಿ ಅನೇಕ ಯುವ ಬರಹಗಾರರನ್ನು ತನ್ನೆಡೆ ಸೆಳೆಯಿತು. ಈ ಹುಡುಕಾಟ ಸಾಹಿತ್ಯ-ಸಮಾಜ, ವ್ಯಕ್ತಿ-ವ್ಯಕ್ತಿತ್ವ, ಜಾತ್ಯಾತೀತ ಮೌಲ್ಯ ಹೀಗೆ ಹಲವು ಸಂಕೀರ್ಣತೆಗಳೊಂದಿಗೆ ಬದುಕಿನ ನಿಗೂಢತೆಯನ್ನು ಅನಾವರಣಗೊಳಿಸುವತ್ತ ಕೇಂದ್ರಿಕೃತಗೊಂಡು ವ್ಯಕ್ತಿನಿಷ್ಠವಾಗಿ ಅಭಿವ್ಯಕ್ತಗೊಳಿಸಲು ಸಾಧ್ಯವಾಯಿತು. ಕ್ರಮೇಣ ಸಾಂಸ್ಕೃತಿಕ ಅನನ್ಯತೆಗೆ ಪೂರಕವಾಗಿ ಇಂದ್ರಿಯ ಗೋಚರವಾದ ಸತ್ಯವನ್ನು ಅತ್ಯಂತ ಮುಕ್ತ ಸಂವೇದನೆಯಿಂದ ಶೋಧಿಸುವಂತಾಯಿತು.

ಹೆಚ್ಚು ಕಡಿಮೆ ಗ್ರಾಮ ಪರಿಸರದ ಜಗತ್ತಿನ ಹಿನ್ನೆಲೆಯಲ್ಲಿ ಸಾಂಸ್ಕೃತಿಕ ಪಲ್ಲಟಗಳನ್ನು ಸೂಕ್ಷ್ಮವಾಗಿ ಅನ್ವೇಷಿಸುವ ಕ್ರಿಯೆ ಇಲ್ಲಿ ನಡೆಯಿತೆನ್ನಬೇಕು. ಲಂಕೇಶ, ತೇಜಸ್ವಿ, ದೇವನೂರು, ಚಿತ್ತಾಲ, ಅನಂತಮೂರ್ತಿ ಮೊದಲಾದ ಲೇಖಕರಲ್ಲಿ ಮನುಷ್ಯನನ್ನು ಮೂರ್ತವಾದ ಸಾಮಾಜಿಕ, ರಾಜಕೀಯ ಚೌಕಟ್ಟುಗಳಲ್ಲಿ ಇಡುತ್ತ ಅದು ಸಾಂಸ್ಕೃತಿಕ ಅನ್ವೇಷಣೆಯಾಗುವಂತೆ ನೋಡುವ ಪ್ರಯತ್ನವು ಅರ್ಥಪೂರ್ಣ ಸಾಹಿತ್ಯಸೃಷ್ಟಿಗೆ ಕಾರಣವಾಯಿತು. ಮನುಷ್ಯನ ಅಂತಃ ಸತ್ವವನ್ನು ಕುರಿತಂತೆ ಹೊಸ ಅರಿವನ್ನು ಮೂಡಿಸುವಂಥವುಗಳಾಗಿ ಇವರ ಅನೇಕ ಕೃತಿಗಳು ಯಶಸ್ಸುಗಳಿಸಿದವು. ಜಾತಿ, ಹಣ, ಪ್ರಭಾವ ಮೊದಲಾದ ಪಟ್ಟಣವು ಹುಟ್ಟಿಸಿದ ಲೌಕಿಕ

ಅನಿಷ್ಟಗಳು ಸ್ವಾತಂತ್ರ್ಯೋತ್ತರ ಭಾರತ ಸಂಸ್ಕೃತಿಯ ಭಾಗವಾಗಿ ಹೋದ ಕಥೆಯು ನವ್ಯೋತ್ತರ ಕಾಲದ ಕನ್ನಡದ ಸಾಹಿತ್ಯದಲ್ಲಿ ಪರಿಣಾಮಕಾರಿಯಾದ ಗ್ರಹಿಕೆಗೆ ಒಳಗಾಯಿತು.[2]

ಸ್ವಾತಂತ್ರೋತ್ತರ ದಶಕಗಳಲ್ಲಿ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಆದ ಸಾಹಿತ್ಯಿಕ ಬದಲಾವಣೆಗೆ ತೇಜಸ್ವಿಯವರಂತೆ ಅದೇ ಕಾಲಮಾನದಲ್ಲಿನ ಅನೇಕ ಬರಹಗಾರರು ಸಮಾನ ಧೋರಣೆಗಳನ್ನು ತಳೆದರು ಎಂಬುದನ್ನು ತಿಳಿಸುವ ಈ ಮೇಲಿನ ವ್ಯಾಖ್ಯಾನ ಸಮಕಾಲೀನ ಬರಹಗಾರರು ನಿಶ್ಚಿತ ಕಾಲಮಾನದಲ್ಲಿ ತಮ್ಮ ಚಿಂತನೆಯ ಸ್ಥಾಯೀ ಆಕರಗಳನ್ನು ಸಾಹಿತ್ಯದ ಮುಖೇನ ಪ್ರಸ್ತುತ ಪಡಿಸುವುದಕ್ಕೆ ಕಾರಣವಾದ ಸಂದರ್ಭಗಳನ್ನು ಅರಹುತ್ತದೆ.

ಲೇಖಕರು ತಮ್ಮ ತಮ್ಮ ಬದುಕಿನ ವ್ಯಗ್ರತೆಯನ್ನು ಸಾಹಿತ್ಯದ ಮೂಲಕ ಗುರುತಿಸಿಕೊಳ್ಳುತ್ತಾರೆ. ಅವುಗಳಿಗೆ ಪೂರಕವಾಗಿ ತಮ್ಮದೇ ಆದ ವಿಶಿಷ್ಟ ಪಾತ್ರಗಳು ಜನ್ಮ ತಾಳುತ್ತವೆ. ಅಂತಹ ಪಾತ್ರಗಳು ಸಾಹಿತ್ಯ ಮತ್ತು ಬದುಕಿನ ನಡುವೆ ಕೊಂಡಿಯಾಗಿ ಕಾರ್ಯ ನಿರ್ವಹಿಸುತ್ತವೆ ಹಾಗಾಗಿ ಲೇಖಕರಿಗೆ ಸಹಜವಾದ ಪ್ರಾದೇಶಿಕ ಜನಪದರ ಬದುಕು ಜೀವನದ ನಿಕಟ ಅನುಭವ ಹಾಗೂ ಮನಸಿನ ಜಟಿಲತೆಯೊಂದಿಗೆ ಸಂಘರ್ಷಗೊಂಡು ಹೊಸ ಲೇಖಕರ ಭಾವಾಭಾವನೆಗಳು, ಸಂವೇದನೆಗಳು ಕಥನ ಸಾಹಿತ್ಯಕ್ಕೆ ಹೊಸ ಆಯಾಮವನ್ನು ನೀಡುತ್ತವೆ. ಅವೇ ಲೇಖಕರ ಭಾವಪ್ರಪಂಚವನ್ನು, ಬೌದ್ಧಿಕ ವಿಕಾಸವನ್ನು, ವೈಚಾರಿಕ ಚಿಂತನೆಗಳನ್ನು ಪ್ರಚುರ ಪಡಿಸುತ್ತವೆ. ಹೀಗೆ ವಿವಿಧ ಬಗೆಯ ಪ್ರೇರಣೆ ಪ್ರಭಾವಗಳಿಗೆ ಒಳಗಾಗಿ ಕಥಾಸಾಹಿತ್ಯದ ದಿಕ್ಕನ್ನು ಜನಪರವಾದ ದಿಕ್ಕಿನತ್ತ ಸಮೃದ್ಧವಾಗಿ ಹರಿಯುವತ್ತ ಕಾರಣೀಭೂತರಾದ ಎಪ್ಪತ್ತರ, ಎಂಬತ್ತರ ದಶಕದ ಲೇಖಕರು ಆಯಾ ಕಾಲಘಟ್ಟದಲ್ಲಿ ಕೊಟ್ಟ ಕಥನಗಳಲ್ಲಿ ಪ್ರಕಟವಾಗುವ ಪ್ರವೃತ್ತಿ, ಸ್ವರೂಪಗಳನ್ನು ಯಾವ ರೀತಿಯಲ್ಲಿ ಪ್ರಸ್ತುತ ಪಡಿಸಿರಬಹುದು ಎಂಬುದು ಉಲ್ಲೇಖನೀಯವಾದುದು.

ಪೂರ್ಣಚಂದ್ರತೇಜಸ್ವಿಯವರಂತೆ ನೇರ ನಡೆನುಡಿಯ, ಪ್ರಬುದ್ಧ ಹಾಗೂ ಪ್ರಧಾನ ವಿಚಾರಧಾರೆಯ ಅನೇಕ ಲೇಖಕರಿದ್ದಾರೆ. ತೇಜಸ್ವಿಯವರೊಂದಿಗೆ ಸಮನ್ವಯ ಸಾಧಿಸುವ ಲೇಖಕರಲ್ಲಿ ಪ್ರಾತಿನಿಧಿಕವಾಗಿ ಶಾಂತಿನಾಥದೇಸಾಯಿ, ಯಶವಂತಚಿತ್ತಾಲ, ಯು.ಆರ್.ಅನಂತಮೂರ್ತಿ, ಲಂಕೇಶ್, ಬೆಸಗರಹಳ್ಳಿ ರಾಮಣ್ಣ, ಶ್ರೀಕೃಷ್ಣ ಆಲನಹಳ್ಳಿ, ದೇವನೂರು ಮಹಾದೇವ ಇವರುಗಳೊಂದಿಗೆ ತೇಜಸ್ವಿಯವರನ್ನು ಸಮೀಕರಿಸಿ ನೋಡುವ ಸಣ್ಣ ಪ್ರಯತ್ನವನ್ನು ಈ ಅಧ್ಯಾಯದಲ್ಲಿ ಮಾಡಲಾಗಿದೆ.

**ಶಾಂತಿನಾಥದೇಸಾಯಿ**

ಕನ್ನಡದ ಮೊಟ್ಟಮೊದಲ ನವ್ಯಕಾದಂಬರಿಯನ್ನು (ಮುಕ್ತಿ) ಬರೆದು ನವ್ಯಮಾರ್ಗವನ್ನು ಕಾದಂಬರಿ ಪ್ರಾಂತಕ್ಕೆ ತಂದವರು 'ಶಾಂತಿನಾಥದೇಸಾಯಿ'ಯವರು. ಇಂತಹ ಪ್ರಯೋಗಶೀಲತೆಯನ್ನು ಕನ್ನಡದ ಸಣ್ಣಕಥೆ, ಪ್ರಬಂಧ, ವಿಮರ್ಶೆ ಮುಂತಾದ ಕ್ಷೇತ್ರಗಳಲ್ಲಿಯೂ ತೋರಿಸಿ ಮೇಲ್ಪಂಕ್ತಿಯ ಬರಹಗಾರರೆನಿಸಿಕೊಂಡವರು. ದೇಸಾಯಿಯವರು ಸಣ್ಣ ಕಥೆಯ ಮೂಲಕವೇ ತಮ್ಮಸಾಹಿತ್ಯ ಸೇವೆ ಪ್ರಾರಂಭಿಸಿದ್ದು. ದೀರ್ಘವಾದ ಐತಿಹಾಸಿಕ ವ್ಯಾಪ್ತಿಯನ್ನು ಪಡೆದಿರುವ ದೇಸಾಯಿಯವರ ಅನೇಕ ಕಥನಗಳಲ್ಲಿ ವೈಚಾರಿಕ ಸಂವೇದನೆ, ಕಲಾಪ್ರಜ್ಞೆ, ಸೌಂದರ್ಯ ಸೃಷ್ಟಿ ಹಾಗೂ ವಸ್ತು ವಿಸ್ತಾರತೆಯ ವಿಕಾಸ ಕ್ರಮವನ್ನು ಸ್ಪಷ್ಟವಾಗಿ ಗುರುತಿಸಬಹುದು. ಶಾಂತಿನಾಥ ದೇಸಾಯಿಯವರು ಬರವಣಿಗೆಯ ಪ್ರಾರಂಭದ ಹಂತದಿಂದಲೂ ಪ್ರಬುದ್ಧತೆಯನ್ನು ಉಳಿಸಿಕೊಂಡು ಸಾಹಿತ್ಯ ರಚಿಸುತ್ತಾ ಬಂದಿದ್ದಾರೆ ಎಂಬ ಶ್ಲಾಘನೆಗೆ ಒಳಪಟ್ಟಿದ್ದಾರೆ.

ಕಥೆಯ ವಸ್ತು ಮತ್ತು ಸಂವಿಧಾನಗಳೆರಡರಲ್ಲಿಯೂ ಹೊಸತನ ಪ್ರಕಟಿಸಿದ ಇವರ ಕೃತಿಗಳಲ್ಲಿ ಇಂಗ್ಲಿಷ್, ಮರಾಠಿ ಮೊದಲಾದ ಸಾಹಿತ್ಯ ಪ್ರಭಾವ, ಅದರಲ್ಲೂ ಲಾರೆನ್ಸನ ಪ್ರಭಾವ, ಮುಂಬೈ, ಕೊಲ್ಲಾಪುರ, ಧಾರವಾಡ ಮುಂತಾದ ನಗರಗಳ ಸಂಕೀರ್ಣ ಜೀವನ ಅಲ್ಲಿಯ ಅವರ ಪರಿಸರದದ ಬಾಲ್ಯ ಜೀವನ–ಈ ಎಲ್ಲಾ ಪ್ರಭಾವ ಪ್ರೇರಣೆಗಳು ದೇಸಾಯರ ಒಟ್ಟು ಕಥಾಸಾಹಿತ್ಯದ ಹಿನ್ನೆಲೆಯ ಸ್ಫೂರ್ತಿಯ ತಾತ್ವಿಕ ನೆಲೆಗಟ್ಟುಗಳಾಗಿವೆ. ದೇಸಾಯಿಯವರೆ ಒಂದು ಸಂದರ್ಶನದಲ್ಲಿ ತಮ್ಮ ಬಾಲ್ಯಜೀವನ ಮತ್ತು ಕಥೆಗಳಿಗಿರುವ ಸಂಬಂಧದ ಕುರಿತು ಹೇಳಿಕೊಂಡಿದ್ದಾರೆ. ಅಲ್ಲಿನ ಪ್ರಕಾರ ಅವರ ಸಣ್ಣಕಥೆಗಳಲ್ಲಿ ಬಾಲ್ಯದ ನೆನಪುಗಳನ್ನು ಸಾಕಷ್ಟು ಉಪಯೋಗಿಸಿದ್ದಾರೆ. 'ಚಂದೂ ಶೋಭನೆಯ ಹಾದಿ' 'ದಿಗ್ಭ್ರಮೆ' 'ನದಿಯ ನೀರು' ಶಿವುನ ಬಂಡಾಯ ಇತ್ಯಾದಿ' ಕಥನಗಳಲ್ಲಿ ಆ ನೆನಪುಗಳು ಕಳೆಗಟ್ಟಿವೆ ಎಂಬುದು ವೇದ್ಯವಾಗಿದೆ.

ಶಾಂತಿನಾಥ ದೇಸಾಯಿಯವರ ಮನಸ್ಸಿನಲ್ಲಿ ಬಾಲ್ಯದ ಹಳೆಯ ಜಗತ್ತು ಮಾತ್ರ ದಟ್ಟವಾಗಿಯೇ ಇದೆ. ಅವರ ಕಥೆ, ಕಾದಂಬರಿಗಳಲ್ಲಿ ನಗರ ಜೀವನದ ಅನುಭವಗಳಿಗೆ ಸಮಸ್ಯೆಗಳಿಗೆ ಹೆಚ್ಚಿನ ಪ್ರಾಧಾನ್ಯತೆ ಇದೆ. ಅದರಲ್ಲೂ ಮಧ್ಯಮ ವರ್ಗದ ವಿದ್ಯಾವಂತ ಮತ್ತು ಬುದ್ಧಿಜೀವಿ ವರ್ಗದ ಜನರ ವೈವಾಹಿಕ ಜೀವನದ ವಿವಿಧ ಮುಖಗಳನ್ನು ಚಿತ್ರಿಸುವುದರಲ್ಲಿ ಅವರ ಕಥೆಗಳ ಮೂಲಭಿತ್ತಿ ಅಡಗಿದೆ. ಹೆಣ್ಣು ಗಂಡಿನ ಲೈಂಗಿಕ ಸಂಬಂಧದ ಆಶಯಗಳು ಮನುಷ್ಯನ ಒಳ ಮನಸ್ಸಿನ ಮಾನಸಿಕ ತೊಳಲಾಟಗಳು, ಸಂಕೀರ್ಣತೆಗಳು, ಏಕಾಂಗಿತನಗಳು ಮುಂತಾದ ಚಿತ್ರಣಗಳನ್ನು ಇವರ ಕಥೆಗಳು ಒಳಗೊಳ್ಳುತ್ತವೆ. ಸಾಂಪ್ರದಾಯಿಕವಾದ ಬದುಕಿನ; ನೈತಿಕ ಕ್ಷಿತಿಜವನ್ನು ಬೆಳೆಸುವ ವಿಸ್ತರಿಸುವ, ವೈಚಾರಿಕ ನೆಲೆಯತ್ತ ಅರ್ಥೈಸುವ ಪ್ರವೃತ್ತಿ ಇವರ ಕಥೆಗಳಲ್ಲಿ ಪ್ರಧಾನವಾಗಿವೆ. ಕನ್ನಡದಲ್ಲಿ ಲೈಂಗಿಕತೆಯನ್ನು ಒಂದು ಮೌಲ್ಯವಾಗಿ ಪರಿಗಣಿಸಿ ಬದುಕನ್ನು ಶೋಧಿಸುವ ಕಾಳಜಿ ಇವರಲ್ಲಿ ಒಡೆದು ಕಾಣುವ ಹಾಗೆ ಇನ್ನಾರಲ್ಲೂ ಕಂಡು ಬರುವುದಿಲ್ಲ. ಹೊಸ ಸಂಸ್ಕೃತಿ, ನಾಗರಿಕತೆ, ಸಮಾಜವನ್ನು ಸೃಷ್ಟಿಸಲು ಇವರ ಕೃತಿಗಳು ತುಡಿಯುತ್ತವೆ.

ಇಂಗ್ಲಿಷ್ ವ್ಯಾಸಂಗದ ಪ್ರಭಾವದಿಂದ ಮನೋವಿಶ್ಲೇಷಣ ಸಿದ್ಧಾಂತದ ಒಂದು ಹೊಸನೋಟ ಇವರ ಕಥನಗಳಲ್ಲಿ ನೋಡಸಿಗುತ್ತದೆ. ಮನುಷ್ಯನನ್ನು ನೋಡುವುದರಲ್ಲಿ

ಪಾಶ್ಚಾತ್ಯರಲ್ಲಾದ ಬದಲಾವಣೆಯನ್ನು ಕನ್ನಡಕ್ಕೆ ಇಳಿಸುವ ಪ್ರಯತ್ನ ಇವರಿಂದ ಗಂಭೀರವಾಗಿ ನಡೆದಿದೆ. ಮನುಷ್ಯ ಇನ್ನಿತರ ಪ್ರಾಣಿಗಳಂತೆಯೇ ಇರುವಿಕೆಗಾಗಿ ಶ್ರಮಿಸುವ ಜೀವಿ. ತನ್ನ ಸುಖ, ಆಸೆ, ಅಭಿಲಾಷೆಗಾಗಿ ಚಡಪಡಿಸುವ ಸಾಮಾನ್ಯ ಪ್ರಾಣಿ. ತಮ್ಮ ಕಥನಗಳ ಮೂಲಕ ದೇಸಾಯಿಯರು ಮನುಷ್ಯ ಧೀರೋದಾತ್ತನೆಂಬ ಪರಿಕಲ್ಪನೆಯ ಪರಂಪರೆಯಿಂದ ಹೊರ ಬಂದಿದ್ದಾರೆ. ಈ ನಿಟ್ಟಿನಲ್ಲಿ ಪಾತ್ರಗಳನ್ನು ರಚಿಸಿ ಕಥೆ ಬರೆದ ಇವರು ಕಾದಂಬರಿಗಳಲ್ಲಿ; ವ್ಯಕ್ತಿಸಂಬಂಧದ ಕುಹಕ, ಕೊಳಚೆ, ಹಿಂಸೆಗಳನ್ನು ನಿಸ್ಸಂಕೋಚದಿಂದ ಪ್ರಕಟಿಸುವಲ್ಲಿ ಯಶಸ್ವಿಯಾದವರು. ದೇಸಾಯಿಯವರ ಕಾದಂಬರಿಗಳು ಬೇರೆ ಬೇರೆ ಸಮಸ್ಯೆಗಳಿಗೆ ಉತ್ತರ ಕಾಣುವ ಪ್ರಯತ್ನಗಳಿದ್ದಂತೆ; ಏಕೆಂದರೆ ಖುದ್ದು ತಮ್ಮ ನೆನಪುಗಳಲ್ಲಿ ಹುದುಗಿರುವ ವ್ಯಕ್ತಿತ್ವವನ್ನು ಪರಿಶೋಧಿಸಿಕೊಂಡು ಅದರಲ್ಲಿನ ಮಿತಿ ಕಂಡುಕೊಂಡು ಅವುಗಳಿಂದ ಹೊರಬಂದು ತಮ್ಮದೇ ಮೌಲ್ಯಗಳನ್ನು ಸಾಕಾರಗೊಳಿಸಿಕೊಳ್ಳಲು ಪ್ರಯತ್ನಿಸಿದ್ದಾರೆ. ಅದಕ್ಕಾಗಿಯೇ ಗತಕಾಲದ ನೆನಪುಗಳು ವರ್ತಮಾನವನ್ನು ರೂಪಿಸಿಕೊಳ್ಳಲು ಅವಶ್ಯಕವಾಗಿ ನೆರವಾಗಿವೆ.

ರಾಜಕಾರಣ, ವಿದ್ಯಾಪ್ರಸಾರ, ಗ್ರಾಮಸುಧಾರಣೆ, ಸಮಾಜಬಂಧ, ಅಂತಸ್ಸಂಬಂಧ, ಕುಟುಂಬ ಸಂಸ್ಥೆ ಇವುಗಳೆಲ್ಲದರ ಮೇಲೆ ಕ್ಷ-ಕಿರಣ ಹಾಯಿಸಿದ ದೇಸಾಯರು ಮಂಜುಗಟ್ಟಿದ ಧರ್ಮವಿಚಾರ, ಕಣ್ಣಪಟ್ಟಿ ಕಟ್ಟಿದ ಪ್ರಾಚೀನ ಮತಸಂಶೋಧನೆ, ಅಂಧಶ್ರದ್ಧೆಯ ಮತಾಚರಣೆ, ರೋಮಾಂಚಕತೆಯಲ್ಲೆ ಕುರುಡಾದ ಬಂಡಾಯದ ವೃತ್ತಿ ಇವುಗಳೆಲ್ಲದರ ಮೇಲೆ ನಿರ್ದಾಕ್ಷಿಣ್ಯವಾಗಿ ಬರೆದರು ಎಂಬುದು ಹಲವರ ಅಭಿಪ್ರಾಯವಾಗಿದೆ. ಜಾತಿ-ಮತದಿಂದ ಜೈನರಾದ ಇವರಲ್ಲಿ ಜೀವನದ ಅಸ್ಪಷತೆಯ ಬಗೆಗಿನ ನಿಲುವು ಜೈನರ ಅನೇಕಾಂತ ವಾದದಂತೆಯೇ ಯಾವುದೊಂದು ನಿರ್ಣಾಯಕವಲ್ಲ. (ಇರುವಿನ ಬಗ್ಗೆ ಯಾವುದೇ ಒಂದು ಅಂತಿಮವಾದ ನಿರ್ಣಾಯಕ ತೀರ್ಪನ್ನು ತಳೆಯದೇ ಇರುವುದೇ ಅನೇಕಾಂತವಾದ)

ಬದುಕನ್ನು ಕ್ರೀಡಾರೂಪದಲ್ಲಿ ಮಂಡಿಸುವ ದೇಸಾಯಿಯವರದು ಓದುಗನೂ ಲೇಖಕನೂ ಒಟ್ಟಿಗೆಯೇ ಬಂದೊದಗಿದ ಸಮಸ್ಯೆಯನ್ನು ಬಗೆಹರಿಸುವುದರಲ್ಲಿ ಸಮಾನವಾಗಿ ಪಾಲ್ಗೊಳ್ಳುವಂತಹ ಪರಿ. ಕನ್ನಡಕ್ಕೆ ಹೊಸದಾಗಿ ತೆಳುವಾಗಿ ಹಗುರವಾಗಿ, ಹೇಳುವುದನ್ನು, ಕೇಳುವುದನ್ನು ಮಾಡುತ್ತ ಕಥೆ ಹೆಣೆಯುವ ಕಸುಬನ್ನು ಪರಿಚಯಿಸಿದ್ದಾರೆ. ದೇಸಾಯಿಯವರ 'ಮಂಜುಗಡ್ಡೆ' ಕಥೆ ಮನುಷ್ಯನ ಮನಸ್ಸಿನಲ್ಲಾಗುವ ತಳಮಳ, ತುಡಿತವನ್ನು ನಮ್ಮೆದುರಿಗೆ ತೆರೆದಿಡುತ್ತದೆ. ಇವರ 'ಕೂರ್ಮಾವತಾರ' 'ವಾಸನೆ' ಈ ಕಥೆಗಳಲ್ಲಿ ಬದಿಗೊಗೆಯಲ್ಪಟ್ಟ, ಹೊರಗಿಡಲ್ಪಟ್ಟವರ ಮನೋವಿಕಾರ ಪ್ರಕ್ರಿಯೆಯಂತಹ ನಿರ್ಲಕ್ಷಿಸುವ ವಿಷಯಗಳು ಪ್ರಧಾನವಾಗಿವೆ. ಇನ್ನು 'ನಾನಾನ ತೀರ್ಥಯಾತ್ರೆ' ಒಬ್ಬ ಕುಡುಕನ ಕಥೆಯಾದರೂ ಅತೀವ ಪರಿಣಾಮಕಾರಿ. ನಾನಾ ಕುಡುಕನಾದರೇನು ಆತನಿಗೂ ತನ್ನದೇ ಆದ ಪ್ರಪಂಚವಿದೆ, ಜೀವನವಿದೆ ಎನ್ನುತ್ತಾ ಸಾಮಾನ್ಯನ ಮನಸ್ಸಿನ ಚಿತ್ರಣವನ್ನು ಕಟ್ಟಿಕೊಡುತ್ತಾರೆ. ಇಂತಹ ಸಾಮಾಜಿಕ ದುರ್ಲಕ್ಷಿತ ಘಟನೆಗಳೇಕೆ ಸಾಹಿತ್ಯದ ವಸ್ತುವಾಗಬಾರದು ಎನ್ನುವುದು ದೇಸಾಯಿಯವರ ಆಗ್ರಹ. ಇವರ ಈ ಚಿಂತನೆ ಸ್ವಾಗತರ್ಹವಾದುದು.

'.........ನಿಖಿಲವಾದದ್ದು' ಕಥೆಯಲ್ಲಿ ಮನೆಯಾಳು ಸರ್ಟಿಫಿಕೇಟುಗಳನ್ನು ಕದ್ದು ಹೋಗುವ ಪ್ರಸಂಗ ವ್ಯಂಗ್ಯದಿಂದ ಕೂಡಿದ್ದರೂ ಸಿಟ್ಟು, ಬೆಲೆಯಿಲ್ಲದ ಮೌಲ್ಯಗಳನ್ನು ತುಳಿಯುತ್ತಾ ಹೋಗುವ

ಹೊಂಚು ಕುತೂಹಲ ಹುಟ್ಟಿಸುತ್ತದೆ. 'ನದಿಯನೀರು' ಕಥೆಯಲ್ಲಿ ತನ್ನ ಗೆಳೆಯ ನದಿಯಲ್ಲಿ ಮುಳುಗಿ ಸಾಯಲು ತಾನು ಕಾರಣವಾಗಿದ್ದುಕೊಂಡು ತನಗೆ ಸಂಬಂಧವೇ ಇಲ್ಲವೆಂದು ಸುಳ್ಳನ್ನು ಸಮರ್ಥವಾಗಿ ಹೇಳುವ ವ್ಯಕ್ತಿಯನ್ನು ಆತನ ಮನಸ್ಸಿನ ಹಿಂಸೆ ನಿಷ್ಠುರವಾಗಿ ಆತನನ್ನು ಬಾಳಲು ಬಿಟ್ಟಿದೆಯೇ ಎನ್ನುವುದು ಚಿಂತಿಸುವ ವಿಷಯ. ದೇಸಾಯಿಯವರು ಬರೆದ ಸುಮಾರು ಐವತ್ತಕ್ಕೂ ಅಧಿಕ ಕಥೆಗಳಲ್ಲಿ ಒಂದೊಂದು ಕಥೆಗೂ ಒಳದನಿಯಿದೆ. ಇವರ ಪ್ರತಿಕಥೆಯಲ್ಲಿಯೂ ಪ್ರಯೋಗಶೀಲತೆ ಎದ್ದು ಕಾಣುತ್ತದೆ. ಪ್ರತಿಯೊಂದು ಕಥೆಯೂ ಅರ್ಥಗರ್ಭಿತವಾಗಿದೆ. ಸೃಜನಶೀಲವಾದ ವೈಚಾರಿಕತೆಯನ್ನು ಬಿಂಬಿಸುವುದರಲ್ಲಿ ಅಭಿವ್ಯಕ್ತ ಪಡಿಸುವುದರಲ್ಲಿ ಕೃತಿಕಾರರ ಬಲ ಅಡಗಿದೆ.

ಉತ್ತಮ ವಿಮರ್ಶಕರೂ ಆಗಿರುವ ಶಾಂತಿನಾಥ ದೇಸಾಯಿಯವರು 'ಸಾಹಿತ್ಯ ಮತ್ತು ಭಾಷೆ', 'ಗಂಗಾಧರ ಚಿತ್ತಾಲರ ಕಾವ್ಯಸೃಷ್ಟಿ', 'ಕನ್ನಡ ಕಾದಂಬರಿ ನಡೆದು ಬಂದ ದಾರಿ', 'ನವ್ಯ ಸಾಹಿತ್ಯ ದರ್ಶನ' ಈ ಕೃತಿಗಳು ವಿಚಾರ ಸಾಹಿತ್ಯಕ್ಕೆ ನೀಡಿದ ಕೊಡುಗೆಗಳಾಗಿವೆ. ತಮ್ಮ ಕಥೆ ಕಾದಂಬರಿಗಳಲ್ಲಿನ ಸಂಭಾಷಣೆಗಳಂತೆಯೇ ನಿಜಜೀವನದಲ್ಲಿಯೂ ಚರ್ಚಿಸುತ್ತಿದ್ದರಂತೆ. ಬೇಂದ್ರೆಯವರ ಸಾಹಿತ್ಯದ ಅಭಿರುಚಿ ಬೇಂದ್ರೆ ಕುರಿತು ವಿಮರ್ಶಾತ್ಮಕ ಬರವಣಿಗೆಗೆ ಅವಕಾಶ ಕಲ್ಪಿಸಿದೆ. ಅದರಲ್ಲೂ ಬೇಂದ್ರೆ ಸಾಹಿತ್ಯ ಕುರಿತ ನಿಬಂಧ ಮಂತ್ರಮುಗ್ಧಗೊಳಿಸಿದರೆ, 'ಮೂಕಜ್ಜಿಯ ಕನಸುಗಳು' ಕಾದಂಬರಿಯ ಹಿನ್ನೋಟವನ್ನು ಅದರೊಳಗೆ ಹುದುಗಿದ್ದ ಅರ್ಥವನ್ನು ದಿಗ್ಭ್ರಮೆಗೊಳ್ಳುವಂತೆ ಮಂಡಿಸಿದ್ದರು ಎಂಬ ಪ್ರಶಂಸೆಗೂ ಪಾತ್ರವಾಗಿದೆ. ದೇಸಾಯರ 'ಕನ್ನಡ ಕಾದಂಬರಿ ನಡೆದು ಬಂದ ರೀತಿ' ವ್ಯಾಸಂಗ ಯೋಗ್ಯವಾದ ಗ್ರಂಥವಾಗಿದೆ. ಇದರಲ್ಲಿನ ವಸ್ತುನಿಷ್ಠ ಮೌಲ್ಯಮಾಪನ, ಕಹಿಯಾದ, ಮತನಿಷ್ಠೆಯಿಲ್ಲದ ಸಾಹಿತ್ಯಿಕ ಮಾನದಂಡ ಎಲ್ಲವೂ ಮಹತ್ವದ್ದಾಗಿವೆ ಮತ್ತು ವಿಮರ್ಶಾ ಪದ್ಧತಿಗೆ ಮಾರ್ಗದರ್ಶಕವಾಗಿವೆ. ತಮ್ಮದೇ ಆದ 'ಮುಕ್ತಿ' ಕಾದಂಬರಿಯ ಗುಣದೋಷಗಳನ್ನು ನಮೂದಿಸಿದ್ದು ಅವರ ಆತ್ಮ ಪರಿಷ್ಕಾರಕ್ಕೆ ಹಿಡಿದ ಕೈಗನ್ನಡಿಯಾಗಿದೆ. ಇವರ 'ನವ್ಯ ಸಾಹಿತ್ಯ ದರ್ಶನ' ನವ್ಯ ಸಾಹಿತ್ಯದ ವಿವಿಧ ಚಿಂತನೆ, ಪಾಶ್ಚಾತ್ಯ ಪ್ರಕಾರದ ಉದಾಹರಣೆ ಹೊಂದಿರುವ ಮುಖ್ಯವಾದ ಗ್ರಂಥ. ಇವರ 'ಸೃಷ್ಟಿ' ಕಾದಂಬರಿಯಿಂದ ಮುಂದಿನ ಎಲ್ಲ ಕಾದಂಬರಿಗಳಲ್ಲಿಯೂ ಪ್ರಾಮುಖ್ಯತೆಯನ್ನು ಪಡೆದಿರುವುದು ಸಾಮಾಜಿಕ ಸಮಸ್ಯೆ, ಆ ಧೋರಣೆಗಳ ಬಗೆಗಿನ ಚಿಂತನೆ, ಸಮಾಜ ಪರಿವರ್ತನೆ ಎನ್ನುವುದರಲ್ಲಿ ಎರಡು ಮಾತಿಲ್ಲ.

ಸಮಾಜ, ರಾಜಕಾರಣ, ಸಂಸ್ಕೃತಿಗಳ ವಿಶ್ಲೇಷಣೆಯನ್ನು ನಾವು ಇವರ ಮಹತ್ವದ ಕೃತಿಯಾದ 'ಸೃಷ್ಟಿ'ಯಲ್ಲಿ ನೋಡುತ್ತೇವೆ. ಗ್ರಾಮೀಣ ವ್ಯವಸ್ಥೆಯ ಪುನರ್‌ರಚನೆ ಕಲ್ಪನೆಯನ್ನು ವೈಯಕ್ತಿಕ ಸಂಬಂಧಗಳ ಪುನಃ ಸ್ಥಾಪನೆಯ ಕನಸಿಗೆ ಜೋಡಿಸುವ ಕಾಯಕ 'ಬೀಜ' ಕಾದಂಬರಿಯಲ್ಲಿದೆ. ಕುಹಕ, ಆರೋಗ್ಯ ವ್ಯವಸ್ಥೆಯ ಅನವಸ್ಥೆ, ದುಂದುಗಾರಿಕೆ, ಕಳ್ಳಸಾಗಾಟ, ಅನ್ಯಮತೀಯರ ಬಗೆಗಿನ ಅಸಹಿಷ್ಣುತೆ ಇವುಗಳು ಕೆಟ್ಟದಾದ ಗ್ರಾಮಾಂತರದ ಕಡು ಪರಿಸ್ಥಿತಿಯನ್ನು ಬಿಂಬಿಸುವುದರ ಜೊತೆಗೆ ಪಟ್ಟಣದ ಚೊಕ್ಕತನ, ಉದಾರ ಮತವಾದ, ಆರೋಗ್ಯಕಾರಿ ವ್ಯವಸ್ಥಾಪನೆಗಳು ಗ್ರಾಮದ ಅಂತಃಸತ್ವವನ್ನು ಕಾಪಾಡಿಕೊಂಡಿರುವ ರೀತಿಯನ್ನು 'ಬೀಜ' ಕಾದಂಬರಿಯಲ್ಲಿ ಕಾಣುತ್ತೇವೆ. ಲೇಖಕ, ವಾಚಕ ವಿಮರ್ಶಕರನ್ನು ಒಟ್ಟುಗೂಡಿಸಿ ಹೊಸ ಕ್ಷಿತಿಜ ತೋರಿಸುತ್ತಾ ಆ ದಿಶೆಯಲ್ಲಿ ಬಂದ ಕೃತಿಯೇ 'ಓಂಣಮೋ'.

ಶಾಂತಿನಾಥ ದೇಸಾಯಿಯರ ಕಾದಂಬರಿಗಳಲ್ಲಿ ಭಾವನೆಯ ಅಬ್ಬರವನ್ನು ದಾಟುವ ಕ್ರಮವೇ ತಂತ್ರವಾಗಿ ಮೂಡಿಬಂದಿವೆ. ಅದಕ್ಕಾಗಿಯೇ ಏನೋ ಇವರ ಕೃತಿಗಳಲ್ಲಿ ಇಡೀ ಲೋಕವೇ ಬಂದು ಪುಟ್ಟದಾಗಿ ವಿಧೇಯಕವಾಗಿ ಕೂತಿರುತ್ತದೆ ಎನಿಸುತ್ತದೆ. ಹಿರಿದಾದುದನ್ನು ಕಿರಿದಾಗಿ ಹೇಳುವ ಕ್ರಮ ಇವರ ಲೇಖನ ಸಾಮರ್ಥ್ಯವನ್ನು ಬಿಂಬಿಸುತ್ತದೆ. ದೇಸಾಯರು ತಮ್ಮ ಸಾಹಿತ್ಯ ಕೃತಿಗಳಲ್ಲಿ ಒಳಪಡಿಸಿದ ತಂತ್ರಗಳ ಕುರಿತು ಡಾ. ಡಿ ಆರ್ ನಾಗರಾಜ್ ಅವರು ಹೀಗೆ ಬರೆಯುತ್ತಾರೆ 'ಶಾಂತಿನಾಥ ದೇಸಾಯರು ತಮ್ಮ ಕಾದಂಬರಿಗಳಲ್ಲಿ ತಂತ್ರವನ್ನು ಅರ್ಥವಾಗಿಸಬಲ್ಲರು. ಹಾಗೆಯೇ ಅರ್ಥವನ್ನು ತಂತ್ರವಾಗಿಸಬಲ್ಲರು. ಈ ದೃಷ್ಟಿಯಿಂದ ದೇಸಾಯರ ಕಾದಂಬರಿಗಳು ಕನ್ನಡ ಸಂವೇದನೆಯ ಒಂದು ವಿಶಿಷ್ಟ ಭಾಗದ ಇತಿಹಾಸ' ಎಂದು. ಈ ಎಲ್ಲಾ ದೃಷ್ಟಿಯಿಂದ ದೇಸಾಯಿಯವರು ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಹೊಸ ಆಯಾಮವನ್ನು, ಆಕಾರವನ್ನು ತಂದುಕೊಟ್ಟ ಅಪರೂಪದ ಲೇಖಕರಾಗಿದ್ದಾರೆ.

**ಶಾಂತಿನಾಥ ದೇಸಾಯಿ ಮತ್ತು ತೇಜಸ್ವಿ:** ಶಾಂತಿನಾಥ ದೇಸಾಯಿ ಮತ್ತು ತೇಜಸ್ವಿಯವರು ಮನುಷ್ಯನ ಮೂಲಭೂತ ಪ್ರವೃತ್ತಿಯಾದ ಕಾಮವನ್ನು ನೋಡುವ ಬಗೆಯೇ ಬೇರೆ ಬೇರೆ. ತೇಜಸ್ವಿ ಕಾಮವನ್ನು ಮನುಷ್ಯ ಸಂವೇದನೆಯ ವಿಶಿಷ್ಟಗುಣದೊಡನೆ ಮೇಳೈಸಿ ನೋಡುತ್ತಾರೆ. ದೇಸಾಯಿಯವರ ಅನೇಕ ಕಥನಗಳಲ್ಲಿನ ಪಾತ್ರಗಳು ಕಾಮದ ಮೂಲಕ ಬದುಕಿನಲ್ಲಿ ತೊಡಗಿಸಿಕೊಳ್ಳಲು ಯತ್ನಿಸುತ್ತವೆ ಮತ್ತು ಸಾಮಾಜಿಕ ಬದುಕಿನ ಮೌಲ್ಯಗಳನ್ನು, ಜೀವನದ ಒಟ್ಟಾರೆ ಧೋರಣೆಗಳನ್ನು ಲೈಂಗಿಕ ಪಾತಳಿಯಲ್ಲಿ ಶೋಧಿಸುತ್ತವೆ. ಶಾಂತಿನಾಥ ದೇಸಾಯರು ವ್ಯಕ್ತಿಯ ಆಂತರಿಕ ತಾಕಲಾಟಗಳನ್ನು ಆ ಸಂದರ್ಭದ ಸಾಂಸ್ಕೃತಿಕ ಆಶಯಗಳನ್ನು ತಮ್ಮ ಸಾಹಿತ್ಯದ ಕೇಂದ್ರವಾಗಿ ಸ್ವೀಕರಿಸುತ್ತಾರೆ. ತೇಜಸ್ವಿಯವರು ಶ್ರೀಸಾಮಾನ್ಯನ ಸಾಂಸ್ಕೃತಿಕ ಗ್ರಹಿಕೆಗಳನ್ನು ಅದರ ಚಲನಶೀಲ ಪ್ರಕ್ರಿಯೆಯೊಡನೆ ಅರ್ಥಪೂರ್ಣವಾಗಿ ಮುಖಾಮುಖಿಯಾಗಿಸುವುದರೊಂದಿಗೆ ಅದರೆಲ್ಲ ಸಾಧ್ಯತೆಗಳನ್ನು ಶೋಧಿಸುತ್ತಾರೆ. ತೇಜಸ್ವಿ ಪರಂಪರೆ, ಸಂಪ್ರದಾಯ ತಾತ್ವಿಕತೆಯ ಹಿನ್ನೆಲೆಯಲ್ಲಿ ಶೋಧನೆಗೆ ಒಡ್ಡುತ್ತಾ ಸಾಮಾಜಿಕ ಬದಲಾವಣೆಗಳನ್ನು ಪರಿಶೀಲಿಸುತ್ತಾರೆ. ದೇಸಾಯಿಯವರು ಪರಂಪರೆಯ ಸ್ಥಾಪಿತನೆಲೆಗಳು ಮನುಷ್ಯನ ಅಸ್ತಿತ್ವವನ್ನು ತನ್ನೆಲ್ಲ ಪರಿಮಿತಿಯೊಳಗೆ ಬಂಧಿಸಿವೆ ಎಂಬ ಅರ್ಥದಲ್ಲಿ ನೋಡುತ್ತಾರೆ ಮತ್ತು ಸಾಮಾಜಿಕ ವ್ಯವಸ್ಥೆಯ ಆಕ್ರಮಣಕಾರಿ ಪ್ರವೃತ್ತಿಯಿಂದಾಗಿ ವ್ಯಕ್ತಿ ಬಲಿಪಶುವಾಗುವುದನ್ನು ಗುರುತಿಸುವ ದೇಸಾಯರೇ ವ್ಯವಸ್ಥೆಯ ಸವಾಲನ್ನು ಗಟ್ಟಿತನದಿಂದ ಸ್ವೀಕರಿಸುವ ಪಾತ್ರಗಳ ಮೂಲಕ ವ್ಯವಸ್ಥೆಗೆ ಪರಕೀಯನಾಗಿ ನಿಲ್ಲುವ ಸಂದರ್ಭವನ್ನು ಸೃಷ್ಟಿಸುತ್ತಾರೆ.

ಶಾಂತಿನಾಥದೇಸಾಯರಲ್ಲಿ ಭೂತಕಾಲೀನ ಘಟನೆಗಳು ವ್ಯಕ್ತಿಯ ಅಸ್ತಿತ್ವ ಶೋಧನೆಗೆ ಪ್ರಮುಖವಾದ ಅಂಶ. ನೆನಪುಗಳಲ್ಲಿ ಹುದುಗಿರುವ ಸಾಫಲ್ಯ-ವೈಫಲ್ಯಗಳನ್ನು ವ್ಯಕ್ತಿಯ ನಿರ್ದಿಷ್ಟ, ಸಧ್ಯದ, ತುರ್ತಿನ ಬದುಕಿನ ಸಂದರ್ಭಗಳಲ್ಲಿ ಬೆದಕಿ ನೋಡುವುದು ಇವರ ಕಥನಗಳಲ್ಲಿನ ಕೇಂದ್ರ ಕಾಳಜಿಯಾಗಿದೆ. ದೇಸಾಯರು ನಗರದ ಮಾದರಿಗಳಲ್ಲಿಯೇ ಗ್ರಾಮೀಣ ಪ್ರದೇಶದ ಬಿಡುಗಡೆಗೆ ಪ್ರಯತ್ನಿಸಿರುವುದು ಇಲ್ಲವೆ ನಗರವನ್ನು ಸ್ವೀಕರಿಸುತ್ತಿರುವ ಹಳ್ಳಿಗಳು ನಗರದ ಮಾದರಿಗಳಲ್ಲಿಯೆ ಬದಲಾಗುವುದು ಪ್ರಗತಿಪರ ಎಂಬ ನಿಲುವಿಗೆ ಬಂದರೆ ತೇಜಸ್ವಿಯವರು ಅದಕ್ಕೆ ಭಿನ್ನವಾಗಿ ಆಲೋಚಿಸುತ್ತಾ ಹಳ್ಳಿಗಳ ಹಿಂದುಳಿಕೆಗೆ ಸೃಜನಶೀಲತೆ ಮತ್ತು ವೈಚಾರಿಕತೆಯ ಕೊರತೆಯೆ ಕಾರಣವೆಂದು ತಮ್ಮ ಮೊದಲಿನ ಕಥನಗಳಲ್ಲಿ ಗುರುತಿಸಿದವರು ಆನಂತರದ ಕಥನಗಳಲ್ಲಿ

ಸಾಮುದಾಯಿಕ ಪ್ರಜ್ಞೆಯಿಂದ ಕೂಡಿದ ಸಮಾಜವನ್ನು ಗ್ರಹಿಸುತ್ತಾರೆ. ಪರಿಣಾಮವಾಗಿ ಹೊಸ ನೋಟಕ್ರಮ ಗ್ರಾಮೀಣ ಸಮಾಜದೊಳಗೆ ಹುದುಗಿರುವ ಜೀವಸೆಲೆಗಳನ್ನು ಗುರುತಿಸುವುದಕ್ಕೆ ಮೊದಲಾಗುತ್ತದೆ. ವೈಜ್ಞಾನಿಕ-ವೈಚಾರಿಕ ಚಿಂತನೆಗಳತ್ತ ತೆರೆದುಕೊಂಡ ಗ್ರಾಮೀಣ ಮನಸ್ಸುಗಳು ಹೊಸಹಾದಿಯಲ್ಲಿ ಚಲಿಸುವುದನ್ನು ಗ್ರಹಿಸುತ್ತಾರೆ.

ಶಾಂತಿನಾಥ ದೇಸಾಯಿಯವರಂತೆಯೇ ಮತ್ತೊಬ್ಬ ಸಮಕಾಲೀನ ಲೇಖಕರೆಂದರೆ **ಯಶವಂತ ಚಿತ್ತಾಲರು**. ಪ್ರಯೋಗಶೀಲ ನವ್ಯ ಕಥೆಗಾರರಾದ ಚಿತ್ತಾಲರು ವ್ಯಕ್ತಿವಾದಿ ಬರಹಗಾರರೆಂದೇ ಪ್ರಸಿದ್ಧರಾದವರು. ವ್ಯಕ್ತಿಯ ಮೇಲ್ಮೆಯನ್ನು, ಅವನ ಸುತ್ತ ಬೆಳೆದುಕೊಳ್ಳುವ ಕೀಳು ಭಾವನೆಗಳನ್ನೂ ಇವರ ಲೇಖನಗಳು ಏಕಕಾಲದಲ್ಲಿ ಅನಾವರಣಗೊಳಿಸುತ್ತವೆ. ಅದರಲ್ಲೂ ಗಮನ ಹರಿಸಬೇಕಾದ ವಿಷಯವೇನೆಂದರೆ ವ್ಯಕ್ತಿಯ ಯಾವುದೇ ತರಹದ ಸ್ವಭಾವ ಮತ್ತು ನಡವಳಿಕೆ ಮೊದಲಿಗೆ ಆತನ ನೆಲೆಯಲ್ಲಿ ಸ್ಥಾಪನೆಯಾಗಿ, ನಂತರ ಸಮಾಜಮುಖಿಯಾಗಿ ರೂಪುಗೊಳ್ಳುತ್ತದೆ. ಈ ಅಂಶವೇ ಚಿತ್ತಾಲರ ಲೇಖನಗಳನ್ನು ನಿಯಂತ್ರಿಸಿದೆ ಮತ್ತು ಕ್ರಿಯಾತ್ಮಕಗೊಳಿಸಿದೆ. ತನಗಾದ ಅನುಭವಗಳನ್ನು ಪ್ರತಿಮಾ ನಿರ್ಮಿತಿ, ಸಾಮಾನ್ಯೀಕರಣ, ಅಂತರಂಗ ಪರಿವೀಕ್ಷಣೆಯಂತಹ ಹತ್ತು ಹಲವು ಸಾಹಿತ್ಯಕ ಸಾಧನೆಗಳಿಂದ ತನ್ನ ಬರವಣಿಗೆಯನ್ನು ಸಾರ್ಥಕಗೊಳಿಸುವ ಮತ್ತು ಅನನ್ಯಗೊಳಿಸುವ ಕಲೆಯಲ್ಲಿ ಚಿತ್ತಾಲರು ನಿಷ್ಣಾತರು. ಅವರ ಬರವಣಿಗೆಯ ಜೀವಂತಿಕೆಗೆ ಕಾರಣವಾದ ಅಂಶವೆಂದರೆ ಅವರ ವೈಚಾರಿಕ ಪರಿಣತಿ ಮತ್ತು ಮಾಧ್ಯಮ ನಿಷ್ಠೆಗಳ ನಡುವಿನ ಘರ್ಷಣೆ. ಗತಿಶೀಲವಾದ ಸಂವೇದನೆ ಹೊಂದಿದ ಚಿತ್ತಾಲರು ಮೂವತ್ತು ಮೂರು ವರ್ಷಗಳಲ್ಲಿ ಬರೆದ ಮೂವತ್ತು ಮೂರು ಕಥೆಗಳು ಬೆಳವಣಿಗೆಯಲ್ಲಿ ಹಾಗೂ ಪ್ರವೃತ್ತಿಯಲ್ಲಿ ವೈವಿಧ್ಯತೆಗಳನ್ನು ಕಂಡಿವೆ.

ನವ್ಯ ಯುಗದ ಪ್ರಯೋಗಶೀಲ ಕಥೆಗಾರರಾಗಿರುವ ಚಿತ್ತಾಲರ ಪ್ರಾರಂಭದ ಸಂಕಲನಗಳಲ್ಲಿ ಬಹುಭಾಗ ಕಥೆಗಳ ಹಿನ್ನೆಲೆಯಾಗಿ ಬರುವುದು ಉತ್ತರಕನ್ನಡ ಜಿಲ್ಲೆಯ ಬಂಕಿಕೊಡ್ಲ, ಹನೇಹಳ್ಳಿ ಮತ್ತು ಸುತ್ತಮುತ್ತಲಿನ ಹಳ್ಳಿಗಳು. ಹನೇಹಳ್ಳಿ ಚಿತ್ತಾಲರು ಹುಟ್ಟಿ ಬೆಳೆದ ಹಳ್ಳಿ. ಇಲ್ಲಿ ಬೆಳೆದ ಅವರ ಅನುಭವಗಳೇ ಕಥೆಗಳಾಗಿ ಮೂಡಿಬಂದಿವೆ. ಚಿತ್ತಾಲರೇ ಹೇಳುವಂತೆ 'ಉತ್ತರ ಕನ್ನಡಜಿಲ್ಲೆ ಅದರಲ್ಲೂ ನನ್ನ ಹುಟ್ಟೂರಾದ ಹನೇಹಳ್ಳಿ ಇವು ನನ್ನ ಮಟ್ಟಿಗೆ ಬರೇ ನೆಲದ ಹೆಸರುಗಳಲ್ಲ. ಬದಲಾಗಿ ನನ್ನ ಸಾಹಿತ್ಯದ ಹುಟ್ಟಿಗೆ ಕಾರಣವಾಗಿ ಅದರ ನಿರಂತರವಾದ ಜೀವ ಸೆಲೆಯಾಗಿ ನಿಂತ ಮೂಲಭೂತವಾದ ಪ್ರೇರಕ ಶಕ್ತಿಗಳಾಗಿವೆ'. ಅವರ ಪ್ರಕಾರ ಈ ಪರಿಸರಗಳು ಬೆಳೆದು, ತಲೆಯೆತ್ತಿ ನಿಲ್ಲು ಎಂದು ಪ್ರೋತ್ಸಾಹವಿತ್ತ ಸಂಗತಿಗಳು. ಇವರ ಕಥನ ಕ್ರಮದಲ್ಲಿ ವೈವಿಧ್ಯತೆ ಕಂಡು ಬಂದರೂ ವಸ್ತುವನ್ನು ಮಾತ್ರ ತಮ್ಮ ಹುಟ್ಟೂರಾದ ಹನೇಹಳ್ಳಿಯ ಪಾತ್ರಗಳ ಮೂಲಕವೇ ಪ್ರವೇಶಿಸುತ್ತಾರೆ. ಚಿತ್ತಾಲರೇ ಹೇಳುವಂತೆ ಹನೇಹಳ್ಳಿ ಮತ್ತು ಅಪ್ಪನ ಜೊತೆಗಿನ ಸಂಬಂಧ ಹಾಗೂ ಮೃತ್ಯುಪ್ರಜ್ಞೆ ಈ ಮೂರು ಸಂಗತಿಗಳು ಅವರ ಸೃಷ್ಟಿಕ್ರಿಯೆಯ ಮೂಲಭೂತ ಅಂಶಗಳು.

ಸಣ್ಣ ಕಥೆಯ ಲೋಕದಲ್ಲಿ ಚಿತ್ತಾಲರು ಮಿನುಗು ನಕ್ಷತ್ರವಾಗಿ ಗೋಚರಿಸುತ್ತಾರೆ. ಇವರ ಮೊದಲ ಕಥೆ 'ಬೊಮ್ಮಿಯ ಹುಲ್ಲು ಹೊರೆ' ೧೯೪೯ ರಲ್ಲಿ ಪ್ರಕಟವಾದಂತಹದ್ದು. ಈ ಕಥೆಯ ಪ್ರಧಾನ ವಸ್ತು ಕೆಳವರ್ಗದವರ ಶೋಷಣೆಯ ಕುರಿತಾಗಿದೆ. ಇದರ ನಂತರದ 'ಕಳ್ಳ ಗಿರಿಯಣ್ಣ'

ಕಥೆಯಲ್ಲಿನ ಗಿರಿಯಣ್ಣ ಒಬ್ಬ ಕಳ್ಳ. 'ಉತ್ತುಮಿ' ಕಥೆಯ ಉತ್ತುಮಿ ಅದರಲ್ಲಿ ವೇಶ್ಯೆ, ಆಬೋಲಿನ ಕಥೆಯಲ್ಲಿನ ಮನವೇಲ ಮೋಸಗಾರ. ಆಬೋಲಿನಳ ಮುಗ್ಧತೆಯನ್ನು ಉಪಯೋಗಿಸಿಕೊಂಡು ಆಕೆಯನ್ನು, ಸಮಾಜವನ್ನು ಏಕಕಾಲದಲ್ಲಿ ವಂಚಿಸುವ ವ್ಯಕ್ತಿ. ಸಂಪ್ರದಾಯ ಬದ್ಧ ಸಮಾಜದಲ್ಲಿ ತಮ್ಮ ಕಥೆಯನ್ನು ಮಾನವೀಯ ದೃಷ್ಟಿಕೋನದಿಂದ ವಿವರಿಸುವುದನ್ನು ನಾವು ಅವರ ಆರಂಭದ ಕಥೆಗಳಲ್ಲಿ ಕಾಣಬಹುದು. ಚಿತ್ತಾಲರ 'ಸಂದರ್ಶ' ಸಂಕಲನದ ಬಹುಪಾಲು ಕಥೆಗಳು ದಿನಕರ ದೇಸಾಯವರ ಜನಸೇವಕ ವಾರಪತ್ರಿಕೆಯ ಧಾರವಾಹಿಗಳಾಗಿ ಮೂಡಿಬಂದಂತಹವುಗಳು. ಚಿತ್ತಾಲರು ವಿನೋದ ದೃಷ್ಟಿಯಿಂದ ಬರೆದ 'ಒಂದು ತತ್ವದ ಸಲುವಾಗಿ' 'ಗುಂಡಾಭಟ್ಟರ ಮಡಿ' 'ಗಾನಪ್ರಿಯ ಶಂಭುಶಾಸ್ತ್ರಿ' 'ಮುಕುಂದನ ದಾಕ್ಷಿಣ್ಯ' ದಂತಹ ಕಥೆಗಳಲ್ಲಿನ ಹಾಸ್ಯಗಳನ್ನು ನೋಡಿದಾಗ ಈ ಕಥೆಗಳನ್ನು ಚಿತ್ತಾಲರು ಬರೆದಿದ್ದೇ! ಎನ್ನುವಷ್ಟರ ಮಟ್ಟಿಗೆ ಉದ್ಗಾರ ಮೂಡಿಸುತ್ತವೆ. ಆದರೆ ತದನಂತರದ ಸಮಯದಲ್ಲಿ ಚಿತ್ತಾಲರ ಮನಸ್ಸಿನಲ್ಲಿ ಆವರಿಸಿದ ದುಃಖ, ಸಂತಾಪ, ಸಂಕಷ್ಟಗಳು ಅವರ ಹಾಸ್ಯ ಪ್ರಜ್ಞೆಗೆ, ವಿನೋದಕಾರಿ ಲೇಖನಗಳಿಗೆ ಪ್ರತಿ ಬಂಧಕಗಳೆನಿಸಿಕೊಳ್ಳುತ್ತವೆ.

ಇವರ ಕಥೆಗಳಲ್ಲಿನ ಅನೇಕ ಪಾತ್ರಗಳು ನಿರಪರಾಧಿ ಯಾತನೆಯ ಹಾಗೂ ಸಾವಿನ ವಿರುದ್ಧ ಹೋರಾಡುತ್ತವೆ. ಇವರ 'ಮೂರುದಾರಿಗಳು' ಕಾದಂಬರಿಯಲ್ಲಿ ತನ್ನದೇ ದೃಷ್ಟಿಕೋನದಲ್ಲಿ ಚೌಕಟ್ಟಿನಲ್ಲಿ ವ್ಯಕ್ತಿಯ ನಡವಳಿಕೆ, ಗುಣ ಆತನ ಚರ್ಯೆಯನ್ನು ಊಹಿಸುವ 'ನಿರ್ಮಿತಿ'ಯ ಪ್ರಕ್ರಿಯೆ ನಿರ್ಮಲೆಗೆ ಕಂಟಕವಾಗುತ್ತದೆ. ಆಧುನಿಕ ಕಾಲದಲ್ಲಿ ವಿದ್ಯಾಭ್ಯಾಸ ಆರಂಭಿಸಿದ್ದೇ ಆಕೆ ಹೆಣ್ಣಾಗಿ ಮಾಡಿದ ಅಪರಾಧ, ಜೋಷಿ ರಂಗಪ್ಪನೊಂದಿಗೆ ಕಲ್ಪಿಸಿದ ಸಂಬಂಧವೇ ದೊಡ್ಡ ವಿಷಯವಾಗಿ ಹರಡಿ ಬೇರೆಯದೇ ಕಥೆಯಾಗಿ ಊರವರೆಲ್ಲರ ಮನೆ ಮಾತಾಗುತ್ತದೆ. ಇವರೆಲ್ಲರ ವಿರುದ್ಧ ಈಕೆ ಬಂಡಾಯ ಸಾರಿದರೂ ಬಂಡಾಯದ, ಅವರನ್ನು ವಿರೋಧಿಸುವ ಮಾರ್ಗ ತಿಳಿಯದ 'ನಿರ್ಮಲೆ' ಬಲಿಪಶುವಾಗುತ್ತಾಳೆ, ಕೊನೆಗೆ ಆತ್ಮಹತ್ಯೆಗೆ ಶರಣಾಗುತ್ತಾಳೆ.

'ಶಿಕಾರಿ'ಯ ನಾಗಪ್ಪನೂ ಪ್ರಾರಂಭದಲ್ಲಿ ಮೇಲಿನ ನಿರ್ಮಲೆಯಂತೆಯೇ ನಿರಪರಾಧಿತ್ವವನ್ನು ಸಾಬೀತುಪಡಿಸಲು ಹೊರಟವನು. ಅನೇಕ ದೌರ್ಬಲ್ಯಗಳನ್ನು ಹೊಂದಿದ್ದ ಮನುಷ್ಯ. ನಾಗರಿಕ ಸಮಾಜ ಈತನ ವ್ಯಕ್ತಿತ್ವದ ದುರ್ಬಲತೆಯನ್ನು ಬಳಸಿಕೊಂಡು; ಮಾಡಿರದ ತಪ್ಪನ್ನು ಈತನ ತಲೆಯ ಮೇಲೆ ಹೊರೆಸಿ ವ್ಯವಸ್ಥೆಯ ಗೊಂಬೆಯನ್ನಾಗಿಸಿಕೊಳ್ಳಲು ಪ್ರಯತ್ನಿಸುತ್ತದೆ. ತನ್ನ ನಿರಪರಾಧಿತ್ವವನ್ನು ಸಾಬೀತು ಪಡಿಸಲು ಅಡ್ಡಿಯಾಗಿದ್ದ ತನ್ನ ದೌರ್ಬಲ್ಯತೆಯನ್ನು ತನ್ನ ಅನುಭವದಿಂದ ಮೀರಿ ದೌರ್ಬಲ್ಯವನ್ನು ಬಂಡವಾಳವನ್ನಾಗಿಸಿಕೊಳ್ಳ ಹೊರಟ ವ್ಯವಸ್ಥೆಯ ವಿರುದ್ಧ ತಿರುಗಿಬಿದ್ದು ಅದಕ್ಕೆ ಸರಿಯಾಗಿ ಉತ್ತರಿಸುವ ಮಟ್ಟಕ್ಕೆ ಶಕ್ತನಾಗುತ್ತಾನೆ.

ಸಾಮಾನ್ಯವಾಗಿ ಚಿತ್ತಾಲರ ನಾಯಕರು ಸ್ವಪ್ರೇರಣೆಯಿಂದ ವ್ಯವಸ್ಥೆಯನ್ನು ಎದುರಿಸಿ ನಿಂತವರಲ್ಲ. ಆದರೆ ಅವರ ಆಗಿನ ಪರಿಸ್ಥಿತಿ, ಅಲ್ಲಿನ ಸಾಮಾಜಿಕ ವ್ಯವಸ್ಥೆ ಅವರನ್ನು ಮುಗಿಸಲೆತ್ನಿಸಿದಾಗ ಅದರ ವಿರುದ್ಧ ತಿರುಗಿಬೀಳುತ್ತಾರೆ. ಅವರ ದೌರ್ಬಲ್ಯತೆಗಳೆಂದರೆ ಅನುಭವಿಸಿದ್ದನ್ನು ಮರೆಯಲಾಗದೆ ತಮ್ಮ ಅನುಭವದಿಂದ ದೌರ್ಬಲ್ಯವನ್ನು ಹೋಗಲಾಡಿಸುವ ಬದಲು ಅನುಭವವನ್ನೇ ಭೀತಿಯಾಗಿಸಿಕೊಂಡು ಅಂತಹ ಪರಿಸ್ಥಿತಿ ಎದುರಾದಾಗ ದೌರ್ಬಲ್ಯವನ್ನು

ಮೆಟ್ಟಿನಿಂತವರು. ಇಲ್ಲೆಲ್ಲಾ ಸಮಾಜ ವ್ಯಕ್ತಿಯನ್ನು ಮೆಟ್ಟಲು ಒಮ್ಮೆ ಸಂಪ್ರದಾಯದ ಅಸ್ತ್ರವನ್ನು ಬಳಸಿದರೆ ಮತ್ತೊಮ್ಮೆ ಅವರ ದೌರ್ಬಲ್ಯವನ್ನೇ ಬಂಡವಾಳವನ್ನಾಗಿಸಿಕೊಳ್ಳುತ್ತದೆ. ಚಿತ್ತಾಲರಿಗೆ 'ಕಥೆಯ ವಸ್ತುವಿನ ಕುರಿತ ಕಾಳಜಿಗಿಂತ ಕಲಾತ್ಮಕತೆಯ ಮೋಹವೇ ಅಧಿಕವಾಗಿದೆ' ಎನ್ನುವ ಕೆಲವು ವಿಮರ್ಶಕರಿಗೆ ಇವರು ತಮ್ಮ ಲೇಖನಿಯಿಂದಲೇ ಉತ್ತರಿಸುತ್ತಾರೆ. ನಂತರದ ಇವರ 'ಆಟ', 'ಛಲ', 'ಪಯಣ' ಇವುಗಳು ಚಿತ್ತಾಲರನ್ನು ಸಾಹಿತ್ಯ ವಲಯದಲ್ಲಿ ಎತ್ತರಕ್ಕೆ ಒಯ್ದಿವೆ.

'ಆಟ' ಸಂಕಲನದ ಕಥೆಗಳು ತಮ್ಮದೇ ಸ್ವಯಂಪೂರ್ಣತೆಯಿಂದ ಮೂಡಿಬಂದು ಚಿತ್ತಾಲರಿಗೆ ಗೌರವ ತಂದುಕೊಟ್ಟವು. ಈ ಸಂಕಲನದ ಬಹುಪಾಲು ಕಥೆಗಳ ವಸ್ತು; ಬದುಕು ಮತ್ತು ಸಾವು ಹಾಗೂ ಕಾಮ. ಇದರಲ್ಲಿ ನರಸಿಂಹ ಅನಿರೀಕ್ಷಿತವಾಗಿ ದುರಂತ ಸಾವಿಗೀಡಾದರೆ, ಬುಡಣ ಸಾಹೇಬರು ಆತ್ಮೀಯ ದೃಷ್ಟಿಕೋನದಿಂದ ಬದುಕಿನ ಎಲ್ಲ ಸ್ಥಿತಿಗಳನ್ನು ತಾಳ್ಮೆಯಿಂದ ಎದುರಿಸುತ್ತಾರೆ. ಇನ್ನು 'ಉತ್ತಮಿ' 'ಸೆರೆ' 'ಹಾವು' ಕಥೆಗಳಲ್ಲಿ ಕಾಮದ ಅವಶ್ಯಕತೆಯ ಚರ್ಚೆಯಿದೆ. ಜಿ, ಎಚ್, ನಾಯಕರು 'ಕಲಾತ್ಮಕ ಅಚ್ಚುಕಟ್ಟನ್ನು ಗಮನದಲ್ಲಿಟ್ಟುಕೊಂಡರೆ' ಚಿತ್ತಾಲರು ಪ್ರಾಯಶಃ ನವ್ಯ ಕಥೆಗಾರರಲ್ಲಿ ಮುಂಚೂಣಿಯಲ್ಲಿ ನಿಲ್ಲುತ್ತಾರೆ ಎಂದಿದ್ದಾರೆ. 'ಆಟ' ಸಂಕಲನದ ಮುನ್ನುಡಿಯಲ್ಲಿನ ಗೋಪಾಲಕೃಷ್ಣ ಅಡಿಗರ ಮತು ಅದರ ಸೊಗಸನ್ನು ವರ್ಣಿಸುವಂತಿದೆ. ಚಿತ್ತಾಲರ 'ಸಂದರ್ಶನ' ಕಥೆಯು 'ಅಪರಿಚಿತರು' 'ಮೂರು ದಾರಿಗಳು' 'ಶಿಕಾರಿ' ಈ ಮಾದರಿಯದ್ದೇ ಆಗಿದೆ. ಇದರಲ್ಲಿನ ಮಾಧವನಿಗೆ ತನ್ನನ್ನು ಉಡುಪಿನ ಮೂಲಕ ಗುರುತಿಸಿಕೊಳ್ಳಬೇಕಾದುದರ ಬಗ್ಗೆ ಸಿಟ್ಟು. ವ್ಯವಸ್ಥೆ ಅಥವಾ ಸಮಾಜ ವ್ಯಕ್ತಿಯೊಳಗಿನ ಗುಣ, ಆತನ ವ್ಯಕ್ತಿತ್ವಕ್ಕಿಂತ ಮಿಗಿಲಾಗಿ ಹೊರಗಿನ ಅಭಿವ್ಯಕ್ತಿಗೆ, ಅಲಂಕಾರಕ್ಕೆ ಮನ್ನಣೆ ಕೊಡುತ್ತಿರುವ ಬಗ್ಗೆ ಅಸಮಾಧಾನ. ನಿರ್ದಿಷ್ಟ ಚೌಕಟ್ಟಿನೊಳಗೆ ಬದುಕಲು ಒತ್ತಾಯಿಸಿ ಆತನ ಸೃಜನಶೀಲತೆಯನ್ನು ದಮನ ಮಾಡುವ ವ್ಯವಸ್ಥೆಯ ವಿರುದ್ಧ ಹೋರಾಡುತ್ತಾನೆ, ಅದರಲ್ಲಿ ಯಶಸ್ವಿಯಾಗುತ್ತಾನೆ. ಹೀಗೆ ವ್ಯಕ್ತಿ ತನ್ನ ಅಂತಃಸತ್ವಕ್ಕೆ ಪರಕೀಯನಾಗ ಹೊರಟಾಗ ತನ್ನ ದೃಢತೆಯಿಂದ ಆ ಸವಾಲನ್ನು ಮೆಟ್ಟಿ ನಿಲ್ಲುತ್ತಾನೆ.

ಚಿತ್ತಾಲರು ಇದುವರೆಗೆ ನಾಲ್ಕು ಕಾದಂಬರಿಗಳನ್ನು ರಚಿಸಿದ್ದಾರೆ. ಮೂರು ದಾರಿಗಳು, ಶಿಕಾರಿ, ಛೇದ ಮತ್ತು ಪುರುಷೋತ್ತಮ. ಈ ನಾಲ್ಕರಲ್ಲಿ 'ಛೇದ'ವನ್ನು ಬಿಟ್ಟು ಇನ್ನುಳಿದ ಮೂರರಲ್ಲಿ ಹನೇಹಳ್ಳೀಯ ಪರಿಸರ ಮತ್ತು ಅದಕ್ಕೆ ಸಂಬಂಧಿಸಿದ ಪಾತ್ರಗಳು ಮೂಡಿಬಂದಿವೆ. ಕಥೆಗಳಿಗೂ ಮತ್ತು ಕಾದಂಬರಿಗಳಿಗೂ ಸಂಬಂಧವಿರುವುದನ್ನು ನಾವಿಲ್ಲಿ ಗುರುತಿಸಬಹುದು. ಇವರ 'ಮೂರು ದಾರಿಗಳು' ಕಾದಂಬರಿ ಜನಮಾನಸದಲ್ಲಿ ಬಹುಕಾಲ ಉಳಿಯುವಂತಹ ಕೃತಿಯಾದರೆ, ಜಿ ಎಸ್ ಅಮೂರ್ ಅವರ ಮತಾನುಸಾರ ಚಿತ್ತಾಲರ 'ಶಿಕಾರಿ' ಕನ್ನಡದ ಹತ್ತು ಅತ್ಯುತ್ತಮ ಕಾದಂಬರಿಗಳಲ್ಲಿ ಒಂದು. ಚಿತ್ತಾಲರ 'ಶಿಕಾರಿ' ಕತ್ತಲೆಯಿಂದ ಬೆಳಕಿನೆಡೆಗೆ ಸಾಗುವ ಪ್ರಕ್ರಿಯೆಗೆ ಸಾಕ್ಷಿಯಾಗಿದೆ. ಇವರ 'ಛೇದ' ಕಾದಂಬರಿಯಲ್ಲಿ ಚಿತ್ತಾಲರ ಜೀವನ ಗ್ರಹಿಕೆಗಳ ಮುಂದಿನ ಹಂತವನ್ನು ಕಾಣಬಹುದು. 'ಪುರುಷೋತ್ತಮ' ಕಾದಂಬರಿಯ ಪುರುಷೋತ್ತಮನನ್ನು 'ಶಿಕಾರಿ'ಯ ನಾಗಪ್ಪನ ಮುಂದುವರೆದ ಭಾಗವೆಂದುಕೊಳ್ಳಬಹುದು. ಪುರುಷೋತ್ತಮ ಕಾದಂಬರಿ ಚಿತ್ತಾಲರ ಮಹತ್ವಕಾಂಕ್ಷೆಯ ಕಾಳಜಿಗಳನೆಲ್ಲ ಏಕೀಕರಣಗೊಳಿಸುವಂತಹ ಮುಖ್ಯ ಕಾದಂಬರಿಯಾಗಿದೆ.

ಚಿತ್ತಾಲರು ತಮ್ಮ ಕೃತಿಗಳಲ್ಲಿ ನಿಜವಾದ ಮಾನವೀಯ ಅನುಕಂಪದ ಅಗತ್ಯವನ್ನು ಎತ್ತಿ ಹಿಡಿದಿದ್ದಾರೆ. ಚಿತ್ತಾಲರು ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ತನ್ನದೇ ಆದ ಹೊಸ ಆಯಾಮವನ್ನು ಸೇರಿಸಿದ್ದಾರೆ. ಅವರ ಸೃಜನಶೀಲತೆಯ ಫಲವೇ ಅವರ 'ಆಟ' ಮತ್ತು 'ಶಿಕಾರಿ'. ಸಾಹಿತ್ಯ ಮಾಧ್ಯಮದ ಸಾಧ್ಯತೆ ಮತ್ತು ಪರಿಮಿತಿಗಳ ಖಚಿತವಾದ ತಿಳುವಳಿಕೆ ಅವರ ಬರವಣಿಗೆಯ ಲಕ್ಷಣವಾಗಿದೆ. ಸಣ್ಣ ಕಥೆಗೆ ಇದು ಸಾಧ್ಯವೇ ಎಂಬ ಬೆರಗು ಮೂಡಿಸುವಂತಹ ಸೇವೆಯನ್ನು ಚಿತ್ತಾಲರು ಕಥಾಸಾಹಿತ್ಯಕ್ಕೆ ನೀಡಿದ್ದಾರೆ. ಕಥೆಯ ನಿರ್ಮಾಣದಲ್ಲಿ ಅವರು ತೋರಿಸುವ ಜಾಣ್ಮೆ ಮೆಚ್ಚುವಂತಹದ್ದು. ಅದರಲ್ಲಿನ ವಸ್ತುವಿನ ಜೋಡಣೆ ಸೊಗಸಾಗಿ ಮೂಡಿಬಂದಿರುತ್ತದೆ. ಇವರ ಕೃತಿಗಳು ನಮ್ಮ ಲೋಕಜ್ಞಾನವನ್ನು ವಿಸ್ತರಿಸಬಲ್ಲಂತಹ ಸಾರ್ಥಕ ಕೃತಿಗಳಾಗಿವೆ. ತಮ್ಮ ಸಾಹಿತ್ಯ ರಚನೆಯ ಪ್ರಕ್ರಿಯೆ ಮತ್ತು ಆಂತರಂಗಿಕ ಬದುಕಿನ ಬಗ್ಗೆ ವಿವರಗಳನ್ನು ಒದಗಿಸಿದ ಸಾಹಿತಿಗಳಲ್ಲಿ ಚಿತ್ತಾಲರನ್ನು ಮೀರಿಸುವ ಸಾಹಿತಿ ಮತ್ತೊಬ್ಬರಿಲ್ಲ. ಹೀಗೆ ಚಿತ್ತಾಲರು ತಮ್ಮ ಸಾಹಿತ್ಯ ಪ್ರಪಂಚಕ್ಕೆ ಅಖಂಡತೆಯನ್ನೊದಗಿಸಿದ್ದಾರೆ. ಕನ್ನಡ ಸಾಹಿತ್ಯ ಸಂದರ್ಭದಲ್ಲಿ ತಮ್ಮದೇ ಆದ ಛಾಪನ್ನು ಮೂಡಿಸಿದ್ದಾರೆ.

**ಯಶವಂತ ಚಿತ್ತಾಲ ಮತ್ತು ತೇಜಸ್ವಿ:** ಯಶವಂತಚಿತ್ತಾಲರು ಮನುಷ್ಯನ ಅಂತಃಕರಣವನ್ನು ಶೋಧಿಸುವುದರಲ್ಲಿ ಮಗ್ನರಾಗಿರುವಾಗ ಅವನೊಳಗೆ ನಡೆಯುವ ಸಂಘರ್ಷವನ್ನು ತಡವಾಗಿ ಮುಖಾಮುಖಿಯಾಗಿಸುತ್ತಾರೆ ಮತ್ತು ವ್ಯಕ್ತಿಯ ಮೇಲ್ಮೆಯನ್ನೂ, ಅವನ ಸುತ್ತ ಹುತ್ತಗಟ್ಟುವ ಕೀಳು ಭಾವನೆಗಳನ್ನು ಏಕಕಾಲದಲ್ಲಿ ಅನಾವರಣಗೊಳಿಸುವುದಕ್ಕೆ ಮುಂದಾಗುತ್ತಾರೆ. ತೇಜಸ್ವಿಯವರಲ್ಲಿ ಬದುಕಿನೊಳಗಿನ ಪ್ರಾಕೃತಿಕ ಸ್ಥಿತಿಯ ಸಂಘರ್ಷವನ್ನು ಸ್ಥಳೀಯ ಪ್ರತಿಕ್ರಿಯೆಯೊಳಗೆ ಹುದುಗಿಸಿ ನೋಡುವ ಪ್ರಯತ್ನವು ಅಧಿಕವಾಗಿದೆ. ತೇಜಸ್ವಿಯವರು ವ್ಯಕ್ತಿ ಎದುರಿಸುವ ಘಟನೆಗಳು ಅವನನ್ನು ಬದಲಾವಣೆಯತ್ತ ಕೊಂಡೊಯ್ಯುವುದರಿಂದ ಅದನ್ನು ಸೂಕ್ಷ್ಮವಾಗಿ ಗಮನಿಸಿ ಆತನ ಬದಲಾವಣೆಯ ಪ್ರಕ್ರಿಯೆಯನ್ನು ಸೃಜನಶೀಲವಾಗಿ ಕಟ್ಟಿಕೊಡುತ್ತಾರೆ. ಹದಿಹರೆಯದ ಹಂತದಲ್ಲಿ ಅನುಭವಿಸುವ ಕಾಮದ ಆಕ್ರಮಣದಿಂದ ತಪ್ಪಿಸಿಕೊಳ್ಳಲು ಹೆಣಗಾಡುವುದನ್ನು ಚಿತ್ರಿಸುವ ಚಿತ್ತಾಲರಲ್ಲಿ ಮೂಲಪ್ರವೃತ್ತಿಗಳಿಂದ ಮನುಷ್ಯನಿಗೆ ಬಿಡುಗಡೆಯಿಲ್ಲ ಎಂಬ ಧೋರಣೆ ಕಂಡುಬಂದರೆ, ತೇಜಸ್ವಿಯವರಲ್ಲಿ ದೇಹದ ಬಯಕೆಗಳಿಗಿಂತ ವ್ಯಕ್ತಿಯ, ಸ್ವಾತಂತ್ರ್ಯದ ಅಭಿವ್ಯಕ್ತಿಯಾಗಿ ಕಾಮ ಕಾಣಿಸಿಕೊಳ್ಳುತ್ತದೆ. ಕಾಮದ ಇರುವಿಕೆ ವ್ಯಕ್ತಿಯೊಳಗೆ ಜಾಗೃತವಾಗಿದ್ದು ವ್ಯಕ್ತಿಯ ಅಸ್ತಿತ್ವದ ಕುರುಹಾಗಿ ಮಾತ್ರ ಕಾಣಿಕೊಳ್ಳುತ್ತದೆ.

ಚಿತ್ತಾಲರು ಭ್ರಮಾತ್ಮಕ ಜಗತ್ತಿನೊಳಗೆ ವಿಹರಿಸುವ ವ್ಯಕ್ತಿ ತನ್ನತವನ್ನು ಗುರುತಿಸದೆ ಹೋಗುತ್ತಿರುವುದಕ್ಕೆ ಪರಂಪರೆಯನ್ನು ಕಾರಣವಾಗಿಸುತ್ತಾರೆ. ಅಂತರ್ಗತವಾಗಿರುವ ಪರಂಪರಾಗತ ನಂಬಿಕೆಗಳು ಸೃಷ್ಟಿಮಾಡಿರುವ ಸಮಾಜ, ಅದರ ಅಂಗವಾಗಿ ಮಾರ್ಪಟ್ಟಿರುವ ವ್ಯಕ್ತಿ ಅಂತಹ ವ್ಯವಸ್ಥೆಯು ಅಸಹನೀಯವೆನಿಸಿದರೂ ಅನಿವಾರ್ಯವಾಗಿ ಅದರಲ್ಲೇ ಉಳಿಯಬೇಕಾಗುತ್ತದೆ. ಅತ್ತಿಂದಿತ್ತ ಸರಿದಾಡುವ ಸ್ವಾತಂತ್ರ್ಯವಿದ್ದರೂ ಬಂಧನದ ಸಂಕೋಲೆಗಳಿಂದ ಬಿಡಿಸಿಕೊಳ್ಳಲಾರ. ರೂಢಿಗತ ಸಂಪ್ರದಾಯಗಳಿಂದ ಆವೃತನಾದ ಮನುಷ್ಯ ಪರಕೀಯನಾದಾಗ ಅವನನ್ನು ಆ ಸ್ಥಿತಿಯಿಂದ ಹೊರಗೆ ನಿಲ್ಲಿಸಿ ಸಾಮಾಜಿಕ ನೆಲೆಯಲ್ಲಿ ಅವಗತ ಮಾಡಿಕೊಳ್ಳಬೇಕಾದ ಚಿಂತನೆಗಳಿಗೆ ಮುಖಾಮುಖಿಯಾಗಿಸುತ್ತಾರೆ. ಈ ದೃಷ್ಟಿಯಿಂದ ತೇಜಸ್ವಿ ಮತ್ತು ಚಿತ್ತಾಲರಿಗೂ ಸಾಮ್ಯತೆ ಕಂಡುಬರುತ್ತದೆಯಾದರೂ ತೇಜಸ್ವಿ ಮನುಷ್ಯ ಪ್ರಕ್ರಿಯೆಯನ್ನು ದೇಶ ಕಾಲಾತೀತವಾದ

ಸಂಕೀರ್ಣಾವಸ್ಥೆಯ ಗೋಜಲು-ಗೊಂದಲದೊಳಗೆ ಗುರುತಿಸುವುದನ್ನು ಕಾಣಬಹುದು. ಮನೋವಿಶ್ಲೇಷಣಾತ್ಮಕ ಹಿನ್ನೆಲೆಯಲ್ಲಿ ಕಥಿತವಾಗುವ ಚಿತ್ತಾಲರ ಕೃತಿಗಳು ಸಂಕೇತ ಮತ್ತು ಪ್ರತಿಮೆಗಳನ್ನು ಅಭಿವ್ಯಕ್ತಿ ಮಾಧ್ಯಮವಾಗಿ ಬಳಸಿಕೊಂಡವು.

**ಲಂಕೇಶ್**

ಕನ್ನಡ ಸಾಹಿತ್ಯ ಜಗತ್ತಿನಲ್ಲಿ ವಿಭಿನ್ನವಾದ ಶೈಲಿಯಿಂದಲೇ ಪ್ರಸಿದ್ಧರಾದ ಲೇಖಕರು ಪಿ. ಲಂಕೇಶ್. ಇವರು ತಮ್ಮ ಭಾವನೆಗಳನ್ನು ಭಿನ್ನ ಧಾಟಿಯಲ್ಲಿ ತಮ್ಮದೇ ಶೈಲಿಯಲ್ಲಿ ವ್ಯಕ್ತಪಡಿಸುವ ವಿಶಿಷ್ಟ ಲೇಖಕರು. ಕಾವ್ಯ, ಸಣ್ಣ ಕತೆ, ವಿಮರ್ಶೆ, ನಾಟಕ, ಕಾದಂಬರಿ, ಅನುವಾದ ವಿಶೇಷವಾಗಿ ಪತ್ರಿಕಾರಂಗದಲ್ಲೂ ಕೃಷಿಕೈಗೊಂಡು ಯಶಸ್ಸಿನ ಹೆಜ್ಜೆ ಇಟ್ಟವರು. ಚಲನಚಿತ್ರದ ನಿರ್ದೇಶನದಲ್ಲೂ ಹೆಸರು ಪಡೆದು ರಾಷ್ಟ್ರಮಟ್ಟದಲ್ಲಿನ ಪ್ರಶಸ್ತಿಗಳನ್ನು ತಮ್ಮದಾಗಿಸಿಕೊಂಡವರು.

ಲಂಕೇಶರು ಮುಖ್ಯವಾಗಿ ಕಥೆಗಾರರು. ಮೂವತ್ತೇಳಕ್ಕೂ ಅಧಿಕ ಕಥೆಗಳನ್ನು ಬರೆದಿದ್ದಾರೆ. ಮೂರು ಕಾದಂಬರಿ, ಎಂಟಕ್ಕೂ ಅಧಿಕ ನಾಟಕಗಳು, 'ಬಿಚ್ಚು' ಮತ್ತು 'ತಲೆಮಾರು' ಎನ್ನುವ ಕವನ ಸಂಕಲನ ಹಾಗೂ 'ಪ್ರಸ್ತುತ' ಎನ್ನುವ ವಿಮರ್ಶ ಲೇಖನಗಳ ಸಂಗ್ರಹ ಕೃತಿಯನ್ನು ರಚಿಸಿದ ಇವರು 'ಹುಳಿಮಾವಿನ ಮರ' ಅನ್ನುವ ಆತ್ಮಕಥೆಯನ್ನು ರಚಿಸಿದ್ದಾರೆ. ಇವರ ಕೃತಿಗಳಲ್ಲಿ ಭಾವರಂಜಕತೆಗಿಂತ ಅತೃಪ್ತಿ, ಅಸಮಾಧಾನ, ಆಕ್ರೋಶಗಳು ಎದ್ದು ಕಾಣುತ್ತವೆ. ಲಂಕೇಶರ ಬರವಣಿಗೆಯಲ್ಲಿ ವ್ಯಕ್ತಿ ತಾನೇ ಕೇಂದ್ರವಾಗಿ ಅನುಮಾನ, ತಿರಸ್ಕಾರ, ಅನಾಥ ಸ್ಥಿತಿಯ ವಿಷಾದದ ನೆಲೆಗಳಲ್ಲಿ ಕಾಣಿಸಿಕೊಳ್ಳುತ್ತಾನೆ. ಲಂಕೇಶರು ಇತರ ಲೇಖಕರಿಗಿಂತ ಭಿನ್ನರು ಎಂದು ಹೇಳಲು ಅವರ 'ಅವ್ವ' ಕವನವೇ ಆಧಾರಭೂತವಾಗಿ ನಿಲ್ಲುತ್ತದೆ. ಲಂಕೇಶರ 'ಕೆರೆಯ ನೀರನ್ನು ಕೆರೆಗೆ ಚೆಲ್ಲಿ' ಸಂಕಲನದ 'ಕುರುಡು ಕಾಂಚಾಣ' ಮತ್ತು 'ನಮ್ಮ ನಡುವಿನ ಹುಡುಗ' ಸಮಾನಧೋರಣೆಯ ಕಥೆಗಳಾಗಿವೆ. 'ಕುರುಡು ಕಾಂಚಾಣ' ಕಥೆಯಲ್ಲಿ ಕ್ಷೌರಿಕ ತನ್ನ ತಾಯಿಯ ಅಂತ್ಯಸಂಸ್ಕಾರಕ್ಕಾಗಿ ಸಹಾಯವನ್ನು ನಾಯಕರ ಬಳಿ ಕೇಳಿದಾಗ ಮೊದಲಿಗೆ ಒಪ್ಪಿದ್ದ ನಾಯಕರು ನಂತರ ಹೆಂಡತಿಯ ಮಾತಿಗೆ ಕಟ್ಟುಬಿದ್ದು ಆತನ ಬೇಡಿಕೆಯನ್ನು ಪಲ್ಲಟಗೊಳಿಸುತ್ತಾರೆ. ಹೀಗೆ ಅಸಹಾಯಕ ಸ್ಥಿತಿಯ ಕ್ಷೌರಿಕ ನಾಯಕನ ಕ್ಷೌರಕ್ಕೆ ಸಿಗದಾಗುತ್ತಾನೆ. ಇಲ್ಲಿ ಬೇಡಿಕೆ ನೀಡಿಕೆಗಳೇ ಪ್ರಧಾನವಾಗಿದ್ದರೂ ಆತನ ವಿನಮ್ರ ಬೇಡಿಕೆಯನ್ನು ತಿರಸ್ಕರಿಸುವುದರಿಂದ ನಾಯಕ ಆತನ ಕ್ಷೌರಿಕನ ಆಯ್ಕೆಯ ಸ್ವಾತಂತ್ರವನ್ನು ಕಳೆದುಕೊಳ್ಳುತ್ತಾನೆ. ಹಣದ ವ್ಯಾಮೋಹಕ್ಕೆ ಒಳಗಾಗಿ ಸಣ್ಣತನದ ಪರಮಾವಧಿಯನ್ನು ಪ್ರಕಟಿಸುತ್ತಾನೆ. 'ನಮ್ಮ ನಡುವಿನ ಹುಡುಗ' ಕಥೆಯಲ್ಲಿ ನಾಯಕ ಮೊದಲಿಗೆ ಸ್ವಾಭಿಮಾನಿಯಾಗಿದ್ದರೂ ಕೊನೆಗೆ ಅಸಹಾಯಕನಾಗಿ ಸಣ್ಣತನವನ್ನು ತೋರ್ಪಡಿಸುತ್ತಾನೆ.

ಲಂಕೇಶರ 'ನಿವೃತ್ತರು' ಕಥೆಯಲ್ಲಿ ಭಿನ್ನಮನಸ್ಸಿನ ಇಬ್ಬರು ಗೆಳೆತನಕ್ಕೆ ಹಂಬಲಿಸಿ ಅಧಿಕಾರದ ದರ್ಪದಿಂದ ಪರಸ್ಪರ ಸರಿಹೊಂದದೆ ಕಿತ್ತಾಡುವ ರೀತಿ ಗುಣಾತ್ಮಕವಾಗಿ ಮೂಡಿಬಂದಿದೆ. ಮತ್ತೊಂದು ಕಥೆ 'ಉಮಾಪತಿಯ ಸ್ಕಾಲರ್‌ಶಿಪ್‌ಯಾತ್ರೆ'ಯು ಶಿಕ್ಷಣದಿಂದ ಗ್ರಾಮೀಣ ಕುಟುಂಬಗಳಲ್ಲಿ ತಲೆದೋರಿದ ಬಿಕ್ಕಟ್ಟುಗಳನ್ನು ಯಶಸ್ವಿಯಾಗಿ ನಿರೂಪಿಸುತ್ತದೆ. ಇನ್ನು ಲಂಕೇಶರು 'ಕಲ್ಲುಕರಗುವ ಸಮಯ' ಸಂಕಲನದ ಕಥೆಗಳಲ್ಲಿ ತಮ್ಮ ಎಂದಿನ ಸಿಟ್ಟು, ಆಕ್ರೋಶವನ್ನು ಬಿಟ್ಟು ಸಮಾಧಾನದಿಂದ, ತುಂಬಾ ಪ್ರೀತಿಯಿಂದ ಈ ಕಥೆಗಳನ್ನು ನಿರೂಪಿಸಿದ್ದಾರೆ.

ಈ ಕಥೆಗಳು ಅಷ್ಟೇ ಸೊಗಸಾಗಿ ಮೂಡಿಬಂದು ಲಂಕೇಶರಿಗೆ ಗೌರವ ತಂದುಕೊಡುವಲ್ಲಿ ಯಶಸ್ವಿಯಾಗಿವೆ.

ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ಲಂಕೇಶರು ನಾಟಕಕಾರರಾಗಿ ಹೆಚ್ಚು ಪ್ರಸಿದ್ಧಿಯನ್ನು ಪಡೆದವರು. ಅನಂತಮೂರ್ತಿಯವರಿಂದ 'ಲಂಕೇಶರ ಕಥೆಗಳು ಹೆಚ್ಚು ಪ್ರಬುದ್ಧವಾಗಿರುತ್ತವೆ' ಎಂದು ಹೇಳಿಸಿಕೊಂಡವರು, ಲಂಕೇಶರ ನಾಟಕಗಳಲ್ಲಿ ವ್ಯವಸ್ಥೆಯ ಅವಸ್ಥೆ, ಹತಾಶೆ, ಆಕ್ರೋಶ, ಸಿಟ್ಟು, ಸಾಮಾಜಿಕ ಅಸಮಾನತೆಯ ವಿರುದ್ಧ ಪ್ರತಿಭಟನೆ ಇವುಗಳೇ ಮುಖ್ಯ ವಸ್ತುಗಳಾಗಿರುತ್ತವೆ. ಇವರ ನಾಟಕಗಳಲ್ಲಿ ಆಸ್‌ಬೋರ್ನ್‌ನ ಪ್ರಭಾವ ಎದ್ದು ಕಾಣುತ್ತದೆ. ಆದ್ದರಿಂದಲೇ ಲಂಕೇಶನ್ನು 'ಕನ್ನಡರಂಗಭೂಮಿಯ ಆಸ್‌ಬೋರ್ನ್' ಎಂದೇ ಕರೆಯುತ್ತಾರೆ. ಇವರ 'ಕ್ರಾಂತಿ ಬಂತು ಕ್ರಾಂತಿ' ಒಂದು ತರಹದ ಪ್ರತಿಭಟನೆಯ ನಾಟಕ. ಸಮಾಜವಾದದ ಹೆಸರಿನಲ್ಲಿ ನಡೆಯುವ ರಾಜಕೀಯ ಡಾಂಭಿಕತನದ ವಿಡಂಬನೆಯ ಧ್ವನಿಯಿದೆ. ಈ ನಾಟಕ ವೈಚಾರಿಕ ಕ್ರಾಂತಿಯತ್ತ ಯುವಕರನ್ನು ಬಡಿದೆಬ್ಬಿಸಿತು. 'ಸಂಕ್ರಾಂತಿ' ಮತ್ತು 'ಗುಣಮುಖ' ಇವು ಇನ್ನೊಂದು ತರಹದ ನಾಟಕಗಳು. 'ಸಂಕ್ರಾಂತಿ' ಯಲ್ಲಿ ಬಸವಣ್ಣನ ಕಾಲದ ವ್ಯವಸ್ಥೆ ಮತ್ತು ಕ್ರಾಂತಿಯ ನಡುವಣ ಸಂಘರ್ಷದ ಚಿತ್ರಣವಿದೆ. ಇದರಲ್ಲಿ ಸವರ್ಣೀಯರ ಮತ್ತು ದಲಿತರ ಹೋರಾಟದ ಧ್ವನಿಯಿದೆ. 'ಗುಣಮುಖ' ನಾಟಕ 'ನಾದಿರ್ ಷಾ' ನ ಸೋಲು, ಹತಾಶೆ, ಮಾನಸಿಕ ಅಸ್ವಸ್ಥತೆ, ಸ್ವಪ್ರತಿಷ್ಠೆಯ ಅಹಂಕಾರವನ್ನು ತೋರಿಸುತ್ತದೆ. ಉಲ್ಬಣಗೊಳ್ಳುವ ರೋಗದಿಂದ, ಅಸ್ವಸ್ಥತೆಯಿಂದ ಹೊರಬರುವ ದಾರಿಯನ್ನು ಅಲಾವಿಖಾನ್‌ನ ಮುಖಾಂತರ ಹೇಳಿಸಿದ್ದಾರೆ.



ಲಂಕೇಶರ ಸಾಹಿತ್ಯದಲ್ಲಿ ನಾವು ಗುರುತಿಸಬಹುದಾಗಿದ್ದು ವ್ಯಕ್ತಿಯ ಹೊರಗಿನ ಚಿತ್ರಣವನ್ನಲ್ಲ ಹೊರತಾಗಿ ಆತನ ಒಳಗಿನ ವಿಕೃತತೆ ನೋವು, ವಿಷಾದ ಮತ್ತು ಅಂತಃ ವ್ಯಕ್ತಿತ್ವ. ಲಂಕೇಶರು ವ್ಯವ್ಯಸ್ಥೆಯ ಅಸಹಜತೆಯ ವಿರುದ್ಧ ವ್ಯಕ್ತಿಯನ್ನು ಸ್ಥಾಪಿಸಲು ಪ್ರಯತ್ನಿಸುತ್ತಾರೆ. ಲಂಕೇಶರಲ್ಲಿ ಸಹಜತೆಯತ್ತಲೇ ಒಲವು ಹೆಚ್ಚುತ್ತಾ, ಅಸಹಜತೆ ವ್ಯಕ್ತಿಯನ್ನು ಸಮಾಜ ಮತ್ತು ಬದುಕಿನಿಂದ ವಿಮುಖನಾಗುವಂತೆ ಮಾಡುತ್ತದೆ. ವ್ಯವಸ್ಥೆಯ ವಿರುದ್ಧವೂ ಕೂಡ ಸಹಜ ಬದುಕು ಪರಕೀಯತೆಯಿಂದ ಮುಕ್ತಿ ಹೊಂದಲು ಸಹಾಯಕವಾಗುತ್ತದೆ. ಲಂಕೇಶರ ಕೃತಿಗಳಲ್ಲಿ ವ್ಯಕ್ತಿ ತನ್ನ ಅಸ್ತಿತ್ವ ಉಳಿಸಿಕೊಳ್ಳಲು ಹಾಗೂ ಹೋರಾಡಲು ಕಾಮವನ್ನು ಪ್ರಬಲ ಶಕ್ತಿಯಾಗಿ ಬಳಸಿಕೊಳ್ಳುತ್ತಾನೆ. **ಕುರುಡು ಕಾಂಚಾಣ, ನಮ್ಮ ನಡುವಿನ ಹುಡುಗ** ಕಥೆಗಳಲ್ಲಿ ಹೆಣ್ಣು ಗಂಡಿನ ಈ ದೌರ್ಬಲ್ಯವನ್ನು ತನ್ನ ಕೆಲಸಕ್ಕೆ ಬಳಸಿಕೊಳ್ಳುತ್ತಾಳೆ. ಇದನ್ನೇ ಒಂದು ಶಕ್ತಿಯಾಗಿ ಬದಲಾಯಿಸಿಕೊಳ್ಳುತ್ತಾಳೆ. ಲಂಕೇಶರ **ಬಿರುಕು** ಕಥೆಯ ಬಸವರಾಜನಿಗೆ ಶಾಂತಾಳ ನಗು ಆತನಲ್ಲಿ ಸ್ಫೂರ್ತಿಯನ್ನು ತುಂಬುವ ಸಾಧನವಾದರೆ, **ಕೆರೆಯ ನೀರನ್ನು ಕೆರೆಗೆ ಚೆಲ್ಲಿ** ಕಥೆಯಲ್ಲಿ ಗೌರಿ ಪಟ್ಟಣದ ಸೋದರ ಮಾವ ಪರಮೇಶನ ಅಹಂ ಹಾಗೂ ಬಿನ್ನಾಣದ ಮುಂದೆ ತಲೆ ಎತ್ತಿ ನಿಲ್ಲಲು ಆಶ್ರಯಿಸುವುದು ಶಿವರುದ್ರನನ್ನು. ಇದರಂತೆಯೇ **ಜೊತೆಗಾರ** ಕಥೆಯ ನಾಯಕರು ಸಾವಿನ ಭಯವನ್ನು ಮತ್ತು ಬದುಕಿನ ಶೂನ್ಯತೆಯನ್ನು ಹೋಗಲಾಡಿಸಿಕೊಳ್ಳಲು ಹಿಡಿಯುವ ದಾರಿ **ಜೋಸಫೈನ್** ತಮ್ಮ ಭೂಮಿಯನ್ನು ಉಳಿಸಿಕೊಳ್ಳಲು ಸ್ಟೀಫನ್‌ನ ಜನರ ವಿರುದ್ಧ ತಂತ್ರವಾಗಿ ಜೋಸಫೈನಾಳನ್ನು ಬಳಸಿಕೊಂಡು, ತಮ್ಮ ಸೋಲು ಮತ್ತು ನಿರಾಶೆಯನ್ನು ಆಕೆಯ ಸಂಗದಲ್ಲಿ ಮುಳುಗಿಸಲು ನಿರ್ಧರಿಸುತ್ತಾರೆ. ಲಂಕೇಶರು ಹೀಗೆ ಕಾಮವನ್ನು ಶಕ್ತಿಯ ಚೈತನ್ಯದ ಸ್ಫೂರ್ತಿಯ ಸೆಲೆಯಾಗಿ ಮಾತ್ರ ನೋಡದೇ ಅದನ್ನು ಸಹಜತೆಯ ಪ್ರತೀಕವಾಗಿ ಕಂಡಿದ್ದಾರೆ. ಇವರ ಕಥೆಯ

ಪಾತ್ರಗಳಿಗೆ ಕಾಮ, ಅಪರಾಧ ಎನ್ನಿಸುವುದಿಲ್ಲ. ಆದರೆ, ಆ ಅನುಭವವನ್ನು ಹೊಂದುವುದು ಮಾತ್ರ ತಮ್ಮ ದುಃಖ, ಅಸಂತೃಪ್ತಿಯಿಂದ ಹೊರಬರಲು ಹಾಗೂ ತನ್ನ ಅಸ್ತಿತ್ವ ಉಳಿಸಿಕೊಳ್ಳಲು. ಲಂಕೇಶರು ಕಾಮದ ಸಹಜ ಅಭಿವ್ಯಕ್ತಿ ಮತ್ತು ವಿಕೃತತೆಯನ್ನು ಒಳಗಿನಿಂದಲೇ ಗುರುತಿಸಿದ್ದಾರೆ. ಕಾಮದ ಸಹಜತೆ ಆತನಿಗೆ ಶಕ್ತಿ, ಚೈತನ್ಯವನ್ನು ತುಂಬಿದರೆ, ವಿಕೃತತೆ ಆತನ ದೌರ್ಬಲ್ಯವಾಗಿ ಮಾರ್ಪಾಡು ಹೊಂದಿ ಆತನನ್ನು ಕುಬ್ಜನನ್ನಾಗಿಸಿ ರೋಗಗ್ರಸ್ತನನ್ನಾಗಿಸುತ್ತದೆ. ಇಂತಹ ಚಿಂತನೆಗಳನ್ನು ಭಿನ್ನವಾಗಿ ಗುರುತಿಸುವ ಲಂಕೇಶರು ಸೂಕ್ಷ್ಮವಾಗಿ ಕಥನಗಳ ಚೌಕಟ್ಟಿನಲ್ಲಿ ಹಿಡಿದಿಡುತ್ತಾರೆ.

ಬಡವರು ಶೋಷಣೆಗೆ ಒಳಗಾಗಿ ಕೆಳಗಿಳಿಯುತ್ತಿರುವರು ಆದರೆ ಶ್ರೀಮಂತರು ಶೋಷಿಸುತ್ತಲೇ ಸಬಲರಾಗಿರುವರು ಎನ್ನುವ ತತ್ವದ ಅಡಿಯಲ್ಲಿಯೇ **ನಿವೃತ್ತರು, ನಾನಲ್ಲ, ಗೀತಾ ಗುತ್ತಿ ಆದದ್ದು, ಉಮಾಪತಿಯ ಸ್ಕಾಲರ್‌ಶಿಪ್ ಯಾತ್ರೆ** ರಚಿಸಿರುವಂತೆ ಕಂಡುಬರುತ್ತದೆ. **ನಿವೃತ್ತರು** ಕಥೆಯಲ್ಲಿ ಅಧಿಕಾರಿಯೋರ್ವ ತಾನು ಅಧಿಕಾರದಲ್ಲಿದ್ದಾಗ ತನ್ನ ಕೈ ಕೆಳಗಿನ ಅಧಿಕಾರಿಯನ್ನು ಹೇಗೆ ನೋಡುತ್ತಿದ್ದನೋ ಹಾಗೆಯೇ ನಂತರದಲ್ಲಿಯೂ ಅಂದರೆ ನಿವೃತ್ತನಾದ ಮೇಲೂ ಅಧಿಕಾರದ ದರ್ಪವನ್ನು ಪ್ರದರ್ಶಿಸಲು ಯತ್ನಿಸುತ್ತಾನೆ. **ನಾನಲ್ಲ** ಕಥೆಯು ಹಣವಿಲ್ಲದವನ ನಿಸ್ಸಹಾಯಕತೆಯ ಧ್ವನಿಯಾಗಿದೆ. ಸಮಾಜ ವ್ಯಕ್ತಿಯ ವ್ಯಕ್ತಿತ್ವ, ಗುಣಗಳನ್ನು ಮಾನದಂಡವಾಗಿ ತೆಗೆದುಕೊಳ್ಳುವ ಬದಲು **ಸಿರಿತನ**ವನ್ನು ಮಾನದಂಡವಾಗಿ ಬಳಸುತ್ತದೆ ಎನ್ನುವುದನ್ನು ನಾವಿಲ್ಲಿ ಕಾಣಬಹುದು. ಈ ಅಂಶ ಇನ್ನೂ ಸ್ಫುಟವಾಗುವುದು ಉಮಾಪತಿಯ **ಸ್ಕಾಲರ್‌ಶಿಪ್‌ಯಾತ್ರೆ** ಕಥೆಯಲ್ಲಿ. ಉಮಾಪತಿ ಅತ್ಯಂತ ಬುದ್ಧಿವಂತನಾಗಿದ್ದರೂ, ಪರೀಕ್ಷೆಗಳಲ್ಲಿ ಪ್ರಥಮ ಸ್ಥಾನ ಗಳಿಸಿದ್ದರೂ ಆತ ಹಣವಿಲ್ಲದವನಾಗಿದ್ದರಿಂದ ಶೇಖರಪ್ಪನಂತಹವರು ಆತನನ್ನು ಶೋಷಣೆಗೊಳಪಡಿಸುತ್ತಾ ಆತನನ್ನು **ಸ್ಕಾಲರ್‌ಶಿಪ್**ಗಾಗಿ ಅಲೆಯುವಂತೆ ಮಾಡುತ್ತಾರೆ. ಈ ಕಥೆಗಳಿಗಿಂತ **ರೊಟ್ಟಿ** ಕಥೆ ಭಿನ್ನವಾಗಿ ನಿಲ್ಲುತ್ತದೆ.

ಲಂಕೇಶರು ತಮ್ಮ ಸಾಹಿತ್ಯದಲ್ಲಿ ಹಳ್ಳಿಯನ್ನು ಧಾರ್ಮಿಕ ಸಾಮಾಜಿಕ ನಂಬಿಕೆಗಳ ಸ್ಥಾನ ಎಂದು ಬಿಂಬಿಸದೇ ಬದಲಾಗಿ ವ್ಯಕ್ತಿತ್ವದ ಭಿನ್ನತೆಯನ್ನು ತೋರಿಸುವ ಮೂಲಕ ಹಳ್ಳಿ ಮತ್ತು ನಗರದ ನಡುವಿನ ತಾರತಮ್ಯವನ್ನು ತೋರ್ಪಡಿಸುತ್ತಾರೆ. **ಬಿರುಕು** ಕಾದಂಬರಿಯ ಬಸವರಾಜನು ಹಳ್ಳಿ ಮತ್ತು ನಗರವನ್ನು ವಿಭಿನ್ನ ನೆಲೆಗಳೆಂದು ತಿಳಿಯುವುದರಿಂದ ಆತನಿಗೆ ನಗರವು ಕೃತಕ ಹಾಗೂ ಅಸಹಜತೆಯ ಲೋಕದಂತೆ ಗೋಚರವಾಗುತ್ತದೆ. ಇನ್ನು **ತಂದೆ** ಕಥೆಯಲ್ಲಿ 'ನಗರ'ವು ಪ್ರತಿಯೊಂದನ್ನು ಹಣ ಮತ್ತು ಸ್ಥಿತಿಯ ಆಧಾರದಲ್ಲಿಯೇ ಅಳೆದು ನೋಡುತ್ತದೆ ಎನ್ನುವುದನ್ನು ತೋರಿಸಿದ್ದಾರೆ. ಲಂಕೇಶರು ಹಳ್ಳಿಯನ್ನು ತನ್ನದೇ ಆದ ವಿಶಿಷ್ಟ ಅಸ್ಥಿತ್ವವನ್ನು ಹೊಂದಿರುವಂತಹುದು ಎಂಬ ಭಾವನೆಯಲ್ಲಿ ಈ ಕಥನವು ಆದರೆ **ಮುಸ್ಸಂಜೆಯ ಕಥಾ ಪ್ರಸಂಗ**ದಲ್ಲಿ ಕೃತ್ರಿಮತೆ, ಮೋಸ, ವಂಚನೆಯನ್ನು ನಗರದ ಹೊರತಾಗಿ ಹಳ್ಳಿಯಲ್ಲಿಯೂ ತೋರಿಸಿದ್ದಾರೆ. ಆದರೂ ಹಳ್ಳಿಗೆ ತನ್ನದೇ ಆದ ಜೀವನ ಶೈಲಿಯಿದೆ ಎನ್ನುವುದನ್ನು ನಿರೂಪಿಸಿದ್ದಾರೆ.

ಲಂಕೇಶರು ತಮ್ಮ ಅನೇಕ ಕೃತಿಗಳಲ್ಲಿ ಬಂಡಾಯ ಧೋರಣೆಯನ್ನು ವಿಭಿನ್ನವಾದ ರೀತಿಯಲ್ಲಿ ಅಭಿವ್ಯಕ್ತಗೊಳಿಸಿದ್ದಾರೆ. ಎಲ್ಲಾ ಬಂಡಾಯ ಲೇಖಕರಂತೆ, ಕಡ್ಡಿ ಮುರಿದಂತೆ ಎರಡು

ವಿರುದ್ಧ ಸ್ಥಿತಿಗಳನ್ನು ನಿಲ್ಲಿಸಿ ನೋಡುವುದಕ್ಕಿಂತ ಭಿನ್ನವಾಗಿ ಬದುಕಿನ ಸಂಕೀರ್ಣತೆಯಲ್ಲಿ ಶೋಷಣೆಯನ್ನು ಹಾಗೂ ಬಂಡಾಯದ ಧೋರಣೆಯನ್ನು ಲಂಕೇಶರು ತೋರಿಸಿದ್ದಾರೆ. ಲಂಕೇಶರ ಗಮನ ಇತರ ಬಂಡಾಯಗಾರರಂತೆ ವರ್ಣದ ಅಸಮಾನತೆಯನ್ನು ಬಿಟ್ಟು ಮನುಷ್ಯನ ಒಳಗಿರುವ ಅಮಾನವೀಯ ಅಂಶವನ್ನು ಗುರುತಿಸುವುದಾಗಿದೆ. ಈ ಅಮಾನವೀಯ ಅಂಶಗಳಿಂದ ಬಿಡುಗಡೆಯ ದಾರಿಯನ್ನು ಮನುಷ್ಯನ ಪ್ರೀತಿಯಲ್ಲಿ ಖಂಡರಿಸಿದ್ದಾರೆ. ಇವರ ಬರಹಗಳಲ್ಲಿ ಸಾಮಾಜಿಕ ಪರಿಸರ ಮತ್ತು ಅದರೊಡನೆ ಹೋರಾಡುವ ಮನುಷ್ಯ ಪ್ರಜ್ಞೆ ಮುಖ್ಯವಾಗಿ ಕಂಡುಬರುತ್ತದೆ.

ಸ್ವಾರ್ಥ, ಶೋಷಣೆ, ವಂಚನೆಯಿಂದ ಕೂಡಿದ ನಾಗರಿಕತೆಯಲ್ಲಿ ಮುಚ್ಚಿಹೋದ ಆತನ ನಿಜ ಸ್ವರೂಪದ ಅರಿವು ಇವರ ಕಥೆಯ ವಸ್ತು. ಬದುಕನ್ನು ಪೊರೆಯಬೇಕೆನ್ನುವ ರಂಗಪ್ಪನ ಛಲ ಕುಟುಂಬದ ಚೌಕಟ್ಟಿನಲ್ಲೇ ತನ್ನ ಸಾಧ್ಯತೆಗಳನ್ನು ಮುಖಾಮುಖಿ ಆಗಬಯಸುವ ಸಂದ್ಯಪ್ಪ, ಗಂಡಿನ ಒಡನಾಟದಲ್ಲೇ ರಮ್ಯ ಭಾವನೆಯನ್ನು ಕಾಣುವ ಸಾವಂತ್ರಿ, ಸಾಮಾಜಿಕ ಸ್ಥಿರತೆ ಕಾದುಕೊಳ್ಳಲು ಕೆಟ್ಟದ್ದನ್ನೇ ಮಾಡ ಬಯಸುವ ಧರ್ಮಣ್ಣ ಮತ್ತವನ ಗುಂಪು– ಹೀಗೆ ಇಂತಹ ಸನ್ನಿವೇಶಗಳನ್ನು ಲಂಕೇಶರು ಸುಂದರವಾಗಿ ಚಿತ್ರಿಸುತ್ತಾ ತನ್ಮತೆಯಿಂದ ಸೂಕ್ಷ್ಮವಾಗಿ ಅನಾವರಣಗೊಳಿಸಿದ್ದಾರೆ.

ತೇಜಸ್ವಿಯವರಂತೆ ಲೇಖಕ ಕಥೆಯಿಂದ ಕಥೆಗೆ ಭಿನ್ನನಾಗುತ್ತಾ ಬದಲಾಗುತ್ತಾ ಹೋಗುವುದನ್ನು ಲಂಕೇಶರಲ್ಲಿಯೂ ನೋಡಬಹುದು. ಬದುಕಿನ ಅನುಭವಗಳನ್ನು ಲಂಕೇಶರು ನಿಷ್ಠುರವಾಗಿ ಪ್ರಕಟಿಸುತ್ತಾರೆ. ನೈಜ ರೀತಿಯಲ್ಲಿ ಪಾತ್ರಗಳನ್ನು ಕಟ್ಟಿಕೊಡುವ ಲಂಕೇಶರು ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಅಪ್ರತಿಮ ಕಾಣಿಕೆಯನ್ನು ಸಲ್ಲಿಸಿ ದಿಗ್ಗಜರೆನಿಸಿಕೊಂಡಿದ್ದಾರೆ.

**ಲಂಕೇಶ್ ಮತ್ತು ತೇಜಸ್ವಿ:** ಲಂಕೇಶರು ಕಥೆಯಲ್ಲಿ ಕಥಾನಕವೇ ಇಲ್ಲವೆಂಬಂತೆ ಬರವಣಿಗೆಯನ್ನು ಆರಂಭಿಸಿದರೂ ಕ್ರಮೇಣ ಕಥಾನಕ, ಘಟನೆ, ವೃತ್ತಾಂತವನ್ನಾಗಿ ಕಥಾಭಿವ್ಯಕ್ತಿಯನ್ನು ಬೆಳೆಸಿದವರು. ಬದುಕಿನ ಅನುಭವಗಳಿಗೆ ಅತ್ಯಂತ ನಿಷ್ಠುರವಾಗಿ ತೆರೆದುಕೊಳ್ಳುವ ಲಂಕೇಶರು ಜೀವನವನ್ನು ತೀಕ್ಷ್ಣವಾಗಿ, ಕಟುವಾಗಿ ನೋಡುವ ಎದೆಗಾರಿಕೆಯನ್ನು ಹೊಂದಿದವರು. ಇವರಂತೆಯೇ ತೇಜಸ್ವಿಯವರು ಜೀವನದ ಏರಿಳಿತಗಳನ್ನು ಸಾಮಾಜಿಕ ಬದಲಾವಣೆಗಳನ್ನು ಸಾಮಾಜಿಕ ಮೌಲ್ಯಗಳ ಸೃಷ್ಟಿ ಮತ್ತು ನಾಶ ಹಾಗೂ ಆಧುನಿಕತೆಯ ಭರಾಟೆಯಲ್ಲಿ ಕಣ್ಮರೆಯಾಗಿರುವ ಮನುಷ್ಯನ ನಿಜವಾದ ಸ್ವರೂಪದ ಅರಿವು ಯಾವ ರೀತಿಯದು ಎಂಬುದನ್ನು ತಾತ್ವಿಕತೆಯ ಮೂಲಕ ಅರ್ಥಮಾಡಿಸುತ್ತಾರೆ. ಲಂಕೇಶರಿಗೆ ಸಹಜತೆ ಎಂಬ ನಿಶ್ಚಿತ ಧೋರಣೆಯತ್ತಲೇ ಒಲವು ಹೆಚ್ಚು ಅದರಿಂದಾಗಿಯೇ ವ್ಯಕ್ತಿಯನ್ನು ಬದುಕಿನಿಂದ ಸಮಾಜದಿಂದ ಅನ್ಯನನ್ನಾಗಿಸುವ, ಅಸಹಜತೆಯಿಂದ ದೂರವಿರುವುದನ್ನು ಕೃತಿಗಳಲ್ಲಿ ಗಮನಿಸಬಹುದು. ಲಂಕೇಶರು ಮನುಷ್ಯನಾಳದ ನಿಗೂಢ ಚೈತನ್ಯಕ್ಕೆ ಶಕ್ತಿಯಾಗಿ ದೇಹದ ಬಯಕೆಯನ್ನು ಗುರುತಿಸುತ್ತಾರೆ. ಕಾಮವು ಜೀವಂತಿಕೆಯ ಸ್ಫೂರ್ತಿಯ, ವ್ಯಕ್ತಿಗೆ ತನ್ನನ್ನು ಉಳಿಸಿಕೊಳ್ಳುವ ಅಗತ್ಯವಾದ ಸಾಧನ ಮಾತ್ರ. ತೇಜಸ್ವಿಯವರಲ್ಲಿ ದೇಹಕ್ಕಿಂತ ವ್ಯಕ್ತಿಯ ಪ್ರಜ್ಞೆಗೆ ಹೊಸ ಮೌಲ್ಯಗಳ ಅರಿವು ಪ್ರಧಾನವಾಗಿರುತ್ತದೆ. ಅಂದರೆ ವ್ಯಕ್ತಿಗೆ ತನ್ನ ಅಸ್ತಿತ್ವದ ಸ್ಥಾಪನೆಯ ದಿಸೆಯಲ್ಲಿ ದೇಹಕ್ಕಿಂತ ವ್ಯಕ್ತಿ ಸ್ವಾತಂತ್ರ್ಯ ಪ್ರಮುಖವಾಗಿ ತೋರುತ್ತದೆ.

## ಯು.ಆರ್. ಅನಂತಮೂರ್ತಿ

ಕನ್ನಡ ಸಾಹಿತ್ಯ ಕ್ಷೇತ್ರ ಕಂಡ ಅತ್ಯುತ್ತಮ ಲೇಖಕರು, ವಿಮರ್ಶಕರೂ ಆಗಿರುವ ಜ್ಞಾನಪೀಠ ಪ್ರಶಸ್ತಿ ಪುರಸ್ಕೃತ ಯು.ಆರ್ ಅನಂತಮೂರ್ತಿಯವರ ಸಾಹಿತ್ಯ ಕೊಡುಗೆ ಅಪಾರ. ಕಥೆ, ಕಾದಂಬರಿ, ಕವಿತೆ, ನಾಟಕ, ಪ್ರಬಂಧ, ವಿಮರ್ಶೆ ಹೀಗೆ ಅನಂತ ಕ್ಷೇತ್ರಗಳಲ್ಲಿ ಅನಂತಮೂರ್ತಿಯವರ ಕೊಡುಗೆ ಅಪಾರ. ಸಾಂಪ್ರಾದಾಯಿಕ ಹಾಗೂ ಪ್ರತಿಭಾವಂತ ಕುಟುಂಬದಿಂದ ಬಂದ ಅನಂತಮೂರ್ತಿಯವರು ಸಂಪ್ರದಾಯವಾದಿಯ ಕರ್ಮಠತನದ ಮತ್ತು ಹಠಮಾರಿತನ ಹಾಗೂ ಪರಂಪರೆಯ ಅರಿವಿಲ್ಲದ ಆಧುನಿಕತೆಯ ಸಿನಿಕತನ ಇವು ತಿರಸ್ಕಾರಯೋಗ್ಯ ಎಂದು ತಿಳಿದು ಹಾಗೆಂದೇ ಅಭಿವ್ಯಕ್ತಿಸಿರುವುದರಿಂದ ಇವರು ಶ್ರೇಷ್ಠ ಸೃಜನಶೀಲ ಚಿಂತಕರೆನಿಸಿದ್ದಾರೆ.

ಅನಂತಮೂರ್ತಿಯವರ ಮೊದಲ ಕಥೆ ಪ್ರಕಟವಾಗಿದ್ದು ಪ್ರಾಥಮಿಕ ಶಾಲೆಯಲ್ಲಿದ್ದಾಗ ಹೊರಡಿಸುತ್ತಿದ್ದ **ತರಂಗಿಣಿ** ಎಂಬ ಕೈಬರಹ ಪತ್ರಿಕೆಯಲ್ಲಿ. ತದನಂತರ **ಮಿತ್ರ ಚಿತ್ರಗುಪ್ತ** ಹಾಗೂ **ಜನಪ್ರಗತಿ** ಪತ್ರಿಕೆಗಳಲ್ಲೂ ಕೆಲವು ಕಥೆ, ಕವನಗಳನ್ನು ಬರೆದರು. ಆದರೆ ಅನಂತಮೂರ್ತಿಯವರಿಗೆ **ಕಥೆಗಾರ** ಪಟ್ಟವನ್ನು ಒದಗಿಸಿದ್ದು **ಎಂದೆಂದೂ ಮುಗಿಯದ ಕಥೆ** ಇದು ಮೊದಲಿಗೆ 'ವರ್ಸಿಟಿ ಟೈಮ್ಸ್'ನಲ್ಲಿ ಮೂಡಿಬಂದರೂ, ನಂತರದಲ್ಲಿ ಅಡಿಗರ ಮುನ್ನುಡಿಯೊಂದಿಗೆ ಇವರ ಮೊದಲ ಕಥಾಸಂಕಲನದ ರೂಪದಲ್ಲಿ ಮೂಡಿಬಂದಿತು. ಅನಂತಮೂರ್ತಿಯವರು ಬರೆದ ಕಥೆಗಳ ಸಂಖ್ಯೆ ಕಡಿಮೆ ಎನಿಸಿದರೂ ಅವರ ಕಥೆಗಳಲ್ಲಿನ ಸಾರ, ತತ್ವ ಮತ್ತು ಅದರಲ್ಲಿನ ಅವರ ಚಿಂತನೆಗಳು ಅವರ 'ಕಥೆಗಾರ' ಪಟ್ಟಕ್ಕೆ ಸಾರ್ಥಕತೆಯನ್ನು ತಂದುಕೊಟ್ಟವು. ಅನಂತಮೂರ್ತಿಯವರ ನಾಲ್ಕು ಕಥಾಸಂಕಲನಗಳಿಂದ ಒಟ್ಟು ಇಪ್ಪತ್ತೆರಡು ಕಥೆಗಳನ್ನು ಕಾಣಬಹುದು.

ಅನಂತಮೂರ್ತಿಯವರ ಮೊದಲ ಸಂಕಲನ **ಎಂದೆಂದೂ ಮುಗಿಯದ ಕಥೆ** ಸೊಗಸಾಗಿ ಮೂಡಿಬಂದಿದೆ. ಇದರಲ್ಲಿನ **'ಕಥೆ'** ಎಂಬ ಶಬ್ದವೇ ಬದುಕು ಮತ್ತು ಸಾಹಿತ್ಯ ಎಂಬ ಎರಡು ಅರ್ಥವನ್ನು ಧ್ವನಿಸುವಂತಿದೆ. ಯುವಕರು ಅಜ್ಜಂದಿರಾಗಿದ್ದಾರೆ, ಮಕ್ಕಳು, ಮೊಮ್ಮಕ್ಕಳಿಗೆ ವಯಸ್ಸಾಗಿದೆ. ಅಂದು ಈತ ಅವನ ಅಜ್ಜಿಯಿಂದ ಕೇಳಿದ ಕಥೆಯನ್ನೇ ಇಂದು ಅವನ ಮಕ್ಕಳು, ಮೊಮ್ಮಕ್ಕಳು ಅವರ ಅಜ್ಜಿಯರಿಂದ ಅದೇ ಕಥೆಯನ್ನೇ ಕೇಳಿದ್ದಾರೆ, ಕೇಳುತ್ತಿದ್ದಾರೆ. ಹಾಗೆಯೇ ಇವನ ಅಜ್ಜನಿಗೆ ಆಶ್ರಯ ನೀಡಿದ ಭೂಮಿಯೇ ಈತನಿಗೂ ಹಾಗೂ ಈತನ ಮೊಮ್ಮಕ್ಕಳಿಗೂ ಆಶ್ರಯ ನೀಡುತ್ತಿದೆ. ಹೀಗೆ ಬದುಕು ನಿರರ್ಗಳವಾಗಿ ಪ್ರವಾಹದಂತೆ ಹರಿಯುತ್ತಿರುತ್ತದೆ. ಹೀಗಾಗಿ ಬದುಕು ಕೊನೆಯನ್ನು ತಲುಪುದಿಲ್ಲ ಅಂತೆಯೇ ಕಥೆಗೂ ಕೊನೆಯನ್ನು ಕಾಣಿಸಲಾಗುವುದಿಲ್ಲ ಎಂಬ ವಿನ್ಯಾಸ ಇದರಲ್ಲಿದೆ. ಈ ಸಂಕಲನವು ಅನಂತಮೂರ್ತಿಯವರ ಸಮಗ್ರ ಸಾಹಿತ್ಯಕ್ಕೆ ಮುನ್ನುಡಿಯಂತಿದೆ. ಈ ಸಂಕಲನದ ಪ್ರಮುಖ ಕಥೆಯಾದ **ತಾಯಿ** ಕಥೆಯಲ್ಲಿನ ತಾಯಿ ಒಂದು ವಯಸ್ಸಿನಲ್ಲಿ ತನ್ನ ದೈಹಿಕ ಆಸೆಗಾಗಿ ಮಗನನ್ನು ನಿರಾಕರಿಸಿದರೆ, ತದನಂತರದಲ್ಲಿ ಆಕೆ ತನ್ನ ದೈಹಿಕ ಆಸೆಕಳೆದ ಮೇಲೆ ಮಗನನ್ನು ಹಂಬಲಿಸುವ ಸಹಜ ಸ್ವಭಾವ ತನ್ನ ಬದುಕಿಗೆ ತಾನಷ್ಟೇ ಪ್ರಧಾನವಾಗಿರುವುದಿಲ್ಲ ಎನ್ನುವ ಆಶಯವನ್ನು ಹೊಂದಿದೆ. ಇದರಲ್ಲಿ ಮಗನನ್ನು ಹುಲಿ ಹಿಡಿಯುವುದು ಒಂದು ತರಹದ ನಿರೂಪಣೆಯಂತಿದ್ದರೆ, ಅಬ್ಬಕ್ಕನೂ ಹುಲಿಯ ಬಾಯಿಗೆ ಸಿಕ್ಕಂತೆ ಈ ಕಥೆಯಲ್ಲಿ ಸಾಂಕೇತಿಕ ನಿರೂಪಣೆಯಿದೆ. ಹೀಗೆ **ಹುಲಿ** ಅನಂತಮೂರ್ತಿಯವರ ಸಾಹಿತ್ಯದಲ್ಲಿ

ಮನುಷ್ಯಾತೀತ ಸಂಕೇತದಂತೆ ಕಾಣಿಸುತ್ತದೆ, ಇದು ಅವರ ಬರವಣಿಗೆಗೆ ಪರಲೌಕಿಕ ಪರಿವೇಷವನ್ನು ಕಟ್ಟುತ್ತದೆ. ಅನಂತಮೂರ್ತಿಯವರ ಬರವಣಿಗೆಯ ವಿಶೇಷವೆಂದರೆ, ಮೂರ್ತವು ಒಮ್ಮೆಲೇ ಅಮೂರ್ತದ ಮಟ್ಟ ತಲುಪುತ್ತದೆ. ಲೌಕಿಕ ಜೀವನದ ವಿವರಗಳ ಜತೆಗೆ ಮಳೆ, ಗಾಳಿ, ನದಿಯ ವಿವರಗಳು ಸೇರಿಕೊಂಡು ಅವೆಲ್ಲವುಗಳ ಜಟಿಲ ಸಂಬಂಧದಲ್ಲಿ ಕಥೆ ಕಟ್ಟಿಕೊಳ್ಳುವುದಾಗಿದೆ. ಹುಟ್ಟು-ಸಾವುಗಳ ನಿತ್ಯ ಆವರ್ತನದೊಳಗೆ ಲೌಕಿಕ ಅನುಭವಗಳ ಸ್ವರೂಪದ ಜಿಜ್ಞಾಸೆಯನ್ನು ಇವರ ಸಾಹಿತ್ಯದಲ್ಲಿ ಒಂದು ಪ್ರಧಾನ ಅಂಶವಾಗಿ ಗುರುತಿಸಬಹುದು.

ಅನಂತಮೂರ್ತಿಯವರ **ಪ್ರಶ್ನೆ** ಸಂಕಲನದಲ್ಲಿ ಲೇಖಕರ ಅನುಭವಲೋಕ ಬೆಳೆದಿರುವುದನ್ನು ಕಾಣಬಹುದಾಗಿದೆ. ಮಾನವೀಯತೆಯ ನೆಲೆಯಡಿಯಲ್ಲಿ ಮಾತ್ರವಲ್ಲದೆ, ಸಮಾಜ, ಸಂಸ್ಕೃತಿ, ಧರ್ಮಗಳಂಥ ಸಾಂಸ್ಥಿಕ ರೂಪದಲ್ಲೂ ಅನುಭವ ವಿಸ್ತಾರವಾಗಿ ತೆರೆದುಕೊಂಡಿದೆ. ವರ್ತಮಾನವನ್ನು ವಾಸ್ತವದ ಒರೆಗಲ್ಲಿಗೆ ಕಠೋರವಾಗಿ ಹಚ್ಚಿ ಅನಂತಮೂರ್ತಿಯವರು ಮಾನವ ಸಂಸ್ಕೃತಿಯ ಒಳ ಮತ್ತು ಹೊರಗಿನ ಎರಡೂ ಪದರಗಳನ್ನು ಒಂದೇ ಸಮಯದಲ್ಲಿ ಎದುರಾಗುವಂತೆ ಮಾಡುತ್ತಾರೆ. ಇವರ **ಖೋಜರಾಜ**ದಲ್ಲಿ ಸಾಂಪ್ರದಾಯಿಕತೆಯನ್ನು ಅರ್ಥಮಾಡಿಕೊಳ್ಳಲಾರದ ದುಡುಕು ಸ್ವಭಾವವನ್ನು ಕಾಣಬಹುದು ಆದರೆ ಪೂರ್ಣವಾದ ರೀತಿಯಲ್ಲಿ ಅರುಂಧತಿ ಸಂಪ್ರದಾಯವನ್ನು ಹಾಗೂ ರಾಜಣ್ಣ ಆಧುನಿಕತೆಯನ್ನು ಪ್ರತಿನಿಧಿಸುವುದಿಲ್ಲ. ಆಧುನಿಕತೆಯನ್ನು ಕೇವಲ ಬೌದ್ಧಿಕ ವ್ಯತ್ಯಯವಾಗಿ ಮಾಡಿಕೊಳ್ಳುವ ರಾಜಣ್ಣನ ಈ ದುರ್ಬಲ ಅಂಶ ಸಂಪ್ರದಾಯದ ಆವರಣವನ್ನು ಕ್ರಿಯಾತ್ಮಕಗೊಳಿಸುವುದಿಲ್ಲ. ಆದ್ದರಿಂದ ಅರುಂಧತಿ ಇವನಿಂದ ಕೈಜಾರಿಹೋಗುತ್ತಾಳೆ. ಕೌಟುಂಬಿಕ ಸ್ತರದಲ್ಲಿ ವಾಸ್ತವಕ್ಕೆ ಸ್ಪಂದಿಸುವ ಅರುಂಧತಿ ಕ್ರಿಯಾಶೀಲವಲ್ಲದ ಬೌದ್ಧಿಕ ಮನಸ್ಸಿನ ರಾಜಣ್ಣನನ್ನು ನಿರಾಕರಿಸುತ್ತಾಳೆ. ಇದು ಸಹಜವು ಕೂಡಾ. ಇದನ್ನು ಬಿಟ್ಟು ಉಳಿದ ಕಥೆಗಳು ಜೀವನದ ಅನುಭವಗಳಿಗೆ ಅದು ತಂದಿಡುವ ಆಘಾತಗಳಿಗೆ ಅರ್ಥಪೂರ್ಣವಾಗಿ ಅದರ ಸಾಧ್ಯತೆಗಳಲ್ಲಿ ಮುಖಾಮುಖಿಯಾಗುವುದರಿಂದ ಅನಂತಮೂರ್ತಿಯವರ ಬರವಣಿಗೆಯ ಸಾಚಾತನವನ್ನು ಕಾಣಬಹುದಾಗಿದೆ. ಭಿನ್ನ ಸಂಸ್ಕೃತಿಗಳ ಘರ್ಷಣೆ, ಮನುಷ್ಯ ಮತ್ತು ಪರಿಸರದ ಸಂಬಂಧದ ಸಂಕೀರ್ಣತೆ, ಜಡ ಸಂಪ್ರದಾಯ ಹಾಗೂ ಸೃಜನಶೀಲತೆಯ ಮುಖಾಮುಖಿ, ಪರಂಪರಾಗತ ಬದುಕಿನಲ್ಲಿ ಆಧುನಿಕತೆಯ ಆಗಮನ. ಕಟ್ಟುಪಾಡುಗಳನ್ನು ಮೀರಿ ಹೋಗುವ ಹಂಬಲ ಈ ಪ್ರಮುಖ ಅಂಶಗಳು ಅನಂತಮೂರ್ತಿಯವರ ಕಥಾಸಾಹಿತ್ಯದಲ್ಲಿ ಕಾಣಬಹುದಾಗಿವೆ. ನಮ್ಮ ಸುತ್ತಲಿನ ಸಮಾಜ ಎದುರಿಸುತ್ತಿರುವ ಸಾಂಸ್ಕೃತಿಕ ಸಂಘರ್ಷದ ಸ್ವರೂಪವನ್ನು ಬಹುಮುಖೀ ನೆಲೆಯನ್ನು ತಮ್ಮ ಕಥೆಗಳ ಮೂಲಕ ವಿಶ್ಲೇಷಿಸಲು ಪ್ರಯತ್ನಿಸುವ ಅನಂತಮೂರ್ತಿಯವರ ಮುಂದಿನ ಹಂತವನ್ನು **ನವಿಲುಗಳು, ಸೂರ್ಯನ ಕುದುರೆ, ಅಕ್ಕಯ್ಯ**ದಂತಹ ಕಥೆಗಳಲ್ಲಿ ಕಾಣಬಹುದಾಗಿದೆ. ಮಾನವ ಜೀವನದ ಇತರ ಸಾಧ್ಯತೆಗಳನ್ನು ಹುಡುಕ ಹೊರಟಿರುವ ಬದುಕಿನ ಹಂಬಲವನ್ನು, ಪಾಶ್ಚಾತ್ಯ ಆಕೃತಿಗಳೊಳಗೆ ಅಡಗಿ ಕುಳಿತಿರುವ ದೇಸೀ ಆಕಾರಗಳ ನೆಲೆಯನ್ನು ಆಹ್ವಾನಿಸಿಕೊಳ್ಳುವುದನ್ನು ನಾವಿಲ್ಲಿ ಕಾಣಬಹುದಾಗಿದೆ.

ಅನಂತಮೂರ್ತಿಯವರ **ಸಂಸ್ಕಾರ** ಕಾದಂಬರಿ ಹಳೆಯ ಕಥಾ ವಸ್ತುವೊಂದನ್ನು, ಸನಾತನ ಪರಂಪರೆಯ ಪರಿಕಲ್ಪನೆಯನ್ನು ಸಮಕಾಲೀನಗೊಳಿಸುವಂತದ್ದು. ಬ್ರಾಹ್ಮಣ್ಯವನ್ನು ಧಿಕ್ಕರಿಸಿದ ಬ್ರಾಹ್ಮಣನೊಬ್ಬನ ಸಾವು, ತದನಂತರ ಆತನ ಶವಸಂಸ್ಕಾರವನ್ನು ಮಾಡಲು ಉದ್ಭವಿಸುವ

ಸಮಸ್ಯೆಗಳು ಕಾದಂಬರಿಯಲ್ಲಿ ಪ್ರಮುಖ ವಸ್ತುವೆನಿಸಿದೆ. ಆ ಶವಸಂಸ್ಕಾರದ ಸಮಸ್ಯೆ ವ್ಯಕ್ತಿತ್ವದ ಸಂಸ್ಕಾರವಾಗಿ ಪರಿವರ್ತನೆಗೊಳ್ಳುವ ಬಗೆ ಈ ಕಾದಂಬರಿಯ ವಸ್ತುವಿನ ವಿನ್ಯಾಸವೆನಿಸಿದೆ. ವೇದಾಂತ ಶಿರೋಮಣಿ ಪ್ರಾಣೇಶಾಚಾರ್ಯ ಮತ್ತು ಬ್ರಾಹ್ಮಣ್ಯವನ್ನು ಧಿಕ್ಕರಿಸಿದ ನಾರಣಪ್ಪ ಹಾಗೂ ಯಾವುದರ ಆಸೆಯಿಲ್ಲದೆ, ಹಂಗಿಲ್ಲದೆ ಅಪ್ಪಟವಾದ ಲೌಕಿಕ ಬದುಕಿನ ಇಹದ ವ್ಯಕ್ತಿ ಮಾಲೇರ ಪುಟ್ಟ ಈ ಮೂವರ ಜೀವನದ ಕ್ರಮಗಳು ಪರಸ್ಪರ ಮುಖಾಮುಖಿಯಾಗುತ್ತ ಸಂಸ್ಕಾರವೆಂಬುದು ಅದರ ಸ್ವರೂಪ ದರ್ಶನವೂ ಆಗಿಬಿಡುವ ಕ್ರಮ **ಸಂಸ್ಕಾರ** ಕಾದಂಬರಿಯನ್ನು ಶ್ರೇಷ್ಠ ಕೃತಿಯನ್ನಾಗಿಸಿದೆ. ಅನಂತಮೂರ್ತಿಯವರು ಮುಂದೆ ವಾಗ್ವಾದವಾಗಿ ಬೆಳೆಸುವ ಬ್ರಾಹ್ಮಣ-ಶೂದ್ರ ಪರಿಕಲ್ಪನೆ ಕಾದಂಬರಿಯ ಪ್ರಾಣೇಶಾಚಾರ್ಯ ಮತ್ತು ಚಂದ್ರಿ ಇವರ ಪಾತ್ರಗಳಲ್ಲಿ ಕಾಣಬಹುದಾಗಿದೆ. ಈ ಕಾದಂಬರಿ ಆಧಾರಿತ ಚಲನಚಿತ್ರ ರಾಷ್ಟ್ರಪತಿಯವರ ಸ್ವರ್ಣಪದಕ ಪ್ರಶಸ್ತಿಗೆ ಭಾಜನವಾಗಿದೆ. ಈ ಸಂಸ್ಕಾರ ಕಾದಂಬರಿಯು ಇವರದೇ ಘಟಶ್ರಾದ್ಧದ ಮುಂದುವರಿದ ಭಾಗದಂತಿದೆ. ಘಟಶ್ರಾದ್ಧದ ಸಾಂಕೇತಿಕತೆ **ಸಂಸ್ಕಾರ**ದಲ್ಲಿ ಹೆಚ್ಚಿನ ವಿಸ್ತಾರತೆಯನ್ನು ಪಡೆದುಕೊಳ್ಳುತ್ತದೆ. ಆದರೆ **ಘಟಶ್ರಾದ್ಧ**ದ ಕ್ರೂರ ಪ್ರಪಂಚದಲ್ಲಿ ಆ ಪ್ರಪಂಚದ ಇನ್ನೊಂದು ಸತ್ವವನ್ನು ಸೂಚಿಸಬಹುದಾದಂತಹ ಪ್ರಾಣೇಶಾಚಾರ್ಯರಂತಹ ಪಾತ್ರವಿಲ್ಲದಿರುವುದು ದುರಂತವೆನಿಸಿದೆ. **ಘಟಶ್ರಾದ್ಧ**ದಲ್ಲಿ ಶಾಸ್ತ್ರಿ ಮತ್ತವನ ಗೆಳೆಯರ ಬಂಡಾಯದ ನೆಲೆಗಳು ಗೋಚರವಾದರೆ, **ಸಂಸ್ಕಾರ**ದಲ್ಲಿ ನಾರಣಪ್ಪನ ಬಂಡಾಯಕ್ಕೆ ಒಂದು ಬಗೆಯ ಸೈದ್ಧಾಂತಿಕ ಗಟ್ಟಿತನ ಬಂದುಬಿಡುತ್ತದೆ. ಬ್ರಾಹ್ಮಣರ ಘೋಷಿತ ಮೌಲ್ಯಗಳು ಮತ್ತು ಅವುಗಳ ಆಚರಣೆಯಲ್ಲಿರುವ ದೊಡ್ಡ ಕಂದಕವನ್ನು **ಘಟಶ್ರಾದ್ಧ** ಕಣ್ಣ ಮುಂದೆ ತೆರೆದಿಡುತ್ತದೆ. ಆದ್ದರಿಂದ ವಿಕೃತಿ ಎಂಬುದು ಸಹಜ ಸ್ಥಿತಿ ಎನ್ನುವಂತಾಗಿದೆ. ಯಮುನಕ್ಕನ ದುರಂತ ಇದರ ಅತ್ಯಂತಿಕ ರೂಪವೆನಿಸಿದರೆ ನಾಣಿಯ ಅನುಭವಗಳು ಅದರ ದೈನಂದಿನ ಲಯಗಳನ್ನು ಸೂಚಿಸುತ್ತವೆ ಎನ್ನಬಹುದು. ಕಥೆಯಲ್ಲಿ ಸಹಾನುಭೂತಿ ಯಮುನಕ್ಕ ನಾಣಿಯರ ಕಡೆಗೆ ವಾಲಿದೆ ಎಂದೆನ್ನಿಸಿದರೂ ಶಾಸ್ತ್ರಿ ಮತ್ತವನ ಗೆಳೆಯರ ಇಕ್ಕಟ್ಟಿನ ಪರಿಸ್ಥಿತಿಯನ್ನು ತೋರಿಸುವುದರ ಮೂಲಕ ಸಮತೋಲನವನ್ನು ಕಾಪಾಡಿಕೊಳ್ಳಲು ಪ್ರಯತ್ನಿಸುತ್ತದೆ.

ಅನಂತಮೂರ್ತಿಯವರ ಇನ್ನೊಂದು ಕಾದಂಬರಿ **ಭಾರತೀಪುರ**. ಇದರ ಶೀರ್ಷಿಕೆಯೇ ಸೂಚಿಸುವಂತೆ ಇದು ಸ್ವಾತಂತ್ರ್ಯೋತ್ತರ ಭಾರತದ ಒಂದು ಸಣ್ಣ ರೂಪವೆನಿಸಿದೆ. **ಭಾರತೀಪುರ**ದ ವ್ಯಾಪ್ತಿ **ಘಟಶ್ರಾದ್ಧ, ಸಂಸ್ಕಾರ**ಗಳ ವ್ಯಾಪ್ತಿಗಿಂತ ವಿಶಾಲ ಸ್ವರೂಪವನ್ನು ಒಳಗೊಂಡಿದೆ. 'ಸಂಸ್ಕಾರ' ಸಂಕಲ್ಪದ ನೆಲೆಗಳನ್ನು ತೋರಿಸಿದರೆ **ಭಾರತೀಪುರ** ಕ್ರಿಯೆಯ ನೆಲೆಗಳನ್ನು ಪರಿಶೀಲಿಸುತ್ತದೆ. ಪ್ರಗತಿಶೀಲರಿಗೆ, ಬಂಡಾಯಗಾರರಿಗೆ ಪ್ರಿಯವಾದ ವಸ್ತುವೆನಿಸಿದ ದೇವಾಲದೊಳಗೆ ಹರಿಜನ ಪ್ರವೇಶದಂತಹ ವಸ್ತುವನ್ನು ಅನಂತಮೂರ್ತಿಯವರು ನಿರ್ವಹಿಸುವಾಗ ಸಮಸ್ಯೆಗೊಂಡು ಪರಿಹಾರ ಎನ್ನುವ ಸೂತ್ರವನ್ನು ಬಿಟ್ಟುಕೊಟ್ಟು ಒಂದು ಸಾಮಾಜಿಕ-ರಾಜಕೀಯ ಹೋರಾಟದ ಸಂಕೀರ್ಣ ಒತ್ತಡಗಳನ್ನೂ, ಅವು ಒಂದು ಕ್ರಿಯೆಯನ್ನು ಹಲವು ನೆಲೆಗಳಿಗೆ ಕೊಂಡೊಯ್ಯುವ ವಿಪರ್ಯಾಸಗಳನ್ನು ಶೋಧಿಸಲು ಪ್ರಯತ್ನಿಸುತ್ತಾರೆ. ಅನಂತಮೂರ್ತಿಯವರ **ಭವ** ಕಾದಂಬರಿ ಬದುಕಿನಲ್ಲಿ ಸಿಕ್ಕಿಕೊಂಡವರ ಬಿಡುಗಡೆಯ ಚಡಪಡಿಕೆಯ ವಿವಿಧ ಆಯಾಮಗಳನ್ನು ಬಿಡಿಸಿನೋಡುವ ಬರಹವಾಗಿದೆ. ಇವರ **ಭವ**ಕ್ಕೆ ಮಹತ್ವಾಕಾಂಕ್ಷೆ, ಸಂಕೀರ್ಣತೆ ಇಲ್ಲ, ಇದೊಂದು ಸರಳ ಕಥಾನಕ. ಅನಂತಮೂರ್ತಿಯವರ ಸಾಹಿತ್ಯದಲ್ಲಿ ವಿರಳವಾಗಿರುವ ಅಷ್ಟಾಗಿ ಕಾಣದ

ಘಟನಾ ಪ್ರಧಾನತೆ, ಕಾಕತಾಳೀಯತೆ ಇಲ್ಲಿನ ಕಥನದ ಪ್ರಧಾನ ಗುಣಗಳಾಗಿ ಕಾಣುತ್ತದೆ. ಚದುರಿದ ವಸ್ತುಗಳನ್ನು ಒಟ್ಟುಗೂಡಿಸುವುದು ಕಥಾಸಂವಿಧಾನದ ಮುಖ್ಯಕೆಲಸವಾಗಿದೆ. ಕಥೆಯ ವಿವಿಧ ಅಂಶಗಳನ್ನು ಅಂತಿಮವಾಗಿ ಒಟ್ಟುಗೂಡಿಸಿ ಅಧಿಕೃತವಾಗಿ ಪೂರ್ಣವಿರಾಮ ಹಾಕುವ ವಿನ್ಯಾಸ ಇದೆ ಎಂದೆನಿಸುತ್ತದೆ.

ಅನಂತಮೂರ್ತಿಯವರ ಮಹತ್ವಾಕಾಂಕ್ಷಿ ರಚನೆಗಳಲ್ಲೊಂದು **ಕ್ಲಿಪ್ ಜಾಯಿಂಟ್**. ಈ ಕಥೆಯ ಕೇಶವ ಭಾರತದಲ್ಲಿ ಬದುಕಿ, ಅದು ಪ್ರತಿನಿಧಿಸುವ, ಚಾಲ್ತಿಯಲ್ಲಿರುವ ಮೌಲ್ಯಗಳನ್ನು ಪ್ರತ್ಯಕ್ಷವಾಗಿ ಕಂಡವನು. ಸ್ಟುವರ್ಟ್ ಇಂಗ್ಲೆಂಡ್‌ನಲ್ಲೇ ಹುಟ್ಟಿಬೆಳೆದವನು. ಕೇಶವನಿಗೆ ಯಾವುದು ಆಕರ್ಷಕವೆನಿಸುತ್ತದೆಯೋ, ಅದರ ಇನ್ನೊಂದು ಮುಖದ ಪರಿಚಯವಿದ್ದವನು. ಅಂತೆಯೇ ಸ್ಟುವರ್ಟ್ ಭಾರತದ ಬಗ್ಗೆ ಇಟ್ಟುಕೊಂಡ ಕಲ್ಪನೆಗಳ ಹಿಂದಿನ ಸತ್ಯದ ಅನುಭವವಿರುವವನು ಕೇಶವ. ಹೀಗೆ ಒಬ್ಬರ ಕಣ್ಣಲ್ಲಿ ಮತ್ತೊಬ್ಬರು ನೋಡ ಬಯಸುತ್ತಾರೆ. ಕನ್ನಡಿಯ ಮುಂದೆ ಕನ್ನಡಿಯನ್ನಿಟ್ಟರೆ ಮೂಡುವ ಅಸಂಖ್ಯ ಪ್ರತಿಬಿಂಬಗಳ ವಿನ್ಯಾಸ.

**ಮೌನಿ** ಕಥೆಯಲ್ಲಿ ಮನುಷ್ಯನ ನೀಚಗುಣದ ಉದಾಹರಣೆಯನ್ನು ಸುಂದರವಾಗಿ ಕಟ್ಟಿಕೊಟ್ಟಿದ್ದಾರೆ. ಊರಿನಲ್ಲಿ ತನ್ನ ಸ್ಥಿತಿಯನ್ನು, ಸಿರಿವಂತಿಕೆಯನ್ನು ಹೆಚ್ಚಿಸಿಕೊಳ್ಳಲು ಮತ್ತೊಬ್ಬನ ವಿರುದ್ಧವೇ ಪಿತೂರಿ ಹೂಡುವ ಕಥೆ ಇದಾಗಿದೆ. ಮೂಲತಃ ಬಡವರಾಗಿದ್ದ, ಶೀಘ್ರಕೋಪಿಯಾಗಿದ್ದ ಕುಪ್ಪಣ್ಣ ಭಟ್ಟರು ತಮ್ಮ ಆರ್ಥಿಕ ಸ್ಥಿತಿಯನ್ನು ಉತ್ತಮ ಪಡಿಸಿಕೊಳ್ಳಲು ನಡೆಸುವ ಎಲ್ಲ ಪ್ರಯತ್ನಗಳಿಗೂ ಕಲ್ಲನ್ನೆಳೆಯುತ್ತಾರೆ ಅಪ್ಪಣ್ಣ ಭಟ್ಟರು. ತಮ್ಮ ಚಾಣಾಕ್ಷ ಬುದ್ಧಿಯಿಂದ, ನಯವಾದ ನಡವಳಿಕೆಯಿಂದ ಕುಪ್ಪಣ್ಣಭಟ್ಟನ ವಿರುದ್ಧ ಸಾಲಕೊಟ್ಟವರನ್ನು ಎತ್ತಿಕಟ್ಟಿ, ಅವರ ಅವನತಿಗೆ ಕಾರಣರಾಗುತ್ತಾರೆ. ಆದರೆ ಕುಪ್ಪಣ್ಣ ಭಟ್ಟರು ತಮ್ಮ ಎಂದಿನ ಕೋಪವನ್ನು, ಸಿಡುಕುತನವನ್ನು ಬಿಟ್ಟು ಆ ಸಂದರ್ಭದಲ್ಲೂ ತಾಳ್ಮೆ ವಹಿಸಿಬಿಡುತ್ತಾರೆ. ಕುಪ್ಪಣ್ಣಭಟ್ಟರ 'ಮೌನಿ' ಅವತಾರವನ್ನು ಕಂಡು ತಾನು ಮಾಡಿದ ತಪ್ಪಿಗೆ ಮರುಗಿ ಪಶ್ಚಾತ್ತಾಪ ಪಡುವ ಅಂಶ ಇದರಲ್ಲಿ ವ್ಯಕ್ತವಾಗಿದೆ. ಅನಂತಮೂರ್ತಿಯವರಿಗೆ ಮೌನಿ, ಆಕಾಶ ಮತ್ತು ಬೆಕ್ಕು, ಸೂರ್ಯನಕುದುರೆ, ನವಿಲುಗಳು, ಕ್ಲಿಪ್ ಜಾಯಿಂಟ್, ಘಟಶ್ರಾದ್ಧ ಕಥೆಗಳು ಬಲುದೊಡ್ಡ ಯಶಸ್ಸನ್ನು ಗಳಿಸಿಕೊಟ್ಟವು.

ಅನಂತಮೂರ್ತಿಯವರು ತಮ್ಮ ವಿಮರ್ಶೆ ಹಾಗೂ ವೈಚಾರಿಕ ಬರಹಗಳ ಮೂಲಕ ಕನ್ನಡ ಭಾಷೆಯನ್ನು ಇಂತಹ ಬರವಣಿಗೆಗೆ ಹದಗೊಳಿಸಿದವರು. ಇಂದು ವಿಮರ್ಶೆಯಲ್ಲಿ ಬಳಸುವ ಅನೇಕ ನುಡಿಗಟ್ಟನ್ನು, ಪರಿಭಾಷೆಯನ್ನು ರೂಪಸಿಕೊಟ್ಟವರು. ಮಾದರಿಯಾಗುವಂತಹ ರೀತಿಯಲ್ಲಿ ಕಾವ್ಯ ಪ್ರವೇಶ ಮಾಡುವ ಬಗೆಯನ್ನು ಹಾಗೂ ಅದನ್ನು ವಿಶ್ಲೇಷಿಸುವ ಕ್ರಮವನ್ನು ತೋರಿಸಿಕೊಟ್ಟವರು.

ಸೃಜನಾತ್ಮಕ ನೆಲೆಯಲ್ಲಿ ಬದುಕಿನ ಕ್ರಮ ಪಲ್ಲಟಗೊಳ್ಳುತ್ತಿರುವುದನ್ನು ಸಮಕಾಲೀನ ಲೇಖಕರಂತೆಯೇ ಗುರುತಿಸುವ ಅನಂತಮೂರ್ತಿ ಪರಂಪರೆ ಮತ್ತು ಆಧುನಿಕತೆಯನ್ನು ಜಾತೀಯತೆ-ಸಂಪ್ರದಾಯಗಳ ಹಿನ್ನೆಲೆಯಲ್ಲಿ ವಿಶ್ಲೇಷಿಸುತ್ತಾರೆ. ಪರಂಪರೆಯ ಹಿಡಿತದಿಂದ ಬಿಡುಗಡೆ ಪಡೆಯುವ ಹಾದಿಯನ್ನು ಅನುಭವದ ಮುಖೇನ ಪಡೆಯಲೆತ್ನಿಸುತ್ತಾರೆ. ವರ್ತಮಾನದ ಆಸೆ-ಆಕಾಂಕ್ಷೆಗಳನ್ನು ಈಡೇರಿಸಲಾಗದ ಪರಂಪರೆಯು-ವ್ಯಕ್ತಿಯನ್ನು ಪಂಜರದೊಳಗೆ ಬಂಧಿಸಿಬಿಟ್ಟಿದೆ. ಬಿಡುಗಡೆಯ ಶತ ಪ್ರಯತ್ನಕ್ಕೆ ವ್ಯಕ್ತಿಯೇ ಮುಂದಾಗಬೇಕೆಂಬ ಅರಿವು

ಸ್ವಾತಂತ್ರ್ಯೋತ್ತರ ಸಾಹಿತ್ಯದ ಇತರ ಲೇಖಕರಂತೆ ಇವರನ್ನು ಬಾಧಿಸಿದ್ದು ನಿಜ. ಆದರೆ ಅದಕ್ಕೆ ಸ್ಪಂದಿಸಿದ ರೀತಿ ಇತರರಿಗಿಂತ ಭಿನ್ನವಾಗಿಯೇ ಕಾಣುತ್ತದೆ; ಇವರ ಮೊದಲ ಮೂರು ಕಾದಂಬರಿಗಳು ನೈತಿಕತೆಯ ನೆಲೆಗಳನ್ನು ಆಳವಾಗಿ ಪ್ರಶ್ನಿಸುತ್ತವೆ. ಅಂತೆಯೇ ದೇಶಿ ಸಂಸ್ಕೃತಿಯ ಶಿಥಿಲ ಅಂಶಗಳಿಗೆ ಕನ್ನಡಿ ಹಿಡಿಯುವ ವಿಮರ್ಶಕ ಪಾತ್ರವನ್ನು ನಿರ್ವಹಿಸುತ್ತವೆ. ಈ ದೃಷ್ಟಿಯಿಂದ ಕನ್ನಡ ಸಂಸ್ಕೃತಿಯ ಬೆಳವಣಿಗೆಯಲ್ಲಿ ಅನಂತಮೂರ್ತಿಯವರ ಪಾತ್ರ ಮಹತ್ವದ್ದಾಗಿದೆ.

**ಅನಂತಮೂರ್ತಿ ಮತ್ತು ತೇಜಸ್ವಿ:** ಅನಂತಮೂರ್ತಿ ಪರಂಪರೆಯ ಮಿತಿಯನ್ನು ವೈಯಕ್ತಿಕ ಅನುಭವ ಕಾಮದ ಮೂಲಕ ಕಂಡುಕೊಂಡು ಪಾರಂಪರಿಕ ಸಮಾಜ ಮನುಷ್ಯ ಪ್ರಜ್ಞೆಯ ಮೇಲೆ ಹೇರುವ ಒತ್ತಡವನ್ನು ಭೌತಿಕ ಆಚರಣೆಗಳ ಸಮಾಜದೊಳಗೆ ಗುರುತಿಸುತ್ತಾರೆ. ತೇಜಸ್ವಿ ಪರಂಪರೆಯ ಹೊರಗೆ ನಿಂತು ಮನುಷ್ಯರ ಮೂಲಭೂತ ಅಸ್ತಿತ್ವದ ಹುಡುಕಾಟವನ್ನು ತಾತ್ವಿಕ ನೆಲೆಯಲ್ಲಿ ಗುರುತಿಸುತ್ತಾರೆ. ತೇಜಸ್ವಿಯವರಲ್ಲಿ ದೇಹದ ಬಯಕೆಗಳಿಗಿಂತ ಕಾಮ-ಪ್ರೇಮ ವ್ಯಕ್ತಿ ಸ್ವಾತಂತ್ರ್ಯದ ದ್ಯೋತಕವಾಗಿ ನಿಲ್ಲುತ್ತದೆ. ಕಾಮ ಅರಿವನ್ನು ಗಳಿಸಿಕೊಳ್ಳುವ ಸಾಧನವಾಗಿ ಕಾಣುತ್ತದೆ. ಅದಕ್ಕಾಗಿಯೇ ವ್ಯಕ್ತಿಗೆ ತನ್ನ ಅಸ್ತಿತ್ವವನ್ನು ಸ್ಥಾಪಿಸಿಕೊಳ್ಳುವ ನಿಟ್ಟಿನಲ್ಲಿ ಕಾಮ ಒಂದು ಪ್ರಬಲ ಶಕ್ತಿಯಾಗಿ ಕಾರ್ಯ ನಿರ್ವಹಿಸುತ್ತದೆ. ಅನಂತಮೂರ್ತಿ ವ್ಯಕ್ತಿಯೇ ಇವುಗಳ ಬಂಧನಕ್ಕೆ ತಾನಾಗಿ ಅಡಿಯಾಳಾಗುವುದನ್ನು ಗುರುತಿಸುತ್ತಾರೆ. ಜೀವನಾನುಭವಗಳಿಗೆ ಸ್ಪಂದಿಸುವ ಲೇಖಕರು ಇವರಿಬ್ಬರು. ಇವರ ಕಥನಗಳು ಒಂದಕ್ಕಿಂತ ಒಂದು ಪ್ರಬುದ್ಧತೆಯನ್ನು ತೋರುತ್ತವೆ. ಪರಂಪರೆ, ಸಂಪ್ರದಾಯ ವ್ಯಕ್ತಿಯ ಸ್ವಾರ್ಥದ ರೂಪದಲ್ಲಿ ತನ್ನ ಜನಗಳನ್ನೇ ಮಣಿಸುತ್ತಿರುವುದು ಅನಂತ ಮೂರ್ತಿಯವರಲ್ಲಿ ಕಂಡುಬಂದರೆ, ತೇಜಸ್ವಿಯವರಲ್ಲಿ ಜಾತೀಯತೆ ಕೆಳವರ್ಗದವರನ್ನು ಹಿಡಿದಿರುವ ಸಾಧನವಾಗಿ ಪರಿಗಣಿತವಾಗುತ್ತದೆ.

ಬರವಣಿಗೆಯ ಪ್ರಾರಂಭದ ಹಂತದಲ್ಲಿ ಸ್ವಾತಂತ್ರ್ಯೋತ್ತರ ಕಾಲದ ಭ್ರಮ ನಿರಸನವನ್ನು, ಆಧುನಿಕ ವ್ಯಕ್ತಿತ್ವಗಳ ಅಸ್ತಿತ್ವದ ಹುಡುಕಾಟ, ಭೂತ-ವರ್ತಮಾನಗಳನ್ನು ಬೆಸೆಯಬಲ್ಲ ಹೊಸ ಮೌಲ್ಯ ಕೇಂದ್ರದ ಅನ್ವೇಷಣೆ, ಆಂತರಿಕ ದೌರ್ಬಲ್ಯಗಳಿಂದಲೇಅವನತಿಯತ್ತ ಸರಿಯುವ ಸಾಂಪ್ರದಾಯಿಕ ಪರಿಸರ, ಸಾಂಪ್ರದಾಯಿಕ ಹಿನ್ನೆಲೆಯಲ್ಲಿ ಶೋಷಣೆಗೆ ಒಳಗಾಗುವ ಇಲ್ಲವೆ ದಾಸ್ಯಕ್ಕೀಡಾಗುವ ಸ್ಥಿತಿಯನ್ನು ಪ್ರತಿಭಟಿಸುವುದು, ಅಧಿಕೃತತೆಯ ಶೋಧನೆ ಹೀಗೆ ಎಲ್ಲಾ ಆಲೋಚನಾ ಗ್ರಹಿಕೆಗಳು ಮತ್ತು ಅಭಿವ್ಯಕ್ತಿ ವಿಧಾನಗಳಲ್ಲಿ ಅನಂತಮೂರ್ತಿ ಮತ್ತು ತೇಜಸ್ವಿ ಇಬ್ಬರಲ್ಲೂ ಸಮಾನ ಅಂಶಗಳಿವೆ.

ಇನ್ನು ಅನುಭವ ಜನ್ಯವಾದ ಸಮಕಾಲೀನ ಸಂವೇದನೆಯ ಪುನರ್ ಸೃಷ್ಟಿಯೇ ಇವರಿಬ್ಬರ ಕಥನಗಳ ವಸ್ತುವಾಗಿದ್ದರೂ ಕಥನ ಕ್ರಮ ಮತ್ತು ಸಮಗ್ರತೆಯನ್ನು ಒಟ್ಟಿಗೆ ಬೆಸೆಯುವ, ಅನುಭವ ಮತ್ತು ಸಮಗ್ರತೆಯನ್ನು ಸಾವಯವವಾಗಿ ಕಟ್ಟುವ ಕ್ರಮಗಳಲ್ಲಿ ವಿಭಿನ್ನತೆ ಇದೆ. ಮನುಷ್ಯ ಒಳಗಿನ ಪ್ರಕೃತಿ ಮತ್ತು ಹೊರಗಿನ ಪ್ರಕೃತಿಯೊಳಗಿನ ಸಂಘರ್ಷದ ಸ್ವರೂಪ ಬೇರೆ ಬೇರೆಯಾಗಿದ್ದು ಅನಂತಮೂರ್ತಿ ಎರಡನ್ನೂ ಒಂದುಗೂಡಿಸುವ ಪ್ರಯತ್ನದಲ್ಲಿ ತೊಡಗಿದ್ದರೆ ಪ್ರಕೃತಿಯ ಜೀವನೋನ್ಮುಖ ಶಕ್ತಿಯ ಎದುರಿಗೆ ಮನುಷ್ಯನ ಪ್ರವೃತ್ತಿಗಳು ಸೋಲುತ್ತಾ ಹೊಸ ಪ್ರಜ್ಞೆಯತ್ತ ಸರಿಯುವುದನ್ನು ತೇಜಸ್ವಿ ಕಥನಗಳಲ್ಲಿ ಗುರುತಿಸಬಹುದು.

## ದೇವನೂರು ಮಹಾದೇವ

ಕನ್ನಡ ಸಾಹಿತ್ಯ ಸಂದರ್ಭದ ನವ್ಯೋತ್ತರ ಕಾಲದ ಅಗ್ರಗಣ್ಯ ಲೇಖಕರಲ್ಲೊಬ್ಬರಾದ ದೇವನೂರು ಮಹಾದೇವ ಅವರು ಕನ್ನಡ ಕಥಾಸಾಹಿತ್ಯಕ್ಕೆ ಹೊಸ ಆಯಾಮ ಒದಗಿಸಿಕೊಟ್ಟವರು. ದೇವನೂರರು ಕನ್ನಡ ಕಥಾ ಸಾಹಿತ್ಯದಲ್ಲಿ ತಮ್ಮದೇ ಆದ ವಿಶಿಷ್ಟ ಸ್ಥಾನ ಗಳಿಸಿಕೊಂಡಿದ್ದಾರೆ. ಎರಡು ವಿಭಿನ್ನ ದೃಷ್ಟಿಯಿಂದ ದೇವನೂರು ಮಹಾದೇವ ಅವರ ಕಥಾ ಸಾಹಿತ್ಯ ಮುಖ್ಯವೆಂದೆನಿಸುತ್ತದೆ. ಮೊದಲನೆಯದಾಗಿ ಮಹಾದೇವ ಅವರು ಕಂಡಿರುವ ದಲಿತ ಪ್ರಪಂಚದ ಅನುಭವಕ್ಕೆ ಒಂದು ದೃಷ್ಟಿಯಿಂದ ಪ್ರಾಮುಖ್ಯತೆಯಿದ್ದರೆ, ಇನ್ನೊಂದು ದೃಷ್ಟಿಯಿಂದ ದೇವನೂರರು ಪ್ರಸ್ತುತಪಡಿಸಿದ ನವ ಅಭಿವ್ಯಕ್ತಿ ಸೋಪಾನಗಳು ಅಷ್ಟೇ ಮುಖ್ಯವೆನಿಸಿಕೊಳುತ್ತವೆ. **ದ್ಯಾವನೂರು** ಎಂಬ ಕಥಾ ಸಂಗ್ರಹ **ಒಡಲಾಳ** ಎಂಬ ದೀರ್ಘ ಕಥನ **ಕುಸುಮಬಾಲೆ** ಎನ್ನುವ ಕಾದಂಬರಿ–ಈ ಮೂರು ಕೃತಿಗಳು ದೇವನೂರು ಮಹಾದೇವ ಅವರ ಲೇಖನಿಯಿಂದ ಮೂಡಿಬಂದಿವೆ. ರಚನೆಯ ಗಾತ್ರದಲ್ಲಿ ದೇವನೂರು ಮಹಾದೇವ ಅವರ ಕೃತಿಗಳು ಕಡಿಮೆ ಎನಿಸಿದರೂ ಅವುಗಳ ಸಾರ ವಿಚಾರಗಳ ದೃಷ್ಟಿಯಿಂದ ಮಹತ್ತರವೆನಿಸುತ್ತವೆ. ದೇವನೂರು ಮಹಾದೇವ ಅವರ ಬರವಣಿಗೆ ನವ್ಯೋತ್ತರ ಕಾಲದ ಸಾಂಸ್ಕೃತಿಕ–ಸಾಹಿತ್ಯಿಕ ಅಭೀಪ್ಸೆಗಳನ್ನು ಸಮರ್ಥವಾಗಿ ಪ್ರತಿನಿಧಿಸುತ್ತವೆ ಎನ್ನುವುದು ಇಲ್ಲಿ ಗಮನಿಸಬೇಕಾದ ಅಂಶವಾಗಿದೆ. ಬಂಡಾಯದ ದೃಷ್ಟಿಯಿಂದ ಇವರನ್ನು ಪರಿಗಣಿಸಿದಾಗ ದೇವನೂರು ಮಹಾದೇವ ಅವರು ಅಗ್ರಗಣ್ಯರಾಗಿ, ಮುಂಚೂಣಿಯಲ್ಲಿ ನಿಲ್ಲುತ್ತಾರೆ.

ದೇವನೂರು ಮಹಾದೇವ ಅವರ **ಮಾರಿಕೊಂಡವರು** ಕಥೆ ದಲಿತ ವರ್ಗದವರ ಮೇಲಿನ ದೌರ್ಜನ್ಯದ ರೂಪವನ್ನು ಎತ್ತಿಹಿಡಿದಿದೆ. ಈ ಕಥೆಯ ಶೀರ್ಷಿಕೆಯೆ ದಲಿತ ವರ್ಗದವರ ಸ್ಥಿತಿಯನ್ನು ಬಿಂಬಿಸುತ್ತದೆ. ಏನನ್ನು ಮಾರಿಕೊಂಡವರು ಎನ್ನುವ ಪ್ರಶ್ನೆ ಉದ್ಭವಿಸಿದಾಗ, ಶೀಲ, ಸ್ವಾಭಿಮಾನ, ತನ್ನತನ, ಸ್ವಾತಂತ್ರ್ಯ ಹೀಗೆ ಇವುಗಳನ್ನು ಮಾರಿಕೊಂಡವರು ಎಂಬ ಉತ್ತರ ದೊರೆಯುತ್ತದೆ. ಹಿಂದೊಮ್ಮೆ ಸಂಕಷ್ಟದ ಪರಿಸ್ಥಿತಿಯಲ್ಲಿದ್ದಾಗ ಹಣಕೊಟ್ಟು, ತನ್ನ ಮನೆಯಲ್ಲಿಯೇ ಕೆಲಸ ನೀಡಿದ ಗೌಡರು ದೇವರ ಸಮಾನವೆಂದು ಭಾವಿಸುತ್ತಾನೆ ಬೀರ. ದಲಿತ ವರ್ಗಕ್ಕೆ ಸೇರಿದ ಬೀರನಿಗೆ ತನ್ನ ಹೆಂಡತಿ ಲಕ್ಷ್ಮಿ ಹಾಗೂ ಗೌಡರ ಮಗ ಕಿಟ್ಟಪ್ಪನ ಸಂಬಂಧದ ಅರಿವಿದ್ದರೂ, ಆತ 'ಧಣಿ' ಎಂಬ ಕಾರಣಕ್ಕೆ ಅವನ ಎದುರಿಗೆ ಆತನನ್ನು ಪ್ರತಿಭಟಿಸುವ ಧೈರ್ಯ ತೋರುವುದಿಲ್ಲ. ಕುಡಿತದ ಅಮಲಿನಲ್ಲಿ ಕಿಟ್ಟಪ್ಪನ ಅನುಪಸ್ಥಿತಿಯಲ್ಲಿನ ಆತನ ಪ್ರತಿಭಟನೆಗೆ ಫಲವಿರಲಿಲ್ಲ. ಹೀಗೆ ಜೀತದಾಳಾದ ನಂತರ ಸ್ವಾತಂತ್ರ್ಯವನ್ನು ಹೆಂಡತಿಯ ಶೀಲವನ್ನು, ಪ್ರತಿಭಟಿಸುವ ತನ್ನತನವನ್ನು, ಸ್ವಾಭಿಮಾನವನ್ನು ಕಳೆದುಕೊಳ್ಳುವ ಹಂತಕ್ಕೆ ಜಾರುತ್ತಾನೆ. ಹೀಗೆ ಈ ಕಥೆ ದಲಿತ ದೌರ್ಜನ್ಯದ ಮುಖವನ್ನು ಅನಾವರಣಗೊಳಿಸುತ್ತದೆ.

**ಒಂದು ದಹನದ ಕಥೆ** ಜಾತಿವ್ಯವಸ್ಥೆಯ ಕೀಳುನೋಟವನ್ನು ಪರಿಚಯಿಸುತ್ತದೆ. ಈ ಕಥೆಯ ನಾಯಕ ಕೆಳಜಾತಿಯವನು ಮತ್ತು ವಿದ್ಯಾವಂತ ತಂದೆ, ತಾಯಿ ಇಲ್ಲದ ಈತನಿಗೆ ಅಜ್ಜಿ, ದೊಡ್ಡಪ್ಪ, ದೊಡ್ಡಮ್ಮ, ಅಕ್ಕ ಇವರೇ ತನ್ನವರೆನಿಸಿಕೊಂಡಿರುತ್ತಾರೆ. ಈತ ತನ್ನದೇ ಊರಿನ ಮೇಲುಜಾತಿಯ ಕಮಲಿ ಎನ್ನುವ ಹುಡುಗಿಯನ್ನು ಪ್ರೀತಿಸುತ್ತಾನೆ. ಅದೇ ಊರಿನವರಿಗೆ ಇದು ತಪ್ಪು ಎಂದೆನಿಸುತ್ತದೆ. ಈತ ಕೆಳಜಾತಿಯವನಾಗಿದ್ದರಿಂದ ಹುಡುಗಿಯನ್ನು ಕೊಡಲು ಅವರು ಒಪ್ಪದಿದ್ದಾಗ, ಅವಳನ್ನು ಈತ ಉದ್ಯೋಗ ಮಾಡುವ ಸ್ಥಳಕ್ಕೇ ಕರೆದುಕೊಂಡು ಹೋಗಿ

ಮದುವೆಯಾಗಿ ಅಲ್ಲೇ ವಾಸಿಸುತ್ತಾನೆ. ನಾಯಕ ತನ್ನ ಬಳಿ ತಂದಿಟ್ಟುಕೊಂಡಿದ್ದ ಅಜ್ಜಿಗೆ, ತನ್ನೂರಿನಲ್ಲೇ ಸಾಯಬೇಕೆನಿಸುತ್ತದೆ. ಆದ್ದರಿಂದ ಅಜ್ಜಿಯ ಮನವಿಯಂತೆ ಊರಿಗೆ ಹೋಗುತ್ತಿರುವಾಗ ಅಜ್ಜಿ ಸಾಯುತ್ತಾಳೆ. ನಂತರದಲ್ಲಿ ಅಜ್ಜಿಯ ಶವಸಂಸ್ಕಾರ ಕ್ರಿಯೆ ನಡೆಸುವ ಸಂದರ್ಭವನ್ನು ಊರವರು ಆತನ ಮೇಲಿನ ಸೇಡನ್ನು ತೀರಿಸಿಕೊಳ್ಳಲು ಬಳಸಿಕೊಳ್ಳುತ್ತಾರೆ. ಇದರಿಂದ ರೋಸಿ ಹೋಗಿದ್ದ ನಾಯಕ ಮನೆಯ ಅಂಗಳದಲ್ಲೇ ಇದ್ದ ಕಟ್ಟಿಗೆಗಳನ್ನು ಜೋಡಿಸಿ ಅಂತ್ಯಸಂಸ್ಕಾರ ನಡೆಸುತ್ತಾನೆ. ಹೀಗೆ ಈ ಕಥೆಯಲ್ಲಿ ಅಜ್ಞಾನ, ಮೌಢ್ಯತೆ ತುಂಬಿದ ಜನರ ಮೃಗೀಯ ವರ್ತನೆ ವ್ಯಾಪಕವಾಗಿದೆ. ಈ ನಿಟ್ಟಿನಲ್ಲಿ ಸಮಾಜವನ್ನು ಎದುರಿಸಲಾಗದೇ ಓಡಿ ಹೊಗುವ ನಾಯಕನ ಅಸಹಾಯಕತೆ ವ್ಯಕ್ತವಾಗಿದೆ. ಜಾತಿವ್ಯವಸ್ಥೆಯ ಕೀಳರಿಮೆಯೇ ಈ ಕಥೆಯ ವಸ್ತುವೆನಿಸಿದೆ.

ಬಹುತೇಕ ಎಲ್ಲಾ ಕಥೆಗಳಂತೆಯೇ **ದತ್ತ** ಕಥೆಯ ಆನಂದು, ಕೆಳವರ್ಗ ಕುಟುಂಬದಲ್ಲಿ ಜನಿಸಿದ ವ್ಯಕ್ತಿ. ವಿದ್ಯಾವಂತನಾಗಿದ್ದರೂ ಸಿಗರೇಟ್, ಹೆಣ್ಣು, ಹೆಂಡ ಹೀಗೆ ಕೆಟ್ಟ ಹವ್ಯಾಸಗಳ ಬಳಕೆಯಲ್ಲಿರುವವನು ಈತನ ಸಂಸಾರ ಸಾಲದ ಹೊರೆಯಲ್ಲಿ ಬದುಕುತ್ತಿರುವ ಕುಟುಂಬ. ಆನಂದ, ಏಳು ವರ್ಷದ ಹುಡುಗನಿರುವಾಗಲೇ ದತ್ತುವಾಗಿ ಹೋಗುತ್ತಾನೆ. ದತ್ತು ಮಗನಾಗಿದ್ದ ಈತನ ಸಾಕು ತಂದೆ ಸತ್ತಾಗ ಆತನ ತಿಥಿ ಮಾಡದ ಈತನ ಮೇಲೆ ಸಾಕು ತಾಯಿಗೆ ಸಿಟ್ಟು. ಈತನನ್ನು ಆಕೆ ಬೇಸರದಿಂದ ಬೈದಾಗ, ಹೆತ್ತ ತಂದೆಗೆ ತಿಳಿಸಿ ಆ ಮನೆ ಬಿಟ್ಟು ಬರಲು ಚಿಂತಿಸುತ್ತಾನೆ. ಅಂತೆಯೇ ತನ್ನೂರಿನಲ್ಲಿ ಹೊಸಜೀವನ ಆರಂಭಿಸಬೇಕೆಂಬ ಬಯಕೆಯಿಂದ ಹೊರಟ ಈತನಿಗೆ ನಿರಾಸೆಯೇ ಕಾದಿರುತ್ತದೆ. ಹೆತ್ತ ಸಂಬಂಧಕ್ಕೆ ಅರ್ಥವೇ ಇಲ್ಲ ಎನ್ನುವಂತಹ ಅನುಭವಕ್ಕೆ ಒಳಗಾಗುತ್ತಾನೆ. ಮಗನನ್ನು ಮನೆಗೆ ಸೇರಿಸಿಕೊಳ್ಳುವಾಗ ಸಂತೋಷದಿಂದ ತಂದೆ, ಪ್ರಬುದ್ಧನಾಗಿರುವ ಈತನಿಗೆ ಮದುವೆ ಮಾಡುವ ಯೋಚನೆಯಲ್ಲಿರುತ್ತಾನೆ. ಅಂತೆಯೇ ಹಣ ತಂದುಕೊಡುವ, ತನ್ನ ಸಾಲದ ಹೊರೆಯನ್ನು ಇಳಿಸಬಹುದಾದಂತಹ ಗಟ್ಟಿ ಕುಳವನ್ನೆ ಆರಿಸಿ, ಪುನಃ ಇತನನ್ನು ದತ್ತು ನೀಡುವ ಬಗ್ಗೆ ಪ್ರಸ್ತಾಪಿಸುತ್ತಾರೆ. ಇದರಿಂದ ಆತನಿಗೆ ತನ್ನ ತಂದೆ ಹಣಕ್ಕಾಗಿ ರಕ್ತಸಂಬಂಧವನ್ನೂ ಮರೆತಿದ್ದಾನೆ ಎನಿಸಿ ಅಸಹ್ಯವಾದ ಅಸಹನೆ ಮೂಡುತ್ತದೆ. ರಕ್ತ ಸಂಬಂಧದ ಅರ್ಥ ಹುಡುಕಲಾಗದೇ ವಿಫಲನಾದ ಈತ ತನ್ನ ಹವ್ಯಾಸಗಳಿಂದ ಅಲ್ಲಿನ ಪರಿಸರಕ್ಕೂ ಹೊಂದಿಕೊಳ್ಳಲಾಗದೇ ಮದುವೆಯನ್ನು ವಿರೋಧಿಸುತ್ತಾನೆ ಹೀಗೆ ದೇವನೂರು ಮಹಾದೇವ ಅವರ ಪಾತ್ರ ಸೃಷ್ಟಿ ಅಪೂರ್ವವೆನಿಸುತ್ತದೆ.

**ಗ್ರಸ್ತ** ಕಥೆ ಮಹಾದೇವರ ಸಮಾಜವಾದೀ ಚಿಂತನೆಗೆ ಹಿಡಿದ ಕೈಗನ್ನಡಿಯಂತಿದೆ. ಹೊಲೆಯರ, ಕುಟುಂಬಕ್ಕೆ ಸೇರಿದ ನಾಯಕನಿಗೆ ತನ್ನ ವ್ಯಕ್ತಿ ಸ್ವಾತಂತ್ರ್ಯವನ್ನು ಹಾಗೂ ವಾಕ್ ಸ್ವಾತಂತ್ರ್ಯವನ್ನು ಕಸಿದುಕೊಂಡು ಕೆಲಸದಿಂದ ಕಿತ್ತುಹಾಕಿದ್ದರಿಂದ, ತನ್ನೂರಿನಲ್ಲಿ ನೆಮ್ಮದಿಯ ಜೀವನದ ಕನಸಿಟ್ಟುಕೊಂಡು ಬಂದ ಈತ ಗೌಡರ ದೌರ್ಜನ್ಯವನ್ನು ಎದುರಿಸಬೇಕಾಗುತ್ತದೆ. ಈತನಿಗೆ ತನ್ನ ಮುಕ್ತ ಮನಸ್ಸನ್ನು ಬಿಚ್ಚಿಡಲು ಸಾಧ್ಯವಾಗುವುದು ಅವನ ದೊಡ್ಡಮ್ಮನ ಹತ್ತಿರ ಮಾತ್ರ. ಆಕೆ ಒಮ್ಮೆ ಈತನ ಬಳಿ ಮದುವೆಯ ವಿಷಯ ಪ್ರಸ್ತಾಪಿಸಿದಾಗ ಈತನಿಗೆ ತಾನು ಪ್ರೀತಿಸಿದ ಹುಡುಗಿಯ ನೆನಪಾಗುತ್ತದೆ ಅವಳನ್ನು ಮದುವೆ ಆಗಲು ಅಡ್ಡ ಬರುವ ಜಾತಿವ್ಯವಸ್ಥೆ ಅಮ್ಮ ಹುಷಾರಿಲ್ಲದೆ ಮಲಗಿರುವುದು ಒಂದು ಕಡೆಯಾದರೆ, ಗೌಡರ ದೌರ್ಜನ್ಯ ಇನ್ನೊಂದು

ಕಡೆ–ಹೀಗೆ ಸಮಸ್ಯೆಗಳ ಸುಳಿಯಲ್ಲಿ ಸಿಲುಕಿದ ನಾಯಕನ ಕಥೆ ಇದಾಗಿದೆ. ಮೌಢ್ಯತೆಯ ವಿರುದ್ಧ ಮಾತನಾಡುವ ಹಾಗೂ ಗೌಡರನ್ನು ಎದುರಿಸುವ ಅನಾಯಕನ ಪ್ರಜ್ಞೆ ಇದರಲ್ಲಿ ವ್ಯಕ್ತವಾಗಿದೆ.

ದೇವನೂರು ಮಹಾದೇವ ಅವರ ಮತ್ತೊಂದು ಸುಂದರವಾದ ಕಥೆ **ಡಾಂಬರು ಬಂದುದು** ಈ ಕಥೆ ವೈಜ್ಞಾನಿಕತೆಯ ಪ್ರಭಾವದಿಂದಾಗುವ ಪ್ರಭಾವವನ್ನು ಸುಂದರವಾಗಿ ಹಳ್ಳಿಯ ನೆಲೆಯಲ್ಲಿ ವಿವರಿಸಿದೆ. ಹಳ್ಳಿಯ ರಸ್ತೆಗೆ ಡಾಂಬರು ಇಲ್ಲದಿದ್ದರಿಂದ ಪ್ರಯತ್ನಪಟ್ಟು ಮಂಜೂರು ಮಾಡಿಸಿ ಹಲವಾರು ಸಲ ಓಡಾಡಿ ಕಂಟ್ರಾಕ್ಟನ್ನು ತಮಗೇ ಮಾಡಿಸಿಕೊಂಡು ದೇವಸ್ಥಾನ ಕಟ್ಟಬಯಸಿದ್ದರು. ಇದನ್ನು ತಿಳಿದ ನಾಲ್ಕು ಜನ ವಿದ್ಯಾವಂತ ಯುವಕರು ಪತ್ರಿಕೆಯ ಮೂಲಕ ಈ ವಿಷಯವನ್ನು ಬಯಲಿಗೆಳೆದು ಪಟೇಲರ ಕೆಂಗಣ್ಣಿಗೆ ಗುರಿಯಾಗಿ, ಗೌಡರ ಪ್ರಭಾವದಿದ ನಿರುಪರಾಧಿಗಳು ಅಪರಾಧಿಗಳಾಗುತ್ತಾರೆ. ಪಟೇಲರನ್ನೆದುರಿಸಿ ಊರಿನವರ ಕೆಂಗಣ್ಣಿಗೆ ಗುರಿಯಾಗುವ ಯುವಕರ ಅಸಾಹಾಯಕ ಸ್ಥಿತಿ ಪ್ರಧಾನ ಅಂಶವಾಗಿದೆ. ಮುಂದೆ ರಂಗಪ್ಪನ ಮಗ ಡಾಂಬರಿನಲ್ಲಿ ಸಿಕ್ಕಿ ಹಾಕಿಕೊಂಡಿದ್ದರಿಂದ ಎದುರಾಗುವ ಸಂಕಷ್ಟ ಹೀಗೆ ಕಥೆಯ ನಿರೂಪಣೆ ಸೊಗಸಾಗಿ ಮೂಡಿಬಂದಿದೆ.

**ಮೂಡಲ ಸೀಮೇಲಿ ಕೊಲೆಗಿಲೆ ಮುಂತಾಗಿ** ಕಥೆಯು ದಲಿತ ಶೋಷಣೆಯನ್ನೇ ನಿರೂಪಿಸಿದರೂ, ಇದು ಅವಿದ್ಯಾವಂತ ದಲಿತರ ಮೇಲಿನ ಕಥೆಯಾಗಿದೆ. ತನ್ನ ದುಡಿಮೆಯ ಆಧಾರದ ಮೇಲೆ ನಿಂತ ಧಣಿ, ಆತನನ್ನು ದಲಿತನಂತೆಯೇ ಕಾಣುತ್ತಾನೆ. ಆದರೆ ಅಂತಹುದೇ ವರ್ಗಕ್ಕೆ ಸೇರಿದ ವಿದ್ಯಾವಂತರಿಗೆ ತನ್ನ ಮನೆಯಲ್ಲೆ ಸ್ಥಾನ ನೀಡುತ್ತಾರೆ. ವರ್ಗವಾಗಿ ಬಂದ ಶಾಸ್ತ್ರಿ ಮೇಷ್ಟ್ರು, ಈ ಊರಿಗೆ ಬಂದ ನಂತರ ಮನೆ, ಬಾವಿ ಹೀಗೆ ಎಲ್ಲ ವ್ಯವಸ್ಥೆಗಳನ್ನು ಮಾಡಿಕೊಳ್ಳುತ್ತಾರೆ, ಆದರೆ ರಂಗಪ್ಪ ಎಷ್ಟು ದುಡಿದರೂ ಆತನ ಪೂರ್ವಜರ ಕಾಲದಲ್ಲಿದ ಸ್ಥಿತಿಯೇ ಮುಂದುವರಿದಿದೆ. ದುಡಿಮೆಗೆ ತಕ್ಕ ಫಲ ಸಿಗುತ್ತಿಲ್ಲ ಮತ್ತವನ ಸ್ಥಿತಿ ಸುಧಾರಿಸುತ್ತಿಲ್ಲ. ಈತ ಅವರ ದೃಷ್ಟಿಯಲ್ಲಿ ದಲಿತನೇ ಆಗಿದ್ದ. ಅವರೆಲ್ಲ ತಮ್ಮ ಜಾತಿ ಬಲದಿಂದ ವಿದ್ಯೆಯ ಬಲದಿಂದ ಅವರ ಮನೆಯಲ್ಲಿ ಸ್ಥಾನ ಗಳಿಸಿದ್ದರು. ಹೀಗೆ ದೇವನೂರು ಮಹಾದೇವರ ಕಥೆಗಳು ದಲಿತ ಶೋಷಣೆಯ ವಿವಿಧ ಸ್ತರಗಳನ್ನು ಸೊಗಸಾಗಿ ವಿವರಿಸುತ್ತದೆ. ಶೋಷಿಕ ವರ್ಗದ ಶೋಷಣೆಯನ್ನು ಮನಮುಟ್ಟುವಂತೆ ಹೇಳಿದ್ದಾರೆ.

ದೇವನೂರರ ಸುಂದರ ಕಥೆಗಳಲ್ಲೊಂದು **ಅಮಾಸ**. ಇವರ ಚುಕ್ಕೆ ಗುರುತಿನ ಕಥೆಗಳಲ್ಲೊಂದು. ಮೊದಲಿಂದಲೂ ನಡೆದು ಬಂದ ಶೋಷಣೆಯ ದೃಶ್ಯವನ್ನು ಇದರಲ್ಲಿ ಕಟ್ಟಿಕೊಟ್ಟಿದ್ದಾರೆ. ಅಮಾಸ ಹೆಸರನ್ನು ಅಮವಾಸ್ಯೆ ಅಥವಾ ಕಪ್ಪು ಬಣ್ಣದೊಡನೆ ಹೋಲಿಸಿದ್ದಾರೆ. ಈ ಹೋಲಿಕೆಯೇ ಆತ ಕತ್ತಲಲ್ಲಿದ್ದಾನೆ ಎನ್ನುವುದನ್ನು ಸಾಂಕೇತಿಕವಾಗಿ ಸೂಚಿಸುತ್ತದೆ. ಅಂದರೆ ಆತ ಬೆಳಕಿಗೆ ಬಂದಿಲ್ಲ, ದೌರ್ಜನ್ಯದ ಕತ್ತಲೆಯಿಂದ ಹೊರಬಂದಿಲ್ಲ ಎನ್ನುವುದನ್ನು ಗ್ರಹಿಸಬಹುದಾಗಿದೆ. ಕುರಿಯಯ್ಯನ ಜೊತೆಯಲ್ಲಿ ಮಾರಿಗುಡಿಯಲ್ಲಿ ವಾಸಿಸುತ್ತಾ, ಆತನಿಗೆ ಊರುಗೋಲಾಗಿದ್ದವನು ಅಮಾಸ. ಮಠದ ಅನ್ನವನ್ನೇ ನಂಬಿದ್ದವರು. ಇವರದು ಶ್ರಮ ಮಾತ್ರ ಫಲ ಪಡೆಯುವುದು ಗೌಡರು ಎನ್ನುವುದನ್ನು ತೆಂಗಿನಮರದ ದೃಷ್ಟಾಂತದೊಂದಿಗೆ ದಲಿತರ ಶೋಷಣೆಯನ್ನು ಚಿತ್ರಿಸಿದ್ದಾರೆ. ಮಾರಿಹಬ್ಬದ ದಿನ ಸಿಂಗಾರಗೊಂಡು ಎಲ್ಲರ ಮನಗೆದ್ದಿದ್ದ ಮಾರಿಗುಡಿಯಲ್ಲಿ ಸಂಜೆ ತಮಟೆಯ ಧ್ವನಿಗೆ ಹುಡುಗರ ನೃತ್ಯ ಅದರಲ್ಲೂ ಅಮಾಸ ಗೌಡರ

ಸಮೇತವಾಗಿ ಎಲ್ಲರ ಗಮನ ಸೆಳೆದಿದ್ದ ಒಂದು ಕಾಲದಲ್ಲೂ ಕುರಿಯಯ್ಯನೂ ಇನಾಮು ಪಡೆದು ಎಲ್ಲರ ಮನೆಮಾತಾಗಿದ್ದ ಆದರೆ ಶೋಷಣೆ ಆತನನ್ನು ಬಿಟ್ಟಿರಲಿಲ್ಲ. ಈಗ ಆತನ ಸಾಕುಮಗನಂತಿರುವ ಅಮಾಸನ ಸರದಿ. ಅಮಾಸನನ್ನು ಊರಿನ ಹುಡುಗರು ಆಡಿಸುವ ವಸ್ತುವಿನಂತೆ ಕಾಣುತ್ತಿದ್ದರು. ಗ್ಯಾಂಗ್‌ಮನ್ ಸಿದ್ದಪ್ಪನ ರೋಷದ ಮಾತುಗಳು ದಲಿತರ ಶೋಷಣೆಯನ್ನು ಪುಷ್ಟೀಕರಿಸುತ್ತವೆ. ಈತನ ಮಾತುಗಳೂ ಮುಂದಾಗುವ ಬದಲಾವಣೆಯ ಸಂಕೇತವೆನಿಸಿವೆ. ಅಮಾಸ ಬದಲಾವಣೆಯ ಪ್ರತಿನಿಧಿಯಂತೆ ಭಾಸವಾಗಿದ್ದಾನೆ. ಹೀಗೆ ದಲಿತರ ಮೇಲಿನ ಶೋಷಣೆಯನ್ನು ಕಟ್ಟಿಕೊಟ್ಟ ದೇವನೂರರು ಮುಂದಾಗುವ ಬದಲಾಣೆಯ ಸೂಚನೆಯನ್ನೂ ನೀಡಿದ್ದಾರೆ. ಅಂತೆಯೇ ದೇವನೂರರ **ಒಡಲಾಳ**ದ ಸಾಕವ್ವನ ಪರಿವಾರದ ಪರಿಸ್ಥಿತಿ, ಪುಟ್ಟಗೌರಿ ನವಿಲು ಬಿಡಿಸುವುದು ಇವೆಲ್ಲ ಓದುಗರ ಮನಮುಟ್ಟಿವೆ. ಬಂಡಾಯವೆಂಬುವುದು ಪ್ರೀತಿಯ ಅಂತಃಕರಣದ ಕ್ರಿಯೆ ಎಂಬುದನ್ನು ಸೊಗಸಾಗಿ ವರ್ಣಿಸಿದ್ದಾರೆ. ದಾರಿದ್ರ್ಯವಿದ್ದರೂ ಬದುಕಿನ ಸುಖ ಅನುಭವಿಸುವ ಸಾಕವ್ವ ಮತ್ತವಳ ಪರಿವಾರದ ಕಥೆಯಿದು. ಮನುಷ್ಯರ ಎದುರಿಗೆ ಬದುಕಿನ ಪ್ರಶ್ನೆ ಎದುರಾದಾಗ ಆಸೆ ಆಕಾಂಕ್ಷೆಗಳನ್ನು ಪೂರೈಸಿಕೊಳ್ಳಲು ಸತ್ಯ, ನ್ಯಾಯ, ಧರ್ಮ ಇವೆಲ್ಲವನ್ನು ಅಸಂಗತವಾಗಿ ಕಾಣುತ್ತಾರೆ ಎನ್ನುವುದನ್ನು ಕಳ್ಳತನ ವಿಚಾರಣೆಯಂತಹ ಪ್ರಸಂಗಳು ಸೂಚಿಸುತ್ತವೆ.

ಅಮಾಸನಂತಹ ತಬ್ಬಲಿ ಹುಡುಗನಿಗೂ ತನ್ನ ಕಥೆಯಲ್ಲಿ ಅನನ್ಯ ವ್ಯಕ್ತಿತ್ವ ಪ್ರಕಟಿಸಿ, ಸತ್ವ ನೀಡಿ ಪಾತ್ರಕ್ಕೆ ಗೌರವ ಸಲ್ಲಿಸಿದ ದೇವನೂರು ಮಹಾದೇವರ ಕೃತಿಯಲ್ಲಿನ ಪ್ರತಿಯೊಂದು ಪಾತ್ರಕ್ಕೂ ತನ್ನದೇ ಆದ ವೈಶಿಷ್ಟ್ಯ ಗೌರವವಿದೆ. ಇವರ ಕೃತಿಗಳಲ್ಲಿ ವ್ಯವಸ್ಥೆಯನ್ನು, ಎಲ್ಲಿಯೂ ನೇರವಾಗಿ ಪ್ರತಿಭಟಿಸಿಲ್ಲ. ಹೊರತಾಗಿ ಅದರೊಡನೆ ಸಂಬಂಧವಿಟ್ಟುಕೊಳ್ಳಲು ಒಲವು ತೋರಿಸಿವೆ. ಹೀಗೆ ದೇವನೂರು ಮಹಾದೇವರು ಅತ್ಯಂತ ಸೃಜನಶೀಲ ಲೇಖಕರೆನಿಸಿಕೊಂಡಿದ್ದಾರೆ. ದಲಿತ ದೌರ್ಜನ್ಯದ ವಿರುದ್ಧದ ಪ್ರಭಾವಿ ಧ್ವನಿಯೆನಿಸಿರುವ ಇವರು ಸಾಹಿತ್ಯದ ಮೂಲಕ ಪ್ರತಿಭಟಿಸುತ್ತಾ ಕನ್ನಡ ಸಾಹಿತ್ಯ ಕ್ಷೇತ್ರದ ಪ್ರಮುಖರೆನಿಸಿಕೊಂಡಿದ್ದಾರೆ.

**ದೇವನೂರು ಮಹಾದೇವ ಮತ್ತು ತೇಜಸ್ವಿ:** ಜಾತಿಯನ್ನು ಅಂಟಿಕೊಂಡೇ ಇರುವ ಬಡತನ. ದೇವನೂರರ ಕಥೆಗಳಲ್ಲಿ ಪರಂಪರಾಗತ ಬಳುವಳಿಯಾಗಿ ಹುಟ್ಟಿನಿಂದಲೇ ಇಂಥ ಸ್ಥಿತಿಯನ್ನು ಪಡೆದುಬಂದವರ ಲೋಕಾವರಣ ಸೂಕ್ಷ್ಮಸ್ತರದಲ್ಲಿ ನಡೆಯುತ್ತದೆ. ತೇಜಸ್ವಿ ಬಡತನ ಮತ್ತು ಕ್ರೌರ್ಯವನ್ನು ಎರಡು ಮಾದರಿಗಳಲ್ಲಿ ಗ್ರಹಿಸುತ್ತಾರೆ. ವ್ಯಕ್ತಿ ತನ್ನ ಜಡತ್ವದಿಂದ ಗಳಿಸಿಕೊಂಡ ಆರ್ಥಿಕ ಹಿನ್ನೆಡೆ ಮತ್ತು ಸಾಮಾಜಿಕ ವ್ಯವಸ್ಥೆ ನಿರ್ಮಾಣ ಮಾಡಿರುವ ನಿರ್ಗತಿಕ ಸ್ಥಿತಿ ಇವೆರಡೂ ನಿರ್ಲಿಪ್ತ ಧೋರಣೆಯಲ್ಲಿ ಅಭಿವ್ಯಕ್ತಗೊಳ್ಳುವುದರಿಂದಲೋ ಏನೋ, ದೇವನೂರರ ಕಥೆಗಳಲ್ಲಿನ ತೀವ್ರತೆ ತೇಜಸ್ವಿ ಕಥನಗಳಲ್ಲಿ (ತಬರನ ಕಥೆಯನ್ನು ಹೊರತುಪಡಿಸಿದರೆ) ಅಷ್ಟಾಗಿ ಕಂಡುಬರುವುದಿಲ್ಲ. ದೇವನೂರು ಮಹಾದೇವ ಅವರ ಕಥನಗಳು ಪರಂಪರಾಗತ ನಂಬಿಕೆಗಳನ್ನು ಅಲ್ಲಿನ ಬದುಕಿನ ಆವರಣದೊಳಗಿನಿಂದಲೇ ಶೋಧಿಸುತ್ತಾ, ಪರಂಪರೆ ತಾನು ಬದುಕಿ ಉಳಿದು ಸಾತತ್ಯತೆ ಪಡೆಯುವುದನ್ನು ಪ್ರತಿಬಿಂಬಿಸಿದರೆ, ತೇಜಸ್ವಿ ಕಥನಗಳು ಪರಂಪರೆಯನ್ನು ಅದರ ಒಳಗಿನಿಂದಲೇ ಪರಿಶೋಧಿಸಿ ಪರಂಪರೆಯ ಶಕ್ತಿ ಮೂಲದ ಕಡೆಗೆ ದೃಷ್ಟಿ ಹಾಯಿಸುತ್ತದೆ.

ಸಾಮಾಜಿಕ ಅಸಮಾನತೆಯಲ್ಲಿ, ಪರಂಪರೆಯ ಹಿಡಿತದಲ್ಲಿ, ಅಮಾನವೀಯ ವ್ಯವಸ್ಥೆಯ ಕ್ರೌರ್ಯದಡಿಯಲ್ಲಿ, ಶೋಷಣೆಯ ನೆಲೆಯನ್ನು ತೇಜಸ್ವಿಯವರು ಗುರುತಿಸುವಂತೆಯೇ ದೇವನೂರರು ಗುರುತಿಸಿದರೂ ಬದುಕುವ ಆಶಯದ ಮೇಲೆ ಬಲವಂತದಿಂದ ಹೇರಲು ಪ್ರಯತ್ನಿಸುವ ವ್ಯವಸ್ಥೆಯ ದರ್ಪ, ಕ್ರೌರ್ಯ, ಪಕ್ಷಪಾತ ಇವುಗಳಿಂದ ಹೊರಬರುವ ಮಾರ್ಗವನ್ನು ಬೇರೆ ಬೇರೆಯಾಗಿ ಕಂಡುಕೊಳ್ಳುತ್ತಾರೆ. ಶೋಷಣೆ ದಬ್ಬಾಳಿಕೆಯ ವಿರುದ್ಧ ಪ್ರತಿಭಟಿಸಿ ತಾತ್ಕಾಲಿಕವಾಗಿ ಬಿಡುಗಡೆ ಪಡೆಯುವುದರ ಬದಲಾಗಿ ಕಾಲಾಂತರದಲ್ಲಿ ವಸ್ತುಸ್ಥಿತಿಯು ನಿರ್ಮಾಣ ಮಾಡಬಹುದಾದ ಹೊಸ ಪರ್ಯಾಯವನ್ನು ದೇವನೂರರ ಕಥೆಗಳು ನಿರೀಕ್ಷಿಸಿದರೆ; ಶೋಷಣೆಯ ಹಿಂದಿರುವ ಸಾಂದರ್ಭಿಕ ಅಂಶಗಳನ್ನು ಸಂಶಯಾತ್ಮಕ ದೃಷ್ಟಿಯಿಂದ ಪ್ರಶ್ನಿಸುತ್ತಾ ವಸ್ತು ಸ್ಥಿತಿಯೊಂದಿಗೆ ಘರ್ಷಿಸುವುದರೊಂದಿಗೆ, ಪರಿಹಾರವನ್ನು ಕಂಡುಕೊಳ್ಳಬಹುದಾದ ಸಾಮಾಜಿಕ ಹೊಣೆಗಾರಿಕೆಯ ಮಹತ್ವವನ್ನು ತೇಜಸ್ವಿ ಕಥನಗಳು ಸಾರುತ್ತವೆ.

## ಶ್ರೀಕೃಷ್ಣ ಆಲನಹಳ್ಳಿ

ನವ್ಯಕಾಲದ ಪ್ರಭಾವಿ ಲೇಖಕರಲ್ಲೊಬ್ಬರು ಶ್ರೀಕೃಷ್ಣ ಆಲನಹಳ್ಳಿಯವರು. ಪ್ರಭಾವಿ ಕಥೆಗಳ ಮೂಲಕ ಗಮನ ಸೆಳೆದವರು. ನವ್ಯ ಕಾಲದ ಸಾಹಿತ್ಯಕ ಕಾಳಜಿಗಳು ಶ್ರೀಕೃಷ್ಣ ಆಲನಹಳ್ಳಿ ಅವರನ್ನು ರೂಪಿಸಿವೆ.   ಇವರ ಸಣ್ಣಕಥೆಗಳು ಲೈಂಗಿಕತೆ ಪ್ರಧಾನವಾದವುಗಳಾಗಿವೆ. ಅಂತೆಯೇ ಆಲನಹಳ್ಳಿಯವರ **ಗೀಜಗನ ಗೂಡು** ವೈಯಕ್ತಿಕ ಅವಶ್ಯಕತೆಯ ಕಾಮ ಪಾತಳಿಯ ಚಿತ್ರಣವನ್ನು ಕಣ್ಣ ಮುಂದಿಡುತ್ತದೆ. ಇದರಲ್ಲಿ ವಯಸ್ಸಾಗಿರುವ ಪೊವೆಲ್, ರಷ್ಯನ್ ಹೆಂಗಸಿನ ಅವಶ್ಯಕತೆಗಳನ್ನು ಅರಿಯಲು ಮತ್ತು ಪೂರೈಸಲು ಅಶಕ್ತನಾಗಿರುವುದರಿಂದ ಅವಳ ಚಿತ್ತ ನಾಯಕನತ್ತ ಹೊರಳುತ್ತದೆ. ಇವರಿಬ್ಬರ ಚೆಲ್ಲಾಟದ ನಡುವಿನ ಜೀವನ ಪೊವೆಲ್‌ನದ್ದು ಪಾಲಿಗೆ ಬಂದಿದ್ದು ಪಂಚಾಮೃತವೆನ್ನುವಂತೆ ಸಿಕ್ಕಿದನ್ನು ಅನುಭವಿಸಲು ರಾಜಿಮಾಡಿಕೊಳ್ಳುತ್ತಾನೆ. ನಾಯಕ ಮತ್ತು ಯುವತಿಯ ಜೀವನಕ್ಕೆ ದೊರೆತ ಸಾಧ್ಯತೆಗಳು ಪ್ರಶ್ನೆಯಾಗಿಯೇ ಉಳಿಯುತ್ತದೆ. **ಇನ್ನೊಂದು ಪ್ರಣಯಪ್ರಸಂಗ**ದ ಕಥೆಯಲ್ಲಿಯೂ ಸ್ವಲ್ಪ ಭಿನ್ನವಾಗಿರುವ ಇದೆ ತರಹದ ಆಕೃತಿಯಿದೆ. **ಅಂಟಿದ ನಂಟಿನ ಕೊನೆ ಬಲ್ಲವರಾರು** ಕಥೆಯಲ್ಲಿ ಶೂದ್ರ ನಾಯಕ ಬ್ರಾಹ್ಮಣ ಕನ್ಯೆಯರನ್ನು ಕೆಡಿಸುವುದೇ ತನ್ನ ಬದುಕಿನ ಗುರಿಯಂತೆ ನಡೆದು ಕೊಂಡಿದ್ದಾನೆ. ಹಲವಾರು ಕಥೆಗಳಲ್ಲಿ ಬ್ರಾಹ್ಮಣರು ಶೂದ್ರರನ್ನು ಶೋಷಿಸುವ ಸನ್ನಿವೇಶಗಳನ್ನು ನೊಡಿದ್ದೇವೆ. ಆದ್ದರಿಂದ ಸೇಡನ್ನು ತೀರಿಸಿಕೊಳ್ಳಲು ಈತ ಬ್ರಾಹ್ಮಣ ಕನ್ಯೆಯರನ್ನು ಕೆಡಿಸುತ್ತಾ ಹೋಗುತ್ತಾನೆ. ಈತನ ಬಲೆಯಲ್ಲಿ ಬೀಳುವ, ಬಿದ್ದು ಒದ್ದಾಡುವ ಕಥಾ ಹಂದರವನ್ನು ಹೊಂದಿದೆ. **ತಪ್ತ** ಕಥೆಯ ನಾಯಕನಿಗೆ ಸಾಂಪ್ರದಾಯಿಕ ಬದುಕನ್ನು ನಡೆಸಲು ಸಾಧ್ಯವಿಲ್ಲವೆನಿಸಿ ಆಧುನಿಕತೆಯ ಜೀವನವನ್ನು ಬಯಸುತ್ತಾನೆ. ತನ್ನಂತೆಯೇ ಆಲೋಚಿಸುವ ಹೆಣ್ಣನ್ನೆ ಮದುವೆ ಮಾಡಿಕೊಳ್ಳಬೇಕೆಂದು ನಿರ್ಧರಿಸುತ್ತಾನೆ. ಆದರೆ ಪ್ರಭಾಳಿಗಿಂತ ಸಾಂಪ್ರದಾಯಿಕ ವ್ಯಕ್ತಿತ್ವದ ಗೌರಿ ತನ್ನ ಮೌನದ ಮೂಲಕ ಗೆಲ್ಲುತ್ತಾಳೆ. ಇದಕ್ಕೆ ಕಾರಣ ತಾನು ಹೇಳಿದಂತೆ ಕೇಳಿಕೊಂಡು ತನ್ನ ಸೇವೆ ಮಾಡಿಕೊಳ್ಳುತ್ತಿರಬಹುದೆಂಬ ಸ್ವಾರ್ಥವೂ ಇರಬಹುದು. ಇದೇ ತರಹದ ಕಥೆಯನ್ನು **ನೆಲಗುಮ್ಮ** ಕಥೆ ಹೊಂದಿದ್ದರೂ ನಾಯಕ ತಾನು ಎದುರುಸುತ್ತಿರುವ ವಿವರಗಳನ್ನು ಬಾಲ್ಯದ ಅನುಭವಗಳೊಡನೆ ಹೇಳುತ್ತಾನೆ. ಪರಕೀಯವಾದ ಸ್ಥಿತಿ ಅವನನ್ನು ಚಿಂತಿಸುವಂತೆ ಮಾಡುತ್ತದೆ. ಈ ಕಥೆಯಲ್ಲಿನ ಸಾಂಪ್ರದಾಯಿಕ ಆವರಣ ನಮ್ಮ ಮನ ಕಲಕುವಂತಿದೆ. ಬದುಕಿನ ಅಶಯಗಳು ಆರ್ಥಪೂರ್ಣವೆನಿಸಿವೆ.

**ತೊರೆ** ಮತ್ತು **ಸಂಬಂಧ** ಕಥೆಗಳು, ಒಪ್ಪಿದ್ದನ್ನು ದಕ್ಕಿಸಿಕೊಳ್ಳದ ಘಟಕವನ್ನು ಅದರ ಸ್ವತಂತ್ರ ಆಶಯದಲ್ಲಿ ಮತ್ತೆ ಎದುರುಗೊಳ್ಳಬೇಕಾದ ಸಂದರ್ಭದ ಬಂದಾಗ, ವರ್ತಮಾನವು ಕಹಿಯಾಗಿ ದುರಂತವಾಗಿ ಭೂತದ ಬಗೆಗೆ ಮುಜುಗರಪಟ್ಟುಕೊಳ್ಳುವ ಹಾಗೆ ಸನ್ನಿವೇಶ ನಿರ್ಮಾಣ ಮಾಡುತ್ತದೆ. ಇವು ಬದುಕಿನ ಕೊನೆಯ ಹಂತದಲ್ಲಿ ಉಳಿಯುವುದೇನು? ಎಂಬುದನ್ನು ವಿವರಿಸುವ ಪ್ರಯತ್ನ ನಡೆಸಿವೆ. **ತೊರೆಯ** ಲಕ್ಷ್ಮಿಯ ಬದುಕಿಗೆ ಮತ್ತೇನೂ ಲವಲವಿಕೆಯಿಂದ ಪ್ರವೇಶಿಸಲಾರದು ಎಂಬ ಸತ್ಯಕ್ಕೆ ಭೂತವು ಸ್ವಲ್ಪಮಟ್ಟಿಗೆ ಸಮಾಧಾನ ನೀಡುತ್ತದೆ. ವಿಧವೆಯಾದ ಲಕ್ಷ್ಮಿ ಗತಕಾಲದ ಸಂಘರ್ಷದಲ್ಲಿ ವರ್ತಮಾನದ ಅಳಲನ್ನು ಸಹ್ಯವಾಗಿಸಿಕೊಳ್ಳುವ ಪ್ರಯತ್ನದಲ್ಲಿ ಮಗ್ನವಾಗುವುದು ಒಂದು ರೀತಿಯ ನೋವಿನ ಸಂಗತಿಯೆನಿಸಿದೆ. ಲಕ್ಷ್ಮಿ ಮತ್ತು ಪ್ರಭುವಿನ ಆದರ್ಶ ಜೀವನದ ಸಾಧ್ಯತೆಯನ್ನು ಹಿರಿಯರ ಅವಿವೇಕತನ ಹಾಳು ಮಾಡುತ್ತದೆ. ತಾರಾಳ ಸಹವಾಸ ಗಂಡ ಮತ್ತು ಅತ್ತೆಯ ಮನೆಯ ಬದುಕಿಗೆ ಪ್ರಾಮಾಣಿಕವಾಗಿ ಒಲಿಯಲಿಲ್ಲ. ಆ ನಿರಾಸೆ ಇಬ್ಬರನ್ನು ಕಾಡುತ್ತದೆ. ಕುಟುಂಬದಲ್ಲಿನ ಸ್ಥಿರತೆ ಕಾಪಾಡಿಕೊಳ್ಳಲು ಅವರು ಪರಸ್ಪರ ದೂರವಾಗಿದ್ದಾರೆ. ಭೂತದ ನೆನಪನ್ನು ವರ್ತಮಾನದಲ್ಲಿ ಅರಗಿಸಿಕೊಳ್ಳುತ್ತ ಬದುಕನ್ನು ನಡೆಸುವ ಲಕ್ಷ್ಮಿಯ ಹತಾಶೆಯು, ನಿಟ್ಟುಸಿರನ್ನು ತನ್ನ ಆಸರೆಯಾಗಿ ಮಾಡಿಕೊಳ್ಳುತ್ತದೆ.

**ಸಂಬಂಧ** ಕಥೆಯು ಮನುಷ್ಯನ ತಪ್ಪುನಡೆಯಿಂದ ಕೌಟುಂಬಿಕ ವಿಘಟನೆ ರೂಪುಗೊಳ್ಳುತ್ತಿರುವುದನ್ನು ತಿಳಿಸುತ್ತದೆ. ಜಾತಿಯ ಅಡ್ಡಗೋಡೆ ಶೂದ್ರನಾಯಕ ಮತ್ತು ಬ್ರಾಹ್ಮಣ ಹೆಣ್ಣು ಕೂಡಿಕೊಂಡು ಜೀವನ ನಡೆಸುವ ಸಾಧ್ಯತೆಯನ್ನು ಹಾಳುಮಾಡುತ್ತದೆ. ಇದು ಈ ಕಥೆಯ ವಿಷಾದದೊಡಲಿನ ಕೇಂದ್ರ ಆಶಯವಾಗಿದೆ. ಇಂತಹ ಪರಿಸ್ಥಿತಿಯಲ್ಲೂ ಕಷ್ಟಸುಖಗಳಿಗೆ ಸ್ಪಂದಿಸುವುದರಿಂದ ಜಾತಿಯ ಎಲ್ಲೆಯನ್ನು ಮೀರಿದ ನೆಲೆಯನ್ನು ಕಂಡುಕೊಳ್ಳುತ್ತದೆ.

ಆಲನಹಳ್ಳಿಯವರ **ಕಾಡು** ಕಾದಂಬರಿಯ ಹರಹು ಭೌಗೋಳಿಕವಾಗಿ ಚಿಕ್ಕದಾಗಿದೆ. ಈ ಕಾದಂಬರಿಯ ಘಟನೆಗಳು ನಡೆಯುವುದು ಕೊಪ್ಪಲು ಮತ್ತು ಹೊಸೂರು ಗ್ರಾಮಗಳಲ್ಲಿ ಇದರಲ್ಲಿ ಕಿಟ್ಟಿಯ ಪ್ರಜ್ಞೆಯಲ್ಲಿ ಕಟ್ಟಿಕೊಳ್ಳುತ್ತಿರುವ ವಿವರಗಳು ಭಿನ್ನವಾದ ಎರಡು ನೆಲೆಗಳಲ್ಲಿ ವ್ಯಕ್ತವಾಗುತ್ತವೆ. ಅವನ ಬದುಕು ಅರ್ಥಪೂರ್ಣವಾಗಿ ಅರಳಲು ನೆರವಾಗುತ್ತಿರುವ ಪರಿಸರ, ಆತನ ಬದುಕಿಗೆ ಭರವಸೆ ತುಂಬುತ್ತಿದೆ. ಗೆಳೆಯರೊಡನೆ ನಡೆಸುವ ಕಿತಾಪತಿಗಳು ಇದಕ್ಕೆ ಪೂರಕವೆನಿಸುತ್ತವೆ. ಈತ ಬಾಲ್ಯದ ಕ್ಷಣಗಳನ್ನು ಸಂತೋಷದಿಂದ ಕಳೆಯುತ್ತಿದಾನೆ ಎಂಬುದರ ಅರಿವಾದರೂ, ಇಂತಹ ಪರಿಸರ ಅವನಿಂದ ದೂರಹೋಗುತ್ತಿರುವ ಸೂಚನೆಯನ್ನು ದ್ವೇಷಗಳಲ್ಲಿ ವ್ಯಕ್ತವಾಗುತ್ತಿರುವ ವಿಘಟನಕಾರಿ ಅಂಶಗಳು ಆತನ ಬಾಲ್ಯವನ್ನು ಕಸಿದುಕೊಳ್ಳುತ್ತಿರುವಂತೆ ಭಾಸವಾಗುತ್ತಿದೆ. ಕಿಟ್ಟಿಗೂ ಮತ್ತವನ ಗೆಳೆಯರಿಗೂ ಪರಿಸರಕ್ಕೆ ಸ್ಪಂದಿಸುವ ವಿಷಯದಲ್ಲಿ ಅಂತರವಿರಬಹುದೆಂಬ ಅನುಮಾನದಲ್ಲಿ ಕೃತಿಯು ಮುಂದುವರಿಯುತ್ತಿರುವಂತೆ ಕಾಣುತ್ತದೆ. ಜೊತೆಯಲ್ಲಿಯೇ ವಿಘಟನ ನೆಲೆಯ ಆಘಾತಗಳು ಕೊಪ್ಪಲಿನ ಸುತ್ತಲಿನ ಹಳ್ಳಿಗಳಲ್ಲಿಯೂ ಬೆಳೆಯುತ್ತಿರುವುದನ್ನು ಧ್ವನಿಸುತ್ತದೆ.

ವ್ಯಕ್ತಿಯ ಸಾಂಸ್ಕೃತಿಕವಾದಂತಹ ನೀತಿನಿಯಮಗಳು ಬದುಕಿನ ನಿರ್ಣಾಯಕ ಕ್ಷಣಗಳಲ್ಲಿ ಹೇಗೆ ವರ್ತಿಸುತ್ತವೆ ಎಂಬುದರ ಬಗ್ಗೆ ಖಚಿತವಾಗಿ ಹೇಳಲು ಸಾಧ್ಯವಾಗುವುದಿಲ್ಲ. ಕಾರಣವೇನೆಂದರ ಅನಿವಾರ್ಯ ಸಂದರ್ಭದಲ್ಲಿ ಅವು ಉದ್ಭವಿಸುತ್ತವೆ. ಆ ಸಂದರ್ಭವು ಹೇಗೆ ನೆಲೆಯೂರಲು ಪ್ರಯತ್ನಿಸುತ್ತಿದೆ ಎಂಬುದು ಅವನ ವ್ಯಕ್ತಿತ್ವದ ಹಿನ್ನೆಲೆಯಲ್ಲಿ ಗ್ರಹಿಕೆಗೆ ಒಳಪಡುತ್ತದೆ.

ಹೀಗೆ ಸಂಭವಿಸುವ ಘಟಕಗಳನ್ನು ವ್ಯಕ್ತಿತ್ವದ ಬೆಳವಣಿಗೆಯೊಡನೆ ಏಕಕೇಂದ್ರದಲ್ಲಿ ಗುರುತಿಸುವ **ಭುಂಜಂಗಯ್ಯನ ದಶವತಾರ** ವೈಯಕ್ತಿಕ ಪಾತಳಿಯಲ್ಲಿ ಸಮೂಹದ ಪ್ರತಿಕ್ರಿಯೆಯನ್ನು ಹಿಡಿಯುವ ಪ್ರಯತ್ನಮಾಡಿದೆ. **ಭುಜಂಗಯ್ಯನ ದಶಾವತಾರಗಳು** ಆಧುನಿಕ ಬದುಕಿಗೆ ತೆರೆದುಕೊಂಡ ಬಗೆ ಬೇರೆಯದೇ ಆಗಿದೆ. ಕೃಷಿಯ ಮೇಲಿನ ನಿರಾಸಕ್ತಿಯಿಂದಾಗಿ ಹೊಟೇಲು ಆರಂಭಿಸುವ ಈತ ವಯಸ್ಸಿನ ಚಪಲದಿಂದಾಗಿ ಪಾರ್ವತಿಯನ್ನು ಬಿಟ್ಟು ಸುಶೀಲಳನ್ನು ವರಿಸುತ್ತಾನೆ. ನಾರಾಯಣನ ಒರಟು ವರ್ತನೆ, ರಾಜನ ಶಿಷ್ಟ ವರ್ತನೆಯ ನಡುವೆ ಯಾವುದು ಸರಿ ಎಂದು ನಿರ್ಧರಿಸಲು ಗೊಂದಲವನ್ನು ಎದುರಿಸುತ್ತಾಳೆ. ವ್ಯವಸ್ಥೆಯನ್ನು ಎದುರಿಸುವಲ್ಲಿ ಪಾರ್ವತಿ ಮತ್ತು ಸುಶೀಲಳಿಗಿರುವ ವ್ಯತ್ಯಾಸ, ಮಾದಳ್ಳಿಗೆ ಬಸ್ಸು, ಹೊಟೇಲು, ಬಾವಿಗಳ ಮೂಲಕ ಆಧುನಿಕತೆ ಪ್ರವೇಶಿಸುವ ರೀತಿಗಳನ್ನು ನೋಡಬಹುದಾಗಿದೆ. ಛಲವಂತನಾಗಿದ್ದ ಭುಜಂಗಯ್ಯ ಲೌಕಿಕ ಬಂಧನಗಳಿಂದ ಬಿಡುಗಡೆ ಹೊಂದಲು ಬಯಸುತ್ತಾನೆ ಇತರರಿಗೆ ಮಹತ್ವಕೊಡದೆ ತನ್ನ ಸಾಧನೆಗೆ ಮಹತ್ವ ಕೊಡುತ್ತಾನೆ. ಕೊನೆಗೆ ಸಾಯುವ ಮೂಲಕ ಮುಗ್ಧೆ ಸುಶೀಲಳನ್ನು ಅನಾಥಳನ್ನಾಗಿಸುತ್ತಾನೆ.

ಬಿರುಸಿನ ಸ್ಥಿತ್ಯಂತರವು ಸ್ವೀಕರಣೆಯ ರೂಪದಲ್ಲಿ ಜಗತ್ತಿನಾದ್ಯಂತ ವ್ಯಾಪಿಸಿದ್ದು, ನಗರದ ಬದುಕಿನ ರೀತಿ ನೀತಿಗಳು ಪ್ರಾಧಾನ್ಯತೆಯನ್ನು ಪಡೆದುಕೊಂಡು ಆಧುನಿಕಗೊಳ್ಳುವತ್ತ ವಾಲಿದಾಗ ಹೊಸ ಬದುಕಿನ ಆಸೆಯಿಂದಾಗಿ ಬದಲಾವಣೆಗೆ ಒಳಗಾದ ಹಳ್ಳಿಯ ಚಿತ್ರಣ. ಗೌವ್ವಳ್ಳಿ ಅಲ್ಲಿನ ಸಾಮಾಜಿಕ ಬದುಕಿಗೆ ಜ್ವಲಂತ ನಿದರ್ಶನ. ಕತ್ತಲೆಯಲ್ಲಿ ಕಳೆದುಹೋಗಿದ್ದ ಈ ಹಳ್ಳಿಗೆ ಹೊಸ ರೂಪವನ್ನು ಕೊಟ್ಟವನು ಗೆಂಡೆತಿಮ್ಮ. ಗೆಂಡೆತಿಮ್ಮ ಊರಿಗೆ ಹೊಸಬನಲ್ಲವಾದರೂ ಇದೇ ಹಳ್ಳಿಯಲ್ಲಿ, ಹಳ್ಳಿಗೇ ಅಂಟಿಕೊಂಡಿದ್ದ ಕತ್ತಲಿನ ಬದುಕಿನಲ್ಲಿ ಕಳೆದುಹೋಗಿದ್ದ ಹಳ್ಳಿಗ ಮಾತ್ರ. ಈತನ ಮೂಲಕ ಹಳ್ಳಿಯ ಬದಲಾವಣೆಗೆ ಕಾರಣಳಾದವಳೇ ಮರಂಕಿ. ಯಾವುದೇ ಸಂಪರ್ಕ ಸೌಲಭ್ಯವಿಲ್ಲದ ಮೈಸೂರಿನಿಂದ ಸ್ವಲ್ಪವೇ ದೂರವಿದ್ದ ಗೌವ್ವಳ್ಳಿಯು ಆಧುನಿಕ ಸಾಧನ ಸಾಮಾಗ್ರಿಗಳ ಪ್ರತೀಕವಾದ ಮರಂಕಿಯ ಮೂಲಕ ವ್ಯತ್ಯಸ್ತಗೊಳ್ಳುತ್ತಾ ಸಾಗುತ್ತದೆ. ಮೇಲ್ನೋಟಕ್ಕೆ ಇದರ ಸುಳಿವು ದೊರೆತದೆ ಗೆಂಡೆತಿಮ್ಮ ಹೆಂಡತಿ ಮರಂಕಿಯ ಪ್ರೇರಣೆಯಿಂದ ಸುತ್ತಮುತ್ತಲ ಹಳ್ಳಿಗಳಿಗೂ ಇದರ ರುಚಿಯನ್ನು ಹತ್ತಿಸುತ್ತಾನೆ. (ಘಮಲದೆಣ್ಣೆ, ಹಲ್ಲುಪುಡಿ, ಸ್ನೋ, ಪೌಡರ್, ಬಾಡಿ, ಲಂಗ, ಸೋಪು) ಮುಚ್ಚುಮರೆಯಲ್ಲಿಯಾದರೂ ಹಳ್ಳಿಯ ಯುವಕ-ಯುವತಿಯರು ಈ ವಸ್ತುಗಳನ್ನು ಬಯಸುತ್ತಾರೆ ಅಂತೆಯೇ ಸ್ವೀಕರಿಸುತ್ತಾರೆ. ಶೃಂಗಾರ ಸಾಮಾಗ್ರಿಗಳ ಮೋಹದಲ್ಲಿ ಹಳ್ಳಿಯ ಯುವಕ-ಯುವತಿಯರ ನಡವಳಿಕೆಗಳಿಂದ ಊರಹಿರಿಯರು ಆತಂಕ್ಕೊಳಗಾಗುತ್ತಾರೆ. ಹಳ್ಳಿಯಲ್ಲಿನ ಸಂಚಲನದಿಂದ ಅಸಮಾಧಾನಿತರಾದ ಹಿರಿಯರು ಕೇಡು ಅನಿಷ್ಟಗಳೆಂದು ಜರೆದು ಇದಕ್ಕೆ ಗೆಂಡೆತಿಮ್ಮನನ್ನು ಕಾರಣವಾಗಿಸಿ ಪಂಚಾಯ್ತಿಯಲ್ಲಿ ಆಕ್ಷೇಪಿಸುತ್ತಾರೆ. ಹಲವು ಆರೋಪಗಳಿಂದ ಮುಗ್ಧನಾಗಿದ್ದ ಗೆಂಡೆತಿಮ್ಮ ಭಾವನಾತ್ಮಕವಾಗಿ ಆಘಾತಗೊಂಡು ತತ್ತರಿಸಿಹೋಗುತ್ತಾನೆ. ಆಧುನಿಕ ಸಮಾಜದ ಬದಲಾವಣೆಯ ಆಮಿಷಕ್ಕೆ ಗ್ರಾಮ ಸಮಾಜವನ್ನು ಒಡ್ಡುವವಳು ಮರಂಕಿ.

ಶ್ರೀಕೃಷ್ಣ ಆಲನಹಳ್ಳಿಯವರು ಉದ್ದೇಶಪೂರ್ವಕವಾಗಿ ಗ್ರಾಮೀಣ ಬದುಕನ್ನು ಬದಲಾಯಿಸಲು ಹೊರಟವಲ್ಲ. ಪರಸಂಗದ ಗೆಂಡೆತಿಮ್ಮ ಕಾದಂಬರಿಯಲ್ಲಿ ಬದುಕಿನ ರೀತಿ-ನೀತಿಗಳು ಬದಲಾದಾಗ ಸಮಾಜದ ಪ್ರತಿಕ್ರಿಯೆ; ಸ್ವಂತಃ ಬದಲಾವಣೆಗೊಳಗಾದ ವ್ಯಕ್ತಿಗಳು ಸಂಕ್ರಮಣ ಸ್ಥಿತಿಯನ್ನು ತನ್ಮಯವಾಗಿ ಸ್ವೀಕರಿಸಿದಾಗ ಅವರಲ್ಲುಂಟಾದ ತಲ್ಲಣಗಳು ಸಮರ್ಥವಾಗಿ ನಿರೂಪಿಸಲ್ಪಟ್ಟಿದೆ.

**ಶ್ರೀ ಕೃಷ್ಣ ಆಲನಹಳ್ಳಿ ಮತ್ತು ತೇಜಸ್ವಿ:** ವ್ಯವಸ್ಥೆಯನ್ನು ಸಾಮಾನ್ಯ ನೆಲೆಯಲ್ಲಿ ಗ್ರಹಿಸುವ ಶ್ರೀಕೃಷ್ಣ ಆಲನಹಳ್ಳಿಯವರ ಕಥನಗಳು ಗ್ರಾಮೀಣ ಬದುಕನ್ನೇ ಕೇಂದ್ರವಾಗುಳ್ಳವು. ತೇಜಸ್ವಿಯವರ ಕಥನಗಳು ಸಾಮಾಜಿಕ-ಸಾಂಸ್ಕೃತಿಕ ಆಗುಹೋಗುಗಳ ಐತಿಹಾಸಿಕ ಸಂದರ್ಭಗಳನ್ನು ಸೆರೆಹಿಡಿಯುವ ಗ್ರಾಮೀಣ ಸ್ತರ ವಿನ್ಯಾಸಗಳನ್ನು ಕಟ್ಟಿಕೊಡುವ ಮಾದರಿಯವು. ಆಧುನಿಕತೆಯ ಪ್ರವೇಶದಿಂದಾಗಿ ಗ್ರಾಮೀಣ ಬದುಕಿನ ಹಲವು ಮೌಲ್ಯಗಳ ಪಲ್ಲಟಗಳನ್ನು ಸೂಕ್ಷ್ಮವಾಗಿ ಅವಲೋಕಿಸಿರುವ ಇವರಿಬ್ಬರಲ್ಲೂ ಅಭಿವ್ಯಕ್ತಿ ಕ್ರಮದಲ್ಲಿ ವ್ಯತ್ಯಾಸವಿದೆ. ಗಂಡುಹೆಣ್ಣಿನ ಸಂಬಂಧಗಳು, ನಗರ ಹಳ್ಳಿಗಳ ಸಾಂಸ್ಕೃತಿಕ ಸಾಧ್ಯಾಸಾಧ್ಯತೆಗಳು, ಬದುಕು, ಪರಂಪರೆ ಮತ್ತು ಆಧುನಿಕತೆ ಇಕ್ಕಳದಲ್ಲಿ ಸಿಕ್ಕಿ ನರಳುವ ಪ್ರಕ್ರಿಯೆಯಂತೆ ಆಲನಹಳ್ಳಿಯವರ ಕಥನಗಳು ಚಿತ್ರಿತವಾಗಿದ್ದರೆ, ನಗರ ಹಳ್ಳಿಗಳ ಸಾಂಸ್ಕೃತಿಕ ಸಾಧ್ಯಾಸಾಧ್ಯತೆಗಳನ್ನು ಸಮಕಾಲೀನ ಲೇಖಕರಿಗಿಂತ ಭಿನ್ನ ನೆಲೆಯಲ್ಲಿ ಗ್ರಹಿಸುವತ್ತ ತೇಜಸ್ವಿ ಬರವಣಿಗೆಗಳು ಬೆಳೆಯುತ್ತವೆ.

ಹೊಸ ಮತ್ತು ಹಳೆತಲೆಮಾರುಗಳ ನಡುವಿನ ಸಾಂಸ್ಕೃತಿಕ ಸಂಘರ್ಷವನ್ನೂ ಅದರ ಪರಿಣಾಮಗಳನ್ನು, ಅನಿವಾರ್ಯವೆಂಬಂತೆ ತಲೆ ಎತ್ತುತ್ತಿರುವ ವ್ಯವಸ್ಥೆಯ ಸಂದರ್ಭಗಳಲ್ಲಿಯೇ ಹಿಡಿಯಲು ಪ್ರಯತ್ನಿಸಿರುವುದು ಆಲನಹಳ್ಳಿ ಕಥನಗಳಲ್ಲಿ ಕಂಡುಬಂದರೆ, ತೇಜಸ್ವಿಯವರಲ್ಲಿ ನಗರ ಹಳ್ಳಿಯನ್ನು ದ್ವಂದ್ವದ ನೆಲೆಯೊಳಗೆ ಇಟ್ಟು ನೋಡಿರುವಂತಹ ಮಾದರಿಯೇ ಗ್ರಾಮೀಣ ಬದುಕಿನ ಒಳಹೊಕ್ಕು ಆ ಬದುಕಿನೊಳಗೆ ಸೇರಿಹೋದಾಗ ಅಲ್ಲಿನ 'ನೋಟ' ಹೊಸ ರೀತಿಯಲ್ಲಿ ಕಾಣಸಿಗುತ್ತದೆ. ಪ್ರಬುದ್ಧ ಪ್ರಜ್ಞೆಯನ್ನು ಬೆಳೆಸಿಕೊಳ್ಳುವತ್ತ ದೃಷ್ಟಿ ಹರಿಸಿದಾಗ ಅನುಭವದ ಜೊತೆಗೆ ಅದನ್ನು ಸರಿಗಟ್ಟುವ ವೈಚಾರಿಕತೆಯ ಕಡೆಗೆ ಅಲೋಚಿಸಬೇಕಾಗುತ್ತದೆ. ಸಾಂಸ್ಕೃತಿಕ ಆಶಯಗಳನ್ನು ಸಾದರಪಡಿಸುವ ಸಂದರ್ಭಗಳಲ್ಲಿ ಎದುರಾಗುವ ಸಂವೇದನೆಗಳ ಮೇಲಿನ ಹಿಡಿತ ಭಾವನಾತ್ಮಕವಾಗಿ ಬಿಟ್ಟಾಗ ಕಥನವು ಉದ್ದೇಶಪೂರ್ವಕವಾಗಿ ಬಿಡುತ್ತದೆ. ಈ ಅಂಶ ಶ್ರೀ ಕೃಷ್ಣ ಆಲನಹಳ್ಳಿಯವರ ಕಥನಗಳಲ್ಲಿ ಸೈದ್ಧಾಂತಿಕವಾದ ಆಶಯವಾಗಿ ಬಿಂಬಿತವಾಗಿದೆ ಎನಿಸುತ್ತದೆ. ಅದೇ ತೇಜಸ್ವಿ ಕಥನಗಳಲ್ಲಿ ಈ ಅಂಶವು ಇಕ್ಕಟ್ಟಾದ ಸ್ಥಿತಿಯಿಂದ ವಿಶಾಲವಾಗಿ ಸಾರ್ವತ್ರಿಕಗೊಳ್ಳುವ ಸ್ಥಿತಿಗೆ ಪರಿವರ್ತಿತಗೊಳ್ಳುವ ಆಶಯವಾಗಿ ಸಂಚಲನಗೊಳ್ಳುತ್ತದೆ. ಅಂದರೆ ತೇಜಸ್ವಿಯವರ ಆನಂತರದ ಕಥನಗಳಲ್ಲಿ ತಾತ್ವಿಕತೆಯ ಹುಡುಕಾಟದ ಜೊತೆಗೆ, ಸಮಾಜಮುಖಿಯಾದ ಒಲವು ಸಾರ್ವತ್ರಿಕವಾಗಿ ರೂಪುಗೊಳ್ಳುವತ್ತ ಸರಿದಿರುವುದರ ಸ್ಪಷ್ಟತೆಯಿದೆ.

## ಬೆಸಗರಹಳ್ಳಿ ರಾಮಣ್ಣ

ವೃತ್ತಿಯಿಂದ ವೈದ್ಯರು ಪ್ರವೃತ್ತಿಯಿಂದ ಕಥೆಗಾರಾಗಿರುವ ರಾಮಣ್ಣನವರು ಸಾಹಿತ್ಯಕೃಷಿಗೆ ಬಳಸಿದ ಕ್ಷೇತ್ರ ಸಣ್ಣ ಕಥೆ. ಮಂಡ್ಯ ಜಿಲ್ಲೆಯ ಹಳ್ಳಿಗಳು ಮತ್ತು ಅಲ್ಲಿನ ಜನಜೀವನದ ಬಗ್ಗೆ ಅಧಿಕೃತವಾಗಿ ಬರೆದವರು. ಸಾಮಾನ್ಯವೆನಿಸಿದ ನಿರೂಪಯೋಗಿ ವಸ್ತುವಿಗೂ ಜೀವಕೊಟ್ಟು, ಅದನ್ನು ಜೀವನಕ್ಕೆ ಅಗತ್ಯವೆನಿಸುವಂತೆ ಮಾಡುವಲ್ಲಿ ಬೆಸಗರಹಳ್ಳಿ ರಾಮಣ್ಣನವರು ಪ್ರವೀಣರು. ಅವರ ಕಥೆಗಳು ಯಾವಾಗ ಸ್ಫೋಟಗೊಳ್ಳುತ್ತವೆ, ಯಾವಾಗ ಜೀವತಳೆಯುತ್ತವೆ ಎನ್ನುವುದನ್ನು ಊಹಿಸಲಾಗದು. ನಮ್ಮ ಪಕ್ಕದಲ್ಲಿಯೇ ನಡೆಯುತ್ತಿದೆ ಎನ್ನುವ ಮಟ್ಟಿಗೆ ಕಥೆಯನ್ನು ಕಟ್ಟಿಕೊಡುವ

ಶೈಲಿಯನ್ನು ಕರಗತಗೊಳಿಸಿಕೊಂಡಿದ್ದಾರೆ. ಹಳ್ಳಿಯ ಸೊಗಡನ್ನು ಸುಂದರವಾಗಿ ಕಟ್ಟಿಕೊಡುವ ಕಥೆಗಾರರಿವರು.

ಕುಟುಂಬದ ವಿಘಟನೆಯು ತಾತ್ಕಾಲಿಕವಾಗಿ ಹುಟ್ಟಿಕೊಂಡರೂ ಯಾವುದೊ ಒಂದು ಭಾವನಾತ್ಮಕ ಸಂದರ್ಭದಲ್ಲಿ ಮತ್ತೆ ಒಂದಾಗುವ ಸನ್ನಿವೇಶಗಳನ್ನು ನಾವು ರಾಮಣ್ಣನವರ ಹಲವಾರು ಕಥೆಗಳಲ್ಲಿ ಕಾಣಬಹುದಾಗಿದೆ. ಇದೇ ತರಹದ ಕಥಾವಸ್ತುವನ್ನು **ಸುಗ್ಗಿ** ಕಥೆಯು ಒಳಗೊಂಡಿದೆ. ಮೊದಮೊದಲು ಒಟ್ಟಿಗೆ ಬದುಕುವುದನ್ನು ಅಸೂಯೆಯಿಂದ ವಿರೋಧಿಸುವವರು ಆ ಸಂಘ ಜೀವನದ ಅನಿವಾರ್ಯತೆ ತಮಗೆ ಎದುರಾದಾಗ ಮತ್ತೆ ಒಂದಾಗ ಬಯಸುತ್ತಾರೆ. ಹೀಗೆಯೆ **ಸುಗ್ಗಿ** ಕಥೆಯ ಪುಟ್ಟಸ್ವಾಮಿ ಶಿವರಾಮಣ್ಣನಿಂದ ಪಾಲು ತೆಗೆದುಕೊಂಡು, ಬೇರೆಯಾಗಲು ಪ್ರಯತ್ನಿಸಿತ್ತಾನೆ. ಆದರೆ ಪ್ರೀತಿಯ ಕೊಂಡಿ ಕಳಚುತ್ತಿರುವ, ಹೊಸ ಜಗತ್ತಿನ ಅನುಭವವಾದಾಗ ಪುನಃ ಪುಟ್ಟಸ್ವಾಮಿ ಅವಿಭಕ್ತ ಕುಟುಂಬದತ್ತ ಒಲವು ತೋರಿಸುತ್ತಾನೆ. ಅಂತೆಯೇ ಶಿವರಾಮಣ್ಣ ಸುಗ್ಗಿಯ ಸಂದರ್ಭದಲ್ಲಿ ತನ್ನ ತಮ್ಮನನ್ನು(ಪುಟ್ಟಸ್ವಾಮಿ) ಆಹ್ವಾನಿಸುತ್ತಿದ್ದಂತೆ ಅವರಿಬ್ಬರು ವಿರಸಕ್ಕೆ ಪೂರ್ಣ ವಿರಾಮವನ್ನಿಟ್ಟು ಒಂದಾಗುತ್ತಾರೆ. ಹೀಗೆ ಸುಂದರವಾಗಿ ಕಥೆ ವಿಸ್ತಾರಗೊಂಡಿದೆ.

ಅಂತೆಯೇ **ಸೋಲು** ಕಥೆಯ ದೊಡ್ಡೆಗೌಡರು ಇಡೀ ಕುಟುಂಬ ತನ್ನ ನಿರ್ದೇಶನದಂತೆಯೇ ಬದಕಬೇಕೆಂದು ಗ್ರಹಿಸುವುದು ಅವರ ಶಕ್ತಿ ಪ್ರದರ್ಶನವೆನಿಸುತ್ತದೆ. **ಯಜಮಾನ** ಎನ್ನುವ ದರ್ಪ ಕುಟುಂಬ ಜೀವನದ ಸುಂದರ ಕ್ಷಣವನ್ನು ಕಸಿದುಕೊಳ್ಳುತ್ತಿದೆ ಎಂದೆನಿಸುತ್ತವೆ. ಮಗನ ಶಿಕ್ಷಣ ಸರಿಯಾಗಿ ನಡೆಯುತ್ತಿಲ್ಲವೆಂದು ಸಿಡುಕಿದ ಗೌಡರು ಆತನನ್ನು ಹಳ್ಳಿಯ ಜೀವನಕ್ಕೆ ಹದಗೊಳಿಸಲು ಯತ್ನಿಸುತ್ತಾರೆ. ಸುಬ್ಬಿಯ ಸಂಗದಲ್ಲಿ ಕೆಂಪಿಯನ್ನೂ ತನ್ನವಳನ್ನಾಗಿಸಿಕೊಳ್ಳುವ ಸಂಚನ್ನು ಅರಿತ ನಾಗಣ್ಣ ಯಜಮಾನ ಪಟ್ಟ ಬಯಸುವಿಕೆಯು ಕೆಂಪಿಯ ಅಸಹಾಯಕತೆಯನ್ನು ಬಳಸಿಕೊಂಡು ಅವಳನ್ನು ಬಲಿತೆಗೆದುಕೊಳ್ಳುತ್ತದೆ. ಇದು ವ್ಯವಸ್ಥೆಯ ಕ್ರೌರ್ಯವೆನಿಸುತ್ತದೆ.

ಇಂತಹುದೇ ಇನ್ನೊಂದು ಕಥೆ **ಸ್ವಾರ್ಥ**. ಇದರಲ್ಲಿನ ಪುಟ್ಟಸ್ವಾಮಿ ಗೌಡರ ನಿರ್ದೇಶನವು ವಿಘಟನೆಯನ್ನು ತನ್ನದಾಗಿಸಿಕೊಳ್ಳುವುವ ಕೆಲಸಮಾಡುತ್ತದೆ. ಮಠದೊಳಗೆ ಲೌಕಿಕ ಆಸ್ತಿಯನ್ನಿಟ್ಟುಕೊಂಡು, ಆಧ್ಯಾತ್ಮಿಕ ಚಿಂತನೆಯ ಮುಖವಾಡ ಪ್ರದರ್ಶಿಸುವ ಪ್ರಯತ್ನವನ್ನು ಅವರ ಮಗನಾದ ರಾಮಚಂದ್ರ ವಿರೋಧಿಸುತ್ತಾನೆ. ಲೌಕಿಕ ಸಂಬಂಧಗಳಿಂದ ದೂರವಾಗಬೇಕೆಂದು ಗುರುಬೋಧನೆಯನ್ನು ಪಡೆದರೂ ಹೆಣ್ಣಿನ ಸಂಗದಿಂದ ಹೊರಬರಲಾಗದೇ ಗೊಂದಲಮಯ ಜೀವನ ನಡೆಸುತ್ತಾನೆ. ಎಲ್ಲವೂ ಸುಳ್ಳು ಎಂದು ರಾಮಚಂದ್ರ ವಿರೋಧಿಸುತ್ತಾನೆ. ಆದರೆ ತನ್ನ ನೆಲೆಯನ್ನೆ ಛಿದ್ರಮಾಡಿಕೊಳ್ಳುವ ಅಪಾಯ ಕಾಣಿಸುತ್ತದೆ. ಈ ರೀತಿಯಾಗಿ ಗ್ರಾಮೀಣ ಪರಿಸರದ ಪ್ರತಿಕ್ರಿಯೆಗಳನ್ನು ರಾಮಣ್ಣನವರು ತಮ್ಮ ಕಥೆಗಳಲ್ಲಿ ದಾಖಲಿಸಿದ್ದಾರೆ.

**ಪ್ರಜಾಪ್ರಭುತ್ವ ಮತ್ತು ಮೂರು ಮಂಗಗಳು** ಕಥೆ ತುರ್ತು ಪರಿಸ್ಥಿತಿಯ ಸಂದರ್ಭದಲ್ಲಿ ರಚನೆಯಾದ ಕಥೆಯಾಗಿದೆ. ಮಂಚ ಮಂಗಗಳನ್ನು ಆಟ ಆಡಿಸುವಾತ. ಆತನ ಜೊತೆಗಿರುವ ಮೂರು ಮಂಗಗಳು ತಮ್ಮ ಅಭಿನಯದ ಮೂಲಕ ಗಾಂಧಿ ತತ್ವವನ್ನು ವಿವರಿಸುವುದು ಪೋಲಿಸರಿಗೂ ಅಚ್ಚರಿಯನ್ನುಂಟುಮಾಡುತ್ತದೆ. ಮಂಚನಿಗೆ ಏಟು ಬೀಳುತ್ತಿರುವಾಗ ಪ್ರತೀಕಾರ

ತೀರಿಸಿಕೊಳ್ಳಲು ಅವು ಬಂದರೂ ಮಂಚನ ಮಾತಿನಂತೆ ಅವು ಎಡ ಕೆನ್ನೆಯನ್ನು ಹೊಡೆಯಲು ತೋರಿಸುತ್ತ ಗಾಂಧೀವಾದ ಪ್ರತಿಪಾದಿಸಿದರೆ, ಮತ್ತೊಂದು ಗಾಂಧಿಯವರ ಸತ್ಯಾಗ್ರಹ ಮಾದರಿಯಲ್ಲಿ ಕುಳಿತಿರುತ್ತದೆ. ಹೀಗೆ ಪ್ರಜಾಪ್ರಭುತ್ವದಲ್ಲಿ ಗಾಂಧಿ ತತ್ವಗಳಿಗೆ ತೊಂದರೆಯಾಗಿದೆ ಎನ್ನುವುದನ್ನು ಮೂರು ಮಂಗಗಳ ಮೂಕ ಪ್ರಜ್ಞೆಯ ಮೂಲಕ ಚಿತ್ರಿಸಿದ್ದಾರೆ.

ಈ ಮಾದರಿಯ ಇನ್ನೊಂದು ಕಥೆ **ಗಾಂಧಿ**. ಗಾಂಧಿ ಶಿವಪುರಕ್ಕೆ ಬಂದಿದ್ದರ ಸವಿನೆನಪಿಗೆ ಮೊಮ್ಮಗನಿಗೆ ಇಟ್ಟ ಹೆಸರಿದು. ಈ **ಗಾಂಧಿ** ಒಬ್ಬ ರೋಗಗ್ರಸ್ತ ಹುಡುಗ. ಈ 'ಗಾಂಧಿ' ಹೆಸರಿನಿಂದ ಈತ ಹಾಸ್ಯದ ವಸ್ತುವಾಗುವುದನ್ನು ಕಥೆ ಚಿತ್ರಿಸುತ್ತದೆ. ಹುಡುಗನ ಸಾವಿಗೆ ಬಡತನ, ಅಜ್ಞಾನ ಮಾತ್ರವಲ್ಲದೆ, ವೈದ್ಯರ ನಿರ್ಲಕ್ಷ್ಯತೆಯೂ ಕಾರಣ ಎನ್ನುವುದನ್ನು ಕಾಣಬಹುದು. ಈ ಹುಡುಗ ಸಾವನ್ನು ಧೈರ್ಯದಿಂದ ಎದುರಿಸಿದರೂ ಅವನ ಆಸೆ ಬಡತನದಿಂದಾಗಿ ಹಾಗೆಯೇ ಉಳಿಯುತ್ತದೆ. ಆಸ್ಪತ್ರೆಯಲ್ಲಿ ಎಲ್ಲರೂ ಆತನ ಹೆಸರನ್ನು ವ್ಯಂಗ್ಯ ಮಾಡುತ್ತಾರೆ. ಹೀಗೆ ಈ ಕಥೆಯಲ್ಲಿ ಗಾಂಧಿ ತತ್ವಗಳು, ಆದರ್ಶಗಳು, ಚಿಂತನೆಗಳು ವಿಡಂಬನೆಗೆ ಒಳಗಾಗುತ್ತಿರುವುದನ್ನು ಕಾಣಬಹುದಾಗಿದೆ. ಈ ಕಥೆಯು ಹರಿತವಾದ ವ್ಯಂಗ್ಯದ ಧಾಟಿಯಿಂದ ಕೆನ್ನೆಗೆ ಹೊಡೆದಂತೆ ಭಾಸವಾಗುತ್ತದೆ.

**ಗರ್ಜನೆ** ಕಥೆಯ ಮರಿನಂಜ, ವಿಧವೆಗೆ ಪಟೇಲರಿಂದ ಹುಟ್ಟಿದವನು. ಸಾಮಾಜಿಕ ಸ್ಥಿತ್ಯಂತರದಲ್ಲಿ ಧೈರ್ಯವನ್ನು ಖಚಿತಗೊಳಿಸಿಕೊಳ್ಳುತ್ತಿರುವುದನ್ನು ತೋರಿದ್ದಾನೆ. ಪಾರ್ವತಿಯನ್ನು ಮದುವೆಯಾಗುವ ಹಠದಲ್ಲಿ ಅವನ ಗಟ್ಟಿವ್ಯಕ್ತಿತ್ವ ಎದ್ದು ನಿಲ್ಲುತ್ತದೆ. ಆತನ ಹುಟ್ಟಿನ ಬಗ್ಗೆ ಅಣಕಿಸುವರನ್ನು ಪ್ರತಿಭಟಿಸುತ್ತಾ ಅಂದುಕೊಳ್ಳುವ ಬದುಕನ್ನು ಪಡೆದೇ ಪಡೆಯುತ್ತೇನೆ ಎನ್ನುವಂತ ಆತ್ಮವಿಶ್ವಾಸದ ಖಚಿತತೆಯನ್ನು ಪಡೆಯುತ್ತಾನೆ. ಇದು ಆತನ ಸಮಾಜದ ವಿರುದ್ಧದ ಗರ್ಜನೆಯನ್ನು ಸೂಚಿಸಿದೆ.

ಅಂತೆಯೇ **ಗಾಂಧಿ ಸಂತಾನ**ದ ಮೆಣಸ, ಬೆಸಗರಹಳ್ಳಿ ರಾಮಣ್ಣನವರ ಲೇಖನಿಯಲ್ಲಿ ಸೃಷ್ಟಿಯಾದ ಶ್ರೀಸಾಮಾನ್ಯ ಪ್ರತಿಭೆ. ತನ್ನ ಸುತ್ತ ಮುತ್ತಲಿರುವ ಪತಿಷ್ಠಿತರ ಟೊಳ್ಳು ವಾದವನ್ನು ಪ್ರಶ್ನಿಸುತ್ತಾ, ಪೌರಾಣಿಕ ನಂಬಿಕೆಗಳನ್ನು ತಿರಸ್ಕರಿಸುತ್ತಾನೆ. ಹೀಗೆ ಶೋಷಕ ವರ್ಗದವರ ವಿರುದ್ಧ ಧ್ವನಿ ಎತ್ತಿದ ಈತನನ್ನು ಭೂಗತನನ್ನಾಗಿಸಲು ಸಮಾಜ ಪ್ರಯತ್ನಿಸುತ್ತದೆ. ತನ್ನ ಮಗನ ತಲೆ ನೆಟ್ಟಗಾಗಿ ಊರಿಗೆ ಬರಲೆಂದು ಆಶಿಸಿ ದೇವರಿಗೆ ಪೂಜೆ ಮಾಡಿಸುವ ಆಕೆಯ ತಾಯಿ ಮುಗ್ಧತನದ ಜೊತೆಯಲ್ಲಿಯೇ ವ್ಯವಸ್ಥೆಯು ದೈವೀ ಆಯಾಮವನ್ನು ತನ್ನ ಸಹಾಯಕ್ಕೆ ಬಳಸುತ್ತಿರುವ ವ್ಯಂಗ್ಯವೂ ವ್ಯಕ್ತವಾಗಿದೆ.

**ಹಾವಿಲ್ಲದ ಹುತ್ತ** ಕಥೆಯ ನಾಯಕ ಮೈಸೂರಿನಿಂದ ವೈದ್ಯಕೀಯ ಪರೀಕ್ಷೆ ಮುಗಿಸಿಕೊಂಡು ರಜೆಯಲ್ಲಿ ಮನೆಗೆ ಬಂದಾಗ ಮನೆಯ ಆಳು ಮಾದ, ತಾನು ನಿಂಗಿಯೊಡಗೂಡಿ ನಡೆಸುತ್ತಿದ್ದ ವ್ಯವಹಾರ ತಿಳಿಯದಿರಲೆಂದು ಹಬ್ಬಿಸಿದ ಸುಳ್ಳನ್ನು ಪತ್ತೆಹಚ್ಚಿ ಅಸಹಾಯಕನಾಗುವ ಕಥೆ ಇದಾಗಿದೆ. **ಕಕರನ ಯುಗಾದಿ** ಕಥೆಯಲ್ಲಿ ಜೋಯಿಸರು ಶೋಷಿಸುವ ರೀತಿಯನ್ನು ಹೃದಯಸ್ಪರ್ಶಿಯಾಗಿ ವಿವರಿಸುತ್ತಾರೆ. ಕಕರ ತನ್ನ ಸಂಕಷ್ಟದ ಪರಿಸ್ಥಿತಿಯಲ್ಲಿ ಸಹಾಯ ಕೇಳಿದಾಗ ಜೋಯಿಸರು ತಿರಸ್ಕರಿಸುತ್ತಾರೆ. ಕಕರ ಮುಟ್ಟಿದ ವಸ್ತುವನ್ನು ಪುನಃ ತೊಳೆದು ಮುಟ್ಟುವುದು ರೂಢಿ. ಆದರೆ ಜೋಯಿಸರ ಹೆಂಡತಿ ಯಶೋದಮ್ಮ ಬಾವಿಗೆ ಹಾರಿದಾಗ ಇದೇ ಜೋಯಿಸ ಎಲ್ಲರೂ ಒಂದೇ

ಎನ್ನುತ್ತಾ ಸಹಾಯಕ್ಕಾಗಿ ಕಕರನಿಗೆ ಶರಣಾಗುತ್ತಾನೆ. ಉಳಿದ ಸಂದರ್ಭದಲ್ಲಿ ಮೈಲಿಗೆಯಾಗಿದ್ದ ಕಕರ ಈ ಸಂದರ್ಭದಲ್ಲಿ ಮನೆಯನ್ನು ಪ್ರವೇಶಿಸುವಷ್ಟು 'ಮಡಿ'ವಂತನಾಗಿದ್ದ. ಶಾನುಭೋಗರು ಚನ್ನಿಯ ಬಳಿ ಬ್ರಾಹ್ಮಣ್ಯಕ್ಕೆ ಬಲಿಯಾದ ಕಕರನ ಪುಣ್ಯವನ್ನು ಕೊಂಡಾಡುತ್ತಾರೆ. ಆಕೆ ತನ್ನ ಮಕ್ಕಳ ಗತಿ ಏನೆಂದು ದುಃಖಿಸಿದಾಗ 'ದೇವರಿದ್ದಾನೆ' ಎನ್ನುವ ಸಾಂತ್ವನ ನೀಡುವುದು ಬ್ರಾಹ್ಮಣಶಾಹಿಯು ತನ್ನ ಬಿಗಿಮುಷ್ಠಿ ಬಿಡುವುದಿಲ್ಲವೆನ್ನುವುದನ್ನು ಸೂಚಿಸುತ್ತದೆ. ಗ್ರಾಮೀಣ ಪ್ರದೇಶದ ಪ್ರಬಲ ಶಕ್ತಿಗಳು ಪೂರ್ಣವಾಗಿ ಹಳ್ಳಿಯನ್ನು ತಮ್ಮ ಹಿಡಿತದಲ್ಲೇ ಇಟ್ಟುಕೊಳ್ಳಲು ಪ್ರಯತ್ನಿಸುವ ಹುನ್ನಾರ **ಚಲುವನ ಪರಂಗಿ ಗಿಡಗಳು** ಕಥೆಯಲ್ಲಿ ವಿನ್ಯಾಸಗೊಂಡಿದೆ. ಗೋವಿಂದಸ್ವಾಮಿ ಸರ್ಕಾರಿ ಸವಲತ್ತುಗಳನ್ನು ತಾನೇ ಬಳಸಿಕೊಳ್ಳುತ್ತಾ, ಅರ್ಹರಿಗೆ ತಲುಪದಂತೆ ಪ್ರತಿಬಂಧಕನಾಗಿರುತ್ತಾನೆ. ಸಾರ್ವಜನಿಕವಾಗಿ ಪ್ರಗತಿಪರ ವಾಕ್ಯಗಳನ್ನು ನುಡಿದರೂ, ತನ್ನೊಳಗಿನ ವಾಸ್ತವದಲ್ಲಿ ಅದನ್ನು ವಿರೋಧಿಸುತ್ತಾನೆ. ಆದರೆ ತಿರುಗಿಬಿದ್ದ ಮೂಗೂರನ ಪ್ರತಿಭಟನೆ ಕಂಡು ಇದುವರೆಗೆ 'ಅವಿರೋಧಿ'ಯಾಗಿದ್ದ ಗೋವಿಂದಸ್ವಾಮಿ ಬೆಚ್ಚುತ್ತಾನೆ. ಅಜ್ಞಾನ ಬಡತನವನ್ನೇ ಪೋಷಿಸುತ್ತಾ ಬಂದ ಪ್ರಬಲ ಶೋಷಕ ಸಮಾಜ ಇದರಿಂದ ಬೆವರುತ್ತದೆ. ಸಮಾಜದಲ್ಲಿ ಅರಿವು ಉಂಟಾಗುವುದನ್ನು ವಿರೋಧಿಸುತ್ತಿದ್ದ ಈ ವರ್ಗ ಮುಗೂರನಂತಹವರ ಅಬ್ಬರಕ್ಕೆ ನಡುಗುತ್ತದೆ.

ಹೀಗೆ ತಮ್ಮ ಸೃಜನಶೀಲತೆಯನ್ನು **ಗಂಗಾ** ಮತ್ತು **ಮಾನಭಂಗ** ಕಥೆಗಳಲ್ಲೂ ವ್ಯಕ್ತಪಡಿಸಿದ ರಾಮಣ್ಣನವರು ತಮ್ಮ ಕಥೆಗಳಲ್ಲಿ ಬಂಡಾಯವು ಸಿಡಿಯಬೇಕಾದ ಅನಿವಾರ್ಯತೆಯನ್ನು ವ್ಯಕ್ತಪಡಿಸಿದ್ದಾರೆ. ಬಂಡಾಯ ಬರಹಗಾರರಿಗೆ ದಾರಿದೀಪದಂತಿರುವ ರಾಮಣ್ಣನವರು ಬಂಡಾಯ ಮನೋಧರ್ಮಕ್ಕೆ ಸೇವೆ ಸಲ್ಲಿಸುವುದರ ಜೊತೆಯಲ್ಲಿಯೇ ಕನ್ನಡ ಸಾಹಿತ್ಯಕ್ಕೆ ಅಪಾರ ಸೇವೆ ಸಲ್ಲಿಸಿದ್ದಾರೆ.

**ಬೆಸಗರಹಳ್ಳಿ ರಾಮಣ್ಣ ಮತ್ತು ತೇಜಸ್ವಿ:** ಗ್ರಾಮೀಣ ಪರಿಸರದಲ್ಲಿ ಮಾನವೀಯ ಮೌಲ್ಯಗಳನ್ನು ಹುಡುಕುವ, ಪರಿಶೀಲಿಸುವ, ಹೊಸ ಸಮಾಜವನ್ನು ಬಯಸುವ, ಆರೋಗ್ಯಪೂರ್ಣವಾದ, ಸಮೃದ್ಧವಾದ ಮನಸ್ಸು ಬೆಸಗರಹಳ್ಳಿ ರಾಮಣ್ಣನವರ ಕಥಾಸಾಹಿತ್ಯದ ಹಿಂದಿರುವ ಪ್ರಧಾನ ಧ್ವನಿಯಾಗಿದೆ. ಗ್ರಾಮೀಣ ಸಂಸ್ಕೃತಿಯ ದಟ್ಟವಾದ ಸಾದೃಶ್ಯ ಚಿತ್ರಗಳು ಮತ್ತು ಗ್ರಾಮೀಣ ಪರಿಸರದಲ್ಲಿನ ಮನುಷ್ಯ ಸ್ವಭಾವದ ಹಲವು ಸೂಕ್ಷ್ಮತೆಗಳು ಮತ್ತು ಬದುಕಿನ ಅನನ್ಯ ಘಟಕಗಳಾಗಿ ಪ್ರಾಣಧಾರಣೆ ಮಾಡಿವೆ. ಆಧುನಿಕ ಜಗತ್ತಿನ ಯೋಜನೆಗಳು ಹಳ್ಳಿಗಳನ್ನು ತಿರಸ್ಕರಿಸಿ ಸ್ವಕೇಂದ್ರೀಕೃತಗೊಳ್ಳುತ್ತಿರುವ ಸಂದರ್ಭದಲ್ಲಿ ಸಾಂಸ್ಕೃತಿಕ ಸಂದರ್ಭದ ಚಾಲಕಶಕ್ತಿಯಾಗಿ ಸಾಮಾಜಿಕ ಮೌಲ್ಯಗಳನ್ನೂ, ಮಾನವೀಯ ಅನುಕಂಪಗಳನ್ನೂ ಹುಡುಕಲಾರಂಭಿಸಿದರು. ತೇಜಸ್ವಿ ಇವರಿಗಿಂತ ಸ್ವಲ್ಪ ಭಿನ್ನರಾಗಿ ಕೃತಕ ಸಾಮಾಜಿಕ ಪರಿಸರದಿಂದ ಹೊರಬಂದು ಜೀವಂತಿಕೆಯನ್ನು ಹೊರ ಸೂಸುವ, ಬದುಕಿಗೆ ಚೈತನ್ಯವನ್ನು ತುಂಬುವ ಪ್ರಕೃತಿಯ ಮೂಲಕ ದೇಸಿಯ ಜ್ಞಾನಕ್ಕೆ ಆದ್ಯತೆಯನ್ನಿತ್ತರು. ಜೀತ ಮತ್ತು ಜಾತೀಯತೆ ಬಗೆಗೆ ರಾಮಣ್ಣನವರು ಅಪಾರ ಅನುಕಂಪವನ್ನು, ಉಳ್ಳವರ–ಶೋಷಕರ ವಿರುದ್ಧ ಅಸಾಧ್ಯ ಸಿಟ್ಟನ್ನು ವ್ಯಕ್ತಪಡಿಸುತ್ತಾ ಸಾಂಸ್ಕೃತಿಕ ಶೋಷಣೆಯ ವಿವಿಧ ಸೂಕ್ಷ್ಮಗಳನ್ನು ಚಿತ್ರಿಸುವಲ್ಲಿ ಸಫಲರಾಗಿದ್ದರೆ ತೇಜಸ್ವಿಯವರು ಗ್ರಾಮೀಣ ಸಮಾಜ ಎದುರಿಸುತ್ತಿರುವ ಸಮಸ್ಯೆಗಳ ಮೂಲವನ್ನು ವ್ಯವಸ್ಥೆಯಲ್ಲಿ ಗುರುತಿಸುತ್ತಾರೆ. ಗ್ರಾಮೀಣ ಬದುಕಿನ ಸ್ಥಿತಿಯೆಂದರೆ ಆ ದೇಶದ ರಾಜಕೀಯ, ಆರ್ಥಿಕ, ಸಾಮಾಜಿಕ ಸ್ಥಿತಿಗತಿಗಳು ಸಾಮಾನ್ಯ ವ್ಯಕ್ತಿಯ ಬದುಕಿನ ರೀತಿ ನೀತಿಗಳನ್ನು ಬುಡಮೇಲು ಮಾಡುವ ಬಗೆಯದಾಗಿರುತ್ತದೆ.

ಇಬ್ಬರಿಗೂ ಅನೇಕ ಪ್ರಭಾವಗಳಿದ್ದರೂ ತಮ್ಮ ಪರಿಸರ ನಿಷ್ಠವಾದ ಹಾಗೂ ತಮ್ಮದೇ ಆದ ಭಾಷಾ ಪ್ರಯೋಗದ ಪ್ರಕ್ರಿಯೆಗಳಲ್ಲಿ ಇಬ್ಬರೂ ಮಹತ್ವದ ಸ್ವತಂತ್ರ ಕಥನಕಾರರಾಗಿದ್ದಾರೆ. ಜೀವನ ಸಹಜವಾಗಿ ಅರಳಲು, ಎಲ್ಲರಿಗೂ ಸಂತೋಷ ಕೊಡಲು ಅಡ್ಡಿಯಾಗಿರುವ ಆತಂಕಗಳಾವುವು ಎಂಬ ಪ್ರಶ್ನೆ ಕಥನಗಳಲ್ಲಿ ಮೂಡುತ್ತವಾದರೂ ಬೆಸಗರಹಳ್ಳಿ ರಾಮಣ್ಣ ಅಮೂರ್ತ ತಾತ್ವಿಕ ಜಿಜ್ಞಾಸೆಗಳಲ್ಲಿ ಕಂಡುಕೊಳ್ಳದೆ ನಿತ್ಯಜೀವನದ ಉಡುವ, ಉಣ್ಣುವ, ಬೆರೆಯುವ ಕ್ರಿಯೆಗಳಲ್ಲೇ ತೊಯ್ಯಿಸುತ್ತಾರೆ. ಹೀಗಾಗಿ ಸಮಕಾಲೀನವಾದದ್ದು ತಾತ್ವಿಕವಾದದ್ದು ರಾಮಣ್ಣನವರಲ್ಲಿ ಪ್ರತ್ಯೇಕ ಅಸ್ತಿತ್ವವನ್ನು ಪಡೆದುಕೊಳ್ಳದೆ ಪರಸ್ಪರ ಒಂದನ್ನೊಂದು ಪೋಷಿಸುವ ಸಹ ಅಸ್ತಿತ್ವವನ್ನು ಪಡೆದುಕೊಳ್ಳುತ್ತವೆ. ಅದೇ ತೇಜಸ್ವಿಯವರು ಕಥಾಸ್ವರೂಪದ ವಿವಿಧ ನೆಲೆಗಳಲ್ಲಿ, ಅಮೂರ್ತ ತಾತ್ವಿಕ ಜಿಜ್ಞಾಸೆಗಳಲ್ಲಿ ಬದುಕಿನ ರಹಸ್ಯವನ್ನು ಶೋಧಿಸುತ್ತಾರೆ.

ತೇಜಸ್ವಿ ಕಥನಗಳಲ್ಲಿ ಮೂಡಿಬರುವ ಜೀವನದರ್ಶನದ ತೀವ್ರತೆ ಇತರ ಸಮಕಾಲೀನ ಲೇಖಕರಿಗಿಂತ ಪ್ರಭಾವಶಾಲಿಯಾಗಿ ತೋರುತ್ತದೆ. ಒಂದು ಸಮಾಜದ ಅಧೋಗತಿಯನ್ನು ಜಡತ್ವವನ್ನು ಪ್ರಶ್ನಿಸಿದಷ್ಟೇ ಸುಲಲಿತವಾಗಿ, ವಿಘಟನೆಗೆ ಕಾರಣವಾಗುವ ಬಾಹ್ಯ ಮತ್ತು ಆಂತರಿಕ ಒತ್ತಡಗಳಿಂದ ನಿರ್ಮಾಣವಾದ ವ್ಯವಸ್ಥೆಯ ಸಡಿಲತೆಗಳನ್ನೂ, ಸಾಮಾಜಿಕ-ರಾಜಕೀಯ ಶಕ್ತಿಗಳನ್ನೂ ಜರೆಯುತ್ತಾರೆ. ಮಲೆನಾಡಿನ ಪ್ರದೇಶವನ್ನು ತಮ್ಮ ಕಥನಗಳ ಕೇಂದ್ರ ಭಿತ್ತಿಯಾಗಿರಿಸಿಕೊಂಡರೂ ಜೀವನದ ಏರಿಳಿತಗಳನ್ನೂ, ಸಾಮಾಜಿಕ ಬದಲಾವಣೆಗಳನ್ನು ಸೂಕ್ಷ್ಮವಾಗಿ ಗ್ರಹಿಸಬಲ್ಲ ಅರ್ಥಪೂರ್ಣ ಕಲಾಭಿಜ್ಞತೆ ತೇಜಸ್ವಿಯವರಿಗೆ ಲಭಿಸಿದೆ. ಹಾಗಾಗಿ ಈ ಅಧ್ಯಯನದಿಂದ ತೇಜಸ್ವಿಯವರು ಪಡೆದ ಹೊಸ ದಾರಿಗಳ ಅರಿವು ಮತ್ತು ಜೀವನದರ್ಶನ ಲಭ್ಯವಾಗುತ್ತದೆ.

## ಕೊನೆ ಟಿಪ್ಪಣಿಗಳು

೧ ಹೆಚ್ಚಿನ ಮಾಹಿತಿಗಾಗಿ ಪೂರ್ಣಚಂದ್ರ ತೇಜಸ್ವಿಯವರ **ಅಣ್ಣನ ನೆನಪು**, ಶ್ರೀಮತಿ ರಾಜೇಶ್ವರಿ ತೇಜಸ್ವಿಯವರ **ನನ್ನ ತೇಜಸ್ವಿ**, ಶ್ರೀಮತಿ ತಾರಿಣಿ ಚಿದಾನಂದಮೂರ್ತಿಯವರ **ಮಗಳು ಕಂಡ ಕುವೆಂಪು** ಕೃತಿಗಳನ್ನು ಗಮನಿಸಲು ಶಕ್ಯವಿದೆ.

೨ **ಮಂತ್ರಮಾಂಗಲ್ಯ** ಈ ಶಬ್ದದ ಉಲ್ಲೇಖ ಕುವೆಂಪು ಕೃತಿಯಾದ **ಮಂತ್ರಮಾಂಗಲ್ಯ** ಹೊತ್ತಿಗೆಯಲ್ಲಿ ಬರುತ್ತದೆ. **ಅಣ್ಣನ ನೆನಪು**, ಶ್ರೀಮತಿ ರಾಜೇಶ್ವರಿ ತೇಜಸ್ವಿಯವರ **ನನ್ನ ತೇಜಸ್ವಿ**, ಶ್ರೀಮತಿ ತಾರಿಣಿ ಚಿದಾನಂದಮೂರ್ತಿಯವರ **ಮಗಳು ಕಂಡ ಕುವೆಂಪು** ಕೃತಿಗಳನ್ನು ಗಮನಿಸಬಹುದು.

೩ **ನಿರುತ್ತರಾ** ಎಂಬ ಹೆಸರನ್ನು ತಮ್ಮ ಮನೆಗೆ ಯಾಕೆ ಇಟ್ಟುಕೊಂಡಿದ್ದಾರೆ ಎಂಬ ಕುತೂಹಲಕ್ಕೆ ಉತ್ತರ 'ಅಪ್ಲೇ ಅಪ್ಲೇ ನೋ ರಿಪ್ಲೇ ಕಣಯ್ಯಾ, ಈ ಸೃಷ್ಟಿಯ ಹಣೆಬರಹ. ನಮ್ಮ ಮೂಲಭೂತ ಪಶ್ನೆಗಳಿಗೆ ಸಮರ್ಪಕ ತಾರ್ಕಿಕ ಉತ್ತರವೇ ಸಿಗದಿದ್ದರಿಂದ ಇದು ನಿರುತ್ತರಾ'-**ಜನಸಂಸ್ಕೃತಿ ಸಂಪುಟ**-೧, **ಸಂಚಿಕೆ**-೨ **ಸೆಪ್ಟಂಬರ್** ೨೦೧೩ **ಪು.ಸಂ** ೧೮

೪ **ಅಣ್ಣನ ನೆನಪು** ಪೂ.ಚಂ.ತೇ ಪುಸ್ತಕ ಪ್ರಕಾಶನ ಒಂಭತ್ತನೆಯ ಮುದ್ರಣ ೨೦೦೯

೫ ಹೆಚ್ಚಿನ ಮಾಹಿತಿಗಾಗಿ ಅನುಬಂಧವನ್ನು ಗಮನಿಸುವುದು. **ಲಹರಿ** ಸಂಚಿಕೆಯಲ್ಲಿ ಅನೇಕ ಕವನಗಳು ಪ್ರಕಟಣೆಗೊಂಡಿವೆ. ಅದರ ಉಲ್ಲೇಖ ಅನುಬಂಧದಲ್ಲಿದೆ.

೬ **ಅಬಚೂರಿನ ಪೋಸ್ಟಾಫೀಸು ಮುನ್ನುಡಿ** ಪೂ.ಚಂ.ತೇ ಪುಸ್ತಕ ಪ್ರಕಾಶನ

೭ **ನಕ್ಷೆ ನಕ್ಷತ್ರ**, ಬಸವರಾಜ ಕಲ್ಗುಡಿ ಪು.ಸಂ.೭೫

# ಅಧ್ಯಾಯ ೩

## ೩.೧ ಪೂರ್ಣಚಂದ್ರತೇಜಸ್ವಿ ಕಥನಗಳಲ್ಲಿ ಸಂಘರ್ಷ

**ಶೀರ್ಷಿಕೆಯಲ್ಲಿನ** (Concept) **ಪರಿಕಲ್ಪನೆ 'ಸಂಘರ್ಷ' ಈ ಪದದ ಅರ್ಥವಿಶ್ಲೇಷಣೆ:** ಇದ್ದ ಸ್ಥಿತಿಗೂ ಆಗುವ ಸ್ಥಿತಿಗೂ ಮಧ್ಯೆ ಘರ್ಷಿಸುವ ಧಾತುಗಳು ಸಂವೇದನೆಯ ರೂಪ ತಾಳಿ ಹೊರಹೊಮ್ಮುವ ಪ್ರಕ್ರಿಯೆ. 'ಇರುವ' ಮತ್ತು 'ಆಗುವ' ಕ್ರಿಯೆಗಳ ನಡುವೆ ಏರ್ಪಡುವ ದ್ವಂದ್ವಾತ್ಮಕ ಚಟುವಟಿಕೆಗಳೇ ಸಂಘರ್ಷಕ್ಕೆ ಒಳಗಾಗುವುದು. ವೈಯಕ್ತಿಕ ನೆಲೆಯಲ್ಲಿ ಇಲ್ಲವೆ ಸಮಷ್ಠಿ ಪಜ್ಞೆಯ ನೆಲೆಯಲ್ಲಿ 'ಸಂಘರ್ಷರಹಿತ' ಪರಿಸ್ಥಿತಿ ನಿರ್ಮಾಣಕ್ಕಾಗಿ ಹಾತೊರೆಯುವುದು; ಮಾನವ ಕುಲದ ಆದಿಮವಾದ ಅಭೀಪ್ಸೆಯಾಗಿದೆ. ಇಂತಹ ಅಭೀಪ್ಸೆಯ ಈಡೇರುವಿಕೆಗಾಗಿ ಮಾನವ ಹಗಲಿರುಳೂ ಅವಿರತ ಶ್ರಮದಲ್ಲಿ ತೊಡಗುವುದು ಸಾಮಾನ್ಯವಾದ ವಿಷಯ.

'ಸಂಘರ್ಷವು' ಒಂದು ಪ್ರಕ್ರಿಯಾತ್ಮಕ ರೂಪದ ಪರಿಕಲ್ಪನೆಯಾಗಿ ೧೯ ನೇ ಶತಮಾನದ ಮಧ್ಯಭಾಗದಲ್ಲಿ ಬಳಕೆಗೆ ಬಂದಿತು. ಕೈಗಾರಿಕೀಕರಣಕ್ಕೂ, ಸಂಘರ್ಷ[೧] ಪರಿಕಲ್ಪನೆ ರೂಪುಗೊಂಡದ್ದಕ್ಕೂ ನೇರವಾದ ಸಂಬಂಧವಿದೆ. ಈ ಹಿನ್ನೆಲೆಯಲ್ಲಿ ಇದೊಂದು ಆಧುನಿಕ ಪರಿಕಲ್ಪನೆಯಾಗಿದೆ.

'ಸಂಘರ್ಷ' ಶಬ್ದದ ಅರ್ಥನಿಷ್ಪತ್ತಿಯ ಬಗೆಗೆ ಬೇರೆ ಬೇರೆ ಅರ್ಥವನ್ನೊಳಗೊಂಡ ಶಬ್ದಾರ್ಥಗಳು ಬೇರೆ ಬೇರೆ ಅರ್ಥಕೋಶದಲ್ಲಿ ಬಳಸಲ್ಪಟ್ಟಿವೆ. ಒಂದಕ್ಕೊಂದು ಹೊಂದದ ಅವಶ್ಯಕತೆ, ಆಸೆ, ಗುರಿ ಇವುಗಳ ಸ್ಪರ್ಧೆಯಿಂದ ಮನಸ್ಸಿನಲ್ಲಿ ಮೂಡುವ ಅಹಿತ ಸ್ಥಿತಿ ಅಥವಾ ಯಾತನೆಯ ಸ್ಥಿತಿ: ಉಭಯ ಸಂಕಟ.[೨] ಮಾರ್ಕ್ಸ್‌ನ ದೃಷ್ಟಿಯಲ್ಲಿ ಉತ್ಪಾದನಾ ವಿಧಾನಗಳಲ್ಲಿ ಭಿನ್ನತೆ ಇರುವ ಸಮಾಜದ ಬೇರೆ ಬೇರೆ ಆರ್ಥಿಕ ವರ್ಗಗಳಲ್ಲಿ ಆಗುವ ಹೋರಾಟ[೩] ಒಳತೋಟಿ, ಅಂತಸ್ತು ಮೂಲ; ವ್ಯಕ್ತಿಯೊಬ್ಬನಲ್ಲಿ ವಿರುದ್ಧವಾದ ಭಾವನೆಗಳು ಯಾ ಅಪೇಕ್ಷೆಗಳು ಪರಸ್ಪರ ಎದುರಾಗುವುದು. ಸಂಘರ್ಷ ಯಾತನೆ ಹಾಗೆ ಎದುರಾದಾಗ ಅವನಿಗೆ ಆಗುವ ದುಃಖ, ವ್ಯಥೆ, ವೇದನೆ.[೪]

ಜನಸಮುದಾಯದ ಜೀವನಗಳೊಂದಿಗೆ ಅಂದರೆ ಅನೇಕ ರೀತಿಯ ಗುರಿ, ಉದ್ದೇಶ, ಸ್ವಯಂ ತಿಳುವಳಿಕೆ, ಅಹಂ ಎಂಬ ಬೇರೆ ಬೇರೆ ರೀತಿಯ ಪ್ರಜ್ಞೆಗಳೊಡನೆ ಬದುಕುವಾಗ ಸಂಘರ್ಷ ಅನಿವಾರ್ಯವಾಗುತ್ತದೆ. ಇಂತಹ ಸಂಘರ್ಷವೂ ಬೇರೆ ಬೇರೆ ಆಯಾಮಗಳನ್ನು ಹೊಂದಿರುತ್ತದೆ. ವ್ಯಕ್ತಿಯ ಆಂತರಿಕ ಸಂಘರ್ಷಣೆ (ತನ್ನೊಂದಿಗೆ – Intra personal conflict) ವ್ಯಕ್ತಿ ಮಧ್ಯ ಸಂಘರ್ಷಣೆ (Inter personal conflicts), ಗುಂಪಿನೊಂದಿಗೆ ಸಂಘರ್ಷಣೆ (Inter group conflict).

ವೈಯಕ್ತಿಕ ಸಂಘರ್ಷ, ವರ್ಗಸಂಘರ್ಷ, ಪ್ರಕೃತಿ–ಮಾನವ ಸಂಘರ್ಷ, ಹಳತು–ಹೊಸತು ಸಂಘರ್ಷ, ಉನ್ನತಿ–ಅವನತಿ ಸಂಘರ್ಷ, ಜ್ಞಾನ–ಅಜ್ಞಾನ/ವಿಜ್ಞಾನ–ಮೌಢ್ಯ ಸಂಘರ್ಷ, ಬೌದ್ಧಿಕ ಸಂಘರ್ಷ, ತಾತ್ವಿಕ ಸಂಘರ್ಷ, ಧಾರ್ಮಿಕ–ಸಾಂಸ್ಕೃತಿಕ ಸಂಘರ್ಷ. ಹೀಗೆ ಮನುಷ್ಯನ ಬದುಕು ಹಲವು ರೀತಿಯ ಸಂಘರ್ಷಗಳಿಂದ ಕೂಡಿರುತ್ತದೆ. ಅವುಗಳನ್ನು ಎದುರಿಸುವ ರೀತಿ

ಪ್ರತಿಯೊಬ್ಬರಲ್ಲೂ ಬೇರೆ ಬೇರೆಯಾಗಿರುತ್ತದೆ. ನಾನು ಅಧ್ಯಯನದ ದೃಷ್ಟಿಯಿಂದ ಇವೆಲ್ಲವನ್ನೂ ವರ್ಗೀಕರಿಸಿಕೊಂಡಿದ್ದೇನೆ ಹೊರತು ತೇಜಸ್ವಿಯವರು ಎಲ್ಲಿಯೂ ವೈದೃಶ್ಯಗಳನ್ನು ದಾಖಲಿಸುತ್ತಾ ಅವುಗಳ ಮುಖೇನ ಯಾವುದೇ ವಿಚಾರ ಮಂಡನೆ ಮಾಡುವುದಿಲ್ಲ ಎಂಬುದನ್ನು ಮೊದಲಿಗೇ ಸ್ಪಷ್ಟಪಡಿಸುತ್ತಿದ್ದೇನೆ.

ಕಾರಂತ–ಕುವೆಂಪು–ಮಾಸ್ತಿ–ಗೋಕಾಕ್ ಆದಿಯಾಗಿ ಸ್ವಾತಂತ್ರ್ಯ ಪೂರ್ವ ಮತ್ತು ಸ್ವಾತಂತ್ರ್ಯೋತ್ತರ ಕಾಲದಲ್ಲಿ ವಸಾಹತುಶಾಹಿ ಮತ್ತು ಪ್ರಾದೇಶಿಕತೆಯ ಹಿನ್ನೆಲೆಯಲ್ಲಿ ತೆರೆದುಕೊಂಡ ಸಾಹಿತಿಗಳ ಅನೇಕ ಕೃತಿಗಳಲ್ಲಿ ಸಂಘರ್ಷವು ಪ್ರಧಾನವಾಗಿ ಕಾಣಿಸಿಕೊಳ್ಳುತ್ತದೆಯಾದರೂ ಈ ಸಂಘರ್ಷ ಮತ್ತಷ್ಟು ಸ್ಫುಟವಾಗುವುದು ತೇಜಸ್ವಿಕೃತಿಗಳಲ್ಲಿ. ಸೃಜನಶೀಲ ಮನಸ್ಸಿನಿಂದ ಆಕರ ತಳೆದ ಸಂಘರ್ಷದ ವಿವಿಧ ನೆಲೆಗಳು ಯಾವುದೇ ರೀತಿಯಲ್ಲಿ ಬದುಕಿನ ಕ್ರಮದೊಳಗೆ ಹಾಸುಹೊಕ್ಕಾದರೂ ಅದಕ್ಕೆ ಗುರಿಯಾಗುವವನು ಸಾಮಾನ್ಯನೇ. ಇಂತಹ ಸಂಘರ್ಷಯುತ ಬದುಕಿನ ಚಿತ್ರಣ, ಸಂಘರ್ಷದಿಂದ ಬದಲಾದ ಆಲೋಚನೆಗಳು–ಅದನ್ನು ಮೀರಿ ಬೆಳೆಯಬಹುದಾದ ದಿಕ್ಕು, ಹೊಸ ಬದುಕು ಭವಿಷ್ಯದ ಹಂಬಲ ಎಲ್ಲವೂ ಹೊಸ ಅನ್ವೇಷಣೆ; ಹೊಸ ಅರ್ಥ, ಹೊಸ ದೃಷ್ಟಿಕೋನದತ್ತ ಮುಖ ಮಾಡುತ್ತವೆ.

## ೩.೧ ವೈಯಕ್ತಿಕ ಸಂಘರ್ಷ: ವೈಯಕ್ತಿಕ ಗ್ರಹಿಕೆಗಳ ವೈರುಧ್ಯಗಳು

ವ್ಯಕ್ತಿಯ ಮನಸ್ಸಿನೊಳಗೆ ನಡೆಯುವ ತಿಕ್ಕಾಟವೇ ವ್ಯಕ್ತಿಕೇಂದ್ರಿತ ಸಂಘರ್ಷ. ಇದು ವ್ಯಕ್ತಿಯೊಳಗಿನ ಅಂತಸ್ಸಂಘರ್ಷಗಳ ವಿವಿಧ ಕೋನಗಳನ್ನು ಅವುಗಳ ಬಾಹ್ಯ ಪರಿಣಾಮಗಳನ್ನು ವಿವಿಧ ಸ್ತರಗಳಲ್ಲಿ ಪ್ರಚುರಪಡಿಸುತ್ತವೆ. ವ್ಯಕ್ತಿ ಯಾವೆಲ್ಲ ಸಂದರ್ಭಗಳಲ್ಲಿ ಸಂಘರ್ಷಕ್ಕೀಡಾಗುತ್ತಾನೆ ಎಂದು ಸ್ಪಷ್ಟವಾಗಿ ತಿಳಿದು ಬರುವುದಿಲ್ಲ. ಏಕೆಂದರೆ ಸಂಘರ್ಷಕ್ಕೊಳಗಾಗುವ ಸಂದರ್ಭಗಳು ಸಮಾಜದಿಂದಲೋ, ಕುಟುಂಬದಿಂದಲೋ ವ್ಯಕ್ತಿಗತವಾಗಿಯೋ ಉದ್ಭವಿಸಿದ್ದಿರಬೇಕು ಹೇಗೆಂದರೆ ವ್ಯಕ್ತಿಯ ಚಿತ್ತ ದ್ವಂದ್ವತೆ ಅಥವಾ ವೈಯಕ್ತಿಕ ಆಸಕ್ತಿಗಳು ಮತ್ತು ಕಟ್ಟು ಪಾಡುಗಳ ಮಧ್ಯೆ ರೂಪುಗೊಳ್ಳುವ ಗೊಂದಲದಿಂದಾಗಿ ಸಂಘರ್ಷ ಅಸ್ತಿತ್ವ ಪಡೆದುಕ್ಕೊಳ್ಳುತ್ತವೆ. ಪ್ರಕೃತಿಯಲ್ಲಿ ಜೀವ ತಳೆದ ಪ್ರತಿಯೊಂದು ಜೀವಿಯ ಬದುಕು ಒಂದಲ್ಲಾ ಒಂದು ರೀತಿಯಲ್ಲಿ ಸಂಘರ್ಷಕ್ಕೊಳಗಾಗುತ್ತಲೇ ಇರುತ್ತದೆ.

ಪ್ರಕೃತಿಯಲ್ಲಿ ಜೀವ ತಳೆದ ಪ್ರತಿಯೊಂದು ಜೀವಿಯ ಬದುಕು ಸಂಘರ್ಷದಿಂದ ಕೂಡಿರುತ್ತದೆ. ತಾನು ಬದುಕಲೇಬೇಕಾದ ಸಂದರ್ಭದಲ್ಲಿ ತನ್ನ ಉಳಿವಿಗಾಗಿ ಮತ್ತೊಂದರೊಡನೆ ಹೋರಾಟಕ್ಕಿಳಿಯುತ್ತದೆ. ಆದರೆ ಸಂಘರ್ಷ ಸ್ವರೂಪದ ಅರಿವಿರುವುದಿಲ್ಲ. ವಿವೇಚನಾತ್ಮಕ ಚಿಂತನೆಯುಳ್ಳ ಮನುಷ್ಯ ತನ್ನ ಸಂಘರ್ಷದ ಸ್ವರೂಪವನ್ನು ಅರಿತಿರುತ್ತಾನೆ. ಅಂತೆಯೇ ಅಭಿವ್ಯಕ್ತಿಸುತ್ತಾನೆ ಕೂಡ. ಮನುಷ್ಯ ಪ್ರಜ್ಞೆಯಲ್ಲಿ ಅಂತರ್ಗತವಾಗಿರುವ ವಿರೋಧಾಭಾಸಗಳನ್ನು ವಿವಿಧ ನೆಲೆಗಳಲ್ಲಿ ಪದೇ ಪದೇ ಪ್ರಕಟಗೊಳಿಸುತ್ತಾರೆ ಮತ್ತು ಪ್ರಜ್ಞಾಪೂರ್ವಕವಾಗಿ ಅವುಗಳೊಡನೆ ಹೋರಾಟಕ್ಕಿಳಿಯುತ್ತಾರೆ.

ಯಾವುದೇ ವ್ಯಕ್ತಿ ಸಮಾಜದೊಂದಿಗೆ ಬೆರೆತಾಗ ಅಲ್ಲಿನ ಚಲನಶೀಲತೆಗೆ ಮುಖಾಮುಖಿಯಾಗಲೇ ಬೇಕಾಗುತ್ತದೆ. ಅಂತಹ ಸಂದರ್ಭದಲ್ಲಿ ತಾನು ಆದರ್ಶವೆಂದುಕೊಂಡ ಅಥವಾ ತಾನು ಅರ್ಥೈಸಿಕೊಂಡ ಬದುಕಿಗೂ ಎದುರುಗೊಳ್ಳುತ್ತಿರುವ ಸಮಾಜಕ್ಕೂ ಭಿನ್ನತೆ ಕಂಡುಬಂದಾಗ ದ್ವಂದ್ವವನ್ನು ಅನುಭವಿಸುವಂತಾಗುತ್ತದೆ. ತನ್ನ ಬದುಕು ಪರಿಸ್ಥಿತಿಯೊಂದಿಗೆ ರಾಜಿಯಾಗದಿದ್ದಾಗ ಅದರಿಂದ ಹೊರಬರುವ ಹಲವು ಮಾರ್ಗಗಳನ್ನು ಕಂಡುಕೊಳ್ಳುತ್ತಾನೆ. ಕೆಲವೊಮ್ಮೆ ಪ್ರತ್ಯಕ್ಷವಾಗಿ, ಕೆಲವೊಮ್ಮೆ ಪರೋಕ್ಷವಾಗಿ ಸಮಕಾಲೀನ ತಲ್ಲಣಗಳಿಗೆ ಸ್ಪಂದಿಸುತ್ತಾನೆ. ಇದು ಸಾಮೂಹಿಕ ಸ್ಪಂದನವಾಗಬಹುದು ಇಲ್ಲವೆ ವೈಯಕ್ತಿಕ ಸ್ಪಂದನವಾಗಬಹುದು.

ಮನುಷ್ಯರ ಹುಡುಕಾಟ ಯಾವಾಗಲೂ ಬಾಹ್ಯ ಕೇಂದ್ರಿತವಾಗಿರುತ್ತದೆ. ಅದಕ್ಕಾಗೆ ಅವರಲ್ಲಿ ಇದುವರೆಗೂ ಕಟ್ಟಿ ಬೆಳೆಸಿಕೊಂಡು ಬಂದಂತಹ ಬಾಹ್ಯ ಸ್ವರೂಪ ಅಚ್ಚಳಿಯದೆ ಹಾಗೇ ಇದೆ ಎಂಬ ಭಾವನೆ ದಟ್ಟವಾಗಿರುತ್ತದೆ. ಅದರಿಂದ ಸಂದರ್ಭ, ಸನ್ನಿವೇಶಗಳ ತಾಳಕ್ಕೆ ತಕ್ಕಂತೆ ವರ್ತಿಸುವಂತಾಗುತ್ತದೆ. ಸಮಾಜಮುಖಿಯಾಗಿ ಜೀವಿಸುವಾಗ ಕೆಲವೊಮ್ಮೆ ಸಾಮಾಜಿಕ ವೈರುಧ್ಯಗಳ ಹಿನ್ನೆಲೆಯಲ್ಲಿ ಜೀವನವನ್ನು ನೋಡುವ ದೃಷ್ಟಿ ಬದಲಾಗುತ್ತದೆ. ಆ ದೃಷ್ಟಿಕೋನವು ಸುತ್ತಣ ಪರಿಸರದಲ್ಲಿ ತನ್ನ ಹುಡುಕಾಟವನ್ನು ಆರಂಭಿಸುತ್ತದೆ. ಅಂತಹ ನಿರಂತರ ಕುತೂಹಲ ಆಸಕ್ತಿಗಳೇ ಬದುಕಿನ ರಹಸ್ಯವನ್ನು ಅನಾವರಣಗೊಳಿಸಲು ಪ್ರೇರೇಪಿಸುತ್ತದೆ. ಈ ವಿನ್ಯಾಸದಲ್ಲೇ ತೇಜಸ್ವಿಯವರ ಹುಡುಕಾಟದ ಬಹುಮುಖಿ ಆಶಯಗಳು ಬೇರೆ ಬೇರೆ ರೀತಿಯಲ್ಲಿ

ತೆರೆದುಕೊಳ್ಳುತ್ತವೆ. ಅಸ್ತಿತ್ವದ ಹುಡುಕಾಟಗಳಿಂದ ಹುಟ್ಟುವ ನಿರಾಶೆ, ಸೋಲು, ಹತಾಶೆಗಳನ್ನು ತೇಜಸ್ವಿಯವರ ಕಥನಗಳಲ್ಲಿ ಗುರುತಿಸಬಹುದು.

ವೈಯಕ್ತಿಕ ಸಂಘರ್ಷವೆಂದಾಗ ಆಂತರಿಕ ಮತ್ತು ಬಾಹ್ಯಾಕರ್ಷಗಳ ನಡುವೆ ಘಟಿಸುವ ತಾಕಲಾಟಗಳಿಂದಾದ ತಲ್ಲಣ, ಸಂಧಿಗ್ಧತೆ, ಹೊಯ್ದಾಟದ ಸ್ವರೂಪ. ಯಾವುದೇ ವ್ಯಕ್ತಿಗೆ ತಾನಂದುಕೊಂಡದ್ದು ಆಗದೇ ಹೋದಾಗ, ತನ್ನ ಅಗತ್ಯಗಳು–ಬೇಕುಗಳು ಕೈಗೂಡದಿದ್ದರೆ ತಾನು ನಂಬಿದ್ದ ನೀತಿ–ಮೌಲ್ಯಗಳು ಪರೀಕ್ಷೆಗೊಳಪಟ್ಟಾಗ, ತಾನಂದುಕೊಂಡ ಗ್ರಹಿಕೆಗಳೇ ಪ್ರಶ್ನೆಗಳಾದಾಗ, ಅಪನಂಬಿಕೆಯು ಶುರುವಾದಾಗ, ತನ್ನ ತಿಳಿವು/ಜ್ಞಾನ ಅಪೂರ್ಣವೆನಿಸಿದಾಗ, ತಾನು ನಿರೀಕ್ಷಿಸಿದ್ದು ಹೆಚ್ಚು–ಕಡಿಮೆಯಾದಾಗ, ಗೆಲುವಿನ ಹಾದಿಯಲ್ಲಿ ಸೋಲನ್ನನುಭವಿಸಿದಾಗ, ವ್ಯಕ್ತಿತ್ವ, ಜನಾಂಗ, ಲಿಂಗಬೇಧಗಳು ಎದುರಾದಾಗ ಸ್ವಯಂ ಸಂಘರ್ಷಕ್ಕೆ ಒಳಗಾಗ ಬೇಕಾಗುತ್ತದೆ. ತೀವ್ರತರವಾದ ತಿಕ್ಕಾಟದಿಂದ ಮೇಲಿನ ವಿಷಯಗಳು ಆಂತರಿಕ ಸಂಘರ್ಷಕ್ಕೆ ಕಾರಣವಾಗುತ್ತವೆ. ತೇಜಸ್ವಿ ಸಾಹಿತ್ಯದಲ್ಲಿ ಇಂತಹುದೇ ಆಂತರಿಕ ಸಂಘರ್ಷಕ್ಕೆ ಒಳಗಾಗುವವರು ಹುಲಿಯೂರಿನ ಸರಹದ್ದು ಕಥೆಯ ಸೋಮ, ಸ್ವರೂಪದ ಶ್ರೀನಿವಾಸ, ನಿಗೂಢ ಮನುಷ್ಯರು ಕಥೆಯ ಜಗನ್ನಾಥ, ಗೋಪಾಲಯ್ಯ, ಊರ್ವಶಿಯ ಸೋಮ ಇತ್ಯಾದಿ.

ವ್ಯಕ್ತಿ ಕೇಂದ್ರಿತ ಪ್ರಜ್ಞೆಯಾಗಿ ಸಾಮಾಜಿಕ ಹಗರಣಗಳನ್ನು ಭೂತಪೂರ್ವ ಘಟನೆಗಳ ಹಿನ್ನೆಲೆಯಲ್ಲಿ ದಾಖಲು ಮಾಡುತ್ತಾ ಸಾಗುವ ಶ್ರೀನಿವಾಸನೆಂಬ ಯುವಕನ ಆತ್ಮನಿವೇದನೆಯೊಡನೆ 'ಸ್ವರೂಪ' ಕಥೆ ನಿರೂಪಿತವಾಗುತ್ತದೆ. 'ಸ್ವರೂಪ'ದ ಶ್ರೀನಿವಾಸ ತನ್ನ ಬೇಸರದ ಬದುಕಿನಿಂದ ಹೊರಬರಲು ಉದ್ದೇಶಿಸುತ್ತಾನೆ. ನಗರ ಜೀವನವನ್ನು ತೊರೆದು ಮಲೆನಾಡಿನಲ್ಲಿ ಗಟ್ಟಿಯಾಗಿ ತಳವೂರಲು ಬಂದ ಶ್ರೀನಿವಾಸನಿಗೆ ಗವಿಗುಡ್ಡದಲ್ಲಿ ಅನೇಕ ಸಮಸ್ಯೆಗಳು ಎದುರಾಗಿ ಗವಿಗುಡ್ಡವೂ ನಿರಾಸೆ ಮತ್ತು ಬೇಸರ ತರಿಸುತ್ತದೆ. ಬೇರೂರಿ ನಿಂತ ಭವಿಷ್ಯದ ಭಯ, ಆತಂಕ, ನಿರಾಸೆಗಳೊಂದಿಗೆ ಭೂತಕಾಲದ ಘಟನೆಗಳನ್ನು ನೆನಪಿಸುತ್ತಾ ವರ್ತಮಾನದಲ್ಲಿ ನಿಂತು ತನ್ನ ನಿಜಸ್ವರೂಪದ ಶೋಧನೆಯಲ್ಲಿ ತೊಡಗುತ್ತಾನೆ. ಹುಡುಕಾಟದಲ್ಲಿ ತೊಡಗಿದ ಶ್ರೀನಿವಾಸನಿಗೆ ನಿಜಸ್ವರೂಪದ ಜೊತೆಗೆ ವಿಕಾರಸ್ವರೂಪ ದರ್ಶನವಾಗಿ ಜೀವನ ನಿರರ್ಥಕವೆಂಬ ಸಿದ್ಧಾಂತಕ್ಕೆ ತಲುಪಿ ತನ್ನ ಅಪಕ್ವ ಆದರ್ಶಗಳನ್ನೆಲ್ಲಾ ಗಾಳಿಗೆ ತೂರುತ್ತಾನೆ. ಈ ಸಂದರ್ಭಗಳಲ್ಲಿ ಸ್ವರೂಪದ ಶ್ರೀನಿವಾಸನ 'ಜೀವನ ರಂಗದಲ್ಲಿ ಏನಾಗುತ್ತದೆಯೋ ಏನೋ. ಕೇವಲ ಓದಿನ ಜ್ಞಾನ ಬುದ್ಧಿವಂತಿಕೆಗಳು ಸಾಕಾಗುತ್ತವೆಯೋ? ಎಂಬಂತಹ ಮಾತುಗಳು ಮಾರ್ದನಿಸುತ್ತವೆ.

ಶ್ರೀನಿವಾಸನ ವ್ಯವಹಾರವಿರುವುದು ಭೌತಿಕ ವಾಸ್ತವತೆಯಲ್ಲಲ್ಲ, ಬದಲಾಗಿ ಅಂತರಂಗದ ಪ್ರಜ್ಞೆಯೊಂದಿಗೆ, ಸ್ವರೂಪದ ಶ್ರೀನಿವಾಸ ಲೇಖಕನೊಂದಿಗೆ ಬಾಹ್ಯ ಜಗತ್ತಿನ ವಾಸ್ತವಿಕ ಕ್ರಿಯೆಗಳಿಂದ ಹಿಂದೆಗೆದು ತನ್ನ ಖಾಸಗಿ ಜಗತ್ತಿನಲ್ಲಿ ವಿಹರಿಸುತ್ತಾನೆ. ಆತನು ಪ್ರಜ್ಞಾಪ್ರವಾಹದಿಂದ ತುಂಬಿದ ಮನೋಲೋಕದಲ್ಲಿ ಸ್ವಚ್ಛಂದವಾಗಿ ವಿಹರಿಸುತ್ತಾನೆ. ಇಲ್ಲಿ ಶ್ರೀನಿವಾಸನ ವ್ಯಕ್ತಿತ್ವಕ್ಕೂ, ಆತನ ಪ್ರಜ್ಞೆಗೂ ಹತ್ತಿರದ ಸಂಬಂಧವಿರುವುದರಿಂದ ಮನುಷ್ಯ ಪ್ರಜ್ಞೆ, ಆತನ ವ್ಯಕ್ತಿತ್ವ ಮತ್ತು ಸಮಯ ಈ ಮೂರು ಪ್ರಕ್ರಿಯೆಗಳಾಗಿ ಒಂದರೊಳಗೊಂದು ಬೆಸೆದುಕೊಂಡು ಆತನಲ್ಲಿ ಪ್ರವಹಿಸುತ್ತಿರುವುದರಿಂದ ಭೂತ, ಭವಿಷ್ಯತ್ತನ್ನು ವರ್ತಮಾನದಲ್ಲಿರಿಸಿ ತನ್ನನ್ನು ಅರ್ಥೈಸಿಕೊಳ್ಳುವುದಲ್ಲಿ ತೊಡಗುತ್ತಾನೆ. ಈ ಮೂಲಕ ಆತನ ಅಂತರಂಗಕ್ಕೆ ಸಂಬಂಧಿಸಿದ ವಾಸ್ತವತೆ ಬಯಲಾಗುತ್ತದೆ. ವೈಯಕ್ತಿಕ ಬದುಕಿನ

ಕಥನದೊಂದಿಗೆ ಅಸ್ತಿತ್ವದ ಹುಡುಕಾಟದಲ್ಲಿ ಆತನ ನಿವೇದನೆ ಅಸಂಗತವಾಗುತ್ತದೆ. ಆತನ ಆತ್ಮವಿಮರ್ಶೆಯು ಹಂತ ಹಂತವಾಗಿ ಬೆಳೆದು ಅಸಂಧಿಗ್ದತೆಯನ್ನು ತಲುಪಿ ತನ್ನ ಹುಡುಕಾಟ ವ್ಯರ್ಥಪ್ರಯತ್ನವೆಂಬ ನಿರ್ಧಾರಕ್ಕೆ ತಲುಪುತ್ತದೆ.

ಸ್ವರೂಪದಂತೆಯೇ, ನಿಗೂಢ ಮನುಷ್ಯರು ನೀಳ್ಗಥೆಯೂ ಸಂಪೂರ್ಣ ಅಂತರ್ಮುಖಿಯಾಗಿದ್ದು ಅಸ್ಥಿರ ಸಮತೋಲನ ಸ್ಥಿತಿಯಲ್ಲಿರುವ ಪ್ರವಾಹಿ ರೂಪದ ವ್ಯಕ್ತಿತ್ವವನ್ನು ಚಿತ್ರಿಸುತ್ತದೆ. ವೈಯಕ್ತಿಕ ಪಲ್ಲಟಗಳು ಯಾವ ಹಂತದಲ್ಲಿ ಮನುಷ್ಯನ ಅಸ್ತಿತ್ವವನ್ನು ಕೊಂದು ಬಿಡಬಹುದು ಎಂಬುದನ್ನು ಹೇಳಲು ಸಾಧ್ಯವಾಗುವುದಿಲ್ಲ. 'ಎಂತಹ ಬದುಕು ಶ್ರೇಷ್ಠ' ಎಂಬ ಪ್ರಶ್ನೆ ಮೊದಲು ಸ್ವರೂಪದ ಶ್ರೀನಿವಾಸನಲ್ಲಿ ಆರಂಭವಾಗಿ ನಿಗೂಢ ಮನುಷ್ಯರು ಕಥೆಯಲ್ಲೂ ಮುಂದುವರೆಯುತ್ತದೆ.

ತಮ್ಮದೇ ಪೂರ್ವಾಪರಗಳ ಬಗ್ಗೆ ಸ್ಪಷ್ಟವಾದ ಪರಿಚಯವಿಲ್ಲದ ರಂಗಪ್ಪ ಜಗನ್ನಾಥರು, ತಮಗೆ ತಿಳಿಯದ ದಾರಿಯಲ್ಲಿ ನವಿಲುಗುಂದಕ್ಕೆ ಹೊರಟು ಎಣ್ಣೆಹೊಳೆಗೆ ಇನ್ನೆರಡು ಮೈಲಿಗಳಿರುವಾಗಲೇ ಕೆಸರಿನಲ್ಲಿ ಹೂತು, ಅತ್ತಿತ್ತ ಹೋಗದಂತೆ ಸಿಲುಕಿಕೊಳ್ಳುತ್ತಾರೆ. ಸ್ವಲ್ಪ ಸಮಯದ ನಂತರ ಅಪರಿಚಿತರಾದ ಮರಸರ, ಕುಳುಪ, ಕಾಂಪ್ರ ಇನ್ನಿತರರ ಪರಿಚಯವಾಗುತ್ತದೆಯಾದರೂ, ಕೆಸರಿನಲ್ಲಿ ಹೂತ ಕಾರನ್ನು ಹೊರತೆಗೆಯಲು ಅವರ ಒಡೆಯನಾದ ಗೋಪಾಲಯ್ಯನನ್ನು ಒಳಗೊಂಡಂತೆ ಹರಸಾಹಸ ಪಟ್ಟರೂ ಉಪಯೋಗವಾಗುವುದಿಲ್ಲ. ಮಲೆನಾಡಿನ ಕಾಡಿನ ಮಧ್ಯೆ ಮೂರ್ನಾಲ್ಕು ವರ್ಷಗಳಿಂದ ರೈತಾಪಿ ಜೀವನ ನಡೆಸುತ್ತಿರುವ ನವಿಲುಗುಂದದ ಗೋಪಾಲಯ್ಯ ಆಗುಂತಕರನ್ನು ತನ್ನ ಮನೆಗೆ ವಿಶ್ರಾಂತಿಗಾಗಿ ಆಹ್ವಾನಿಸಿ ಸಮೀಪದ ಉಗ್ರಗಿರಿಯೊಂದಿಗೆ ತನ್ನ ಮನೆಯನ್ನೂ ಪರಿಚಯಿಸುತ್ತಾನೆ. ಪರಸ್ಪರರ ಪರಿಚಯದಲ್ಲಿ ತೊಡಗಿದ ಮೂವರೂ ತಮ್ಮ ನಿಜಸ್ವರೂಪವನ್ನು ಮುಚ್ಚಿಡುತ್ತಾರೆ. ಆದರೆ ಎರಡು ದಿನದ ಕಾಲಾವಧಿಯಲ್ಲಿ ಇಲ್ಲಿನ ಪರಿಚಯಗಳು ಸ್ಪಷ್ಟಗೊಳ್ಳುವುದರ ಬದಲಾಗಿ ಒಬ್ಬರು ಮತ್ತೊಬ್ಬರಿಗೆ ರಹಸ್ಯವಾಗುತ್ತಾ ನಿಗೂಢರಾಗುತ್ತಾರೆ. ಕಾದಂಬರಿಯ ಕೊನೆಯ ಹಂತದವರೆಗೂ ಮಲೆನಾಡಿನ ಆ ಸ್ಥಳವೂ ಈ ಮನುಷ್ಯರ ನಡುವಿನ ಸಂಬಂಧದಂತೆ ನಿಗೂಢತೆ ಮತ್ತು ಕುತೂಹಲವನ್ನು ಕಾಯ್ದುಕೊಳ್ಳುತ್ತದೆ.

ಈ ಕಥೆಯ ಗೋಪಾಲಯ್ಯ ಮತ್ತು ಜಗನ್ನಾಥ ಸಂಕೀರ್ಣ ಮನಸ್ಥಿತಿಯ ತದ್ರೂಪಗಳು. ಇವರಿಬ್ಬರೂ ಸಂಘರ್ಷದ ಬದುಕಿನಿಂದ ಪ್ರತಿಬಾರಿ ಪಲಾಯನ ಮಾಡುತ್ತಾ ಸಾಗಿ ಯಾವುದರಲ್ಲೂ ಸ್ಥಿರತೆಯನ್ನು ಕಾಯ್ದುಕೊಳ್ಳಲು ಸಾಧ್ಯವಾಗದವರು. 'ಇರುವಿಕೆ' ಮತ್ತು 'ಅರಿಯುವಿಕೆ' ಇವೆರಡರ ನಡುವಿನ ಸಂಘರ್ಷದ ಮನಸ್ಥಿತಿಯಿಂದ ಹೊರಬರಲಾಗದೆ ಅನಿವಾರ್ಯ ಪರಿಸ್ಥಿತಿಗೆ ಒಡ್ಡಿಕೊಳ್ಳುವ ಪರಿ ಮತ್ತು ತಮ್ಮನ್ನೇ ಪ್ರಶ್ನಿಸಿಕೊಳ್ಳುವ ಕ್ರಿಯೆ ಇವರಿಬ್ಬರಿಗೂ ಹಳೆಯದಾಗಿಬಿಟ್ಟಿದೆ. ಓದುಗರ ದೃಷ್ಟಿಗೆ ಅಸಂಗತ ವ್ಯಕ್ತಿಗಳಾಗಿ ಕಂಡುಬರುವ ಇವರಿಬ್ಬರೂ ಪ್ರತ್ಯೇಕವಾದ ಜಗತ್ತಿನಲ್ಲಿ ಅಸ್ತಿತ್ವವನ್ನು ಹುಡುಕುವ ನಿಗೂಢ ವ್ಯಕ್ತಿಗಳೆನಿಸುತ್ತಾರೆ.

'ಮಾನವರ ಅಭ್ಯಾಸ, ತಿಳುವಳಿಕೆ, ಕಲಿಯುವಿಕೆ ಇವೆಲ್ಲಾ ಬಹುಪಾಲು ವ್ಯಷ್ಟಿಯನ್ನು ಸಮಷ್ಟಿಯಲ್ಲಿ ವಿಲೀನಗೊಳಿಸುವುದರ ಕಡೆಗಿರುವುದರಿಂದ ವ್ಯಕ್ತಿ ವಿಶಿಷ್ಟತೆಯ ಸಂವೇದನೆ ಅತ್ಯಂತ ಸ್ವಂತ ದರ್ಶನವಾಗೇ ಸಿದ್ಧಿಸಬೇಕಾಗುತ್ತದೆ' ಎಂಬ ಗೋಪಾಲಯ್ಯನ ಸ್ವಯಂ ತಿಳುವಳಿಕೆ

ದರ್ಶನದತ್ತ ತೆರೆದುಕೊಳ್ಳುತ್ತದೆ. ಮನುಷ್ಯನ ಹುಡುಕಾಟ ಮತ್ತು ಹೋರಾಟ ಒಂದು ಹಂತದವರೆಗೆ ಮುಂದುವರೆದರೂ; ಸೀಮಿತಗೊಂಡು ಅದಕ್ಕೆ ಒಂದು ವೃತ್ತವನ್ನು ಕಲ್ಪಿಸಿಬಿಡುತ್ತವೆ. ಕಥೆಯ ಕೊನೆಯಲ್ಲಿ ಹುಡುಕಾಟವು ವ್ಯರ್ಥಪ್ರಯತ್ನವೆಂಬಂತೆ ಅರ್ಥ ಕಳೆದುಕೊಂಡು ತಾತ್ವಿಕ ಚೌಕಟ್ಟಿನೊಳಗೆ ಉಳಿದುಬಿಡುತ್ತದೆ.

ನಿಗೂಢ ಮನುಷ್ಯರು ಕಥೆಯ ಗೋಪಾಲಯ್ಯ ಹಲವು ಅನುಭವಗಳಿಗೆ ಪಕ್ಕಾದವನು ಆದರೂ ಪದೇ ಪದೇ ಗೊಂದಲಗೊಳ್ಳುತ್ತಾನೆ ಮತ್ತು ತಾನಿರುವ ಸ್ಥಿತಿಯನ್ನು ಅರ್ಥೈಸಿಕೊಳ್ಳಲಾಗದೆ ಒದ್ದಾಡುತ್ತಾನೆ. ಆತನ ಹಿಂದಿನ ಸಂದರ್ಭಗಳು ಆತನ ವ್ಯಕ್ತಿತ್ವ ಘರ್ಷಣೆಗೆ ಒಳಗಾಗಿದ್ದರ ಸೂಚಕವಾಗಿದೆ.

ಒಂದು ಸಾರಿ ಯಾವುದೋ ಕೊಲೆ ಸಂದರ್ಭದಲ್ಲಿ ಗೋವಾ ಕಡೆಗೆ ನಾನು ಹೋದವನು ನನ್ನ ಹೆಂಡತಿ ಸುತ್ತಮುತ್ತ ಅನೇಕ ಸಂಬಂಧಗಳನ್ನು ಬೆಳೆಸಿದ್ದಳು. ಮತ್ತೊಮ್ಮೆ ಬೇರೆ ವ್ಯಕ್ತಿಯಾಗಿ ಬೇರೆ ವ್ಯಕ್ತಿತ್ವ ಧರಿಸಿ ಹೊರಟವನು ಆಕೆಯ ಗಂಡನಾಗಿ ಹಿಂದಿರುಗಲೇ ಇಲ್ಲ. ಈ ಒಂದೇ ದೇಹದಲ್ಲಿ ಅಸಂಖ್ಯ ಆತ್ಮಗಳು ಹೊಕ್ಕು ಹೊರಬಿದ್ದಿವೆ. ಜಗನ್ನಾಥ ನಿಶ್ಚಿತ ಉದ್ದೇಶ ಒಂದಕ್ಕೆ ಆತ್ಮಾರ್ಪಣೆ ಮಾಡಿಕೊಂಡರೆ ಹೇಗಿರುತ್ತೆ ಗೊತ್ತೆ ಜಗನ್ನಾಥ ! ಅದೊಂದು ವಿಚಿತ್ರ ಪರಕಾಯ ಪ್ರವೇಶ'.

'ಅಸಂಖ್ಯಾತ ಅನುಭವಗಳು ಎದ್ದೆದ್ದು ಮುಳುಗುವ ಕಡಲು ಈ ಪ್ರಜ್ಞೆ, ನಾನೆಂದರೆ ಇದನ್ನೆಲ್ಲ ಸೇರಿಸಿದ ಜ್ಞಾಪಕ. ಒಂದಕ್ಕೂ ಒಂದರ್ಥಾನು ಇಲ್ಲ. ಜಾದವ್, ಕಾಮತ್, ನರೋನ, ರಾಮಪ್ಪ ಹೀಗೆ ನೂರಾರು ಮಂದಿ ಆಗಿ ಹೋಗಿದ್ದಾರೆ. ಈ ದೇಹದಲ್ಲಿ ಇವರಲ್ಲಿ ಯಾರನ್ನು ನಾನೆಂದು ಆರಿಸಲಿ ? ಇವರೆಲ್ಲರಿಂದ ಅರ್ಥ ಹೊರಡಿಸಬಲ್ಲ ಇನ್ನೊಬ್ಬ ಈ ದೇಹದಲ್ಲಿ ಇದ್ದಿದ್ದರೆ ಆಗ ನನ್ನ ವ್ಯಕ್ತಿತ್ವ ನನಗೆ ಇರುತ್ತಿತ್ತು. ಈಗ ನನ್ನ ಗುರುತು ನನಗೇ ಇಲ್ಲ. ಅನುಭವದ ಆಳಕ್ಕೆ ಇಳಿಯುತ್ತಾ ಬುದ್ಧಿ ಅದರ ಅರ್ಥ ತಿಳಿಯುವ ಸಾಮರ್ಥ್ಯ ಕಳೆದುಕೊಂಡುಬಿಡುತ್ತದೆ. ಅನುಭವ ಎಂಬುದು ನರಮಂಡಲದ ಮೇಲೆ ಹರಿದಾಡುವ ವಿದ್ಯುತ್ತಾಗಿ ಬಿಡುತ್ತದೆ. ನಟನೆ ಒಂದು ವ್ಯಕ್ತಿ ಸಂಪೂರ್ಣ ತಿಳುವಳಿಕೆಯಿಂದ ಹಾಕಿಕೊಳ್ಳುವ ವೇಷ. ನನ್ನದು ಹಾಗೂ ಅಲ್ಲ.'[3]

ಮೇಲಿನ ಮಾತುಗಳು ವೈಯಕ್ತಿಕ ಘರ್ಷಣೆಯ ಸ್ವಾನುಭವದ ವಿಶ್ಲೇಷಣೆಯಾಗಿದೆ. ಘರ್ಷಣೆಯ ಸ್ವರೂಪ ತೀವ್ರವಾದಾಗ ಚರ ಪ್ರವೃತ್ತಿಯ ಮನುಷ್ಯ ನಿಲ್ಲಲಾರ; ಒಂದರಿಂದ ಮತ್ತೊಂದು ಮಗದೊಂದು ಅನುಭವಕ್ಕೆ ಜಿಗಿಯುತ್ತಲೇ ಇರುತ್ತಾನೆ. ಸದಾ ಚಲಿಸುತ್ತಲೇ ಇರುವುದರಿಂದ ಎಲ್ಲಿಯೂ ಅಂಟಿಕೊಳ್ಳದೆ ತನ್ಮಯತೆಯನ್ನು ಸಾಧಿಸಲಾಗದೆ ಭ್ರಮಿಸುತ್ತಲೇ ಇರುವುದು ರೂಢಿಗತವಾಗಿ ಬಿಡುತ್ತದೆ.

ಸಮಾಜ ಮತ್ತು ಪರಿಸರಗಳ ಜೊತೆಗಿನ ಒಡನಾಟದಲ್ಲಿ ತನ್ನ ಅನುಭವವನ್ನು ಸ್ವತಂತ್ರ ಚಿಂತನೆಯನ್ನಾಗಿಸದೆ ಹೊಸ ಅನುಭವಕ್ಕೆ ಅನುವುಗೊಳ್ಳುತ್ತಾನೆ. ಅನುಭವವು ಕೈವಶವಾಗುವುದಕ್ಕೆ ಮೊದಲೇ ಅದರಿಂದ ಹಿಂದೆ ಸರಿದು ಮತ್ತೊಂದು ಅನುಭವಕ್ಕೆ ಅಡಿಯಿಡುತ್ತಾನೆ. ತಾನೇ ಸ್ವಯಂಪ್ರೇರಿತನಾಗಿ ಸೂಕ್ಷ್ಮವಾಗಿ ವಿಶ್ಲೇಷಣೆಯಲ್ಲಿ ತೊಡಗಿದರೂ ಬದುಕಿನಲ್ಲಿರುವುದನ್ನೆಲ್ಲ ವ್ಯಕ್ತಿಗತವಾದ ದೃಷ್ಟಿಕೋನದಿಂದ ಒಪ್ಪುವುದೂ ಇಲ್ಲ ತಿರಸ್ಕರಿಸುವುದೂ ಇಲ್ಲ. ಆ ಸಂದರ್ಭದನ್ವಯ ಆ ನೆಲೆಯಲ್ಲೇ ನಿಂತು ಆಲೋಚನೆಗೆ ತೊಡಗಿ ತನ್ನ ನಿರ್ಧಾರವನ್ನೋ, ದೃಷ್ಟಿಕೋನವನ್ನೋ ವ್ಯಕ್ತಪಡಿಸುವ ಹಂತದಲ್ಲಿ ಆತನ ಸಂವೇದನೆಗಳು ನಿರ್ದಿಷ್ಟವಾದ ತತ್ವವೊಂದಕ್ಕೆ ರೂಪಕೊಡಲಾಗದೆ ತತ್ತರಿಸುತ್ತವೆ. ವ್ಯಕ್ತಿ ಸಾಮಾಜಿಕ ಪರಿಸರದೊಂದಿಗೆ ಮತ್ತೆ ಮತ್ತೆ

ಘರ್ಷಣೆಗೆ ಒಳಗಾದಾಗ ಸಂವೇದನೆಗಳು ಸ್ಪಷ್ಟರೂಪ ಪಡೆಯಲಾಗದೆ ಸ್ವತಂತ್ರವಾಗಿ ಉಳಿದು ಬಿಡುತ್ತವೆ.

ಸಂವೇದನೆಯು ವ್ಯಕ್ತಿ ನಿಷ್ಠವಾಗಿಯೇ ಉಳಿದಾಗ ಸಮಾಜ ಅರ್ಥವಾಗುವುದು ತನ್ನ ಅನುಭವ ಮಾತ್ರದಿಂದ. ಅಂತಹ ಅನುಭವದೊಂದಿಗೆ ಸಮಾಜವನ್ನು ಏಕಕೇಂದ್ರಿತವಾದ ದೃಷ್ಟಿಕೋನದಿಂದ ಪರಿವೀಕ್ಷಿಸಿದರೆ ದೊರೆಯುವ ಉತ್ತರವೂ ಸ್ವನಿರ್ದೇಶಿತ ತತ್ತ್ವಕ್ಕೆ ಅನುಗುಣವಾಗಿಯೇ ಇರುತ್ತದೆ. ಅತಿಯಾದ ವೈಚಾರಿಕತೆ ಗೋಪಾಲಯ್ಯನನ್ನು ಯಾವುದೇ ಒಂದು ವ್ಯಕ್ತಿತ್ವದೊಳಗೆ ಸ್ಥಿರಗೊಳ್ಳುವುದಕ್ಕೆ ಬಿಡದೆ ನಿರಂತರ ಚಲನೆಯಲ್ಲಿರುವಂತೆ ಪ್ರೇರೇಪಿಸಿದೆ.

ಪರಕಾಯ ಪ್ರವೇಶ ಮಾಡುತ್ತಾ ಅನೇಕ ಅನುಭವಗಳನ್ನು ತನ್ನದಾಗಿಸಿಕೊಂಡರೂ ಸಂಘರ್ಷ ಮತ್ತು ತಾಕಲಾಟದ ಬದುಕಿಗೆ ಕೊನೆಯೇ ಇಲ್ಲವೆಂಬ ತೀರ್ಮಾನಕ್ಕೆ ಬರುವ ಗೋಪಾಲಯ್ಯ ಪ್ರಕೃತಿಯೊಂದಿಗೆ ಸೆಣಸಾಟಕ್ಕೆ ನಿಲ್ಲುತ್ತಾನೆ. ಪ್ರಕೃತಿಯೊಂದಿಗಿನ ಕಾದಾಟದಲ್ಲಿ ಗೆಲುವು ಪ್ರಕೃತಿ/ನಿಸರ್ಗದ್ದೇ ಎಂಬರಿವಿದ್ದರೂ ಅನುಭವದ ಮತ್ತೊಂದು ನೆಲೆಯನ್ನು ಕಾಣಲು ಸಿದ್ಧಗೊಳ್ಳುತ್ತಾನೆ. ಅನುಭವಗಳ ಬೆನ್ನುಹತ್ತಿ ಸಿದ್ಧಿಸಿಕೊಳ್ಳಹೊರಟರೂ ಅದರ ತುತ್ತತುದಿಯನ್ನು ತಾನು ತಲುಪಲಾಗುವುದಿಲ್ಲ ಎಂಬ ಅರಿವಿಗೆ ಬಂದು ನಿಲ್ಲುತ್ತಾನೆ. ಇಂತಹ ಸ್ವರೂಪದ ಪರಿಚಯ ಈ ಕೆಳಗಿನ ನಿವೇದನೆಯಲ್ಲಿ ಸ್ಪಷ್ಟಗೊಳ್ಳುತ್ತದೆ.

ಜಗನ್ನಾಥ ನೋಡಿ ಗೋಪಾಲಯ್ಯ. ನಾನೇಕೆ ಈ ವಿಷಯ ನಿಮ್ಮೊಡನೆ ಎತ್ತಲಿಲ್ಲವೆಂದರೆ ನನ್ನ ಜೀವನ ಅಷ್ಟೊಂದು ತರ್ಕಬದ್ಧವಾಗಿಲ್ಲ. ನಿಮ್ಮ ಪ್ರಶ್ನೆಗಳಿಗೆ ಏನೇನೋ ಉತ್ತರ ಹೇಳಬೇಕಾಗುತ್ತದೆ. ನಾನೊಬ್ಬ ಬರಹಗಾರ ಎಂದೆ. ಆರೇಳು ಕಾದಂಬರಿಗಳನ್ನು ಬರೆದಿದ್ದೇನೆ. ಆದರೆ ಕೊನೆಯ ಕಾದಂಬರಿಯನ್ನು ಬರೆಯುವ ಹೊತ್ತಿಗೆ ನಾನೊಂದು ತೀರ್ಮಾನಕ್ಕೆ ಬಂದೆ. ಇಲ್ಲಾ ದೇಶಾಂತರ ಗತನಾಗಿಬಿಡುವುದು, ಇಲ್ಲಾ ಆತ್ಮಹತ್ಯೆ ಮಾಡಿಕೊಳ್ಳಬೇಕು. ಈ ತೀರ್ಮಾನ ಒಂದು ಬೂಟಾಟಿಕೆ ಎಂದುಕೊಳ್ಳಬೇಡಿ, ಏಕೆಂದರೆ ಅನೇಕ ಪಾತ್ರಗಳನ್ನು ಕಾದಂಬರಿಯ ರಂಗಸ್ಥಳದಲ್ಲಿ ಆಡಿಸುವ ನನಗೆ ಹೀಗೆಲ್ಲಾ ಮಾತನಾಡುವುದು ಒಂದು ಫ್ಯಾಷನ್ ಎಂದು ತಿಳಿಯಬಹುದು. ಆದರೆ ನನಗೆ ಅಂತಿಲ್ಲ. ಏಕೆಂದರೆ, ಆತ್ಮಹತ್ಯೆಯ ಆಲೋಚನೆಯ ಪ್ರಾಮಾಣಿಕತೆಯನ್ನು ನಾನು ಸಿದ್ಧಮಾಡಿ ತೋರಿಸಿದ ನಂತರ ನಾನಿರುವುದೇ ಇಲ್ಲ.

'ನೋಡಿ ಗೋಪಾಲಯ್ಯ, ನಾನು ಬರೆದುದೆಲ್ಲಾ ನಿಸ್ಸಾರ, ನಿರುಪಯುಕ್ತ ಎಂದೆನ್ನಿಸತೊಡಗಿತು. ಆಗಲೇ ನನಗೆ ಆತ್ಮಹತ್ಯೆಯಂಥ ಭಯಾನಕ ಆಲೋಚನೆ ಬಂದುದು ಸಾಹಿತಿ ತನ್ನ ಬರವಣಿಗೆಯಿಂದ ಬದುಕ ಹೊರಟವನು. ಸಾಹಿತಿ ಎಂದು ಹೆಸರು ವಾಸಿಯಾದವನು. ತಾನಿನ್ನು ಬರೆಯಲಾರೆ ಎಂದೆನ್ನಿಸಿದರೆ ಹೇಗಾಗಬಹುದು ಯೋಚಿಸಿ, ಆ ದುರಂತದ ಘೋರತೆಯನ್ನು ಹೇಗೆ ತಿಳಿಸಲಿ ಹೇಳಿ'[2]

ನಡುವೆ ರಂಗಪ್ಪ ಬಾಯಿಹಾಕಿ ಜಗನ್ನಾಥನ ಭಾವುಕತೆಯನ್ನು ಪ್ರಶ್ನಿಸುತ್ತಾನೆ. ಆಗ ಜಗನ್ನಾಥ ಅವನಿಗೆ ವಿವರಣೆ ನೀಡತೊಡಗುತ್ತಾನೆ. ಈ ಮೂಲಕ ಸ್ವತಃ ತಾನು ಅನುಭವಿಸಿರಬಹುದಾದ ಸಂಘರ್ಷದ ಸಂದರ್ಭಗಳನ್ನು, ಗೊಂದಲ, ದ್ವಂದ್ವಗಳನ್ನು ಹೊರಹಾಕುತ್ತಾನೆ.

ನನ್ನ ಜೀವನದಲ್ಲಿ ನಾನು ಬದಲಾವಣೆಗಾಗಿ ಹಂಬಲಿಸಿದಂತೆ ಪುನರ್ಜನ್ಮಕ್ಕಾಗಿ ಹಂಬಲಿಸಿದಂತೆ ಬಹುಶಃ ಇನ್ನಾರೂ ಹಂಬಲಿಸಿರಲಾರರು. ಏಕೆನ್ನುವೆಯಾ ? ನಾನು ಲೆಕ್ಚರರ್ ಆದಾಗ ವಿದ್ಯಾರ್ಥಿ ಜೀವನಕ್ಕೂ ಮಾಸ್ತರ ಜೀವನಕ್ಕೂ ಯಾವ ಬದಲಾವಣೆಯನ್ನು ಕಾಣಲಿಲ್ಲ. ಮಿತ್ರರೂ ಶತ್ರುಗಳೂ ಯಾರೊಬ್ಬರೂ ಬದಲಾಗಲಿಲ್ಲಾ. ಬೋರ್ಡಿಗೆ ಮೊದಲು ಮುಖ ಹಾಕಿ ಕೂರುತ್ತಿದ್ದವನು ಈಗ ಬೆನ್ನು ಹಾಕಿ ಕೂರತೊಡಗಿದೆ ಅಷ್ಟೆ. ಸಾಹಿತ್ಯವನ್ನು ಕಿವಿಯಲ್ಲಿ ಕೇಳುತ್ತಿದ್ದವನು ಅನಂತರ ಬಾಯಲ್ಲಿ ಕಾರತೊಡಗಿದೆ. ನಾನು ಬರೆಯುತ್ತಿದ್ದ ಕಾಲಕ್ಕೆ

ಬರೆಯುತ್ತಿದ್ದವರೆಲ್ಲಾ ಅಧ್ಯಾಪಕರು ಅವರು ಅದನ್ನೇ ಓದಿ, ಅದನ್ನೇ ಕೇಳಿ, ಅದನ್ನೇ ಪಾಠ ಹೇಳಿ ಅವುಗಳಿಂದಲೇ ಏನೇನನ್ನೋ ಸೃಷ್ಟಿಸುತ್ತಿದ್ದರು. ಹಾಗಾಗಿ ತನ್ನ ಕಾಲದ ಸಾಹಿತ್ಯವೆಲ್ಲಾ ಸಾಹಿತ್ಯೋಪಜೀವಿಗಳ ಸಾಹಿತ್ಯ.[2]

ಸದಾಕಾಲ ವಿಕಲ್ಪದೊಂದಿಗೆ ಹೆಜ್ಜೆಹಾಕುತ್ತಾ ಯಾವುದೇ ಒಂದು ನಿರ್ದಿಷ್ಟವಾದ ವಿಚಾರಕ್ಕೆ ಬದ್ಧವಾಗಲಾರದೆ ಹೆಣಗಾಡುತ್ತಾ, ಗೊಣಗಾಡುತ್ತಾ ತಿಕ್ಕಾಟವನ್ನು ಅನುಭವಿಸುವಂತಾಗುತ್ತದೆ. ಸಮಾಜಮುಖಿಯಾಗಿ ತೆರೆದುಕೊಳ್ಳಲೇ ಬೇಕಾದಾಗ, ಸಮಾಜಕ್ಕೆ ತಕ್ಕಂತೆ ಬದಲಾಗುವ ಮುಖವಾಡವನ್ನು ಹೊರುವ ವ್ಯಕ್ತಿಯಾಗಿ ನಿಂತಾಗ ವ್ಯಕ್ತಿತ್ವವೇ ಬುಡಮೇಲಾಗುತ್ತದೆ. ಇಂಥ ಸಂದರ್ಭಗಳಲ್ಲಿ ಪರಿಸರ ಜ್ಞಾನವಾಗಲಿ ಪರಾಮರ್ಶನ ಜ್ಞಾನವಾಗಲೀ ಸಾಥ್ ನೀಡುವುದಿಲ್ಲ ಎನ್ನುವುದು ಈ ಮಾತುಗಳಿಂದ ವ್ಯಕ್ತವಾಗುತ್ತದೆ.

ಪ್ರಸ್ತುತ ಸಂದರ್ಭದಲ್ಲಿ ಸಮಾಜಜೀವಿಯಾದ ಮನುಷ್ಯ ಒಂಟಿಮನೆಗಳಿಂದ ಹೊರಬಂದು ಸಮುದಾಯದ ಒಂದಂಗವಾಗಿ ಬದುಕಲು ನಗರಾಭಿಮುಖವಾಗಿ ಹೊರಟು ಸಮಾನಾಂತರವಾಗಿ ಬದುಕನ್ನು ನಡೆಸುತ್ತಿರುವುದನ್ನು ಕಾಣುತ್ತೇವೆ. ಅದಕ್ಕೆ ವಿರುದ್ಧವಾದ ವ್ಯಕ್ತಿತ್ವವನ್ನು ಶ್ರೀನಿವಾಸ, ಗೋಪಾಲಯ್ಯ ಮತ್ತು ಜಗನ್ನಾಥರಲ್ಲಿ ಕಾಣುತ್ತೇವೆ. ಇವರುಗಳು ಗ್ರಾಮಾಭಿಮುಖಿಯಾಗಿ ಹೊರಟು ಅಸ್ತಿತ್ವದ ಹುಡುಕಾಟದಲ್ಲಿ ತೊಡಗಿದವರು. ಒಡೆದ ವ್ಯಕ್ತಿತ್ವದಲ್ಲಿ ಬದುಕಿನ ಅರ್ಥಪೂರ್ಣತೆ, ಸಹಜಸಂತೋಷ, ಆತ್ಮತೃಪ್ತಿ ಪಡೆಯಲು ಹಾತೊರೆದು ಆ ನಿಟ್ಟಿನಲ್ಲಿ ಬದುಕನ್ನು ಸಾರ್ಥಕ ಪಡಿಸಿಕೊಳ್ಳಲಾರದೆ ನಿರರ್ಥಕರಾಗಿ ಪ್ರಕೃತಿಯ ಜೊತೆಗೆ ಸಾಮರಸ್ಯದ ಜೀವನ ಸಾಗಿಸಲು ಮುಂದಾಗುತ್ತಾರೆ. ಈ ಕಥನಗಳು ಆದರ್ಶ, ಜೀವನ ನಿರರ್ಥಕತೆ, ವೈರಾಗ್ಯ ಹೀಗೆ ಬೇರೆ ಬೇರೆ ನೆಲೆಗಳನ್ನು ಮನಗಾಣಿಸುತ್ತವೆ.

ವ್ಯಕ್ತಿಯು ತನಗೆ ತಾನೇ ಸ್ವತಂತ್ರನೆಂಬ ಸ್ಥಿತಿಯಲ್ಲಿ ಬದುಕುತ್ತಿದ್ದಾಗ ಸಮಾಜದ ಪ್ರಶ್ನೆ ವ್ಯಕ್ತಿಯನ್ನು ಅಷ್ಟಾಗಿ ಕಾಡುವುದಿಲ್ಲ. ಸಮಾಜದ ಕಟ್ಟುಕಟ್ಟಳೆ ರೀತಿ-ನೀತಿಗಳಿಂದ ಬಂಧಿತನಾದಾಗ ಅವುಗಳ ವಿರುದ್ಧ ದಂಗೆಯೆದ್ದು ಅವಕ್ಕೆ ವ್ಯತಿರಿಕ್ತವಾಗಿ ವರ್ತಿಸುವಂತಾಗುತ್ತದೆ. ಇಲ್ಲದಿದ್ದಲ್ಲಿ ಆಂತರಿಕ ಬಯಕೆಗಳು ಆ ಸಂದರ್ಭದಲ್ಲಿ ಹೆಡೆ ಎತ್ತಿ ಬೌದ್ಧಿಕವಾಗಿ ಆಲೋಚಿಸುವಂತೆ ಪ್ರೇರೇಪಿಸುತ್ತದೆ. ಇದರಿಂದ ತನ್ನವೇ ಆದ ಸಿದ್ಧಾಂತಗಳು, ಆದರ್ಶಗಳು ಮಂಡನೆಯಾಗುತ್ತವೆ. ಇವೇ ಸಮಾಜದಲ್ಲಿನ ಹಲವಾರು ಸಿದ್ಧಾಂತಗಳೊಡನೆ ಸಂಘರ್ಷಕ್ಕಿಳಿಯುತ್ತವೆ. ಇಂತಹ ಸಂಘರ್ಷ ತಾನು ನಂಬಿರುವ ತತ್ತ್ವ ಸಿದ್ಧಾಂತಗಳು ಪರಿಪೂರ್ಣವಾದವುಗಳು ಬೇರೆಯವರ ನಂಬಿಕೆಗಳು ಸುಳ್ಳು ಎಂಬ ವಾದದೊಡನೆ ಪ್ರಾರಂಭವಾಗುತ್ತದೆ. ತಾನು ತಿಳಿದದ್ದೇ ಸರಿ ಇತರರ ತಿಳುವಳಿಕೆ ತಪ್ಪು ಎಂಬ ಮನೋಭಾವದೊಂದಿಗೆ ಆರಂಭವಾಗುವ ಶೀತಲ ಸಮರ ಕೆಲವೊಮ್ಮೆ ದ್ವೇಷವಾಗಿ ಮಾರ್ಪಡುವ ಸಂಭವವಿರುತ್ತದೆ. ನಾನು ಯಾರು? ನನ್ನ ವೈಯಕ್ತಿಕ ಸ್ಥಾನಮಾನಗಳೇನು? ತಾನು ಇತರರಿಗಿಂತ ಪ್ರಬುದ್ಧನಲ್ಲವೇ? ಎಂಬೆಲ್ಲಾ ಪ್ರಶ್ನೆಗಳು ವ್ಯಕ್ತಿಯನ್ನು ಬಾಧಿಸುವುದರ ಜೊತೆಗೆ ತನ್ನ ಕುಟುಂಬವರ್ಗ ಇಲ್ಲವೆ ಸುತ್ತಲಿನ ಸಮಾಜ ತನ್ನನ್ನು ಅರ್ಥೈಸಿಕೊಳ್ಳುತ್ತಿಲ್ಲವೆಂಬ ಮಾನಸಿಕ ತೊಳಲಾಟ ಒತ್ತಡದ ಸಂದರ್ಭಗಳನ್ನು ಸೃಷ್ಟಿಮಾಡುತ್ತದೆ. ಅಂತಹ ಪರಿಸ್ಥಿತಿಯು ವ್ಯಕ್ತಿಗಳ ಮಧ್ಯೆ ಪರಸ್ಪರ ಸಂಭವಿಸಿದಾಗ ಹೆಚ್ಚಿನ ಅನಾಹುತವಾಗುವ ಸಂಭವವಿರುತ್ತದೆ.

ಕಿರುಗೂರಿನ ಭೌತಿಕ ಮತ್ತು ಅಲ್ಲಿನ ಜನರ ಮನೋಧರ್ಮದ ಪ್ರತ್ಯೇಕತೆಗಳಲ್ಲಿ ಪ್ರತಿಯೊಬ್ಬ ಗಂಡಸು ಸಾಮಾಜಿಕ ಕಾರಣಗಳಿಂದ ಸಂಘರ್ಷಕ್ಕೆ ಈಡಾದರೆ ಪಂಚಾಯಿತಿ ಪ್ರಸಂಗದ ವರ್ತನೆಗಳಿಂದ ಕಿರುಗೂರಿನ ಪ್ರತಿಯೊಬ್ಬ ಮಹಿಳೆ ಅಪಮಾನ, ನಿಂದೆ, ದೌರ್ಜನ್ಯಗಳನ್ನು ಎದುರಿಸುವಾಗ ಮಾನಸಿಕವಾಗಿ ಜರ್ಜರಿತಳಾಗುತ್ತಾಳೆ. ಉದಾಹರಣೆಗೆ ಪಂಚಾಯಿತಿ ಪ್ರಕರಣದಲ್ಲಿ ನಾಗಮ್ಮನ ಮೇಲಿನ ಆಕ್ರಮಣದಿದ ತತ್ತರಿಸಿಹೋಗುವ ಕಿರುಗೂರಿನ ಮಹಿಳೆಯರಿಗೆ 'ಇವರ ಆಚಾರಗಳು, ಮದುವೆಗಳು, ಇವರ ಪಂಚಾಯ್ತಿಗಳು, ಪ್ರತಿಯೊಂದೂ ಹೆಂಗಸರಿಗೆ ಹಿಂಸೆ ಕೊಡುವ ಗಂಡಸರ ನೀಚ ತಂತ್ರವಾಗಿ ಕಾಣಿಸಿತು' ಎನ್ನುವ ಮಾತು ಕೌರ್ಯಕ್ಕೊಳ್ಳಗಾದ ಪ್ರತಿಯೊಂದು ಹೆಣ್ಣಿನ ಒಳದನಿಯಂತೆ ಇದೆ.

ಸಾಂಸ್ಕೃತಿಕ ಸಂಕಟದೊಂದಿಗೆ ಬದುಕನ್ನು ನಡೆಸುವ ಜುಗಾರಿ ಕ್ರಾಸ್‌ನ ದ್ಯಾವಮ್ಮನಲ್ಲಿ ಸಂಘರ್ಷವೂ ಇಲ್ಲ. ಪ್ರತಿಭಟನೆಯೂ ಇಲ್ಲ, ವಿರೋಧಾಭಾಸವೂ ಇಲ್ಲ. ಹಾಗೆಂದು ಬದುಕಿನ ರೀತಿ ನೀತಿಗೆ ವಿಮುಖಳಾದಳೆಂದಲ್ಲ. ವರ್ತಮಾನದ ಬದುಕನ್ನು ಭೂತಕಾಲದ ನೆನಪುಗಳ ಮೇಲೆ, ಭವಿಷ್ಯತ್ತಿನ ಆಕಾಂಕ್ಷೆಗಳ ಮೂಲಕ ಸಾಧಿಸುವ ಅನೇಕರ ಸಾಲಿನಲ್ಲಿ ಆಕೆ ಪರಿಗಣಿತಳಾಗುವುದಿಲ್ಲ. ಆಕೆಯ ತಟಸ್ಥ ನೀತಿ ಬೇರೆಯವರ ಬದುಕಿಗೆ ಅನ್ವಯವಾಗುವುದಿಲ್ಲ. ಜೀವನನಿರ್ವಹಣೆಯ ಮಾರ್ಗಗಳು ತನ್ನ ವ್ಯವಸ್ಥಿತ ಜಾಲದಲ್ಲಿ ಕೆಡವಿಕೊಳ್ಳುವುದರ ಅರಿವಿಲ್ಲದೆ ಜೋತು ಬೀಳುವುದಕ್ಕೆ ಹಾತೊರೆಯುವವರ ಮಧ್ಯೆ ಏಕಾಂಗಿಯಾಗಿ ವಾಸ್ತವವನ್ನು ಎದುರುಗೊಳ್ಳುವುದು ಆಕೆಯ ಧೈರ್ಯ–ಸ್ಥೈರ್ಯದ ಸೂಚಕವಾಗಿದೆ.

ವ್ಯಕ್ತಿ–ವ್ಯಕ್ತಿಯ ನಡುವಣ ಸಂಘರ್ಷವೇರ್ಪಟ್ಟಾಗ ಬೇರೆ ಬೇರೆ ಮನಸ್ಥಿತಿಯವರಾದರೆ ತಾವಂದುಕೊಂಡಂತೆ ಯಾವುದೇ ಕೆಲಸ ಫಲಕಾರಿಯಾಗದಿದ್ದಲ್ಲಿ ಸಂಘರ್ಷ ತುದಿಯನ್ನು ತಲುಪುತ್ತಾರೆ. ಅವು ವ್ಯಕ್ತಿ–ವ್ಯಕ್ತಿಗಳ ನಡುವಣ ಸಂಬಂಧಗಳನ್ನು ಹಾಳುಗೆಡವುತ್ತವೆ. ಇಲ್ಲವೇ ವಸ್ತುಸ್ಥಿತಿಯಿಂದ ಪಲಾಯನಗೈಯ್ಯುವಂತೆ ಪ್ರೇರೇಪಿಸುತ್ತವೆ. ಹುಲಿಯೂರಿನ ಸರಹದ್ದು ಕಥೆಯ ಸೋಮ, ಅವನತಿಯ ಸೂರಾಚಾರಿ, ಅಬಚೂರಿನ ಬೋಬಣ್ಣ ಇಂತಹ ಸಂಘರ್ಷಕ್ಕೆ ಒಳಗಾಗಿ ಇದರಿಂದ ಹೊರಬರಲು ತಹತಹಿಸುತ್ತಾರೆ.

'ಹುಲಿಯೂರಿನ ಸರಹದ್ದು' ಕಥೆಯ ಸೋಮ ಮಾನವೀಯ ಸಂಬಂಧಗಳ ಮೂಲಕ ತನ್ನನ್ನು ತಾನೇ ಅರಿಯುವ ಪ್ರಯತ್ನ ಮಾಡುತ್ತಾನೆ. ಸ್ವಾತಂತ್ರ್ಯ ಪಡೆಯುವ ಮಹದುದ್ದೇಶವನ್ನು ಆಯ್ಕೆಯ ಸಂದರ್ಭಗಳಲ್ಲಿ ಸಿಲುಕಿಕೊಂಡು ಈಡೇರಿಸಿಕೊಳ್ಳಲು ಹವಣಿಸುತ್ತಾನೆ. ಆ ಸಂದರ್ಭದಲ್ಲಿ ಭಯ ಮತ್ತು ನಿರಾಶೆ ಕಾಡುತ್ತದೆ. ತಾನು ಬಯಸುವ ಸ್ವಚ್ಛಂದತೆ, ದಾಟಲಾರದ ಮಿತಿ ಒಂದಕ್ಕೊಂದು ಸೆಣಸಾಡುತ್ತಿರುವ ಸಂವೇದನೆ. ಸಂಬಂಧಗಳ ಕೊಂಡಿಯನ್ನು ಕಳಚಿ ಹೋಗಿಬಿಡಬೇಕೆನ್ನುವ ಆಶಾಭಾವನೆ. ಸಾಧ್ಯವಾಗದ ಅಸಹಾಯಕತೆ ಇವುಗಳಿಂದಾಗುವ ತಳಮಳಗೊಂಡು ವೈಯಕ್ತಿಕ ಸಂಘರ್ಷಕ್ಕೊಳಗಾಗುತ್ತಾನೆ.

ವೈಯಕ್ತಿಕ ಸಂಘರ್ಷದಲ್ಲಿದ್ದು ಸಾಮಾಜಿಕ ವೈರುಧ್ಯಗಳ ಜೊತೆ ಹೋರಾಡುವ ಸ್ವರೂಪದ ಶ್ರೀನಿವಾಸ, ಗೋಪಾಲಯ್ಯ, ಜಗನ್ನಾಥ, ಊರ್ವಶಿಯ ಸೋಮ, ಗಾಂಧೀಜಿ ದೆಸೆಯಿಂದ ಮೋನಿ, ಚಿದಂಬರ ರಹಸ್ಯದ ಪಾಟೀಲ, ಕರ್ವಾಲೋದ ನಿರೂಪಕ ಇವರುಗಳು ಆತ್ಮವಿಶ್ಲೇಷಣೆಯಲ್ಲಿ ತೊಡಗಿಕೊಳ್ಳುವುದೇ ಹೆಚ್ಚು. ಆತ್ಮನಿರೀಕ್ಷಣೆ ವ್ಯಕ್ತಿಗತನೆಲೆಯಲ್ಲೇ ನಡೆದರೂ

ಮನುಷ್ಯನ ಸಾಮಾಜಿಕ ಅನುಭವಗಳನ್ನು ವೈಯಕ್ತಿಕತೆಯ ಪಾತಳಿಯಲ್ಲಿ ಮಾತ್ರ ಗ್ರಹಿಸುವುದು ಹುಲಿಯೂರಿನ ಸರಹದ್ದು ಸಂಕಲದ ಕಥನಗಳಲ್ಲಿ ಸ್ಪಷ್ಟವಾಗಿದೆ. ಇಂತಹ ಶೋಧನೆಯ ಹಪಹಪಿಕೆಯ ಜೊತೆಗೆ ವೈಫಲ್ಯದ ಮತ್ತು ತನ್ನದೇ ದೌರ್ಬಲ್ಯಗಳ ಅಂಜಿಕೆ ಇರುವ ಈ ಪಾತ್ರಗಳು ಯಾವಾಗಲೂ ಆತ್ಮವಿಮರ್ಶೆಯ ಶೋಧಕ ಬೆಳಕಿನಲ್ಲಿ ತಮ್ಮನ್ನು ಕಂಡುಕೊಳ್ಳುವ ಪ್ರಯತ್ನ ಮಾಡುತ್ತವೆ. ನಂತರದ ಕಥನಗಳಾದ ಅಬಚೂರಿನ ಪೋಸ್ಟಾಫೀಸು, ಅವನತಿ ಕಥನಗಳಲ್ಲಿ ಇವೆಲ್ಲಕ್ಕೂ ವಿರುದ್ಧವಾದ ಅಬಚೂರಿನ ಬೋಬಣ್ಣ, ಹುಲಿಯೂರಿನ ಸೋಮು, ತ್ಯಕ್ತದಸೋಮ, ಗುರುಗಳ್ಳಿಯ ತುಕ್ಕೋಜಿ, ಅವನತಿಯ ಸೂರಾಚಾರಿ, ಡಾ. ಕುಬೇರಪ್ಪ ಇವರು ಆತ್ಮವಿಶ್ಲೇಷಣೆಯಲ್ಲಿ ತೊಡಗಿಕೊಳ್ಳದೆ ಸಮಾಜದ ಜೊತೆ ನೇರಾನೇರವಾಗಿ ಘರ್ಷಣೆಗೆ ಇಳಿಯುತ್ತಾರೆ. ಜುಗಾರಿ ಕ್ರಾಸ್‌ನ ಮುಖ್ಯ ಪಾತ್ರಗಳಾದ ಸುರೇಶ-ಗೌರಿ ಬದುಕುವ ಛಲದಿಂದ ತಮ್ಮ ಆಸೆ ಆಕಾಂಕ್ಷೆಗಳೊಂದಿಗೆ ಗುದ್ದಾಡುತ್ತಾ ಆತಂಕಕಾರಿಯಾದ ಸಂದರ್ಭಗಳನ್ನು ಎದುರುಗೊಳ್ಳುತ್ತಾರೆ ಮತ್ತು ಅದರಿಂದ ಹೊರಬರುವಲ್ಲಿ ಯಶಸ್ವಿಯಾಗುತ್ತಾರೆ.

## ೩.೧.೧: ಅಂತರಂಗ ಬಹಿರಂಗ: ಇಬ್ಬಂದಿತನದ ತೊಳಲಾಟ

ಅಂತರಂಗ-ಬಹಿರಂಗಗಳೆರಡೂ ಮಾನವನ ಭೌತಿಕ ಬೌದ್ಧಿಕ ಸ್ವರೂಪವನ್ನು ಅರಿಯುವ, ಆಂತರಿಕ-ಬಾಹ್ಯ ಸಂವೇದನೆಯನ್ನು ಅರ್ಥಮಾಡಿಕೊಳ್ಳಲು ಸಾಧ್ಯವಾಗುವ ಎರಡು ಸ್ಥಿತಿಗಳು. **ಅಂತರಂಗ:** ಪ್ರಾಪಂಚಿಕ ಧೋರಣೆಗಳನ್ನು ಆಮೂಲಾಗ್ರ ಶೋಧನೆಗೆ ಒಳಪಡಿಸಿಯೂ ದೊರೆತ ಫಲಿತಾಂಶವನ್ನು ಮರುಪರಿಶೀಲನೆಗೆ ಒಡ್ಡುವುದು ಮತ್ತು ಆಂತರ್ಯದಲ್ಲೇ ಅಡಗಿಸಿಟ್ಟುಕೊಳ್ಳುವುದು. **ಬಹಿರಂಗ:** ಮಾನಸದ ಪ್ರತಿಯೊಂದು ಯೋಜನೆಯನ್ನೂ, ವಿಚಾರವನ್ನೂ ಹೊರಗೆಡವಿ ನಿರುಮ್ಮಳವಾಗಿರುವುದು ಇಲ್ಲವೆ ಭ್ರಮಾಧೀನನಾಗಿ ಪ್ರತಿಕ್ರಿಯಿಸುವುದು, ಇಲ್ಲವೆ ಅಪ್ರಜ್ಞಾಪೂರ್ವಕವಾಗಿ ವರ್ತಿಸುವುದು. ಬಹಿರಂಗವಾಗಿ ಪ್ರದರ್ಶನಗೊಳ್ಳುವ ವ್ಯಕ್ತಿತ್ವ ಸಮಯ ಸಂದರ್ಭಗಳಿಗನುಗುಣವಾಗಿ ಮಾರ್ಪಡುತ್ತಿರುತ್ತದೆ.

ವ್ಯಕ್ತಿಯ ಬದುಕು ಬಹುಮುಖಿಯಾದ ಚಲನೆಯನ್ನು ಹೊಂದಿರುತ್ತದೆ. ಅದರೆ ಆತನ ಯಾವುದೇ ಸ್ವಭಾವ ಮತ್ತು ನಡವಳಿಕೆ ಮೊದಲು ಅವನ ನೆಲೆಯಲ್ಲಿ ಸ್ಥಾಪಿತಗೊಂಡು ಆನಂತರ ಸಮಾಜದೆಡೆಗೆ ಸರಿಯುತ್ತದೆ. ಬದುಕಿನ ಮೂಲಭೂತ ಅಸ್ತಿತ್ವವನ್ನು ಅವನ ಪ್ರಜ್ಞೆ ಪ್ರತಿನಿಧಿಸುತ್ತದೆ. ಆ ಪ್ರಜ್ಞೆಯ ಮುಖಾಂತರವೇ ಅವನ ಸ್ವಭಾವ-ರೀತಿನೀತಿಗಳನ್ನು ಅಳೆಯಲಾಗುತ್ತದೆ. ರೀತಿನೀತಿಗಳು ಗ್ರಹಿಕೆಗೆ ಸಿಗದಾದಾಗ ಅವನ ಅಂತಃಕರಣ/ಅಂತರಂಗದ ಶೋಧನೆಗೆ ತೊಡಗಿದರೆ ಆತನ ಸಂಘರ್ಷಮಯ ಸಂದರ್ಭಗಳು ಅವಗಾಹನೆಗೆ ನಿಲುಕುತ್ತವೆ. ಅಂತಹ ಸಂದರ್ಭಗಳೇ ಮಾನಸಿಕ ಸ್ಥಿರತೆಯ ಮೌಲ್ಯಮಾಪನ ಮಾಡುತ್ತವೆ. ಬಾಹ್ಯ ಸಂದರ್ಭದಲ್ಲಿ ಮುಖವಾಡ ಧರಿಸುವ ಆತನ ವ್ಯಕ್ತಿತ್ವ ಆಂತರ್ಯದ ಹೋರಾಟದಲ್ಲಿ ಘರ್ಷಣೆಗೆ ಒಳಗಾಗುತ್ತಿರುತ್ತದೆ. ಒಪ್ಪಿದ ಬದುಕನ್ನು ಅನುಸರಿಸುವುದಕ್ಕೆ ಮುಂದಾಗುವ ಬಾಹ್ಯವರ್ತನೆಗಳು ಆಂತರ್ಯದ ಪ್ರಶ್ನೆಗಳಿಗೆ ಉತ್ತರವನ್ನು ತನ್ನ ಕಾಣುವ ದೃಷ್ಟಿಕೋನದಲ್ಲಿಯೇ ಒದಗಿಸಿರುತ್ತವೆ.

ಸ್ವರೂಪದ ಶ್ರೀನಿವಾಸನ ಸ್ವಗತದ ಮೂಲಕ ತೆರೆದುಕೊಳ್ಳುವ ವಾಸ್ತವತೆ ಬದುಕಿನ ಮತ್ತೊಂದು ಮಗ್ಗುಲನ್ನು ಪರಿಚಯಿಸುತ್ತದೆ. ಬದುಕಿನ ವಿವಿಧ ಮಜಲುಗಳನ್ನು ಹಾದುಬಂದಿದ್ದ ಶ್ರೀನಿವಾಸನಿಗೆ ನಗರದ ಯಾಂತ್ರೀಕೃತ ಬದುಕು ಬೇಸರಿಕೆಯನ್ನೊಡ್ಡುತ್ತದೆ. ವರ್ತಮಾನದ ಬದುಕು ನೀರಸತೆಯನ್ನು ತಂದೊಡ್ಡಿ ಅದರಿಂದ ತನ್ನತನವನ್ನು ಕಳೆದುಕೊಂಡ ಭಾವನೆಗೆ ಒಳಗಾಗುತ್ತಾನೆ. ಅನಿವಾರ್ಯ ಪರಿಸ್ಥಿತಿಗೆ ತಲೆಬಾಗಿದ ಪರಿಣಾಮವಾಗಿ ಆದರ್ಶ ಮತ್ತು ಆಯ್ಕೆಯ ಸಂದರ್ಭಗಳಲ್ಲಿ ಸಿಕ್ಕು ತೊಳಲಾಡುತ್ತಾನೆ. ತೊಳಲಾಟದ ಮಧ್ಯೆ ಬದುಕಿನ ಸಾರ್ಥಕತೆ ಪ್ರಶ್ನೆ ಎದುರಾಗುತ್ತದೆ. ಅದರ ಬೆಂಬತ್ತಿ ಹೊಸ ಆವಿಷ್ಕಾರದತ್ತ ಉನ್ಮತ್ತನಾಗಿ ಅಡಿ ಇಡುತ್ತಾನೆ. ಅದಕ್ಕಾಗಿ ಆತ ನಗರವನ್ನು ತ್ಯಜಿಸುವ ತೀರ್ಮಾನಕ್ಕೆ ಬರುತ್ತಾನೆ. ಇದು ಆತನ ಜೀವನಾನುಭವಗಳ ಹಿನ್ನಲೆಯಲ್ಲಿ ತನ್ನ ವ್ಯಕ್ತಿತ್ವಕ್ಕೆ ರೂಪುಕೊಡುವುದಕ್ಕೆ ಸನ್ನದ್ಧನಾಗಿದ್ದಾಗಿದೆ.

ತಾನಿದ್ದ ಪರಿಸರದಲ್ಲೇ ತನ್ನ ಅಸ್ತಿತ್ವವನ್ನು ಕಾಯ್ದುಕೊಳ್ಳಲು ಸಾಧ್ಯವಾಗದೆ ಅಂಗಾಡಿ ಹಳ್ಳಿಯ ಪರಿಸರಕ್ಕೆ ಬರುತ್ತನಾದರೂ ಅಲ್ಲೂ ತನ್ನನ್ನು 'ತಾನು' ಕಂಡುಕೊಳ್ಳುವ ಯತ್ನದಲ್ಲಿ ಸಫಲನಾಗುವುದಿಲ್ಲ. ಶ್ರೀನಿವಾಸನ ಇದುವರೆಗಿನ ತಿಳುವಳಿಕೆ ಗ್ರಾಮೀಣ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಹೊಸದೊಂದು ತಿರುವು ಪಡೆಯುತ್ತದೆ. ತಾನು ಕಂಡು, ತಿಳಿದು, ಬೆಳೆಸಿಕೊಂಡು ಬಂದಿದ್ದ 'ತನ್ನತನ' ಬೇರೆಯದೆ ಸ್ವರೂಪವನ್ನು ಪಡೆದುಕೊಂಡಾಗ ದಿಗ್ಭ್ರಮೆಗೆ ಒಳಗಾಗುತ್ತಾನೆ. ಅದನ್ನು

ಈ ತರ ಏಕಾಂತ, ಮೌನವನ್ನು ಕಂಡರೆ ಆಗೋದಿಲ್ಲ. ಇಲ್ಲಾ ನಾನು ಮಾತಾಡಬೇಕು . . . . . . . . ಅನೇಕ ದಿನಗಳಿಂದ ನನ್ನನ್ನು ಬೆಂಬತ್ತುತ್ತಿರುವ ಈ ಮೌನದಿಂದ ಕೆಲವು ಕ್ಷಣಗಳಾದರೂ ಬಿಡುಗಡೆ ಆಗುತ್ತೇನೆ . . . . ಈ ಅನುಭವದ ಛಿದ್ರಗಳನ್ನೆಲ್ಲಾ ಒಟ್ಟು ಹಾಕಿ ಒಂದು ವಿಕಾರ ಸ್ವರೂಪವನ್ನು ಮಾಡುತ್ತೇನೆ.[8]

ಎಂದು ದೀರ್ಘಕಾಲದ ಮೌನದಿಂದ ಕೆಲವು ಕ್ಷಣಗಳ ಮಟ್ಟಿಗಾದರೂ ಬಿಡುಗಡೆ ಪಡೆಯಲು ಹವಣಿಸುವ ಶ್ರೀನಿವಾಸ ಬೆಂಬತ್ತಿರುವ ಮೌನಕ್ಕೆ ಕಾರಣಗಳನ್ನು ಸ್ಪಷ್ಟಗೊಳಿಸುತ್ತಾನೆ. ವೈಯಕ್ತಿಕ ಬದುಕಿನ ಭೂತಕಾಲದ ಘಟನೆಗಳಾದ ಅವು ಸಾಮಾಜಿಕ ಸಂದರ್ಭಗಳಲ್ಲಿ ಎಸಗಿದ ತಪ್ಪುಗಳಾಗಿ ಕಾಡುತ್ತವೆ. ಗೆಳೆಯ ಹೇಮಂತನ ಮುಂದೆ ತಪ್ಪೊಪ್ಪಿಗೆಯ ರೂಪದಲ್ಲಿ ಪ್ರಕಟಗೊಳ್ಳುವ ಈ ಕಾರಣಗಳು ಬದುಕಿನ ಅರ್ಥದ ಬಗೆಗೆ ಶ್ರೀನಿವಾಸನ ಹುಡುಕಾಟ ಕಂಡುಕೊಂಡ ಉತ್ತರವಾಗಿದೆ.

ವ್ಯಕ್ತಿಯನ್ನು ಸಂಪೂರ್ಣವಾಗಿ ಅರ್ಥೈಸಿಕೊಳ್ಳಬೇಕಾದರೆ ಆತನ ಬಾಹ್ಯರೂಪಕ್ಕೆ ಸಂಬಂಧಿಸಿದ ವಾಸ್ತವತೆ ಎಷ್ಟು ಪ್ರಾಮುಖ್ಯ ವಹಿಸುತ್ತದೋ ಆತನ ಅಂತರಂಗಕ್ಕೆ ಸಂಬಂಧಿಸಿದ ವಾಸ್ತವತೆಯೂ ಅಷ್ಟೇ ಪ್ರಾಮುಖ್ಯ ವಹಿಸುತ್ತದೆ. ವ್ಯಕ್ತಿಯ ನಿಜವಾದ ಸ್ವರೂಪ ತಿಳಿಯುವುದು ಅವನ ಮನಸ್ಸನ್ನು ಬಗೆದು ಅವನ ಅಂತರಂಗದ, ಅವನ ಪ್ರಜ್ಞೆಯ ವಿವಿಧ ಸ್ತರಗಳನ್ನು ಶೋಧಿಸಿದಾಗ ಮಾತ್ರ ವ್ಯಕ್ತಿಯ ಒಟ್ಟು ಮನಸ್ಸನ್ನು ಸಂಶ್ಲೇಷಣೆಗೊಳಿಸಿ ಅದನ್ನು ಇಡಿಯಾಗಿ ಹಿಡಿದು, ಪೂರ್ಣಸತ್ಯವನ್ನು ತಿಳಿದಾಗ ಆತನ ವ್ಯಕ್ತಿತ್ವದ ಪರಿಚಯವಾಗುತ್ತದೆ. ಬದುಕಿನ ಎಷ್ಟೋ ಸ್ತರಗಳಲ್ಲಿ ಬಲವಂತಕ್ಕೆ ಕಟ್ಟುಬಿದ್ದೋ-ಪ್ರಜ್ಞಾತೀತವಾಗಿಯೋ ಸಂದರ್ಭಗಳಿಗೆ ತತ್ ಕ್ಷಣ ಪ್ರತಿಕ್ರಿಯಿಸಿರುತ್ತಾನೆ.

ತಂದೆಯ ಅಧಿಕಾರಯುತ ನಡವಳಿಕೆಯ ಎದುರಿಗೆ ಅಂತರಂಗದಲ್ಲಿ ಸುಪ್ತವಾಗಿರುವ ಭಾವನೆಗಳನ್ನು ವ್ಯಕ್ತಪಡಿಸಲಾಗದೆ ಮತ್ತು ತನ್ನ ಸರಹದ್ದಿನೊಳಗೆ ಬಂಧಿಸಿರುವ ಹುಲಿಯೂರನ್ನೂ ತೊರೆಯಲಾಗದೆ ಚಡಪಡಿಸುವ ಸೋಮುವಿನ ಸಂಘರ್ಷಕ್ಕೆ ಹುಲಿಯೂರಿನ ನೆತ್ತಿಯ ಮೇಲೆ ಗಿರಗಿರ ಸುತ್ತುತ್ತಿದ್ದ ಗರುಡ ಮತ್ತು ಶೂನ್ಯ ಬಿಲದ ಬಾಯಿಯಿಂದ ಹೊರಬರುವ ಗೆದ್ದಲುಗಳನ್ನು ತಿನ್ನುತ್ತಿರುವ ಕೋಳಿ ಪ್ರತಿಮೆಯಾಗುತ್ತದೆ. ಹೊರ ಜಗತ್ತಿನ ವ್ಯಾಪಾರವನ್ನು ಗಮನಿಸುತ್ತಾ ಸೋಮುವಿನ ಆಲೋಚನೆಗಳು ಸ್ಪಷ್ಟರೂಪ ಪಡೆದುಕೊಳ್ಳುತ್ತವೆ. ಸಂಪ್ರದಾಯ-ಪರಂಪರೆ ವ್ಯಕ್ತಿಯನ್ನು ತನ್ನ ನಿಯಂತ್ರಣದಲ್ಲಿ ಇರಿಸಿಕೊಂಡಿರುವುದನ್ನು ಪ್ರತಿಭಟಿಸುವ ಮಾರ್ಗವಾಗಿ ತಂದೆಯ ಅಣತಿಯನ್ನು ಮೀರುವುದು ಮತ್ತು ಹುಲಿಯೂರಿನ ಪರಿಸರದಿಂದ ಹೊರಹೋಗುವುದು ಹೆಚ್ಚು ಸೂಕ್ತವೆನಿಸುತ್ತದೆ. ಆದರೆ ಅಂದುಕೊಂಡದ್ದನ್ನು ಸಾಧಿಸುವುದಕ್ಕೆ ಮೊದಲೇ ಬಹಿರಂಗದ ವಾಸ್ತವ ಅಂತರಂಗದ ಭಾವನೆಗಳೊಂದಿಗೆ ಘರ್ಷಿಸಿ ಬದಲಾವಣೆ ತರಬೇಕೆನ್ನುವ ಆಶಯವನ್ನು ಸೋಲಿಸಿ ಬಿಡುತ್ತದೆ. ತಂದೆಯ ವಿಜಯ ಧ್ವನಿ ಸ್ವಂತ ಬದುಕಿನ ಕಡೆಗೆ ಮತ್ತೊಮ್ಮೆ ಆಲೋಚಿಸುವುದಕ್ಕೆ ಪ್ರೇರೇಪಣೆ ನೀಡುತ್ತದೆ. ಸೋತು ಶರಣಾಗುವುದಕ್ಕಿಂತ ತನ್ನ ಪೂರ್ವ ಆಶಯವನ್ನು ಗಟ್ಟಿಗೊಳಿಸಿ ಪರಂಪರೆಯನ್ನು, ಮನೆತನವನ್ನು ತ್ಯಜಿಸಿ ಹುಲಿಯೂರಿನ ಸರಹದ್ದನ್ನು ದಾಟಿ ನಡೆದೇ ಬಿಡುತ್ತಾನೆ.

'ಗುಡುಗು ಹೇಳಿದ್ದೇನು?' ಕಥೆಯ ಲಕ್ಕ, ಸೋಮರ ಜೀವನ ನಿರ್ವಹಣೆ ಆಲಸ್ಯ ಸೋಮಾರಿತನದಿಂದಾಗಿ ದುಸ್ತರವಾಗುತ್ತದೆ. ಯಾವುದೇ ಶ್ರಮವಿಲ್ಲದೆ ಹಣಸಂಪಾದನೆ ಆಗುವ ಮಾರ್ಗೋಪಾಯವನ್ನು ಹುಡುಕುತ್ತಿದ್ದವರಿಗೆ ಬಸ್ಸಿನ ಅಪಘಾತಕ್ಕೆ ಸಿಕ್ಕು ಮರಣಿಸಿದ ಮಂಜಪ್ಪನ

ತಂದೆಗೆ ದೊರೆತ ಪರಿಹಾರಧನವು ಮನಸ್ಸಿನಲ್ಲಿ ಅಡಗಿದ್ದ ದುರಾಸೆಯನ್ನು ಬಡಿದೆಬ್ಬಿಸುತ್ತದೆ. ತಮ್ಮನ್ನು ಶ್ರಮದಿಂದ ಸಾಕಿ ಸಲಹಿದ ಅಜ್ಜಿಯನ್ನು ನಿರುಪಯುಕ್ತ ವಸ್ತು ಎಂದು ಭಾವಿಸಿ, ಹಣಸಂಪಾದಿಸುವ ಸುಲಭ ಸಾಧನವಾಗಿ ಬಳಸಿಕೊಳ್ಳಲು ಹವಣಿಸುತ್ತಾರೆ. ಮಿಂಚಿನಂತೆ ಕಾರ್ಯಪ್ರವೃತ್ತರಾದ ಅಣ್ಣತಮ್ಮಂದಿರು ಅಜ್ಜಿಯನ್ನು ಕಾರಿನಡಿಗೆ ಸಿಕ್ಕುವಂತೆ ಮಾಡಿ ಕೊಲೆಗೈಯುತ್ತಾರೆ. 'ತನ್ನ ಶ್ರಮದಿಂದ ಬದುಕನ್ನು ಕಟ್ಟಿ ಬೆಳೆಸಿ, ಮೊಮ್ಮಕ್ಕಳನ್ನು ಸಾಕಿ ಸಲಹಿದ ಅಜ್ಜಿ, ಅವರಿಂದಲೇ ಮರಣವನ್ನಪ್ಪುದು ಮಾನವೀಯ ಮೌಲ್ಯಗಳು ಪತನವನ್ನು ಸೂಚಿಸುವುದರ ಜೊತೆಗೆ, ಮನುಷ್ಯನ ಅಂತರಂಗದ ಕ್ರೌರ್ಯದ ಮುಖಗಳನ್ನು ಪ್ರಸುತ್ತಪಡಿಸುತ್ತದೆ" ಸಾಂದರ್ಭಿಕವಾಗಿ ಒಪ್ಪುವ ಸತ್ಯವಾಗಿದೆ.

ಮಾಯಾಮೃಗ ಕಥೆಯ ಷಾ ಮತ್ತು ನಿರೂಪಕ ಇಬ್ಬರೂ ದೆವ್ವದ ಅಸ್ತಿತ್ವವನ್ನು ಹುಡುಕ ಹೊರಟವರು. ದೆವ್ವದ ಕಲ್ಪನೆ ಆಂತರಿಕವಾಗಿ ಉದ್ಭವಗೊಂಡದ್ದೇ ಅಥವಾ ಬಾಹ್ಯ ವಿಷಯಗಳಿಂದ ಪ್ರಚೋದಿತಗೊಂಡು ಕಲ್ಪಿತವಾದದ್ದೆ ಎಂಬುದನ್ನು ಸ್ಪಷ್ಟಗೊಳಿಸಿಕೊಳ್ಳಲು ಸ್ಮಶಾನಕ್ಕೆ ಹೋಗುತ್ತಾರೆ. ಸ್ಮಶಾನದ ಮೌನದಲ್ಲಿ ತಮ್ಮದೇ ಅಸ್ತಿತ್ವ ಸೃಷ್ಟಿಸುವ ಗೊಂದಲ, ಸಂಶಯವನ್ನು ನಿವಾರಿಸುವ ಬದಲು ಹೆಚ್ಚಿಸುತ್ತದೆ.

ದೆವ್ವವಿರುವುದು ಸ್ಮಶಾನದಲ್ಲಿ ಅಲ್ಲ, ತಮ್ಮ ಮನದಲ್ಲಿ ಎನ್ನುವ ಷಾನ ಮಾತನ್ನು ಅನುಮೋದಿಸುವ ನಿರೂಪಕರಿಗೆ ಅಪರಾತ್ರಿಯಲ್ಲಿ ದೆವ್ವವಿದೆಯೆಂದು ಭ್ರಮಿಸಿದ ಹಲವು ಸಂದರ್ಭಗಳನ್ನು ಷಾ ನಿರೂಪಿಸುತ್ತಾನೆ. ಮನುಷ್ಯನ ಮನಃಶಕ್ತಿಯ ಅಪಾರ ಸಾಧ್ಯತೆಗಳನ್ನೂ ವಿವರಿಸುತ್ತಾನೆ. ಸ್ಮಶಾನದ ನಿಶಬ್ಧತೆಯೊಳಗೆ ಮೂಡಿದ ಬೂದಿಯ ಆಕಾರದೊಳಗಿರುವುದು ನಾಯಿಯೆಂದು ತಿಳಿದಾಗ ಗಾಬರಿ, ದಿಗ್ಭ್ರಾಂತ ಸ್ಥಿತಿಯಿಂದ ಹೊರಬರುತ್ತಾರೆ. ಸ್ಮಶಾನದಿಂದ ಊರಿನ ಬೀದಿಯೊಳಗೆ ಹೊರಟವರಿಗೆ ಮರಳಿ ಮರಳಿ ಬೆನ್ನು ಹತ್ತುವ ನಾಯಿಯೇ ದೆವ್ವವಿರಬಹುದು ಎಂಬ ಸಂಶಯವನ್ನು ಬಿತ್ತುತ್ತದೆ. ಅದೇ ಭಯವಾಗಿ ಇನ್ನೇನೋ ಆಗಿ ಕಾಡತೊಡಗುತ್ತದೆ. ಅವರೇ ಹೇಳುವಂತೆ 'ನಾವು ಆಲೋಚಿಸುವಾಗ ನಾಸ್ತಿಕರೂ ವಿಚಾರವಾದಿಗಳೂ ಆಗಿರುತ್ತಾ, ಕತ್ತಲ ಏಕಾಂತದಲ್ಲಿ ಹೃದ್ಗತ ಭಾವನೆಗಳನ್ನು ಮೆಲುಕುವಾಗ ದೆವ್ವ ಇದ್ದೀತೇನೋ ಎಂಬ ಗುಮಾನಿಯುಳ್ಳ ಪುಕ್ಕಲರಾಗಿದ್ದೆವು' ಎಂದು. ಇದೇ ಭಯ 'ಮಾಯಾಮೃಗ'ವಾಗಿ ಬೆನ್ನಟ್ಟಿ ಸಾವನ್ನು ಹಾದು ಹೋದಾಗ ಯಾವುದೇ ನಿಶ್ಚಿತ ತೀರ್ಮಾನಕ್ಕೂ ಬರಲಾರದೆ ಸಾವಿನ ಭಯದಲ್ಲಿ ಅಲ್ಲಿಂದ ಪಾರಾಗುತ್ತಾರೆ. ಬಹಿರಂಗ ಜಗತ್ತಿನ ಯಾವುದೇ ವಾಸ್ತವ ಪಂಚೇಂದ್ರಿಯಗಳ ಮುಖಾಂತರ ಬುದ್ಧಿಯನ್ನು ತಲುಪಿದರೂ, ಭೌತವಾಸ್ತವ ಅಂತರಂಗದಲ್ಲಿರುವ ವೈಚಾರಿಕತೆಯನ್ನು ಮೌಢ್ಯಕ್ಕೆ ಒಳಪಡಿಸುವಷ್ಟು, ಚಿಂತನೆಯಿಂದ ವಿಮುಖವಾಗಿಸುವಷ್ಟು ಸೂಕ್ಷ್ಮವಾಗಿರುತ್ತದೆ.

ತ್ಯಕ್ತ ಕಥೆಯ ಸೋಮ ಮಾತಿನಲ್ಲಿ ವ್ಯಕ್ತಪಡಿಸಲಾಗದ ಸಂವೇದನೆಗಳು ಮೂರ್ತ ರೂಪ ತಾಳದೆಯೇ ಉಳಿದಾಗ ಆಗುವ ಗೊಂದಲದಿಂದ ಮಾತಿನ ಅಗತ್ಯ, ಮಾತಿನ ಮಿತಿ, ಮಾತು ಮತ್ತು ವಾಸ್ತವಿಕತೆಯ ಸಂಬಂಧ ಭಾಷಾತೀತವಾದದದ್ದನ್ನು ವಿವರಿಸಲಾಗದ ಮಾತು ಇವುಗಳು ಜನರ ಗ್ರಹಿಕೆಯ ಮೇಲೆ ಉಂಟುಮಾಡುವ ಪರಿಣಾಮಗಳನ್ನು ಅವಲೋಕಿಸುತ್ತಾನೆ. ಭಾಷಾತೀತವಾದದ್ದನ್ನು ಮಾತು ವಿವರಿಸಲು ಸಾಧ್ಯವಾದರೆ ಅದು ಮಾತಿನ ಮಿತಿಯ

ಹೊರಗಿನದಲ್ಲ ಎಂದು ತೀರ್ಮಾನಕ್ಕೆ ಬರುತ್ತಾನೆ. ವೈಯಕ್ತಿಕ ಜಿಜ್ಞಾಸೆಯನ್ನು ಸಾಮಾಜಿಕವಾಗಿ ಕ್ರಿಯಾರೂಪಕ್ಕೆ/ಭಾಷಾರೂಪಕ್ಕೆ ತಂದಾಗ ಎದುರುಗೊಂಡ ಸಂದರ್ಭಗಳು ಸೋಮುವನ್ನು ಈ ಗೊಂದಲಕ್ಕೆ ನೂಕುತ್ತದೆ. ಅಂತರಂಗದಲ್ಲಿರುವ ಅಭಿಪ್ರಾಯವನ್ನು ಬಹಿರಂಗಗೊಳಿಸಿದರೆ ಆಗುವ ವಿಪರೀತಾರ್ಥವನ್ನು ಮನಗೊಳ್ಳುವ ಸೋಮುವಿಗೆ ಬದುಕಿಗೆ ಸಂಬಂಧಿಸಿದ ಸತ್ಯಗಳನ್ನು ತಿರುಚುವುದು ಕಹಿಯೆನಿಸುತ್ತದೆ. ಅಂದರೆ ವಾಸ್ತವಗಳನ್ನು ಸುಳ್ಳು ಸೃಷ್ಟಿಗಳಿಂದ ಮುಚ್ಚಿ ಅವಾಸ್ತವಗಳನ್ನು ಸೃಷ್ಟಿಸುವುದು ಸೋಮುವನ್ನು ಜಿಗುಪ್ಸೆಗೊಳಿಸುತ್ತದೆ. ಅಂತರಂಗದ ವರ್ತನೆಗಳು ಬಹಿರಂಗದ ವರ್ತನೆಗಳೊಂದಿಗೆ ತಾಳೆಯಾಗದೆ ವ್ಯಾವಹಾರಿಕವಾಗಿ ಬಳಕೆಯಾಗುವುದು ಸಾಮಾಜಿಕ ಬದುಕಿನ ವೈಪರೀತ್ಯಗಳನ್ನು ದರ್ಶಿಸುತ್ತದೆ.

ಸ್ವಾತಂತ್ರ್ಯಪೂರ್ವ, ಸ್ವಾತಂತ್ರ್ಯಾನಂತರದ ಎರಡೂ ಕಾಲಘಟ್ಟಗಳಲ್ಲಿ ಸರ್ಕಾರಿ ಉದ್ಯೋಗದಲ್ಲಿದ್ದು ಪ್ರಾಮಾಣಿಕತೆ, ನಿಷ್ಠೆಯೇ ಪರಮಧ್ಯೇಯವೆಂದು ನಂಬಿದ್ದಾತ ತಬರ. ಸ್ವಾತಂತ್ರ್ಯಾನಂತರ ಗ್ರಾಮೀಣ ಸಮಾಜ ಕಂಡ ಸಾಮಾಜಿಕ, ರಾಜಕೀಯ ಸ್ಥಿತ್ಯಂತರಗಳಲ್ಲಿ ಅನಾಮಧೇಯ ವ್ಯಕ್ತಿಯಾಗಿ ಪಾಲುದಾರನಾಗಿದ್ದಾತ. ತಾನು ಕಂಡುಂಡ ಅನುಭವಗಳನ್ನು ತನ್ನ ಅರಿವಿಗೆ ಬಂದಂತೆ ಬಿನ್ನವಿಸಿಕೊಂಡ ತಬರನನ್ನು ಸಮಾಜ ಮೂರ್ಖನೆಂದು ಪರಿಗಣಿಸುತ್ತದೆ. ಹೆಂಡತಿಯ ಉಲ್ಬಣಗೊಳ್ಳುತ್ತಿರುವ ಖಾಯಿಲೆಯೊಂದಿಗೆ, ತನ್ನ ಹಕ್ಕುದಾರಿಕೆಯ ಪಿಂಚಣಿಗಾಗಿ ದೀರ್ಘ ಓಡಾಟ ನಡೆಸುವ ತಬರ ಕ್ರಮೇಣ ಮಾನಸಿಕವಾಗಿ ಅಸ್ವಸ್ಥನಾಗುತ್ತಾನೆ. ಆತನ ಅಂತರಂಗದ ವೇದನೆಯಾಗಲಿ, ಬಹಿರಂಗದ ಚರ್ಯೆಯಾಗಲಿ ವ್ಯವಸ್ಥೆಯಲ್ಲಿನ ನಿರ್ಭಾವುಕ, ನಿರ್ಲಕ್ಷ್ಯವನ್ನು ಬದಲಾಯಿಸುವದಿಲ್ಲ. ಬದಲಿಗೆ ಆತನ ಅಂತಸತ್ವ ಕುಸಿಯತೊಡಗುತ್ತದೆ. ವ್ಯವಸ್ಥೆಯ ಈ

> ರೌರವ ನರಕದ ಕಾರ್ಖಾನೆಯನ್ನು ನೋಡಿ ತಬರನ ಕಣ್ಣಿನಿಂದ ತಟ ತಟ ನೀರು ಉರುಳತೊಡಗಿತು. ತನಗಾಗಿ, ತನ್ನ ಹೆಂಡತಿಗಾಗಿ, ತನ್ನಂಥದೇ ಜೀವವಾದ ತಹಶೀಲ್ದಾರನಿಗಾಗಿ, ಜವಾನ ಜವರಾಯನಿಗಾಗಿ ದುಃಖ ಉಮ್ಮಳಿಸಿ ಬಂದಿತು.[೧೦]

ಎಂದೋ ಈ ರೌರವ ನರಕದಲ್ಲಿ ಬಿದ್ದು ತಾನು ಎಂದೋ ತೀರಿಕೊಂಡು ಪ್ರೇತಪ್ರಪಂಚ ಒಂದರಲ್ಲಿ ವ್ಯವಹರಿಸುತ್ತಿದ್ದೇನೆ ಎಂದುಕೊಳ್ಳುವ ತಬರನ ಈ ಸ್ಥಿತಿ ದಾರುಣತೆಗೆ ಸಾಕ್ಷಿಯಾಗಿದೆ. ತಬರ ಮೋಸ ಕಪಟವಿಲ್ಲದ ಮನುಷ್ಯ. ಸಮಾಜದ ನಡವಳಿಕೆಗಳಿಂದ ತನ್ನದಲ್ಲದ ಮತ್ತೊಂದು ಸ್ಥಿತಿಗೆ ಸೇರ್ಪಡೆಯಾಗುವುದು ಬದುಕಿನ ವ್ಯಂಗವಾಗಿದೆ.

ಪೋಸ್ಟ್ ಮಾಸ್ತರ ಹುದ್ದೆಯನ್ನು ಹೆಮ್ಮೆಯಿಂದ ಸ್ವೀಕರಿಸಿದ್ದ ಬೋಬಣ್ಣನಿಗೆ ಅದೇ ಮನಸ್ಸಿನ ಕಿರಿಕಿರಿ ಅಶಾಂತಿಗಳ ತಾಣವಾಗಿ ಬಿಡುತ್ತದೆ ಎಂಬ ಕಲ್ಪನೆಯೂ ಇರಲಿಲ್ಲ. ಆದ್ದರಿಂದಲೇ ತನ್ನಲ್ಲಾದ ವೈಯಕ್ತಿಕ ಬದಲಾವಣೆಗೆ ಕಾರಣ ಅಜೀಜನಿಗೆ ಬಂದ ನಗ್ನಚಿತ್ರವೋ, ಪೋಸ್ಟಾಫೀಸೋ ಎಂಬ ದ್ವಂದ್ವ ಕಾಡುತ್ತದೆ. ಅಜೀಜನಿಗೆ ಬಂದಿದ್ದ ನಗ್ನಚಿತ್ರದ ದೆಸೆಯಿಂದ ಬೋಬಣ್ಣನಲ್ಲಿ ಅಡಗಿದ್ದ ಸಹಜಪ್ರವೃತ್ತಿಗಳು ಜಾಗೃತಗೊಳ್ಳುತ್ತದೆ. ಇದಲ್ಲದೆ ಅಂಚೆಕಛೇರಿಯ ಪತ್ರವ್ಯವಹಾರಗಳಿಂದಾಗಿ ಆತನ ಆಲೋಚನೆಗಳಲ್ಲಿ ಅಪರಿಮಿತವಾದ ವ್ಯತ್ಯಾಸಗಳಾಗುತ್ತವೆ. ಆಂತರ್ಯದಲ್ಲಾದ ಬದಲಾವಣೆಗಳನ್ನು ಎಷ್ಟೇ ಮುಚ್ಚಿಡಲು ಪ್ರಯತ್ನಿಸಿದರೂ ಅದು ಹೆಂಡತಿಯೊಂದಿಗಿನ ಕಾಮಚೇಷ್ಟೆಯ ರೂಪದಲ್ಲೂ, ಕವರಿನೊಳಗೆ ಸುತ್ತಿ ಬಂದುದೆಲ್ಲಾ ನಗ್ನಚಿತ್ರವೇ ಇರಬಹುದೇನೋ ಎಂಬ ಗುಮಾನಿಯಿಂದ ಬಂದವನೆಲ್ಲಾ ತಡಕಾಡುವುದು,

ಅವರಿವರ ಪತ್ರಗಳನ್ನು ಒಡೆದು ಓದುವುದು, ಗುಪ್ತಸಮಾಲೋಚನೆಯಲ್ಲಿ ಪತ್ರ ಬರೆದುಕೊಡುವುದು-ಚರ್ಚಿಸುವುದು ಇತ್ಯಾದಿ ರೂಪದಲ್ಲಿ ಬಹಿರಂಗಗೊಳ್ಳುತ್ತದೆ. ಇದು ಬೋಬಣ್ಣನ ಶಾಂತ ಬದುಕಿನಲ್ಲಿ ಬಿರುಗಾಳಿಯನ್ನು ಎಬ್ಬಿಸುತ್ತದೆ.

ಸ್ವಾರ್ಥ, ದುಷ್ಟತನ ಮತ್ತು ದೌರ್ಬಲ್ಯಗಳ ತಾಕಲಾಟದಲ್ಲಿ ವೃತ್ತಿ ಬದುಕು ಮಾತ್ರ ಪಲ್ಲಟಗೊಳ್ಳದೆ ಆಂತರ್ಯವೂ ಪಲ್ಲಟಗೊಳ್ಳುತ್ತದೆ. ಮಾರಿ, ಮಸಣಿಯರ ಗೊಂಬೆಗಳನ್ನು ಮಾಡುವತ್ತ ಸರಿದ ಜೀವನ ಕ್ರಮ ಅರ್ಥಹೀನ ಕಸುಬುಗಳಿಗೆ ಶರಣಾಗುತ್ತದೆ. ಹಾಗಾಗಿ ಗೌರಿಯ ಸ್ತ್ರೀ ಸೌಂದರ್ಯಕ್ಕೆ ಬರೆ ಇಡುವ ಹಂತಕ್ಕೆ ತನ್ನ ಶಕ್ತಿಯನ್ನು ವಿನಿಯೋಗಿಸಿವುದು ಅಂತರಂಗವೂ ವಿಕೃತಗೊಂಡು ಅವನತಿಯತ್ತ ಸರಿದುದರ ಸೂಚಕವಾಗಿದೆ.

ದಾನಮ್ಮನ ಬಹಿರಂಗದ ಸೌಷ್ಠವದಂತೆಯೇ ಆಕೆಯ ಅಂತರಂಗವೂ ನಿಚ್ಚಳವಾಗಿರುವುದಕ್ಕೆ ಸಾಕ್ಷಿಯಾಗಿ ಬಿರುಗಾಳಿಯ ಹೊಡೆತ ಮತ್ತು ಮರದ ದಿಮ್ಮಿ ಉರುಳುವಿಕೆ ಹಾಗೂ ಪಂಚಾಯಿತಿ ಪ್ರಕರಣದ ಸಂದರ್ಭಗಳನ್ನು ಉದಾಹರಿಸಬಹುದು. ಈ ಸಂದರ್ಭಗಳಲ್ಲಿ ವ್ಯಕ್ತವಾದ ದಾನಮ್ಮನ ಮಾತಿನ ಓಘಕ್ಕೆ ಗಯ್ಯಾಳಿತನದ ಆರೋಪವಿದ್ದರೂ ಆ ಮಾತಿಗೂ ಶಕ್ತಿಯಿದೆ ಎಂದು ಸಾಬೀತಾಗುವುದು ಇವೇ ಸಂದರ್ಭಗಳಲ್ಲಿ. ಗಯ್ಯಾಳಿತನದ ಇಲ್ಲವೆ ಬಜಾರಿಯ ಅಂತಸತ್ವದಲ್ಲಿ ಅಡಗಿರುವ ಗುಣ ಮೇಲ್ನೋಟಕ್ಕೆ ವ್ಯಕ್ತವಾಗದೆ ಹೋದರೂ ನಿರೂಪಿತ ಸಂದರ್ಭಗಳ ಗಯ್ಯಾಳಿತನದೊಂದಿಗೆ ಆಕೆಯ ಸಾತ್ವಿಕ ಸಿಟ್ಟಿನ ಹಿಂದಿರುವ ಧನಾತ್ಮಕ ಮುಖದ ಪರಿಚಯ ಇತರ ಕಿರುಗೂರಿನ ಹೆಂಗಳೆಯರಿಗೆ ಸ್ಫೂರ್ತಿದಾಯಕವಾಗಿ ಸಾಮಾಜಿಕ ಸಂಚಲನೆಗೆ ಕಾರಣವಾಗುತ್ತದೆ.

ಇಲ್ಲಿ ಅಂತರಂಗ-ಬಹಿರಂಗಗಳೆಂಬ ವ್ಯಕ್ತಿತ್ವದ ಎರಡು ಮುಖಗಳಲ್ಲಿ ಹೇಳಲೂ ಆಗದ ಸುಮ್ಮನಿರಲೂ ಆಗದ ಇಬ್ಬಂದಿತನ, ಅಡಕತ್ತರಿಯಲ್ಲಿ ಸಿಕ್ಕಿದಂತಹ ತೊಳಲಾಟವನ್ನು ಕಾಡು ಮತ್ತು ಕ್ರೌರ್ಯದ ಲಿಂಗನಲ್ಲಿ ಕಾಣಬಹುದು. ನಿಶ್ಚಿಂತೆಯಿಂದ ರಾತ್ರಿಯ ಕತ್ತಲಲ್ಲಿ ಕೂರಲೂ ಆಗದ, ಭೀತಿಯಿಂದ ಓಡಿಹೋಗಲೂ ಸಾಧ್ಯವಾಗದ ತೊಳಲಾಟವದು. ಮಾನಸಿಕವಾಗಿ ಪದೇ ಪದೇ ಹಿಂಸೆಯನ್ನೀಯುವ ಕತ್ತಲು, ನಿಶ್ಯಬ್ದ ಹಾಗೂ ವೈಚಿತ್ರ್ಯಗಳ ಒಡಲಾಗಿ ಕಂಡು ಬರುವ ಮಲೆನಾಡೇ ಆತನ ಅಂತರಂಗ-ಬಹಿರಂಗ ಸಂಘರ್ಷಕ್ಕೆ ಕಾರಣ. ವೆಂಕುವಿನ ಮಾತುಗಳನ್ನು ನಂಬಲೂ, ನಂಬದಿರಲೂ ಆಗದ ಸ್ಥಿತಿಯಲ್ಲಿ ಲಿಂಗನಿರಬೇಕಾದಾಗ ಆತನ ಅಂತರಂಗ-ಬಹಿರಂಗಗಳು ತೀವ್ರ ಸಘರ್ಷಕ್ಕೀಡಾಗಿ ಕಂಬಳಿಯನ್ನು ಕೊಡವುವುದೋ ಅಥವಾ ಇನ್ನಾವುದೋ ಕ್ರಿಯೆಯ ಮೂಲಕ ಆ ಸಂಘರ್ಷದಿಂದ ಹೊರಬರುವ ಪ್ರಯತ್ನವನ್ನು ಆತ ಮಾಡುವುದು ಕಾಣಸಿಗುತ್ತದೆ.

> ಕೊಂಚ ಹೊತ್ತಿನಲ್ಲೇ ಶ್ಮಶಾನದ ಮಾವಿನ ಮರ ಮಿಕ್ಕ ಮರಗಳಿಗಿಂತ ಎತ್ತರದಲ್ಲಿ ಇಣುಕಿತು. ತೆಳು ಮಂಜಿನ ಬೆಳ್ದಿಂಗಳ ಮಾಯೆಯಲ್ಲಿ ಅದು ಕೊರೆ ದಾಡೆಯ ಭೂತ ಒಂದು ಕಣ್ಮುಚ್ಚಿಕೊಂಡು ನಗುವಂತೆ ತೋರುತ್ತಿತ್ತು. ಆದರೆ ವೆಂಕುಗೆ ಭಯವಾಗಲೇ ಇಲ್ಲ. ದೈಯ್ಯ ದೇವರು ಯಾರೂ ಇಲ್ಲಿಲ್ಲ! ದೈಯ್ಯ ದೇವರೆಲ್ಲ ನಮ್ಮ ಚಿತ್ತ ಭ್ರಮೆ ಅನ್ನುವ ಗಂಭೀರ ಸಾಕ್ಷಾತ್ಕಾರ ಎಲ್ಲೋ ಅಸ್ಪಷ್ಟವಾಗಿ ಅವನ ವಿವೇಕವನ್ನು ಕುಟುಕುತ್ತಿತ್ತು. ಅದನ್ನೊಮ್ಮೆ ಸಂಪೂರ್ಣವಾಗಿ ಗ್ರಹಿಸಿದ್ದರೆ ಸಾಕಿತ್ತು. ವೆಂಕೂಗೆ ಅರ್ಥವಾಗುತ್ತಿತ್ತು. ಕಲ್ಮನೆಯ ಕರ್ಮದಲ್ಲಿ ತಾನು ಹೊತ್ತೊಯ್ಯ ಬೇಕಾದ ಮೂಟೆಯ ತೂಕ ಎಷ್ಟೆಂದು.[??]

ವೆಂಕುವಿನ ಅಂತರಂಗ ದರ್ಶನವನ್ನು ಕೃತಿಕಾರರು ತೆರೆದಿಟ್ಟ ರೀತಿ ಇದಾಗಿದೆ. ಇನ್ನು ರಂಗಪ್ಪನವರು ಸತ್ತ ನಂತರದ ದಿನಗಳಲ್ಲಿ ಅಕ್ಕಿ ಆರಿಸುವಾಗ ನಳಿನಿ ತನಗರಿವಿಲ್ಲದಂತೆ ಹಾಡಿದ್ದು, ಅದಕ್ಕೆ ಸುಬ್ಬಿಯ ಪ್ರತಿಕ್ರಿಯೆ ನಳಿನಿಯನ್ನು ಸಂಘರ್ಷಕ್ಕೀಡುಮಾಡುತ್ತದೆ. 'ಅವಳಿಗೆ ಅರಿಯಲಾಗದಂಥ ಮಾನಸಿಕ ಗಲಿಬಿಲಿ' ಅಂಥ ಸನ್ನಿವೇಶದಲ್ಲಿ ಅವಳ ಮನಸ್ಸಿನಲ್ಲಿರುವುದೇನನ್ನೂ ಬಹಿರಂಗದಲ್ಲಿ ಅವಳು ತೋರಿಸಿಕೊಳ್ಳಲಾರಳು. ತೋರಿಸಿಕೊಂಡರೂ ತಾನೇನು ಮಾಡಿದೆ, ತಾನು ಮಾಡಿದ್ದು ಸರಿಯೋ ತಪ್ಪೋ ಎಂಬ ಸಂಘರ್ಷ ಅವಳನ್ನು ಕಾಡುತ್ತದೆ. ಸೋಮುವಿನ ಸಾಬ್ಯಸ್ತನ ನಡವಳಿಕೆ ಆತನ ಬಗೆಗೆ ಅನುಮಾನಿಸುವಂತೆ ಮಾಡುತ್ತದೆ.

ವ್ಯಕ್ತಿ ಬೌದ್ಧಿಕವಾಗಿ ಎಷ್ಟೇ ಬೆಳೆದಿದ್ದರೂ, ಬೆಳೆದಿದ್ದೇನೆ ಎಂದುಕೊಂಡರೂ ಹೊರಗಿನ ಸಂದರ್ಭಗಳೊಂದಿಗೆ ಸಂಘರ್ಷವನ್ನು ಎದುರುಗೊಂಡಂತೆ ತನ್ನೊಳಗೇ ಸಂಘರ್ಷಕ್ಕೆ ಎದುರಾಗುತ್ತಲೇ ಇರಬೇಕಾಗುತ್ತದೆ. ಬಹುಶಃ ಬುದ್ಧಿವಂತರೆನಿಸಿಕೊಂಡ ವ್ಯಕ್ತಿಗಳನ್ನು ಚಿಕ್ಕಪುಟ್ಟ ವಿಚಾರಗಳು ಕೆದಕುತ್ತವೆ, ಕೆಣಕುತ್ತವೆ ಮತ್ತೂ ಆಳಕ್ಕಿಳಿಸಿಬಿಡುತ್ತವೆ. ಅಂತಹ ಜನರ ಅಸ್ತಿತ್ವವನ್ನು ತೋರಿಸುವಂತಹವೂ, ಅಲ್ಲಾಡಿಸುವಂತಹವೂ ಇಂತದ್ದೇ ಸಂಘರ್ಷಗಳಿಂದ ಕೂಡಿದ ವಿಚಾರಗಳು. ಈ ಸಂಘರ್ಷಗಳೆಡೆಯಲ್ಲಿ ಸಂಘರ್ಷಿಸುತ್ತಲೇ ಬುದ್ಧಿಗೆ ಸಾಣೆ ಹಿಡಿಯುವ ಬುದ್ಧಿಜೀವಿ ಸಂಘರ್ಷಗಳೆಡೆಯಿಂದ ಹೊರಬರಲಾರದೆ ಒದ್ದಾಡುತ್ತಾನೆ. ಭಾವನಾಜೀವಿಯೊಬ್ಬನಿಗೆ ಬದುಕೇ ಒಂದು ಸಂಘರ್ಷವಾಗಿ ಬಿಡುತ್ತದೆ. ಭಾವನೆಗಳ ಜೊತೆಯಲ್ಲಿ ಹೋರಾಡುತ್ತಲೇ ಬದುಕಬೇಕಾಗುತ್ತದೆ. ಒಂದು ವೇಳೆ ಬದುಕುತ್ತಲೇ ಜೀವನದಲ್ಲಿ ಸಂಘರ್ಷರಹಿತ ಬದುಕನ್ನು ಬದುಕುತ್ತಿದ್ದಾನೆಂದರೆ ಭಾವನೆಗಳ ಜೊತೆ ಸಂಘರ್ಷಿಸುತ್ತಿಲ್ಲವೆಂದರೆ ಆತ ನಿಜವಾಗಿಯೂ ಬುದ್ಧಿಜೀವಿಯಾಗದೆ; ಸ್ಥಿತಪ್ರಜ್ಞ ಎನಿಸಿಕೊಳ್ಳುತ್ತಾನೆ. ವ್ಯಕ್ತಿಯೊಬ್ಬ ತನ್ನ ಭಾವನಾಲೋಕದೆಡೆಯಿಂದ ಸ್ಥಿತಪ್ರಜ್ಞನಾಗಿ ಸ್ಥಿತ್ಯಂತರಗೊಳ್ಳುವುದೇ ದೊಡ್ಡ ಸಂಘರ್ಷ. ಸಂಘರ್ಷಕ್ಕೆ ಮುಂದುಂಟಾಗುವ ಸ್ಥಿತ್ಯಂತರ ಕಾರಣವಾದರೆ ಸ್ಥಿತ್ಯಂತರಕ್ಕೆ ಸಂಘರ್ಷ ಮೂಲ ಕಾರಣ. ಇಂತಹ ಎಲ್ಲಾ ಸ್ಥಿತಿಯನ್ನು ಹಾದು ಸ್ಥಿತಪ್ರಜ್ಞತೆಯತ್ತ ಸಾಗುವುದು ಪ್ರಜ್ಞಾತೀತತೆಗೆ ಸಾಕ್ಷಿಯಾಗುತ್ತದೆ.

ಅಂತರಂಗ-ಬಹಿರಂಗಗಳ ಸಂಘರ್ಷದಲ್ಲಿ ಅಂತರಂಗವೇ ಬಹಿರಂಗವೂ ಆಗಿ ಸ್ಥಿತ್ಯಂತರಗೊಂಡರೆ ಹಾಗೆಯೇ ಬಹಿರಂಗವೂ ಅಂತರಂಗವಾಗಿ ಸ್ಥಿತ್ಯಂತರಗೊಂಡರೆ ಆ ವ್ಯಕ್ತಿ ನಿಸ್ಸಂದೇಹವಾಗಿ ಸ್ಥಿತಪ್ರಜ್ಞನೆನಿಸಿಕೊಳ್ಳುತ್ತಾನೆ. ಇಲ್ಲವಾದಲ್ಲಿ ಬಹಿರಂಗ-ಅಂತರಂಗಗಳೆರಡೂ ಮುಸುಕು ಹೊದ್ದು ಮಲಗಿ ಕೇವಲ ಬಹಿರಂಗದ ಮುಸುಕು ಸರಿದು ಅಂತರಂಗದ ಪರದೆ ಹರಿಯದಿದ್ದಾಗ ಆತ ಭಾವನಾಜೀವಿ ಇಲ್ಲ ಬುದ್ಧಿಜೀವಿ ಎನಿಸಿಕೊಳ್ಳುತ್ತಾನೆ. ಭಾವನಾ ಜೀವಿಗೆ ಆಂತರಿಕ ಸ್ಥಿತ್ಯಂತರಗಳು ಅರಿವಿಗೆ ಬರುವುದಿಲ್ಲ.

ಅಂತರಂಗ-ಬಹಿರಂಗವಾಗಿ, ಬಹಿರಂಗವೇ-ಅಂತರಂಗವಾಗಿ ಮಾರ್ಪಡುವ ಸ್ಥಿತಪ್ರಜ್ಞತೆಯನ್ನು ಹೊಂದಿದ ಲೇಖಕ/ಕೃತಿಕಾರನಿಂದ ಮಾತ್ರವೇ ಈ ಎರಡೂ ಸ್ಥಿತಿಯಿಂದ ಸ್ಥಿತಪ್ರಜ್ಞತೆ ಪಡೆದುಕೊಳ್ಳುವ ಪಾತ್ರ ನಿರ್ಮಾಣ ಸಾಧ್ಯ. ತಬರನ ಮಾನಸಿಕ ಅಸಮತೋಲನದಂತೆಯೇ ಶ್ರೀನಿವಾಸ, ಗೋಪಾಲಯ್ಯ, ಕುಬೇರಪ್ಪ, ಕರ್ವಾಲೊ, ಮಂದಣ್ಣ, ವಿಜ್ಞಾನಿಪಾಟೀಲ ಸುರೇಶ-ಇವರೆಲ್ಲರೂ ಲೋಕದ ಕಣ್ಣಿಗೆ ಅರೆಬರೆ ಹುಚ್ಚರಂತೆ ಕಂಡುಬಂದರೂ

ಸಾಮಾಜಿಕ ಒತ್ತಡಗಳಲ್ಲಿ ಬೆಂದು ಈ ಸ್ಥಿತಿ ತಲುಪಿರುವುದು ಸತ್ಯಕ್ಕೆ ಸಾಕ್ಷಿಯಾಗುತ್ತದೆ. ಹೀಗೆ ಬೇರೆ ಬೇರೆ ಕಥನಗಳಲ್ಲಿನ ಕೆಲವೊಂದು ಪಾತ್ರಗಳು ಮನುಷ್ಯರ ನಿಜ ಸ್ಥಿತಿಯನ್ನು ಬಯಲು ಮಾಡುತ್ತವೆ. ಅಭಿವ್ಯಕ್ತಗೊಂಡಿರುವ ಅಂತರಂಗ ಬಹಿರಂಗಗಳ ಘರ್ಷಣೆಗಳು ಓದುಗರನ್ನು ಚಿಂತನೆಗೆ ಹಚ್ಚುತ್ತವೆ. ಹೆಚ್ಚಿನ ಪಾತ್ರಗಳನ್ನು ಗಮನಿಸಿದಾಗ ಒಬ್ಬನೇ ವ್ಯಕ್ತಿ ಬೇರೆಯಾಗುತ್ತಾ ಆತನ ಸುತ್ತ ಇರುವ ಅನುಭವಗಳೂ ವಿವಿಧ ಆಯಾಮಗಳನ್ನು ಪಡೆದುಕೊಳ್ಳುತ್ತಾ ಸಾಗುತ್ತವೆ. ಬದಲಾವಣೆಯ ಜೊತೆಗೆ ಇರುವ ಸ್ಥಿತಿಯು ಬೇರೆ ರೂಪ ಪಡೆದುಕೊಂಡು ಅರಿವಿಗೆ ಬಾರದೆ ಉಳಿದುಬಿಡುತ್ತದೆ. ಅಂದರೆ ಮನುಷ್ಯರ ಅಂತರಂಗದ ಅಲೋಚನೆಗಳು ಬಹಿರ್ಮುಖವಾಗಿ ಪ್ರಕಟನೆಗೊಳ್ಳುವ ಹೊತ್ತಿಗೆ ಅವುಗಳ ಸ್ವರೂಪವೇ ಬದಲಾಗಿಬಿಟ್ಟಿರುತ್ತದೆ.

## ೩.೧.೨: ಮನೋವೈಜ್ಞಾನಿಕ: ಭಾವನಾತ್ಮಕ ಒರೆಗಲ್ಲು

ಮನುಷ್ಯರು ಹೆಚ್ಚು ವೈಜ್ಞಾನಿಕವಾಗಿ ಇರಲು ಅಪೇಕ್ಷಿಸುತ್ತಾರೆ. ಎಂದರೆ ಅವರ ಆಲೋಚನೆಗಳು, ಕ್ರಿಯೆಗಳು, ನಡೆನುಡಿಗಳೆಲ್ಲವೂ ಬೌದ್ಧಿಕವೂ, ವೈಚಾರಿಕವೂ, ತಾರ್ಕಿಕವೂ ಆಗಿರಬೇಕೆಂದು ಅರ್ಥ. ನಾಗರೀಕತೆಯಿಂದ ಪ್ರೇರಿತನಾದ ಮನುಷ್ಯರು ಇಂಥ ಧೋರಣೆಗೆ ಪಕ್ಕಾಗುವುದು ಸಹಜವೆನಿಸುತ್ತದೆ. ಇನ್ನು ವೈಜ್ಞಾನಿಕವಾಗಿರಬೇಕು, ತರ್ಕಬದ್ಧವಾಗಿರಬೇಕು ಎಂದು ಆಲೋಚಿಸುವವರು ತಮ್ಮ ಭೋಗಾಭಿಲಾಷೆಯನ್ನೂ ಬಿಟ್ಟುಕೊಡಲಾರದವನಾಗುತ್ತಾರೆ. ಭೋಗ-ಭಾಗ್ಯಗಳ ನಡುವೆ ಇವೆಲ್ಲವೂ ತಮ್ಮದಾಗಬೇಕೆಂಬ ಆಶಯ ಎದ್ದು ಕಾಣುತ್ತದೆ. ಏಕೆಂದರೆ ತಮ್ಮ ಆಲೋಚನೆಗಳನ್ನು ವೈಜ್ಞಾನಿಕವಾಗಿ-ತರ್ಕಬದ್ಧವಾಗಿ ಬದಲಾಯಿಸುವ ಹಂತದಲ್ಲಿ ತಮ್ಮ ಜೈವಿಕ ಸಾಧ್ಯತೆಗಳ ಮೇಲೆ ಕಡಿವಾಣ ಹಾಕುವುದಾಗಲಿ ಹೊರಗಿನಿಂದ ಏರ್ಪಡುವ ಅಡ್ಡಿ ಆತಂಕಗಳನ್ನಾಗಲಿ ನಿವಾರಿಸುವ ಮನಸ್ಥಿತಿಯಲ್ಲಿ ಅವರಿರುವುದಿಲ್ಲ.

ಬದುಕು ನಿರಂತರವಾಗಿ ಸಾಗೇ ಇದೆ ಎಂಬ ಭ್ರಮೆಯಲ್ಲೇ ಬದುಕುವ ಮನುಷ್ಯರಿಗೆ ಒಮ್ಮೊಮ್ಮೆ ದೊರೆಯುವ ಅನುಭವದಿಂದ ತಮ್ಮದೇ 'ಸ್ವರೂಪ' ದರ್ಶನವಾಗುತ್ತದೆ. ತಾವು ಅರ್ಥೈಸಿಕೊಂಡ ಜಗತ್ತಿಗಿಂತಲೂ ಭಿನ್ನವಾದ ಜಗತ್ತೊಂದಿದೆಯೆಂಬ ಅರಿವು ಮೂಡುತ್ತದೆ. ತಾವಿದ್ದ ಭ್ರಮಾತ್ಮಕ ಜಗತ್ತಿಗೂ ತಾವು ಕಂಡ ಭಿನ್ನ ಜಗತ್ತಿಗೂ ಮಧ್ಯೆ ಬೌದ್ಧಿಕ ಸಂಘರ್ಷಕ್ಕೊಳಗಾಗುವುದು ನಡೆದೇ ಇರುತ್ತದೆ. ಒಪ್ಪಿತ ಬದುಕಿಗೆ ತೆರೆದುಕೊಂಡಿರುವ ಮನುಷ್ಯರಿಗೆ ಆ ಸ್ಥಿತಿಯಿಂದ ಹೊರಬರುವುದು ಸುಲಭ ಸಾಧ್ಯವಲ್ಲ. ತಾವಿರುವ ಸ್ಥಿತಿಗೆ ತಾವೇ ಕಾರಣರೆಂಬ ಒಳ ಅರಿವಿದ್ದರೂ ಮೇಲುನೋಟಕ್ಕೆ ಸಮಾಜವೇ ಕಾರಣವೆಂಬ ಆರೋಪ ಪಟ್ಟಿ ಸದಾ ಸಿದ್ಧವಾಗಿಯೇ ಇರುತ್ತದೆ. ತಮ್ಮ ಚಿಂತನೆಗಳೆಲ್ಲ ಇತರರಿಗಿಂತ ಭಿನ್ನ-ಅಸಾದೃಶವೆಂಬ ಭ್ರಮೆಯಲ್ಲೆ ಬದುಕುವವರಿಗೆ ಭ್ರಮನಿರಸನವಾಗುವುದು ಸತ್ಯಕ್ಕೆ ಮುಖಾ-ಮುಖಿಯಾದಾಗ ಮಾತ್ರ. ಸತ್ಯ ಎಂದರೆ ವಾಸ್ತವ. ವಸ್ತುಸ್ಥಿತಿ ಹೀಗೆ ಇರುತ್ತದೆಯೆಂಬ ನಂಬಿಕೆಯಾಗಲಿ, ಹೀಗೆ ಇರಬಹುದು ಎಂಬ ಕಲ್ಪನೆಗಾಗಲೀ, ನಿಲುಕದೇ ಇರುವಂತಹುದು. ಇವೆಲ್ಲಾ ಬದುಕಿನ ಹಲವು ಹಂತಗಳು. ಈ ಹಲವು ಹಂತಗಳಲ್ಲಿ ಪಡೆದುಕೊಳ್ಳುವ ಅನುಭವ ವಿಭಿನ್ನವಾಗಿರುತ್ತದೆ. ಅವೇ ಅನುಭವಗಳು ತಾನಿದ್ದ ಸ್ಥಿತಿಗೆ ವ್ಯತಿರಿಕ್ತವಾದಾಗ ಅದನ್ನು ಎದುರಿಸುವ ಮನಸ್ಥಿತಿ ಒಂದೇ ರೀತಿಯಾಗಿರುವುದಿಲ್ಲ.

ಅನೇಕ ದಿನಗಳಿಂದ ನನ್ನನ್ನು ಬೆಂಬತ್ತುತ್ತಿರುವ ಮೌನದಿಂದ ಕೆಲವು ಕ್ಷಣಗಳಾದರೂ ಬಿಡುಗಡೆ ಆಗುತ್ತೇನೆ....... ಈ ಅನುಭವದ ಛಿದ್ರಗಳನ್ನೆಲ್ಲ ಒಟ್ಟು ಹಾಕಿ ಒಂದು ವಿಕಾರ ಸ್ವರೂಪವನ್ನು ಮಾಡುತ್ತೇನೆ ಎಂದು ದೀರ್ಘಕಾಲದ ಮಹಾಮೌನದಿಂದ ಹೊರಬರಲು ಚಡಪಡಿಸುವ ಮಾತುಗಾರನಾದ ಶ್ರೀನಿವಾಸ ಮಾನಸಿಕ ದಾಸ್ಯಕ್ಕೆ ಒಳಗಾದವನು. ತನ್ನನ್ನು ತಾನು ಅರ್ಥೈಸಿಕೊಳ್ಳಲಾಗದ ಸಂಕಟದಲ್ಲೇ ತನ್ನನ್ನು ಬೆಂಬತ್ತಿರುವ ಮೌನಕ್ಕೆ ಕೊಡುವ ಕಾರಣಗಳು ಭೂತಕಾಲದೊಳಗೆ ಹುದುಗಿ ಹೋಗಿದ್ದ ಅಪರಿಪಕ್ವ ಅನುಭವಗಳು. ಅವು ಯಾವುದೋ ಆದರ್ಶ ಬದುಕಿನ ಬೆನ್ನುಹತ್ತಿ ಗಳಿಸಿದಂತಹವು. ತಾನು ಗಳಿಸಿದ ಆದರ್ಶಗಳಾದರೂ ಎಂತಹವು ಎಂದು ತಾನೇ ನಿಶ್ಚಯಿಸಲಾಗದ ತೊಳಲಾಟ. ತಾನು ಶಿಕ್ಷಣದಿಂದ ಪಡೆದ ಜ್ಞಾನ ವಿವೇಕಗಳು, ರೂಪಿತಗೊಂಡ ಸಿದ್ಧಾಂತಗಳು, ಪ್ರಭಾವಿಸಿದ ಮಾದರಿಗಳು ಸೀಮಿತ ಮಟ್ಟದಲ್ಲಿ ಅರ್ಥ

ಕಳೆದುಕೊಂಡಾಗ ಅನುಭವಗಳಿಂದ ಪಡೆದ ಜ್ಞಾನವೂ ಪರಿಸರದ ಎದುರು ತಲೆತಗ್ಗಿಸಿದಾಗ ಆಘಾತವಾಗುತ್ತದೆ.

ಆಧುನಿಕ ತೆಕ್ಕೆಯೊಳಗೆ ಸಿಲುಕಿ ಮಾನಸಿಕ ನೆಮ್ಮದಿಯನ್ನು ಕಳೆದುಕೊಂಡು ವರ್ತಮಾನದ ಬದುಕಿಗೆ ಸ್ಪಂದಿಸುವ ಸಮಯದಲ್ಲಿ ಗೊಂದಲಕ್ಕೀಡಾಗುವ, ಅರ್ಥೈಸಿಕೊಳ್ಳಲಾರದೆ ನರಳುವ, ಕುತೂಹಲದಿಂದ ಪರಿವೀಕ್ಷಿಸಹೊರಟು ಅಪಹಾಸ್ಯಕ್ಕೆ ಒಳಗಾಗುವ, ಇವೆಲ್ಲವುಗಳ ಮಧ್ಯೆ ಕಳೆದುಕೊಳ್ಳುತ್ತಿರುವ ವ್ಯಕ್ತಿತ್ವದ ವಿಶಿಷ್ಟತೆಗಳು ಒಂದಕ್ಕೊಂದು ಸೆಣಸಾಡುತ್ತಿರುವ ಚಿತ್ರಗಳು ತೇಜಸ್ವಿ ಕಥನಗಳಲ್ಲಿ ಗೋಚರವಾಗುತ್ತವೆ.

ಗುರುಗಳ್ಳಿಯಲ್ಲಿನ ಅನೇಕರು ಆಧುನಿಕತೆಯತ್ತ ತೆರೆದುಕೊಂಡವರು. ನಗರ ಜೀವನ ಶೈಲಿಯನ್ನು ತಮ್ಮಲ್ಲಿಯೂ ಅಳವಡಿಸಿಕೊಳ್ಳಲು ಪ್ರಯತ್ನಪಟ್ಟವರು. ಆದರೆ ಅದರಲ್ಲಿ ಎಷ್ಟರ ಮಟ್ಟಿಗೆ ಯಶಸ್ಸು ಪಡೆದರು ಎನ್ನುವುದು ಅಸ್ಪಷ್ಟ. ನಗರ ಜೀವನದ ನಯ-ನಾಜೂಕು ಸೂಕ್ಷ್ಮತೆಯನ್ನು ರೂಢಿಸಿಕೊಳ್ಳ ಹೊರಟಾಗ ಸಹಜ ಪ್ರವೃತ್ತಿಯಿಂದ ಹಿಂದೆಗೆಯಲಾಗದೆ ಮಾನಸಿಕ ಘರ್ಷಣೆಗೊಳಗಾಗಿ ಕೌಟುಂಬಿಕ ಮತ್ತು ಸಮೂಹದ ಸ್ಥಿರತೆಯನ್ನು ಪಲ್ಲಟಿಸುವ ಹಂತಕ್ಕೆ ಸರಿದುಬಿಡುವುದು ವಿಪರ್ಯಾಸವೆನಿಸುತ್ತದೆ. ಗುರುಗಳ್ಳಿಯ ದರ್ಜಿಯಾದ ತುಕ್ಕೋಜಿಯ ಜೀವನದಲ್ಲಿ ಎದುರಾದ ಹೊಸ ಹೊಸ ಸಮಸ್ಯೆಗಳಿಂದಾಗಿ ಆತನ ಚಿತ್ತ ಸ್ವಾಸ್ಥ್ಯ ಕೆಡುತ್ತದೆ. ಇದಕ್ಕೆ ಆತನ ವೈಯಕ್ತಿಕ ಜೀವನದ ಸಿಕ್ಕುಗಳೂ ಕಾರಣವಾಗುತ್ತದೆ. ನಾಗರಿಕತೆಯಿಂದ ತಮ್ಮ ಮನೆಯ ಎದುರೇ ರೈಲು ರಸ್ತೆ ಎಂಜನಿಯರಿಂಗ್ ಸಿಬ್ಬಂದಿಯವರು ಬಂದಿದ್ದರು. ದಿನವೂ ಸಾಯಂಕಾಲ ಬಣ್ಣ ಬಣ್ಣದ ಬಟ್ಟೆಗಳನ್ನು ತೊಟ್ಟು ಜೋಡಿ ಜೋಡಿಯಾಗಿ ವಿರಾಮವಾಗಿ ವಾಕಿಂಗ್ ಹೋಗುವುದನ್ನು ಸರೋಜ ನೋಡಿದ್ದಳು. ಅವಳಿಗೆ ಈ ದುಡಿಯುವ ಬದುಕಿನ ಬಗ್ಗೆ ರೇಜಿಗೆಯಾಗತೊಡಗಿತು; ಇದರ ಕಾರಣವಾಗಿ ತುಕ್ಕೋಜಿಯ ಹೊಲಿಗೆ ಕಾರ್ಯಗಳಲ್ಲಿ ಸಹಕಾರ ನೀಡುತ್ತಿದ್ದವಳು ಮಗುವಿನ ಪಾಲನೆಯ ನೆಪ ಹೂಡಿ ಅಸಹಕಾರ ಚಳುವಳಿಗೆ ಮುಂದಾದಳು. ಕುತ್ತಿಗೆಯ ಕಾಲರನ್ನು ಹೊಲಿಯುವುದರಲ್ಲಿ ಅದ್ವಿತೀಯ ನೈಪುಣ್ಯವನ್ನು ಪ್ರದರ್ಶಿಸುತ್ತಿದ್ದ ತುಕ್ಕೋಜಿಯ ಅಂಗಿ ಕಾಲರುಗಳು ಈಗ ಹಿಂದುಗಡೆ ಛತ್ರಿ ನೇತು ಹಾಕಿರುವಂತೆ ಜೋಲುತ್ತಿದ್ದವು. ಹೀಗೆ 'ತುಕ್ಕೋಜಿಯ ಸ್ವಾಸ್ಥ್ಯ ಕೆಡಲು ಹೋಗಿ ಅವನು ಇಡೀ ಗುರುಗಳ್ಳಿಯ ಪೇಟೆಯ ಶೀವಿಯನ್ನೇ ಅಗೋಚರವಾಗಿ ಕೆಡಿಸತೊಡಗಿದನು' ಎನ್ನುವುದು ಆತನ ಅಸ್ವಾಸ್ಥ್ಯಯುತ ಬದುಕು ತನ್ನ ಸುತ್ತಣ ವಾತಾವರಣದ ಮೇಲೆ ಬೀರುವ ಪರಿಣಾಮವು ಮತ್ತೊಂದು ತಿರುವನ್ನು ಪಡೆದುಕೊಳ್ಳುವುದನ್ನು ಸೂಚಿಸುತ್ತದೆ.

ಮೇಲುನೋಟಕ್ಕೆ ಸದಾ ಒಳ್ಳೆಯದನ್ನು ಮಾಡುತ್ತೇನೆನ್ನುವ ಸೂರಾಚಾರಿ ವ್ಯಾವಹಾರಿಕ ಚಾಣಾಕ್ಷತೆ ಹೊಂದಿದವ. ವೃತ್ತಿ ಬದುಕನ್ನು ಒತ್ತಾಯಕ್ಕೆ ಕಟ್ಟುಬಿದ್ದು ಆರಿಸಿಕೊಳ್ಳುವಂತಾದಾಗ ಆತನಲ್ಲಡಗಿದ ಕಲಾಪ್ರೌಢಿಮೆ ನಾಶಹೊಂದಿದಂತೆಯೇ! ಅದು ಒಟ್ಟಿನಲ್ಲಿ ಮಾನಸಿಕ ಆಘಾತ. ಸೀಮಿತ ಬದುಕಿಗೆ ಹೊಂದಿಕೊಳ್ಳಲು ಯತ್ನಿಸಿದಂತೆಲ್ಲಾ ಆರ್ಥಿಕ ದುರ್ಬಲತೆ ಮತ್ತು ಹೆಂಡತಿಯ ಅನಾರೋಗ್ಯದಿಂದ ಛಿದ್ರಗೊಂಡ ಬದುಕು ಮರುಸ್ಥಾಪನೆಯಾಗುವಲ್ಲಿ ವಿಫಲಗೊಳ್ಳುತ್ತದೆ. ಏಕೆಂದರೆ ಜನ್ಮಜಾತ ಕಲೆಯನ್ನು ಮರೆಮಾಡಿ ಹೊಸ ವಿಚಾರಗಳಿಗೆ ಸ್ಪಂದಿಸುವಾಗ ದಂದ್ವಯುಕ್ತ ಸ್ವೀಕರಣ ಮತ್ತು ನಿಷೇಧ ಮನೋಭಾವಗಳು ವಿನೋವಿಕಾರಗಳಾಗಿ ಪರಿವರ್ತಿತವಾಗುತ್ತದೆ.

ಹದಗೆಟ್ಟ ಮನಸ್ಥಿತಿಯಿಂದ ಹೊರಬರುವ ಸಂಗತಿಗಳು ಪರೋಕ್ಷವಾಗಿ ಸಮಾಜವನ್ನು ಹಾಳುಗೆಡವುತ್ತವೆ. ಸೂರಾಚಾರಿ ಇಂತಹುದೇ ವಿಕ್ಷಿಪ್ತ ಮನಸ್ಥಿತಿಯವನು. ಆತನ ಮನೋಭಿತ್ತಿಯ ಹಿಂದೆ ಮರೆಯಾಗಿರುವ ನೋವು, ಅತೃಪ್ತ ಬಯಕೆ ತನ್ನದಲ್ಲದ ಮತ್ತೊಂದು ಸೌಂದರ್ಯ [ಕಲೆ ಸೌಂದರ್ಯದ ಪ್ರತೀಕ] ವನ್ನು ಹಾಳುಗೆಡುವುದಕ್ಕೆ ಹಾತೊರೆಯುವುದು ಅಸೂಯೆಯ ಹಿಂದೆ ಅಡಗಿರುವ ಕ್ರೌರ್ಯವೇ ಸರಿ.

ಜೀವಪರಿಸರ ಮತ್ತು ಮನುಷ್ಯ ಇವುಗಳ ಸಂಬಂಧಗಳ ವಿನ್ಯಾಸ 'ಗಾಂಧೀಜಿ ದೆಸೆಯಿಂದ' ಕಥೆಯಲ್ಲಡಗಿದೆ. ಹುಷಾರಿಲ್ಲದ ತಂದೆಗೆಂದು ತೀರ್ಥಹಳ್ಳಿಯಿಂದ ಔಷಧಿಯನ್ನು ತರುವುದಕ್ಕಾಗಿ ತಿರ್ಥಹಳ್ಳಿಗೆ ಹೊರಟ ಮೋನಿಗೆ ತಾನು ತನ್ನ ತಂದೆಗೆ ಹೇಳಿದ್ದ ಸುಳ್ಳುಗಳಿಂದಾಗಿ ಮಾನಸಿಕ ಹೊಯ್ದಾಟ ಶುರುವಾಗುತ್ತದೆ. ಪೆನ್ಸಿಲನ್ನು ಸಿದ್ಧನಿಗೆ ಕೊಟ್ಟು ಕಳೆದುಹೋಯಿತೆಂದು ಸುಳ್ಳು ಹೇಳುವುದಾಗಲಿ, ಶಾಲೆಗೆ ಚಕ್ಕರ್ ಹಾಕಿ ಬೀಡಿ ಸೇದುವುದು, ಮಾಂಸ ಮಧ್ಯ ಸೇವನೆಗಳೆಲ್ಲವೂ ತನ್ನಿಂದಾದ ಪ್ರಮಾದಗಳೆಂದು ಬಗೆಯುತ್ತಾನೆ. ಗಾಂಧೀಜಿಯ ಬದುಕು ಆದರ್ಶವಾಗಿದ್ದರಿಂದ ಇಂತಹ ತಲ್ಲಣಕ್ಕೆ ಒಳಗಾಗುವುದು. ಗಾಂಧಿಯಂತೆ ತಾನು ತಪ್ಪೊಪ್ಪಿಕೊಂಡರೆ ಇದರಿಂದ ಬಿಡುಗಡೆ ದೊರೆಯುತ್ತದೆ ಎಂಬ ಎಣಿಕೆ ಸುಳ್ಳಾಗುತ್ತದೆ. ಗಾಂಧಿತತ್ವದ ಆದರ್ಶ ಪರಿಪಾಲನೆಯು ಧೈರ್ಯವಾಗಿ ಸತ್ಯವನ್ನು ಹೇಳುವುದಕ್ಕೆ ಪ್ರೇರೇಪಿಸುತ್ತದೆ. ನಿಜಹೇಳಿಯೂ ಕಟುಟೀಕೆಗೆ ಒಳಗಾಗುವುದು ಬಾಲ್ಯಕಾಲದ ಸಂವೇದನೆಗಳಿಗೆ ಹೊಸ ರೂಪ ಕೊಡುತ್ತದೆ.

ಹೊರಗಿನ ಆಮಿಷಗಳು ಮತ್ತು ಒಳಗಿನ ಸಂವೇದನೆಗಳು ಏರಡೂ ಏಕಕಾಲಕ್ಕೆ ಘರ್ಷಿಸುವ ಸಂದರ್ಭದಲ್ಲಿ ಆಲೋಚನೆಗಳೂ ಕೂಡಾ ತೀವ್ರ ತಿಕ್ಕಾಟವನ್ನು ಹೊಂದಿ ಇಬ್ಬಂದಿತನಕ್ಕೆ ಒಳಗಾಗುತ್ತದೆ. ಒಂದರ್ಥದಲ್ಲಿ ಇಬ್ಬಗೆ ನೀತಿಯ ಅನುಸರಣೆ. ಬೌದ್ಧಿಕ ಪ್ರವೃತ್ತಿಗಳಿಗೆ ಸಂಬಂಧಿಸಿದ ಅಲೋಚನೆಗಳಿಗೆ ಒಳಗಾದ ವರ್ತನೆ ಒಂದು ಬಗೆಯಾದರೆ, ಭಾವನಾತ್ಮಕ ಆಲೋಚನೆಗಳಿಗೆ ಈಡಾಗಿ ಸ್ವಾರ್ಥದಿಂದ ವರ್ತಿಸುವುದು ಮತ್ತೊಂದು ಬಗೆಯಾಗಿರುತ್ತದೆ. ಭಾವನಾತ್ಮಕ ಆಲೋಚನೆಗಳು ಬೌದ್ಧಿಕ ಆಲೋಚನೆಗೆ ಕಡಿವಾಣವನ್ನು ಹಾಕುತ್ತಾ ಮೇಲುಗೈ ಸಾಧಿಸುತ್ತವೆ. ಭಾವನೆ ಮತ್ತು ಬೌದ್ಧಿಕ ಇವೆರಡರ ತಿಕ್ಕಾಟದಿಂದ ಮೂಲ ಪ್ರವೃತ್ತಿಗಳಿಗೆ ಸಂಬಂಧಿಸಿದಂತೆ ಬೇರೆಯೇ ಆಗಿಯೇ ವರ್ತಿಸುವಂತಾಗುತ್ತದೆ. ಎಂದರೆ ಆಲೋಚನೆಯಲ್ಲೊಂದು, ಭಾವನೆಯಲ್ಲೊಂದು. ಚಿಂತನೆ ಬೇರೆ ಕೃತಿಯೇ ಬೇರೆ. ಆತ್ಮಕ್ಕೊಂದು ದೇಹಕ್ಕೊಂದು ಎಂಬಂತೆ ಸಮಯೋಚಿತವಾಗಿ ವರ್ತಿಸುತ್ತಾ ಸಾಮಾಜಿಕ ಸ್ಥಾನಮಾನ ಗಳಿಸಿಕೊಳ್ಳುವಲ್ಲಿ ಯಶಸ್ಸನ್ನು ಪಡೆಯುತ್ತದೆ. ಇದೇ ಅಧಿಕಾರದ, ಸ್ವಪ್ರತಿಷ್ಠೆಯ ವಿಷಯವಾಗಿ ಮಾರ್ಪಾಡಾಗುತ್ತದೆ. ಎಷ್ಟೆಂದರೂ ಹೊರ ಅಲೋಚನೆ ಮತ್ತು ಒಳ ಆಲೋಚನೆಗಳು ಸ್ವತಂತ್ರವಾಗಿ ವ್ಯವಹರಿಸಲು ಬಿಡುವುದಿಲ್ಲ. ಪ್ರಯತ್ನ ಪಟ್ಟರೂ ಇಬ್ಬಗೆಯ ಠಕ್ಕುತನದಿಂದ ದೇಹ ಮತ್ತು ಆತ್ಮ ಕೃತಕ ವಿಭಜನೆಗೆ ಒಳಗಾಗುತ್ತವೆ. ಇದರ ಅರಿವು ವ್ಯಕ್ತಿಗೆ ಇರದೇ ಹೋದ ಪಕ್ಷದಲ್ಲಿ ದ್ವಿಮುಖ ನೀತಿ ನಿರಂತರ ಚಾಲನೆಯಲ್ಲಿರುತ್ತದೆ. ಅರಿವು ಇದ್ದದ್ದೇ ಆದರೆ ಮಾನಸಿಕ ಸಂಘರ್ಷಕ್ಕೆ ಒಳಗಾಗಿ ದ್ವಂದ್ವದಿಂದ ಹೊರಗೆ ಬರುವ ಪ್ರಯತ್ನ ನಿರಂತರವಿರುತ್ತದೆ. ಪ್ರಯತ್ನ ಕೈಗೂಡದೆ ಹೋದಾಗ ಆಕ್ರೋಶದಿಂದ, ಅಸಹಾಯಕತೆಯಿಂದ ಎಲ್ಲವನ್ನೂ ತೊಡೆದು ಹಾಕಲು

ಪ್ರಯತ್ನಿಸುತ್ತದೆ. ಈ ಕ್ರಿಯೆಗಳಿಂದಲೂ ಪ್ರಕ್ಷುಬ್ಧಗೊಂಡ ಮನಸ್ಸು ಸ್ಥಿಮಿತಕ್ಕೆ ಬಾರದೆ ಹೋದರೆ ತಾನಿದ್ದ ಪರಿಸ್ಥಿತಿಯಿಂದ ಪಲಾಯನ ಮಾಡಲು ಪ್ರೇರೇಪಿಸುತ್ತದೆ.

ಬೋಬಣ್ಣನ ವ್ಯಕ್ತಿತ್ವ ಇನ್ನೂ ಮುಗ್ಧಸ್ಥಿತಿಯಿಂದ ಹೊರಬಂದಿಲ್ಲವಾದ್ದರಿಂದ ಅಂಚೆಯಲ್ಲಿ ಬಂದ ಹೆಣ್ಣಿನ ನಗ್ನ ಚಿತ್ರವನ್ನು ಹಿಂದುರಿಗಿಸಿದರೆ ಏನೆಂದುಕೊಳ್ಳುವರೊ ಎಂಬ ಭಾವಕ್ಕಿಂತ, ಸುಪ್ತಕಾಮನೆಗಳನ್ನು ಗರಿಗೆದರಿಸುವ ಅದನ್ನು, ಹಿಂದಿರುಗಿಸಲೂ ಆಗದ ದೌರ್ಬಲ್ಯದಲ್ಲಿ ಅದು ಅವನ ಬಳಿಯೇ ಉಳಿದು ಬಿಡುತ್ತದೆ. ಬೋಬಣ್ಣನ ಮನೋಭಾವನೆಯಲ್ಲಾಗುವ ಮಾರ್ಪಾಟು ಕ್ರಮೇಣ ಅಂಚೆಕಛೇರಿಯ ವಾತವರಣವನ್ನೇ ಬದಲಾಯಿಸಿಬಿಡುತ್ತದೆ. ಅಜ್ಞಾನವೋ-ಪೆದ್ದುತನವೋ ಅಬಚೂರಿನ ಅಂಚೆಕಛೇರಿಯ ವ್ಯವಹಾರಗಳನ್ನು ಸೂಕ್ಷ್ಮಸ್ತರದಲ್ಲಿ ಅರ್ಥೈಸಿಕೊಳ್ಳಲಾಗದೆ, ಕೌಟುಂಬಿಕ ಅಶಾಂತಿ ಮತ್ತು ಸಾಮಾಜಿಕ ಅಶಾಂತಿಗೆ ಪರೋಕ್ಷ ಕಾರಣವಾಗಿ ಮನಸ್ಸು ಕ್ಷುಬ್ದಗೊಂಡು ಅತ್ತೆ ಮತ್ತು ಹೆಂಡತಿ ಅಸಹನೆಯ ನಡವಳಿಕೆಯನ್ನು, ಸಮಾಜದ ಅಮಾನವೀಯ ಬೆಳವಣಿಗೆಯನ್ನು ಏಕಕಾಲಕ್ಕೆ ತಿರಸ್ಕರಿಸುತ್ತದೆ.

ಸ್ವಾತಂತ್ರ್ಯಪೂರ್ವ ಮತ್ತು ಸ್ವಾತಂತ್ರ್ಯೋತ್ತರ ಕಾಲಘಟ್ಟದ ಸ್ಥಿತ್ಯಂತಗಳನ್ನು ತನ್ನ ಸೀಮಿತ ಆವರಣದಲ್ಲೇ ಗುರುತಿಸಿಕೊಳ್ಳುವ ತಬರನಿಗೆ ತನ್ನದೇ ವೈಯಕ್ತಿಕ ಸಮಸ್ಯೆಗಳು ಇರುವ ನೆಮ್ಮದಿಯುತ ಬದುಕನ್ನೂ ಕಸಿದುಕೊಂಡು ಬಿಡುತ್ತದೆ. ಅಮಾಯಕನಾದ ತಬರನ ವ್ಯಾವಹಾರಿಕ ಚಾತುರ್ಯದ ಕೊರತೆಯಿಂದಾಗಿ ಭರಿಸಲಾಗದ ಸಮಸ್ಯೆಗಳನ್ನು ಮೈಮೇಲೆ ಎಳೆದುಕೊಂಡಂತಾಗುತ್ತದೆ. ಇದರ ಜೊತೆಗೆ ಹೆಂಡತಿ ಅಪ್ಪಿಯ ಅನಾರೋಗ್ಯ. ಅದನ್ನು ಗುಣಪಡಿಸಲು ಅವಶ್ಯಕವಾದ ಹಣ ಜೋಡಣೆಗಾಗಿ ಆತ ಪಡುವ ಪರಿಪಾಟಲು, ಸಮಸ್ಯೆಗಳನ್ನು ಮತ್ತಷ್ಟು ಬಿಗಡಾಯಿಸುತ್ತದೆ.

ಮನೋವೈಜ್ಞಾನಿಕ ವಿಶ್ಲೇಷಣೆಗಳ ಜೊತೆಗೆ ಬೆಳೆಯುತ್ತಿರುವ ಮಕ್ಕಳ ಮುಗ್ಧ ಮನಸ್ಸುಗಳು ಪ್ರಶ್ನೆಗಳನ್ನೆತ್ತಿರುವುದನ್ನು ಗಾಂಧೀಜಿದೆಸೆಯಿಂದ, ರಹಸ್ಯ ವಿಶ್ವ ಕಥೆಗಳಂತೆ ಲಿಂಗಬಂದ ಕಥೆಯಲ್ಲಿಯೂ ಕಾಣುತ್ತೇವೆ. ಅಲ್ಲಿ ಆ ಮಕ್ಕಳಿಗೆ 'ಸದಾನಂದ ಹೇಗೆ ಹುಟ್ಟಿದ? ಆತ ಬೆಳೆಯುವನೇ ಇತ್ಯಾದಿ ಪ್ರಶ್ನೆಗಳಿರುತ್ತವೆ. ಬಾಲ್ಯದಿಂದ ಯೌವನಕ್ಕೆ ಸ್ಥಿತ್ಯಂತರಗೊಳ್ಳುತ್ತಿರುವ ದೇಹ ಹಾಗೂ ಅದಕ್ಕಣಿಯಾಗದ ಬಾಲ್ಯ ಸಹಜ ಮುಗ್ಧ ಪ್ರಶ್ನೆಗಳೆ ಈ ಮೂರು ಕಥೆಯಲ್ಲೂ ಧ್ವನಿತವಾಗಿವೆ. ಲಿಂಗಬಂದ, ರಹಸ್ಯ ವಿಶ್ವ, ಮಾಯಾಮೃಗ ಇವು ಮನುಷ್ಯ ಸಿಕ್ಕಿಹಾಕಿಕೊಂಡಿರುವ ಭಯದ ವಾತಾವರಣವನ್ನು ನಿರೂಪಿಸುತ್ತವೆ. ಭಯದ ಪ್ರಮುಖ ಭಾಗವಾಗಿ ರೂಪುಗೊಳ್ಳುವ ಕಲ್ಪನೆಗಳು ಭಯದ ಆವರಣವನ್ನು ದಟ್ಟಗೊಳಿಸುತ್ತವೆ. ವಿಸ್ಮಯಗಳ ಆಗರವಾದ ಕಲ್ಪನೆಗಳಿಗೆ ಮತ್ತೊಂದು ಸಾಧ್ಯತೆಯನ್ನು ನಿರ್ಮಾಣ ಮಾಡುವ ಶಕ್ತಿಯಿದ್ದರೂ ಸಾಂದರ್ಭಿಕವಾದ ವ್ಯತ್ಯಯಗಳಿಂದ ಕುಂಠಿತಗೊಳ್ಳುತ್ತದೆ.

ಸೂರಾಚಾರಿ, ಸುಬ್ಬಯ್ಯ ಗೌರಿಯ ಮಕ್ಕಳು ಬದುಕಿ ಉಳಿಯದೆ ಸಾಯುತ್ತಿರುವುದಕ್ಕೆ ಕಟ್ಟುವ ಕಾರಣಗಳು ಮತ್ತು ಬಯಸುವ ಕಾರಣಗಳಿಗೆ ವೈಯಕ್ತಿಕ ಹಿತಾಸಕ್ತಿಯನ್ನು ರಕ್ಷಿಸಿಕೊಳ್ಳುವ ಹುನ್ನಾರದ ಜೊತೆ ಅಸೂಯೆಯ ಬುದ್ಧಿಯೂ ಸೇರಿಕೊಂಡಿದೆ. ಕಿರುಗೂರಿನ ಹೆಣ್ಣುಮಕ್ಕಳನ್ನು 'ಗಯ್ಯಾಳಿಗಳು-ಗಾಂಚಾಲಿ ಮುಂಡೇರು' ಎಂದು ಹೆಸರು ಪಡೆದದ್ದು ಕೈಗೆಟುಕದ ದ್ರಾಕ್ಷಿ ಹುಳಿ ಎಂದು ಪೇಚಾಡುವವರಿಂದಲೇ. ಇನ್ನು ಕಿರುಗೂರಿನ ಮಾರ, ಚಿದಂಬರ ರಹಸ್ಯದ

ವಿದ್ಯಾರ್ಥಿಗಳು, ಸ್ವರೂಪದ ಶ್ರೀನಿವಾಸ, ಸೋಮ ಆದಿಯಾಗಿ ಹೇಳುವ ಮಾತುಗಳು ತಮ್ಮ ದೈಹಿಕ ದೌರ್ಬಲ್ಯವನ್ನು ಹತ್ತಿಕ್ಕಲಾಗದ ಅಸಹಾಯಕತೆಯ ಸ್ವರೂಪ. ಅವೇ ಬೈಗುಳದ ರೂಪದಲ್ಲೋ, ಕ್ರೌರ್ಯದ ರೂಪದಲ್ಲೋ, ಶೋಷಣೆ-ದೌರ್ಜನ್ಯದ ರೂಪದಲ್ಲೋ ಹೊರಹೊಮ್ಮುವ ಸಾಧ್ಯಗಳಿರುತ್ತವೆ. ಇದರಂತೆಯೇ ವಿಶಿಷ್ಟ ವ್ಯಕ್ತಿತ್ವದ ಸ್ವಾಭಿಮಾನದ ಸೊಕ್ಕಿನ ಹೆಣ್ಣನ್ನು ದಮನಗೊಳಿಸುವುದು, ಆಕೆಯ ಮೇಲೆ ಲೈಂಗಿಕ ಆಕ್ರಮಣ ನಡೆಸುವ ಮೂಲಕ ಎಂಬ ಮನೋಭಾವ ಸಾವಿರಾರು ವರ್ಷಗಳಿಂದ ಬೇರೂರಿರುವ ದಮನರೂಪೀ ಪುರುಷತ್ವದ ಕಲ್ಪನೆಯನೆಯದು. ಮೇಲಿನವರ ಮಾತುಗಳಲ್ಲಿ ವ್ಯಕ್ತವಾಗಿರುವ ಅಭಿಪ್ರಾಯಗಳು ಬಲಹೀನರಾಗಿರುವ ವ್ಯಕ್ತಿಗಳು ತಮ್ಮ ಎಲ್ಲಾ ಬಗೆಯ ಹತಾಶೆಯನ್ನೂ ಹೆಣ್ಣಿನ ದೇಹವನ್ನು ದಮನಿಸುವುದರ ಮೂಲಕ ಮಾತ್ರ ಸಾಧ್ಯ ಎಂದು ನಂಬಿರುವುದರಿಂದಲೇ ಚಿರಾಯುವಾಗಿದೆ. ಸುಬ್ಬಯ್ಯ, ಮಾರ, ಕಾಳೇಗೌಡನಂತಹ ವ್ಯಕ್ತಿಗಳು ತಮ್ಮ ದೌರ್ಬಲ್ಯಕ್ಕೆ ನೇರವಾಗಿ ಮುಖಾಮುಖಿಯಾಗುವುದಿಲ್ಲ. ಬದಲಾಗಿ ತಮ್ಮ ಅಸಹಾಯಕತೆಯನ್ನು ಹೆಣ್ಣಿನ ಮೇಲೆ ದೌರ್ಜನ್ಯ ಎಸಗುವುದರ ಮೂಲಕ ತಣಿಸಿಕೊಳ್ಳುತ್ತಾರೆ. ಹೆಣ್ಣಿನ ಮೇಲೆ ಹಿಡಿತ ಸಾಧಿಸುವುದು ಯಶಸ್ಸಿನ ದ್ಯೋತಕವೆಂದು ನಂಬಿ ಹುಸಿ ಗಂಡಸುತನವನ್ನು ಪ್ರದರ್ಶಿಸುವುದು ವ್ಯಕ್ತಿಗತ ಸಮಸ್ಯೆಯೊಂದಿಗೆ ಸಾಮಾಜಿಕ ಆವರಣವನ್ನು ಕಲುಷಿತಗೊಳಿಸಿಬಿಡುತ್ತದೆ.

ಜೀವನಶೈಲಿ ಬದಲಾದಂತೆ ಸಮಾಜವೂ ಬದಲಾವಣೆಯಾಗುತ್ತದೆ. ಅಂತೆಯೇ ವ್ಯಕ್ತಿಯ ಮಾನಸಿಕತೆಯೂ ಆತನ ಜೀವನ ಶೈಲಿಯನ್ನೇ ಅವಲಂಬಿಸಿರುತ್ತದೆ. ಸಮಕಾಲೀನ ವ್ಯವಸ್ಥೆಯ ಜೀವನಶೈಲಿಯೊಂದಿಗೆ ಸಾಮರಸ್ಯವನ್ನು ಹೊಂದಲಾರದ ವ್ಯಕ್ತಿಯೇ ಮಾನಸಿಕ ನೆಮ್ಮದಿಯಿಂದ ದೂರವಾಗಿರುತ್ತಾನೆ. ಅಂತಹ ಭಾವನಾತ್ಮಕತೆಯಿಂದ ಸಮ್ಮಿಳಿತವಾದ ಮನೋವೈಜ್ಞಾನಿಕತೆಯು ತೇಜಸ್ವಿ ಬರವಣಿಗೆಯಲ್ಲಿ ಕಳೆಗಟ್ಟಿದೆ. ಶ್ರೀಸಾಮಾನ್ಯರ ಮನಸ್ಥಿತಿಯನ್ನು ಚೆನ್ನಾಗಿ ಅರಿತಿರುವ ತೇಜಸ್ವಿಯವರ ಅಭಿವ್ಯಕ್ತಿ ಮಾಧ್ಯಮ ಅವುಗಳನ್ನು ಅಭೂತ ಪೂರ್ವವಾಗಿ ಸೆರೆಹಿಡಿದಿದೆ. ವಿಷಯವು ಭಿನ್ನವಾದಂತೆ ಅದಕ್ಕೆ ಸಂಬಂಧಿಸಿದ ಮನಸ್ಥಿತಿಯೂ ಕೂಡಾ ಪ್ರತಿಯೊಬ್ಬರಲ್ಲೂ ಬೇರೆಬೇರೆಯಾಗಿರುತ್ತದೆ. ಒಂದೊಂದು ವಿಷಯಕ್ಕೂ ಒಬ್ಬೊಬ್ಬರ ಪ್ರತಿಕ್ರಿಯೆಯೂ ಬೇರೆಯೇ ಆಗಿದ್ದರೂ ಅದಕ್ಕೆ ಮೂಲಕಾರಣ ಅವರ ಮಾನಸಿಕತೆಯೇ ಆಗಿದೆ. ವ್ಯಕ್ತಿಯು ವ್ಯಾವಹಾರಿಕವಾಗಿ ಹೊರಜಗತ್ತಿನೊಂದಿಗೆ ಒಳ್ಳೆಯ ಸಂಬಂಧ ಹೊಂದಿದ್ದಾನೆ ಎಂದ ಮಾತ್ರಕ್ಕೆ ಅವರ ಮಾನಸಿಕತೆ ಸರಿಯಾಗಿದೆ ಎಂದು ಅರ್ಥವಲ್ಲ. ಇಂತಹ ವೈರುಧ್ಯಗಳನ್ನು, ವ್ಯಕ್ತಿ ವೈಚಿತ್ರ್ಯಗಳನ್ನು, ವ್ಯಕ್ತಿ ಸಾದೃಶ್ಯ-ವೈದೃಶ್ಯಗಳನ್ನು ತೇಜಸ್ವಿ ಕಥನಗಳಲ್ಲಿ ಕಂಡುಕೊಳ್ಳಬಹುದು.

## ೩.೧.೩: ಆದರ್ಶ ಮತ್ತು ವಾಸ್ತವ: ಸ್ವಯಂಕಲ್ಪಿತ ಆಲೋಚನೆಗಳ ಭ್ರಮೆ

**ಆದರ್ಶ ಮತ್ತು ವಾಸ್ತವ** ಮನುಷ್ಯ ಬದುಕಿನ ಎರಡು ಪರಸ್ಪರ ಮುಖಾಮುಖಿಯಾಗಿ ನಿಂತಿರುವ ಕ್ರಿಯೆಗಳು. ಈಗ ಇರುವ ಬದುಕು ಶ್ರೇಷ್ಠವಲ್ಲ; ಇದಕ್ಕಿಂತಲೂ ಮಿಗಿಲಾದ ಬದುಕು ಮತ್ತೊಂದಿದೆ. ಅದು ಬಹಳ ಮಹತ್ವವಾದುದು ಎಂಬ ಭಾವನೆಯನ್ನು ಸಾಮಾನ್ಯ ಅರ್ಥದಲ್ಲಿ **ಆದರ್ಶ** ಎಂದು ಅರ್ಥೈಸಬಹುದು. **ವಾಸ್ತವತೆ** ಎಂದರೆ 'ಸತ್ಯ'. ಸತ್ಯದ ಕಲ್ಪನೆ ಸೂಕ್ಷ್ಮ ಹಾಗೂ ನುಣುಚಿಕೊಳ್ಳುವಂತಹುದು. ಸತ್ಯದ ಕಲ್ಪನೆಯಂತೆ ವಾಸ್ತವದ ಕಲ್ಪನೆಯೂ ಸೂಕ್ಷ್ಮವೂ, ನುಣುಚಿಕೊಳ್ಳುವಂತಹುದೂ ಆಗಿದೆ. ಕಣ್ಣಿಗೆ ಕಾಣುವುದು ಮಾತ್ರ ಸತ್ಯ. ಉಳಿದವು ಮಿಥ್ಯ ಎಂಬ ಭಾವವಿದೆ. ಆದರೆ ಕಾಣದ ಅನೇಕ ಅಮೂರ್ತವಸ್ತುಗಳು ಮೂರ್ತವಸ್ತುಗಳಷ್ಟೇ ಸತ್ಯ–ನಿಖರ ಸ್ಪಷ್ಟತೆಯನ್ನು ಹೊಂದಿರುವಂತಹದ್ದಾಗಿರುತ್ತದೆ. ವಾಸ್ತವ ಬದುಕೆಂದರೆ ಮನುಷ್ಯನ ಮೂಲಭೂತವಾದ ಅವಶ್ಯಕ ಸಾಮಗ್ರಿಗಳನ್ನೇ ಬಳಸಿಕೊಂಡು ತನ್ನನ್ನು ಗುರುತಿಸಿಕೊಳ್ಳುವುದು, ಇದ್ದುದನ್ನು ಇದ್ದಂತೆ ಗ್ರಹಿಸುವುದು. ವಾಸ್ತವ, ಪ್ರಪಂಚದ ಮತ್ತು ನಿಜಜೀವನದ ಸಾಮಿಪ್ಯಕ್ಕೆ ಒಯ್ದು ವೈಚಾರಿಕವಾಗಿ ಆಲೋಚಿಸಿವಂತೆ ಪ್ರೇರೇಪಿಸುತ್ತದೆ. ಇದರಿಂದ ವಾಸ್ತವ ಬದುಕಿನ ಅವಲೋಕನ ಸಾಧ್ಯವಾಗುತ್ತದೆ.

ಗಾಂಧೀಜಿ ದೆಸೆಯಿಂದ ಕಥೆಯ ಮೋಹನದಾಸ ಗಾಂಧೀಜಿಯ ಆದರ್ಶಗಳಿಗೆ ಮಾರುಹೋಗಿ ತಪ್ಪೊಪ್ಪಿಗೆ ಪತ್ರ ಬರೆಯುವ ಪ್ರಸಂಗದಲ್ಲಿ ಸ್ವತಃ ಶಿಕ್ಷೆ ಅನುಭವಿಸುವಂತಾಗುತ್ತದೆ. ಗಾಂಧೀಜಿಯಂತೆ ಪತ್ರ ಬರೆದು ಕ್ಷಮೆಯಾಚಿಸುವುದಾಗಿ ಆಲೋಚಿಸುವ ಮೋನಿ ಅದಕ್ಕೆ ತದ್ವಿರುದ್ಧವಾದ ಪರಿಸ್ಥಿತಿಯನ್ನು ಎದುರುಗೊಳ್ಳಬೇಕಾಗುತ್ತದೆ. ಪತ್ರ ಬರೆದು ಎರಡು ದಿನದ ನಂತರ ಕಲ್ಲುಹಳ್ಳಿಗೆ ಹಿಂತಿರುಗುತ್ತಾನೆ. ತಾನು ಆದರ್ಶವೆಂದುಕೊಂಡಿದ್ದು ಇತರರ ದೃಷ್ಟಿಯಲ್ಲಿ ಏನೂ ಅಲ್ಲ ಎಂಬ ಗ್ರಹಿಕೆಗೂ ಮತ್ತು ತಾನು ಗಾಂಧೀಜಿಯಿಂದ ಸ್ವಯಂ ಪ್ರೇರಿತನಾಗಿ ಸತ್ಯ ಹೇಳಿದ ಸಂದರ್ಭ ಎರಡಕ್ಕೂ ಇರುವ ವ್ಯತ್ಯಾಸವನ್ನು ಗುರುತಿಸುವಂತಾಗುತ್ತದೆ.

ಹುಲಿಯೂರಿನ ಸೋಮ ತಂದೆಯ ಅಧಿಕಾರ, ಆಸ್ತಿ, ಧರ್ಮಶ್ರದ್ಧೆ ಹೀಗೆ ಪರಂಪರೆ ಒಡ್ಡುವ ಮಿತಿಗಳನ್ನು ಮೀರುವ ಆಲೋಚನೆಯಲ್ಲಿದ್ದಾನೆ. ಆತನ ಪ್ರತಿಭಟನೆ ಸರಹದ್ದನ್ನು ದಾಟುವ ಆಲೋಚನೆಯಿಂದ ಬಂದದ್ದು. ಅದರಿಂದಾಗಿ ತಂದೆಯ ನಿರ್ದೇಶನ, ಅಧಿಕಾರಯುತ ನಡವಳಿಕೆಗಳನ್ನು ನಿರ್ಲಕ್ಷಿಸುತ್ತಾನೆ. ಬದುಕಿನ ಸಾಧ್ಯತೆಗಳನ್ನು ತನ್ನ ಮುಂದೆ ಇದ್ದ ಮೂಕಜೀವಿಗಳಲ್ಲಿ ಗುರುತಿಸಲು ಸಾಧ್ಯವಿದ್ದರೂ ನಿರಾಕರಿಸುವಾತ ಸೋಮ. ತನ್ನ ಬದುಕಿನ ಪ್ರಶ್ನೆ ಗರುಡನ ಆಕ್ರಮಣದಲ್ಲಿ  ಆಕಸ್ಮಿಕವಾಗಿ ಎದುರಾದಾಗ; ಬದುಕುವ ಇಚ್ಛೆಯ ಪ್ರಾಧಾನ್ಯತೆಯಲ್ಲಿ ಗರುಡನ ಹತ್ಯೆ ನಡೆಯುತ್ತದೆ. ಪ್ರತಿಯೊಂದು ಜೀವಿಗೂ ಅದರದ ಬದುಕುವ ರೀತಿಯೇ ಪ್ರಮುಖವಾಗಿ, ಶಕ್ತಿಶಾಲಿಯಾದದ್ದು ಜಯಗೊಳಿಸುತ್ತದೆ ಎಂಬುದು ಇಲ್ಲಿ ಸಾಬೀತಾಗಿ ಬಿಡುತ್ತದೆ. ಈ ಮೊದಲು ತಂದೆಯ ಯಾವ ನಿರ್ದೇಶನವನ್ನು ನಿರಾಕರಿಸಿದ್ದನೋ ಪ್ರಾಣ ಉಳಿಸಿಕೊಳ್ಳುವ ಭರದಲ್ಲಿ ಅದನ್ನೇ ಮತ್ತೊಂದು ರೀತಿಯಲ್ಲಿ ನಡೆಸಿಕೊಟ್ಟದ್ದು ಸೋಮುವಿನ ಅಭಿಮಾನಕ್ಕೆ ತಗುಲಿದ ಧಕ್ಕೆಯಾಗುತ್ತದೆ.

ಗವಿಗುಡ್ಡಕ್ಕೆ ಬಂದು ತನ್ನನ್ನು ಸಂಪೂರ್ಣವಾಗಿ ಅರ್ಥೈಸಿಕೊಳ್ಳಬಲ್ಲೆನೆಂದು ಆತ್ಮ ವಿಮರ್ಶೆಯಲ್ಲಿ ತೊಡಗುವ ಶ್ರೀನಿವಾಸ ಅಲ್ಲಿನ ಅನುಭವದ ಎದುರಿಗೆ ತಾನು ಆದರ್ಶವೆಂದುಕೊಂಡಿದ್ದ ಭೂತಕಾಲದ ಅನುಭವಗಳು ಪೇಲವವೆನಿಸತೊಡಗುತ್ತವೆ. ತನ್ನೆಲ್ಲಾ ಆದರ್ಶಗುಣಗಳು ಒಂದೊಂದಾಗಿ ಬೆತ್ತಲೆಗೊಂಡಾಗ ತಾನು ಕುಗ್ಗಿಹೋಗುತ್ತಾನೆ ಮತ್ತು ಅಪರಾಧಿ ಭಾವದಿಂದ ತೊಳಲಾಡುತ್ತಾನೆ.

ಆದರ್ಶ ಮತ್ತು ವಾಸ್ತವದ ಆಚರಣೆಗಳ ನಡುವಿನ ಅಂತರವನ್ನು ಬೇರೆ ಯಾರಲ್ಲಿಯೋ ಅಲ್ಲ, ಸ್ವತಃ ತನ್ನಲ್ಲಿಯೇ ಕಂಡುಕೊಳ್ಳುವುದರ ಫಲವಾದ ಪ್ರಾಮಾಣಿಕ ಪಾಪಪ್ರಜ್ಞೆ ಶ್ರೀನಿವಾಸ, ಗೋಪಾಲಯ್ಯ ಇವರುಗಳ ಮತ್ತೊಂದು ನೆಲೆ. ತನ್ನ ಖಾಸಗಿ ವ್ಯಕ್ತಿತ್ವದ ಹಲವು ರೂಪಗಳನ್ನು ಸಾರ್ವಜನಿಕವಾಗಿ ಬಯಲು ಮಾಡುವಾಗ ಸಂಕೋಚ ಮುಜುಗರವಿಲ್ಲದ ಹಾಗೆ, ಮುಖವಾಡಗಳ ತೆರೆಯ ಆಚೆ ನಡೆದ ಘಟನೆಗಳನ್ನು ಪರಿಶೀಲನೆಗೆ ಹಚ್ಚುವುದು.

ವರ್ತಮಾನದಲ್ಲಿ ನಿಂತು ಭೂತವನ್ನು ಕೆದಕುವ, ಅದರ ಜೊತೆಗೆ ಅಸ್ತಿತ್ವವನ್ನು ಗುರುತಿಸಿಕೊಳ್ಳ ಹೊರಟು ಅದರಾಚೆಗಿನ ಸತ್ಯದ ಶೋಧನೆಯಲ್ಲಿ ತೊಡಗುವುದು ಸ್ವರೂಪದಂತೆ ನಿಗೂಢಮನುಷ್ಯರು ಕಥೆಯಲ್ಲಿಯೂ ಮುಂದುವರೆಯುತ್ತದೆ. ತನ್ನ ಅಸ್ತಿತ್ವದ ನಿಜವಾದ ಅರ್ಥ ತಿಳಿದುಕೊಳ್ಳುವಲ್ಲಿ ಮನುಷ್ಯ ಎದುರಿಸುವ ತಾಕಲಾಟ ಗೊಂದಲ, ಅರ್ಥ ತಿಳಿದುಕೊಳ್ಳಲಾಗದ ಅಸಹಾಯಕತೆ, ಜೀವಿತಾವಧಿಯಲ್ಲಿ ಅನುಭವಿಸಿದ ನೋವು–ನಲಿವು, ಆಸೆ–ನಿರಾಸೆ, ಬದುಕಿನ ಸಾರ್ಥಕತೆ ಇವೆಲ್ಲವುಗಳು ಯಾವುದೋ ಒಂದು ಸಂದರ್ಭದಲ್ಲಿ ಅರ್ಥಕಳೆದುಕೊಂಡು ಮನುಷ್ಯನ ಮಿತಿಮೀರಿದ ಪ್ರಯತ್ನಗಳನ್ನೆಲ್ಲ ವಿಫಲಗೊಳಿಸುತ್ತವೆ. ನಿಗೂಢತೆಯನ್ನು ಇನ್ನಷ್ಟು ರಹಸ್ಯಗೊಳಿಸಿ ತನ್ನನ್ನೂ ಪ್ರಕೃತಿಯನ್ನೂ ಅರ್ಥೈಸಿಕೊಳ್ಳಲಾಗದ ಇಕ್ಕಟ್ಟಿನ ಸ್ಥಿತಿಗೆ ತಂದುಬಿಡುತ್ತವೆ.

ಅವನತಿಯ ಸೂರಾಚಾರಿ ಕುಲಕಸುಬೇ ತನ್ನ ಕೈಹಿಡಿಯುತ್ತದೆ ಎಂದು ನಂಬಿದ್ದವನು, ಆದರೆ ಭ್ರಮನಿರಸನಗೊಂಡು ಸ್ಥಳೀಯಗೌರವಕ್ಕೆ ಪಾತ್ರವಾಗುವ ಇತರ ಕಸುಬುಗಳನ್ನು ರೂಢಿಸಿಕೊಳ್ಳುವುದು ಆರ್ಥಿಕ ದುರ್ಬಲತೆಯಿಂದ, ತಾನೂ ಹಿರಿಯರಂತೆ ಪರಂಪರಾಗತವಾದ ಕಲೆಯನ್ನು ನಂಬಿ ಬದುಕನ್ನು ನಡೆಸುವುದಕ್ಕೆ ಪ್ರಯತ್ನಪಟ್ಟರೂ ಸಾಧ್ಯವಾಗದೆ, ಬದುಕುವ ಆಶ್ರಯಕ್ಕೆ ಬದ್ಧನಾದಾಗ ಹೊಂದಾಣಿಕೆಯ ಮೊರೆ ಹೋಗಲೇ ಬೇಕಾಗುತ್ತದೆ. ಆದರೆ ಹೊಂದಾಣಿಕೆ ಎಂಬುದು ಹೆಂಡತಿಯ ಅನಾರೋಗ್ಯದ ನಿಮಿತ್ತ ಮಾತ್ರವಾಗದೆ ಊರವರ ಅಭಿರುಚಿಗಳಿಗೆ ಒಗ್ಗಿಕೊಳ್ಳುವುದೂ ಆದಾಗ ಅದೇ ಸೂರಾಚಾರಿಯ ಚಿಂತನೆಗಳನ್ನು ವ್ಯಕ್ತಿತ್ವವನ್ನೂ ಕುಬ್ಜಗೊಳಿಸುತ್ತದೆ.

ತುಕ್ಕೋಜಿ ತಂದೆಯ ಇಚ್ಛೆಗೆ ವಿರುದ್ದವಾಗಿ ಸರೋಜಳನ್ನು ಮದುವೆಯಾಗಿ ಗುರುಗಳ್ಳಿಯಲ್ಲಿ ಕುಲಕಸುಬಾದ ದರ್ಜಿಯ ಕೆಲಸವನ್ನು ವೃತ್ತಿಯನ್ನಾಗಿ ಕೈಗೊಂಡವನು. ಕೆಲಸದ ಬಗೆಗಿದ್ದ ಶ್ರದ್ಧೆ, ನಿಷ್ಠೆ ಮತ್ತು ಹೆಂಡತಿಯ ಸಹಕಾರ ಮನೋಭಾವ ಆತ್ಮವಿಶ್ವಾಸದಿಂದ ಬದುಕಲು ಪ್ರೇರೇಪಣೆ. ಗುರುಗಳ್ಳಿ ಆಧುನಿಕತೆಗೆ ತೆರೆದುಕೊಳ್ಳುತ್ತಿದ್ದಂತೆಲ್ಲಾ ಅವರ ಅಭಿರುಚಿಗಳಿಗೆ ತಕ್ಕಂತೆ ಹೊಲಿದುಕೊಡುವ ನೈಪುಣ್ಯತೆಯೇ ನಾಗರಿಕತೆಯ ನಯ–ನಾಜೂಕು–ಸೂಕ್ಷ್ಮತೆಗಳನ್ನು ರೂಢಿಸಿಕೊಳ್ಳುವತ್ತ ಸಹಕಾರಿಯಾಗುತ್ತದೆ. ಗುರುಗಳ್ಳಿಯ ಆತ್ಮ ಬಲ್ಲವನಂತೆ ವ್ಯವಹರಿಸುತ್ತಿದ್ದ ತುಕ್ಕೋಜಿಯ ವೃತ್ತಿ ಬದುಕು ಕೌಟುಂಬಿಕ ವಿರಸದಿಂದಾಗಿ ಏಕಾಗ್ರತೆಯನ್ನು ಕಳೆದುಕೊಂಡು ನಿಸ್ತೇಜವಾಗುತ್ತದೆ. ಕ್ರಮೇಣವಾಗಿ ವಸ್ತುಸ್ಥಿತಿ ತೀವ್ರವಾಗಿ ಹದಗೆಡುತ್ತದೆ.

ರೈಟರ್ ಕೆಲಸದಲ್ಲಿ ಬೋಬಣ್ಣನಿಗೆ ಅಬಚೂರಿನಲ್ಲಿ ಹೊಸದಾಗಿ ಸ್ಥಾಪಿಸಲಾದ ಪೋಸ್ಟಾಫೀಸಿನ ಹಂಗಾಮಿ ಪೋಸ್ಟ್ ಮಾಸ್ತರಿಗೆ ತಾನು ದಿಲ್ಲಿ ಸಂಪರ್ಕದ ಪ್ರಜೆಯೆನ್ನುವ ಹೆಮ್ಮೆಯನ್ನು ಬಿತ್ತುತ್ತದೆ. ಇದು ಆತ ಸಾಮಾಜಿಕವಾಗಿ ತೆರೆದುಕೊಳ್ಳಲು ಅವಕಾಶ ಮಾಡಿಕೊಡುತ್ತದೆ. ಆತನ ವ್ಯವಹಾರಗಳು ಸಮುದಾಯದೊಂದಿಗೆ ಮಿಳಿತವಾಗಿ ಮೇಲ್ನೋಟಕ್ಕೆ ಸುಗಮವಾಗಿದ್ದರೂ ವೈಯಕ್ತಿಕ ಬದುಕಿನಲ್ಲಿ ಅಸಹನೆ-ಅಶಾಂತಿಯನ್ನು ಹರಡುತ್ತಾ ಸಾಗುತ್ತವೆ. ಕೌಟುಂಬಿಕ ವಿಘಟನೆ ಮತ್ತು ಸಾಮಾಜಿಕ ವೈರುಧ್ಯಗಳು ಕ್ರಮೇಣವಾಗಿ ಬೋಬಣ್ಣನ ಅಸ್ತಿತ್ವನ್ನು ಕಡೆಗಣಿಸುತ್ತದೆ. ಯಾವುದೋ ಆಕಾಂಕ್ಷೆಯಿಂದ ಪೋಸ್ಟ್ ಮಾಸ್ತರಿಕೆಯ ಜವಾಬ್ದಾರಿಯನ್ನು ಹೊತ್ತಿದ್ದ ಬೋಬಣ್ಣ ತನ್ನ ಕುಟುಂಬ ಮತ್ತು ಸಮುದಾಯದ ಧೋರಣೆಗಳಿಂದಾಗಿ ಬೇಸ್ತುಬೀಳುತ್ತಾನೆ.

ಅರ್ಥಶಾಸ್ತ್ರ ಅಧ್ಯಾಪಕ ರಾಮಚಂದ್ರ ವಿದ್ಯಾರ್ಥಿಗಳನ್ನು ಎತ್ತಿ ಕಟ್ಟುವ ನಕ್ಸಲ್ ಬಾರಿ ಕಮ್ಯುನಿಷ್ಟನೆಂದು ಪ್ರಚಲಿತದಲ್ಲಿದ್ದಾತ. ಆತನ ಶಿಷ್ಯತ್ವದಲ್ಲಿ ಊರಿನ ಪ್ರಮುಖ ಘಟನೆಗಳಿಗೆ ಪರೋಕ್ಷವಾಗಿ ಕಾರಣವಾಗುವ ಕೆಸರೂರಿನ ತರುಣರಾದ ರಾಮಪ್ಪ, ಚಂದ್ರು, ಜೋಸೆಫ್, ರಮೇಶ ವಿಚಾರಕ್ರಾಂತಿಯ ಹೆಸರಿನಲ್ಲಿ ಬೊಬ್ಬೆ ಹಾಕುತ್ತಾ ಒಟ್ಟಿನಲ್ಲಿ ಕ್ರಾಂತಿ ಆಗಬೇಕು ಎಂದು ಆಲೋಚಿಸುವ ಯಾವುದೇ ದಬ್ಬಾಳಿಕೆಯ ವಿರುದ್ಧ ಸೆಣೆಸಾಟಕ್ಕೆ ನಿಲ್ಲುವವರು. ವಸ್ತು ಸ್ಥಿತಿಯ ಅರಿವಿಲ್ಲದೆ, ಯಾವುದೇ ಸಿದ್ಧಾಂತದ ನೆಲೆಯಿಲ್ಲದೆ 'ಒಟ್ಟಿನಲ್ಲಿ ಕ್ರಾಂತಿಯಾಗಬೇಕು' ಎನ್ನುವ ಕ್ರಾಂತಿಯ ಹೆಸರಿನಲ್ಲಿ ಹೊಡೆದಾಡುವ ಈ ತರುಣ ಕ್ರಾಂತಿಕಾರಿಗಳು ಅಸಹಾಯ ಸ್ಥಿತಿಯಲ್ಲಿ ತೊಳಲಾಡುತ್ತಾರೆ. ಇವರಿಗೂ ಕೃಷ್ಣೇಗೌಡನ ಆಳುಗಳಿಗೂ ಯಾವುದೇ ವ್ಯತ್ಯಾಸವಿಲ್ಲವೆಂಬುದನ್ನು ನಿರೂಪಿಸುವ ಲೇಖಕರು ಆದರ್ಶದ ಹೆಸರಿನಲ್ಲಿ ಕ್ರಾಂತಿಯ ಸೋಗು ಹಾಕುವವರನ್ನು ಲೇವಡಿ ಮಾಡುತ್ತಾರೆ.

ಆದರ್ಶಗಳು ಮತ್ತು ವಾಸ್ತವಗಳ ನಡುವಿನ ಬಿರುಕಿನಿಂದಲೂ ಕೂಡ ಇದು ಸಂಭವಿಸುತ್ತದೆ. ಚಿದಂಬರ ರಹಸ್ಯ ಕಾದಂಬರಿಯ ವಿಜ್ಞಾನಿ ಪಾಟೀಲರ ಬಗ್ಗೆ ಜನರ ನಂಬಿಕೆ

'ಡಾಕ್ಟರ್ ಪಾಟೀಲರು ಚೇಳಿಗೆ ಮಂತ್ರ ಚಿಕಿತ್ಸೆ ಮಾಡ್ತಾರಂತೆ. ಒಂದು ಕಡ್ಡಿ ತಗೋಂಡು ಚೇಳು ಕಟ್ಟಿ ನೋವಾಗುತ್ತಿರೋರಿಗೆ ಎಲ್ಲಿ ನೋವಾಗುತ್ತೊ ಅಲ್ಲಿ ಹ ಆಕಾರದಲ್ಲಿ ಕಡ್ಡಿಯಿಂದ ಬರಿತಾರಂತೆ. ನೋವು ಅಲ್ಲಿಂದ ಹಾಗೇ ಕಾಲಿನವರೆಗೆ ಇಳಿಯುತ್ತಾ ಬರುತ್ತೆ. ಇವರೂ ಕಡ್ಡಿಯಲ್ಲಿ ಅದು ಇಳಿದಂತೆಲ್ಲಾ ಬರೀತಾ ಬರ್ತಾರೆ. ಕೊನೆಗೆ ಅದು ಬೆರಳ ತುದಿಯಿಂದ ಹೊರಟುಹೊಗ್ತದೆಯಂತೆ. ಅದರ ಬಗ್ಗೆ ಅವರಿಗೆ ನಂಬಿಕೇನೂ ಇಲ್ಲ. ಶ್ರದ್ದೇನೂ ಇಲ್ಲ. ಅವರೂರಿನಲ್ಲಿ ಯಾವನೋ ಮಾಂತ್ರಿಕ ಹೀಗೆ ಮಾಡ್ತಿದ್ದನಂತೆ. ಅದೊಂದು ಮೂಢ ನಂಬಿಕೆ ಅಂತ ಸಾಧಿಸೋದಕ್ಕೆ ಇವರೂ ಹಾಗೆ ಮಾಡಿದರಂತೆ. ಅದು ಪಾರಿಣಾಮಕಾರಿ ಆಗೇ ಬಿಡ್ತು! ಈ ಚಿಕಿತ್ಸೆಗೆ ಆ ಮಾಂತ್ರಿಕ ಹೇಳೋ ಹಾಗೆ ದೈಯ್ಯ ದೇವರ ಅಗತ್ಯ ಏನೂ ಇಲ್ಲ. ಅಂತೇನೋ ಸಾಧಿಸಿದರು. ಆದರೆ ಚೇಳು ಕಚ್ಚಿದವರು ಚಿಕಿತ್ಸೆಗೆ ಇವರ ಹತ್ರ ಬರೋದಕ್ಕೆ ಶುರು ಮಾಡಿದರು. ಇಷ್ಟೇ ಅಲ್ಲ. ಕೆಸರೂರಿನಲ್ಲಿ ಇವರನ್ನೂ ಮಂತ್ರವಾದಿ ಅಂತ ತಿಳುಕೊಂಡು ಹಾವು ಕಚ್ಚಿಸಿಕೊಂಡವರು, ದೆವ್ವ ಮೈಮೇಲೆ ಬರೋರು, ಮತಿಭ್ರಾಂತರು ಎಲ್ಲರನ್ನೂ ಕರಕೊಂಡು ಬರೋದಿಕ್ಕೆ ಶುರು ಮಾಡಿದರಂತೆ. ನಾನು ಯಾವ ಶಕ್ತಿಯ ಆರಾಧಕನೂ ಅಲ್ಲ. ಮಂತ್ರವಾದಿಯೂ ಅಲ್ಲ ಅಂತ ಅವರಿಗೆ ಹೇಳಿ ಕಳಿಸಬೇಕಾದರೆ ಪಾಟೀಲರಿಗೆ ಸುಸ್ತಾಗಿ ಹೋಗುತ್ತದಂತೆ. ಎಲ್ಲಕ್ಕಿಂತ ಅವರಿಗೆ ದಿಗಿಲು ಅಂದರೆ ಬಂದವರಿಗೆ ಏನಾದರೂ ಚಿಕಿತ್ಸೆ ಅಂತ ಮಾಡಿ ಕೊನೆಗೆ ಅದೂ ಪರಿಣಾಮಕಾರಿ ಆಗೇ ಹೋದರೆ ಏನಪ್ಪ ಗತಿ! ಅಂತ. ತಾನೆಲ್ಲಿ ಈ ರೋಗಿಗಳ ದೆಸೆಯಿಂದಲೇ ಕೊನೆಗೆ ಕಡ್ಡಾಯವಾಗಿ ಮಾಂತ್ರಿಕನಾಗಬೇಕಾಗುತ್ತದೋ ಅಂತ.'[೨]

ಇದು ಪಾಟೀಲರ ನಿಜ ಅಸ್ತಿತ್ವವನ್ನು ಮರೆಮಾಚಿ ಆರೋಪಿತ ಅಸ್ತಿತ್ವಕ್ಕೆ ಕೊಡುವ ಮನ್ನಣೆಯಾಗಿದೆ. ಮೂಲತಃ ಇಂತಹ ಕುರುಡು ನಂಬಿಕೆಗಳನ್ನು ಪ್ರತಿಭಟಿಸುವ ಮನಸ್ಥಿತಿಯವರಾದ ಡಾ.ಪಾಟೀಲರ ವೈಚಾರಿಕತೆಯನ್ನು ಸಾಮೂಹಿಕ ಸನ್ನಿಯಾದ ಮೌಢ್ಯ ತಾಟಸ್ಥ್ಯಗೊಳಿಸುತ್ತದೆ.

ಪಾಟೀಲರಂತೆಯೇ ಡಾ.ಕುಬಿಯ ಆದರ್ಶಗಳು ವಾಸ್ತವಕ್ಕೆ ಮಣಿಯುತ್ತವೆ. ವಿಕೃತ, ಅನೈತಿಕ, ಅಜ್ಞಾನ, ಅನಾಚಾರಗಳ ಗೂಢಾಗಿರುವ ಭೈರಾಪುರದ ಜನತೆಯ ಜೀವನಕ್ರಮ ರೌರವ ನರಕವನ್ನೇ ಸೃಷ್ಟಿಸಿಬಿಟ್ಟಿದೆ. ಇಂತಹ ಸ್ಥಳಕ್ಕೆ ಆದರ್ಶ ಸಮಾಜದ ಕನಸು ಹೊತ್ತು ಬರುವ ಡಾ. ಕುಬೇರಪ್ಪ ಪ್ರತಿಹಂತದಲ್ಲೂ ಒಂದೊಂದು ಸಮಸ್ಯೆಯನ್ನು ಎದುರುಗೊಳ್ಳಬೇಕಾಗುತ್ತದೆ. ಸಾಮಾಜಿಕ ಆದರ್ಶ ಮತ್ತು ವಾಸ್ತವತೆಯೊಂದಿಗೆ ತಿಕ್ಕಾಟ ಕುಬಿಯ ಒಳಗೆ ದ್ವಂದ್ವತೆ ಉಂಟಾಗಲು ಕಾರಣವಾಗುತ್ತದೆ. ಇವುಗಳ ನಡುವೆ ಸಾಮರಸ್ಯ ಸ್ಥಾಪಿಸುವಲ್ಲಿನ ವಿಫಲತೆಯೇ ಕುಬಿಯ ಸಂಘರ್ಷಕ್ಕೆ ಕಾರಣವಾಗುತ್ತದೆ. ಇದಲ್ಲದೆ ಮುಗ್ಧ ಇಯಾಲಳ ಹತ್ಯೆ ಸಾಮಾಜಿಕ ಮತ್ತು ರಾಜಕೀಯ ಆಯಾಮ ಪಡೆದುಕೊಳ್ಳುವುದನ್ನು ಸಹಿಸದ ಡಾ. ಕುಬಿ ಸತ್ಯದ ಅಂಚಿಗೆ ತಲುಪಿಯೂ ಆ ಸತ್ಯವನ್ನು ಭೈರಾಪುರದ ಜನತೆಗೆ ತಲುಪಿಸಲಾಗದೆ ಸೋಲುತ್ತಾನೆ. ಈ ಸೋಲು ಒಂದು ರೀತಿಯ ಜಿಗುಪ್ಸೆಗೆ ಕಾರಣವಾದರೆ-ಯಾವ ಆದರ್ಶದ ಕನಸನ್ನು ಹೊತ್ತು ಭೈರಾಪುರಕ್ಕೆ ಬಂದಿದ್ದನೋ ಅದು ಕುಸಿದು ಹೋಗಿ ಆದರ್ಶದ ಮೌಲ್ಯಗಳೆಲ್ಲ ಮೌಢ್ಯದ ಕೆಸರಿನಲ್ಲಿ ಹುದುಗಿ ಹೋಗುವುದನ್ನು ಕಂಡು ಅಸಹಾಯಕತೆಯಿಂದ ಹಿಂದೆ ಸರಿಯುವುದು ವಾಸ್ತವತೆಗೆ ಹಿಡಿದ ಕನ್ನಡಿಯಾಗಿದೆ.

ತಬರ ಸ್ವಾತಂತ್ರ್ಯಪೂರ್ವ ಮತ್ತು ಸ್ವಾತಂತ್ರ್ಯೋತ್ತರ ಭಾರತದ ಸರ್ಕಾರಿ ಕೆಲಸದ ಸಂದರ್ಭದಲ್ಲಿ ನಿಷ್ಠೆ ಮತ್ತು ಪ್ರಾಮಾಣಿಕತೆಯಿಂದ ದುಡಿದವನು. ಸ್ವಾತಂತ್ರ್ಯಪೂರ್ವದಲ್ಲಿ ಸುಂಕದ ಕಟ್ಟೆಯಲ್ಲಿ ನಡೆದ ಚಳುವಳಿಯ ಸಂದರ್ಭದಲ್ಲಿ ಕರ ನಿರಾಕರಣೆಗಾಗಿ ಮುಷ್ಕರ ನಡೆದಾಗ ಅಲ್ಲಿನ ಜನ ಸುಂಕ ಕೊಡದೆ ಧಿಕ್ಕರಿಸಿ ನಡೆದಾಗ ಬೇರೆ ಕಡೆಗೆ ಸ್ಥಳಾಂತರಗೊಂಡು ಬಚಾವಾಗಿದ್ದ. ಮತ್ತೆ ಅಂತಹುದೇ ಸಂದರ್ಭ ಸ್ವಾತಂತ್ರ್ಯ ನಂತರದಲ್ಲಿ ತಬರನಿಗೆ ಎದುರಾಗತ್ತದೆ. ಸುಂಕದವಸೂಲಿಗೆಂದು ರಸೀದಿ ಚೀಟಿ ಹರಿದ ಪ್ರಯುಕ್ತ ಅದು ಅವನಿಗೇ ಜುಲ್ಮಾನೆ ಹಣವಾಗಿ ತಾನೇ ಸಂದಾಯ ಮಾಡಬೇಕಾದ ಪರಿಸ್ಥಿತಿ ನಿರ್ಮಾಣವಾಗಿ ಬಿಡುತ್ತದೆ. ಇದು ಅವನ ಜೀವನವನ್ನೇ ಬಲಿ ತೆಗೆದುಕೊಳ್ಳುತ್ತದೆ.

ತಬರನಿಗೆ ಸ್ವಾತಂತ್ರಪೂರ್ವದ ವಿದೇಶಿಯ ಆಡಳಿತ ಸಂದರ್ಭದಲ್ಲಿ ತಾನು ಅನುಭವಿಸಿದ್ದ ರೂಪಕ್ಕೂ ಸ್ವಾತಂತ್ರ ನಂತರದ ಭಾರತದ ಆಡಳಿತ ಪದ್ಧತಿಗೂ ಇರುವ ವ್ಯತ್ಯಾಸ ಸ್ಪಷ್ಟಗೊಳ್ಳುತ್ತದೆ. ತಾನು ಮಾಡದ ಕೃತ್ಯಕ್ಕೆ ಹೊಣೆಯಾಗಿಸುವ ಸಮಾಜ ಮತ್ತು ಕನಿಷ್ಠಮಟ್ಟದ ಮಾನವೀಯತೆಯನ್ನು ತೋರದ ಸರ್ಕಾರ ಮತ್ತು ಸಾಮಾಜಿಕ ವ್ಯವಸ್ಥೆಯ ಕಾರ್ಯ-ವೈಖರಿಗಳೂ ಹೇಯವೆನಿಸುತ್ತವೆ. ನಿವೃತ್ತಿನಂತರ ದೊರೆಯಬೇಕಾದ ಪಿಂಚಣಿಯನ್ನು ಪಡೆಯುವುದಕ್ಕಾಗದೆ ಆಡಳಿತ ವ್ಯವಸ್ಥೆಯಿಂದ, ಬಂಟಪ್ಪನಿಂದ ಶೋಷಣೆಗೆ ಒಳಗಾಗುತ್ತಾನೆ. ಪ್ರಾಮಾಣಿಕತೆ ಮತ್ತು ನಿಷ್ಠೆಯ ತನ್ನ ವ್ಯವಹಾರಗಳು ಪ್ರಸ್ತುತ ಲೇವಡಿಗೆ ಒಳಗಾಗುತ್ತಲೇ ಮತ್ತೊಂದು ರೂಪ ತಾಳುವುದು ಅಸಹನೀಯವಾಗುತ್ತವೆ. ವ್ಯವಸ್ಥೆಯ ಘಾತುಕತನದಿಂದ

ತೀವ್ರವಾದ ಆಘಾತಕ್ಕೆ ಒಳಗಾಗುವ ತಬರನ ಆದರ್ಶದ ನಂಬಿಕೆ ಸಂಪೂರ್ಣವಾಗಿ ನಶಿಸುತ್ತದೆ. ಪಿಂಚಣಿಗಾಗಿ ಅಲೆದಾಡಿ ಸೋತುಹೋಗುವ ತಬರ ಸ್ವಾತಂತ್ರೋದಯದ ಬೆಳ್ಳಿ ಹಬ್ಬದ ಹೊತ್ತಿಗೆ ಮಾನಸಿಕ ಸಮತೋಲನವನ್ನು ಕಳೆದುಕೊಂಡು ನಿರ್ಗತಿಕನಾಗುತ್ತಾನೆ.

> ತಬರನಿಗೆ ಮಾನವರನ್ನು ಪೋಲಿಸು, ಆಫೀಸು, ಶಾನುಭೋಗ ಪಟೇಲ, ಜವಾನ ಮುಂತಾಗಿ ಪರಿವರ್ತಿಸುತ್ತ, ಎಂಥಂಥದೊ ಗೀಚಿದ ಫೈಲುಗಳನ್ನು ಅಂತರಾತ್ಮನಂತೆ ಸಂರಕ್ಷಿಸುತ್ತ ಇರುವ ಒಂದು ನಿರ್ದಯ, ಅರ್ಥಹೀನ ವ್ಯೂಹದ ಅರಿವು ನಿಧಾನವಾಗಿ ಅಗತೊಡಗಿತು. ಮಾನವನನ್ನೂ ಕರಕರ ಜಗಿದು, ಅಗಿದು ಉಗಿಯುತ್ತಾ ಇರುವ ಒಂದು ಸೈತಾನ ವ್ಯೂಹ ಕಂಡಿತು. ಮನುಷ್ಯನನ್ನು ಕೊಂದು ಒಣಮೀನಿನಂತೆ ಒಣಗಿಸಿ, ಫೈಲಿನೊಳಗೆ ಮಡಿಚಿಡುವ ದೆವ್ವವಾದ ತಾಹಶೀಲ್ದಾರ. ಫೈಲು ತೆಗೆದುಕೊಂಡು ಎಂಥಂಥದೊ ಸಂಜ್ಞೆಗಳನ್ನು ಮಾಡುತಿದ್ದ ಆತ. ನುಗ್ಗುನುರಿಯಾದ ಜೀವಾತ್ಮಗಳು ಡೆಸ್ಕಿನಿಂದ ಡೆಸ್ಕಿಗೆ ಬಿಗಿದು ಕಟ್ಟಿದ ಫೈಲಿನೊಳಗೆ ಸಾಗುತ್ತಿದ್ದವು.[೧೩]

ಇದು ವ್ಯವಸ್ಥೆಯ ನಿರ್ದಯ ಅರ್ಥಹೀನ, ಕ್ರೌರ್ಯವನ್ನು ಪ್ರದರ್ಶಿಸುತ್ತಾ ಇಂದಿನ ವಾಸ್ತವವನ್ನು ತೆರೆದಿಡುತ್ತದೆ.

ಸ್ವರೂಪದ ಶ್ರೀನಿವಾಸನಂತೆಯೇ ಅನೇಕ ಹುಚ್ಚಾಟಗಳಲ್ಲಿ ಭಾಗವಹಿಸಿದ್ದ ಸುರೇಶನಿಗೆ ಅನುರೂಪ ಜೋಡಿಯಾಗಿ ದೊರೆತವಳೇ ಗೌರಿ. ಇವರಿಬ್ಬರೂ ಪ್ರಯೋಗಾತ್ಮಕ ಚಟುವಟಿಕೆಗಳಲ್ಲಿ ಸದಾ ಕ್ರಿಯಾಶೀಲರಾಗಿವವರು. ಏಲಕ್ಕಿ ವ್ಯಾಪಾರಕ್ಕೆಂದು ಹೊರಟ ಇವರು ದೇವಪುರದ ಕಾಳವ್ಯವಹಾರದ ಜಾಲದಲ್ಲಿ ಸಿಲುಕಿ ಬೀಳುತ್ತಾರೆ. 'ಜುಗಾರಿ'ಯ ಆಟದಂತೆ ಸುತ್ತುವರೆಯುವ ಎಲ್ಲ ಅಪಾಯಗಳನ್ನೂ ಎದುರಿಸಲು ಸಿದ್ಧರಾಗಿ ಒಂದೊಂದನ್ನೇ ದಾಟಬರುತ್ತಾರೆ. ಅಂತೆಯೇ ಭಯ ಭೀತಿಗಳಿಲ್ಲದೆ ಜೀವ ಉಳಿಸಿಕೊಳ್ಳುವತ್ತ ದಾವಿಸುತ್ತಾರೆ. ಕೆಂಪುಕಲ್ಲು ದೊರೆಯುವ ಸ್ಥಳವನ್ನು ತೋರುವ ಗುರುರಾಜಕವಿ ವಿರಚಿತ ದ್ವಿಸಂಧಾನಕಾವ್ಯ ಮತ್ತು ದೇವಪುರದ ಎಲ್ಲಾ ಚಟುವಟಿಕೆಗಳು ಯಾರಿಗೂ ಶೋಧಿಸಲಾಗದ ಅಮೂಲ್ಯ ನಿಧಿಯತ್ತ ಮುಖಮಾಡಿಕೊಂಡಿರುತ್ತವೆ. ಅಂತಹ ಅಮೂಲ್ಯ ನಿಧಿ ಶೋಧ ಅಥವಾ ಇನ್ನಿತರ ಮಹತ್ವವಾದ ಸಂಗತಿಗಳೆಲ್ಲಾ ಸುರೇಶ ಗೌರಿಯರಿಗೆ ಕ್ಷುದ್ರಸಂಗತಿಗಳಾಗಿ ಬಿಡುತ್ತವೆ. ಸುರೇಶ, ತಾನು ಯಾವುದನ್ನು 'ಅಮೂಲ್ಯ'ವೆಂದು ಭಾವಿಸಿದ್ದನೋ ಅದು ನಿಜವಾಗಿ ಅಷ್ಟೇನೂ ಅಮೂಲ್ಯವಾದದ್ದಲ್ಲ ಎಂಬ ಸತ್ಯದಂಚಿಗೆ ತಲುಪುತ್ತಾನೆ. ಸಾವು-ಬದುಕುಗಳನ್ನು ಕುರಿತ ಗೌರಿಯ ಧೋರಣೆ ಬದಲಾಗಿ ಹೊಸ ಜೀವನ ದರ್ಶನ ಪಡೆಯುತ್ತಾಳೆ.

ಇಂಥ ಆದರ್ಶಗಳು ಹುಟ್ಟಿಕೊಳ್ಳುವುದಾದರೂ ಹೇಗೆ? ತಾನು ಎಲ್ಲರಿಗಿಂತ ಎಲ್ಲ ರೀತಿಯಲ್ಲಿ ಭಿನ್ನ ಎಂಬ ಭಾವನೆಯೇ ಇರುವ ಸ್ಥಿತಿಗಿಂತ ಬೇರೆಯಾಗಿ ಆಲೋಚಿಸಲು ಪ್ರೇರೇಪಿಸುತ್ತದೆ. ಆಲೋಚನೆ, ವಿಚಾರ ಎಲ್ಲವೂ ಶ್ರೇಷ್ಠವಾಗಿರಬೇಕು ಎಂಬುದು ತೀವ್ರವಾಗಿ ಕಾಡಿದಾಗ ತನಗೆ ಶ್ರೇಷ್ಠವೆನಿಸಿದ ಮಾದರಿಗಳು ಆದರ್ಶಗುಣಗಳ ಆರೋಪಣೆಗೆ ಪ್ರೇರಕವಾಗಬಹುದು. ಇಂತಹ ಮಾದರಿಗಳು ಪ್ರಭಾವಿ ವ್ಯಕ್ತಿಗಳಿಂದ, ಶಿಕ್ಷಣದಿಂದ ಪುಸ್ತಕದ ಓದಿನಿಂದ ಪಡೆದುಕೊಂಡವೂ ಆಗಿರಬಹುದು. ಬದುಕಿನ ಕ್ರಮದೊಳಗೆ ಹಾದು ಹೋದ ಪ್ರಮುಖ ವಿಚಾರಧಾರೆಗಳು ಕೂಡ ಆದರ್ಶದ ರೂಪ ತಾಳಬಹುದು. ಆದರ್ಶಗಳೇ ಚೈತನ್ಯಶಕ್ತಿಗಳಾಗಿ ಮನುಷ್ಯರ ಮುನ್ನಡೆಗೆ ಕಾರಣವಾಗುತ್ತವೆ. ಆದರ್ಶಗಳು ವೈಯಕ್ತಿಕವಾಗಿ ಅನುಸರಣೆಗೆ ಒಳಪಡುವುದರಿಂದಲೇ ಆದರ್ಶದ ರೂಪ ಪ್ರತಿಯೊಬ್ಬರಲ್ಲೂ ಬೇರೆಬೇರೆಯಾಗಿರುತ್ತದೆ.

ಆದರ್ಶ ವಾಸ್ತವದ ಎದುರು ಧೂಳೀಪಟವಾಗುವುದು ಏಕೆ?: ವಾಸ್ತವವು ಕಾಲದಿಂದ ಕಾಲಕ್ಕೆ ಸ್ಥಳದಿಂದ ಸ್ಥಳಕ್ಕೆ ಭಿನ್ನವಾಗಿರುತ್ತದೆ. ವಾಸ್ತವವೆಂದರೆ ವಸ್ತುಸ್ಥಿತಿ ಮಾತ್ರವಾಗದೆ ಕ್ಷಣಾರ್ಧದಲ್ಲಿ ಪಡೆದುಕೊಳ್ಳುವ ತಿರುವೂ ಆಗಿರುತ್ತದೆ. ವಾಸ್ತವ ಯಾವಾಗಲೂ ಏಕಮುಖವಾಗಿರುವುದಿಲ್ಲ, ಬೌದ್ಧಿಕತೆಯ ಆಧಾರ ಮೇಲೆ ತರ್ಕಿಸುವ ಮನಸ್ಸು ವಾಸ್ತವದ ಭಿನ್ನ ಮುಖಗಳಿಗೆ ಎದುರಾದಾಗ ತತ್ತರಿಸುತ್ತದೆ. ಆತಂಕಕ್ಕೊಳಗಾಗಿ ತಳಮಳಕ್ಕೆ ಈಡಾಗುತ್ತದೆ. ತನ್ನ ಆದರ್ಶ-ಕನಸು-ಆಕಾಂಕ್ಷೆಗಳಂತೆಯೇ ಮತ್ತೊಬ್ಬರ ಆದರ್ಶ-ಕನಸು-ಆಕಾಂಕ್ಷೆಗಳು ಇರುತ್ತವೆಯೆಂಬುದು ಮನಸಿಗೆ ಬಾರದೆ ಏಕಮುಖವಾಗಿ ವ್ಯವಹರಿಸಿದಾಗ ವಸ್ತುಸ್ಥಿತಿ ಬೇರೆಯಾಗಿ ತಾನಂದುಕೊಂಡದ್ದಕ್ಕಿಂತ ವ್ಯತಿರಿಕ್ತವಾಗಿರುತ್ತದೆ. ಅಂತೆಯೇ ದೃಷ್ಟಿಗೋಚರವಾಗುವ ಸತ್ಯಕ್ಕಿಂತ ಅಗೋಚರವಾಗಿ ಉಳಿದಿರುವ ನಿಗೂಢತೆಯೂ ಅತಿವಾಸ್ತವದ ಮುಖವೇ ಆಗಿದೆ. ಇದನ್ನು ಮನುಷ್ಯ ಪ್ರಜ್ಞೆ ಗುರುತಿಸಲಾಗದೇ ಹೋದರೂ ಆ ನಿಗೂಢತೆಯ ಅಂಶದ ಬಗ್ಗೆ ಅರಿವು ಮೂಡಿದರೂ ಸಾಕು ವಿಶ್ವ ಪ್ರಯತ್ನಕ್ಕೆ ಮುಂದಾಗಬಹುದು.

ವ್ಯಕ್ತಿನಿಷ್ಠಪ್ರಜ್ಞೆಯ ಮೂಲಕ ಹಲವು ಆಯಾಮಗಳಲ್ಲಿ ತೆರೆದುಕೊಳ್ಳುವ ಕಥನಗಳು ಕೇವಲ ವೈಯಕ್ತಿಕತೆಯಲ್ಲಿ ಪರ್ಯವಸಾನಗೊಳ್ಳದೆ ಸಮಗ್ರತೆಯ ಪ್ರತಿನಿಧಿಯಾಗಿ ಸಾಮಾಜಿಕ ಸಂಘರ್ಷದಿಂದುಂಟಾದ ಸಮಸ್ಯೆಗಳತ್ತ ವೈಚಾರಿಕವಾಗಿ ಆಲೋಚಿಸುವುದಕ್ಕೆ ಪ್ರೇರೇಪಿಸುತ್ತವೆ. ವಾಸ್ತವ ಆದರ್ಶಗಳ ಒಳತೋಟಿಗೆ ಒಳಗಾಗುವ ವ್ಯಕ್ತಿ ಸಂಬಂಧವನ್ನೂ, ಕುಟುಂಬವನ್ನೂ, ಸಮಾಜವನ್ನೂ ಅರಿಯುವಲ್ಲಿ ಅನುಭವಕ್ಕೆ ಪಕ್ಕಾಗಬೇಕಾದ; ಸಮಾಜದ ನಾನಾ ವ್ಯಾಪಾರಗಳಿಗೆ ಪ್ರತಿಕ್ರಿಯಿಸುವ ಸಂದರ್ಭದಲ್ಲಿ ಸತ್ಯಶೋಧನೆಗೆ ಸಜ್ಜಾಗಬೇಕಾದ ಪರಿಯನ್ನು ಈ ಕಥನಗಳು ಶ್ರುತಪಡಿಸುತ್ತವೆ. ವಾಸ್ತವವನ್ನು ಅರಿಯುವ ದೃಷ್ಟಿಕೋನ ಬದಲಾದಾಗ ಬದುಕಿನ ಅನ್ವೇಷಣೆಯ ಮಾರ್ಗವೂ ತೆರೆದುಕೊಳ್ಳುತ್ತದೆ. ಇದನ್ನೇ ತೇಜಸ್ವಿಯವರು 'ವಾಸ್ತವ ಜಗತ್ತಿನ ಸರ್ವೇ ಸಾಧಾರಣ ದೃಶ್ಯವೊಂದು ವಿಶಿಷ್ಟ ದೃಷ್ಟಿಕೋನದ ಚೌಕಟ್ಟಿನೊಳಗೆ ಸ್ಥಗಿತಗೊಳಿಸಿದ ಕೂಡಲೇ ಅನೇಕ ಧ್ವನ್ಯಾರ್ಥಗಳಿಂದ ಕೂಡಿದ ಪ್ರತಿಮೆಯಾಗಿ ಕಲಾಭಿವ್ಯಕ್ತವಾಗುತ್ತದೆ'[9] ಎಂದು ಸ್ಪಷ್ಟಗೊಳಿಸಿದ್ದಾರೆ. ಬಾಹ್ಯ ಮೂಲಗಳಿಂದ ರೂಢಿಸಿಕೊಂಡ ಆದರ್ಶಗಳು ನೇರ ಬದುಕಿನ ಮುಂದೆ ಹೇಗೆ ಸೋಲುತ್ತವೆ ಮತ್ತು ಹೀಗೆ ಸೋಲುವುದು ಅತ್ಯಂತ ಸಹಜ ಎಂಬ ಅರಿವನ್ನು ತೇಜಸ್ವಿಯವರ ಕಥನಗಳಲ್ಲಿ ಗುರುತಿಸಬಹುದು.

## ೩.೧.೪: ದಾಸ್ಯ-ಬಿಡುಗಡೆ: ಅಡೆತಡೆಗಳು ನಿವಾರಣೆಗೊಂಡ ನಿರುಮ್ಮಳ ಸ್ಥಿತಿ

ವೈಯಕ್ತಿಕ ಒತ್ತಾಸೆಯ ಚಿಂತನೆ, ಸಾಮಾಜಿಕ ಒತ್ತಾಸೆಯ ಚಿಂತನೆ ಪರಸ್ಪರ ಘರ್ಷಣೆಗೊಳಗಾಗುವುದು ಕೀರ್ತಿ, ಪ್ರತಿಷ್ಠೆ, ಸ್ಥಾನಮಾನಗಳ ಹಂತಕ್ಕೆ ಬಂದಾಗ, ಮೇಲುಗೈ ಸಾಧಿಸುವುದು ಸಾಮಾಜಿಕ ಒತ್ತಾಸೆಗಳೆ! ಯಾಕೆ? ಎಂಬುವುದನ್ನು ಅರ್ಥೈಸಿಕೊಳ್ಳಲಾರದೆಯೇ ಅಂತಸತ್ವವನ್ನು ಕೊಂದುಕೊಳ್ಳುತ್ತ ಬದುಕುವ ಪರಿ ಅಭ್ಯಾಸಗತವಾಗಿ ಬಿಟ್ಟಿರುತ್ತದೆ. ಹೊರ ಬರುವ ಸಾಧ್ಯತೆಗಳಿಲ್ಲದ ಹಾಗೆ ಚಕ್ರವ್ಯೂಹದೊಳಗೆ ಹೊಕ್ಕು ನಿತ್ಯ ನಿರಂತರ ಬಂದಿಯಾಗಿ ಪರಿತಪಿಸುತ್ತಲೇ ಇರುವ ಬದುಕು ಬೇಸರಿಕೆಯನ್ನೊಡ್ಡುತ್ತದೆ. ಇದು ಜಡಗೊಂಡ ಜೀವನ ಕ್ರಮದ ಬಗೆಗೆ ಅತೃಪ್ತಿಯನ್ನು ಬೆಳೆಸಿ ಅದರಿಂದ ಹೊರಹೋಗುವ ಮಾರ್ಗವನ್ನು ಸೃಷ್ಟಿಮಾಡುತ್ತದೆ.

ವ್ಯಕ್ತಿ ತನ್ನೊಳಗಿನ ವ್ಯಕ್ತಿತ್ವವನ್ನು ಶೋಧಿಸಿಕೊಳ್ಳುವುದು, ವ್ಯಕ್ತಿತ್ವವಿದಳದಿಂದ ಹೊರಬರುವುದು, ಮಾನಸಿಕ ದಾಸ್ಯದ ವಿರುದ್ಧವಾಗಿ ಹೋರಾಡುವುದು ನಡೆದೇ ಇರುತ್ತದೆ. ಆದಾಗ್ಯೂ ಬಂಧನ ಮತ್ತು ಸ್ವಾತಂತ್ರ್ಯ ಇವೆರಡರ ನಡುವಿನ ಸೆಣಸಾಟದಲ್ಲಿ ಆಯ್ಕೆ ಸ್ವಾತಂತ್ರ್ಯದ ಕಡೆಗೆ ಒಲಿಯುತ್ತಿದ್ದರೂ ಸಾಮಾಜಿಕ ಒತ್ತಡಗಳಿಂದ ದಾಸ್ಯವನ್ನು ಅನುಭವಿಸುತ್ತಾನೆ. ದಾಸ್ಯದಿಂದ ಹೊರಬರುವ ಪ್ರಯತ್ನ ಪ್ರಜ್ಞಾಪೂರ್ವಕವಾದಂತೆಲ್ಲಾ ತನ್ನೆಲ್ಲಾ ಆದರ್ಶಗಳು ವಾಸ್ತವದ ಎದುರು ಮೌನ ವಹಿಸುತ್ತವೆ. ಮೌನವೇ ಹೊಸದಾರಿಗಳ ಅನ್ವೇಷಣೆಗೆ ಮಂಥನ ನಡೆಸುತ್ತದೆ.

ಸಂಪ್ರದಾಯದ ಬೇಲಿಯೊಳಗೆ ಬಂಧಿತನಾಗಿರುವ ಸೋಮುವಿಗೆ ತಂದೆ-ತಾಯಿ, ದೇವರು ಧರ್ಮ, ಜಾತಿ, ಲಿಂಗ ಸುತ್ತಣ ಪರಿಸರ ಎಲ್ಲವೂ ನಿಧಾನವಾಗಿ ತನ್ನನ್ನು ಸಾಮಾಜಿಕ ಸಂಕೋಲೆಯೊಳಗೆ ಭದ್ರಗೊಳಿಸುತ್ತಿವೆ ಎಂಬ ಸತ್ಯ ಮನವರಿಕೆಯಾಗುತ್ತದೆ. ಈ ಅರಿವೇ ಪರಂಪರೆಯನ್ನು, ಹುಲಿಯೂರಿನ ಈ ಎಲ್ಲಾ ಸಂಕೋಲೆಗಳನ್ನು ಕಿತ್ತು ಹೊರಹೋಗಲು ಸೋಮುವನ್ನು ಪ್ರೋತ್ಸಾಹಿಸುತ್ತದೆ. ಸ್ವತಂತ್ರವಾದ ತನ್ನದೇ ಬದುಕಿನ ಕಡೆಗೆ ಗಮನ ಹರಿಸುವ ಸೋಮು 'ಗರುಡನನ್ನು ಕೊಲ್ಲು' ಎಂಬ ತಂದೆಯ ಆಜ್ಞೆಯನ್ನು ಧಿಕ್ಕರಿಸಲು ಧಾರ್ಮಿಕ ಶ್ರದ್ಧೆಯನ್ನು ಆಯುಧವನ್ನಾಗಿ ಮಾಡಿಕೊಳ್ಳುತ್ತಾನೆ. ಆಕಸ್ಮಿಕವಾದ ಅವಾಂತರಗಳಲ್ಲಿ ಜೀವಕ್ಕೆ ಅಪಾಯ ಎದುರಾಗುತ್ತದೆ. ಯಾವುದನ್ನು ಧಿಕ್ಕರಿಸಿದ್ದನೋ ಅದರಿಂದಲೇ ಜೀವಕ್ಕೆ ಕುತ್ತು ಬಂದಾಗ ಬದುಕುಳಿಯುವ ಛಲದಿಂದ ಗರುಡನನ್ನು ಕೊಲ್ಲುವ ಕ್ರಿಯೆಗೆ ಮುಂದಾಗುತ್ತಾನೆ. ತಂದೆಯ ಅಣತಿಯನ್ನು ಅಂಗೀಕರಿಸಿದಂತಾಗಿ ಮತ್ತೆ ದಾಸ್ಯದ, ಮನೆತನದ ಹಂಗಿಗೆ ಒಳಗಾಗುತ್ತಿದ್ದೇನೆ ಎಂಬ ಎಚ್ಚರಿಕೆಯನ್ನು ಮೂಡಿಸುತ್ತದೆ. ಹುಲಿಯೂರಿನ ಸರಹದ್ದು ದಾಟಿ ಸ್ವಂತಿಕೆಯ ಬದುಕನ್ನು ಕಟ್ಟಬೇಕೆಂಬ ಆಶಯವೇ ಪ್ರಧಾನವಾಗಿ

'ನೀವು, ನಿಮ್ಮ ಕೋಳಿಮರಿ, ಮನೆ ಮಠ ಎಲ್ಲ ನಿರ್ನಾಮ ನಿಗರುಬಡ್ಡೆ ಕಂಡರೂ ನನಗೇನೂ ಇಲ್ಲ. ನನಗೆ ಈ ಊರೇ ಬೇಡ. ಇಷ್ಟು ಓದಿದವನಿಗೆ ಕೆಲಸ ಎಲ್ಲಾದರೂ ಸಿಕ್ಕೀತು. ನೀವು ಅಮ್ಮ ಎಲ್ಲ ಉಂಡುಟ್ಟು ನಿರಂಬಳ ಇರಿ,'[೧೫]

ಎಂದು ಹೇಳುತ್ತಾ ಎಲ್ಲಾ ಸರಹದ್ದನ್ನು ದಾಟಿ ಮುಂದುವರೆಯುತ್ತಾನೆ.

ಶ್ರೀನಿವಾಸ ತನ್ನ ಅನುಭವಗಳನ್ನು ಹೇಮಂತನೆದುರು ಹಂಚಿಕೊಳ್ಳುವ ಪ್ರಾರಂಭದಲ್ಲಿಯೇ 'ತನ್ನನ್ನು ತಾನು ಅರಿಯುವ' ಕ್ರಿಯೆಯಲ್ಲಿ ತೊಡಗುತ್ತಿದ್ದೇನೆ ಎಂದು ನಿವೇದಿಸಿಕೊಳ್ಳುತ್ತಾನೆ. ಶ್ರೀನಿವಾಸನಿಗೆ ಅರಿವಿಲ್ಲದೆಯೇ ಮೂಲಭೂತವಾದ ಬದಲಾವಣೆಗಳು ನಡೆದು ಹೋಗಿರುತ್ತವೆ. ವಾಸ್ತವದ ಅನುಭವ ಭೂತಕಾಲದ ಘಟನೆಗಳೊಂದಿಗೆ ತಾಳೆ ನೋಡುತ್ತದೆ. ಆಗ

ಅಸಮರ್ಪಕವದ ಜೀವನವಿಧಾನ, ವ್ಯತಿರಿಕ್ತವಾದ ಭೂತಕಾಲೀನ ಘಟನೆಗಳು ನಂಬಿಕೊಂಡ ಮೌಲ್ಯಗಳ ಅರ್ಥಹೀನತೆಯನ್ನು ಸಾಬೀತುಪಡಿಸುತ್ತದೆ. ತನ್ನದೇ ವಿಚಾರ ವಿಮರ್ಶೆಯಲ್ಲಿ ಬೌದ್ಧಿಕವಾದ ಸಂಘರ್ಷಕ್ಕೆ ಮತ್ತೆ ಮತ್ತೆ ಒಳಗಾಗುವ ಶ್ರೀನಿವಾಸ ಇದರಿಂದ ಹೊರ ಬರುವ ದಾರಿಯನ್ನು ತಾನೇ ನಿರ್ಮಾಣಮಾಡಿಕೊಳ್ಳುತ್ತಾನೆ. ಹಲವು ವೈರುಧ್ಯಗಳ ನಡುವೆ ತನ್ನ ಜೀವನಗತಿ ಮತ್ತು ಗುರಿಗಳನ್ನು ನಿಷ್ಕರ್ಷಿಸುವವನು ತಾನೇ ಎಂಬ ನಿರ್ಧಾರ ದೃಢವಾಗಿ ಯಾವುದನ್ನೂ ಚಾಚೂತಪ್ಪದೆ ಅನುಸರಿಸುವುದಕ್ಕಿಂತ ಅವುಗಳನ್ನು ಪ್ರಶ್ನಿಸಿ ತೀರ್ಮಾನ ತೆಗೆದುಕೊಳ್ಳಲು ನಿರ್ಧರಿಸುತ್ತಾನೆ. ಇಲ್ಲಿ ಮಾನಸಿಕ ದಾಸ್ಯದ ಬಿಡುಗಡೆಗೆ ಪ್ರಯತ್ನಿಸಿರುವುದು ಸ್ಪಷ್ಟವಾಗುತ್ತದೆ.

ನಿಗೂಢ ಮನುಷ್ಯರು ಕಥೆಯಲ್ಲಿ ಮನುಷ್ಯ ತನ್ನನ್ನು ತಾನು ಅರಿಯುವ ಪ್ರಯತ್ನದಲ್ಲಿ ಯಾವುದೇ ಒಂದು ವ್ಯಕ್ತಿತ್ವದೊಳಗೆ ಸ್ಥಿರವಾಗಿ ಉಳಿಯದೆ ನಿರಂತರ ಪರಕಾಯ ಪ್ರವೇಶ ಮಾಡುತ್ತಾ ಅರ್ಥಹೀನ ಮೌಲ್ಯಗಳನ್ನು ಅನುಸರಿಸುತ್ತಾ ಬದುಕಿಗೆ ಬದ್ಧವಾಗುವುದಕ್ಕೆ ಹೆಣಗಾಡುವುದು ತರ್ಕಾತೀತ ನೆಲೆಯಲ್ಲಿ. ಅನುಭವದ ಬೆನ್ನು ಹತ್ತಿ ಬದುಕಿನ ಅರ್ಥ ಶೋಧನೆಯಲ್ಲಿ ತೊಡಗುವ ಮನುಷ್ಯ ತಾನು ಅರ್ಥೈಸಿಕೊಳ್ಳಲಾಗದ ರಹಸ್ಯಕ್ಕೆ ಮುಖಾಮುಖಿಯಾದಾಗ ಬೆಚ್ಚಿ ಬೀಳುತ್ತಾನೆ. ಇದುವರೆಗಿನ ಆದರ್ಶ, ತತ್ವ ಸಿದ್ಧಾಂತಗಳೂ ನಿಗೂಢವಾಗುತ್ತಿರುವ ರಹಸ್ಯವನ್ನು ಭೇದಿಸಲು ಅಸಮರ್ಥವಾದಾಗ ಈ ದಾಸ್ಯದಿಂದ ಬಿಡುಗಡೆಯೇ ಇಲ್ಲವೆಂಬ ತೀರ್ಮಾನಕ್ಕೆ ಗೋಪಾಲಯ್ಯ ಸ್ಥಿರಗೊಂಡರೆ ಈ ದಾಸ್ಯದಿಂದ ಅಗೋಚರವಾದ ದಾಸ್ಯಕ್ಕೆ ಬಂಧಿಯಾಗುವತ್ತ ರಂಗಪ್ಪ ಜಗನ್ನಾಥರು ಚಲಿಸುತ್ತಾರೆ.

ಬದಲಾವಣೆ ಸಮಾಜದ ಒಳಗಿನ ಸತ್ವ, ಒತ್ತಡಗಳಿಂದಲೇ ಬೆಳೆದು ಬರಬೇಕು. ಬೋಬಣ್ಣನ ವ್ಯಕ್ತಿತ್ವದ ಮೇಲೆ ಸವಾರಿ ಮಾಡುವ ಮಾಚಮ್ಮ ಮಗಳು ಮತ್ತು ಅಳಿಯನ ಸಂಬಂಧವನ್ನು ತನ್ನ ಹತೋಟಿಯಲ್ಲಿ ಇಟ್ಟುಕೊಳ್ಳ ಬಯಸುವುದು; ಅದಕ್ಕೆ ಬದ್ಧಳಾದ ಕಾವೇರಿ ತಾಯಿಯ ಪಕ್ಷ ವಹಿಸುವುದು ಇದೆರಡನ್ನೂ ಮಿರಲಾಗದೆಯೇ ಮೀರಬೇಕು ಎಂದು ಅನಿಸದೆ ಇರುವುದು ಮೆದು ಮತ್ತು ದುರ್ಬಲ ವ್ಯಕ್ತಿತ್ವದ ಬೋಬಣ್ಣನ ಬಗ್ಗೆ ಕನಿಕರ ಮೂಡುವಂತೆ ಮಾಡುತ್ತದೆ. ತನ್ನ ಜೀವನಕ್ರಮವನ್ನು ಬದಲಾಯಿಸಿಕೊಳ್ಳಲು ಎದುರಾಗುವ ಅನಿವಾರ್ಯತೆ ಒಮ್ಮೆಲೆ ಆತನನ್ನು ಅಂಥ ಒಂದು ಸಂದರ್ಭದಿಂದ ಹೊರ ಹೋಗಲು ಪ್ರಚೋದಿಸಿಬಿಡುತ್ತದೆ. ಆಂತರಿಕ ಪ್ರಜ್ಞೆಯ ಸಂಘರ್ಷದಲ್ಲೇ ಇದ್ದಾತನನ್ನು ತನ್ನ ದಾಸ್ಯದ ಆವರಣವನ್ನು ಮೀರಿ ಹೊಸ ಬದುಕನ್ನು ಸೃಷ್ಟಿಸಿಕೊಳ್ಳುವತ್ತ ಹೆಜ್ಜೆ ಇರಿಸುವಂತೆ ಮಾಡುತ್ತದೆ.

'ಜುಗಾರಿಕ್ರಾಸ್' ಎಂಬುದು ಮಲೆನಾಡಿನ ಸಾವಿರಾರು ಚದರ ಮೈಲಿಯ ವಿಸ್ತಾರವಾದ ಸಹ್ಯಾದ್ರಿ ಅರಣ್ಯದ ನಡುವೆ ಗೋಚರಿಸುವ ನಾಲ್ಕಾರು ದಾರಿ ಕೂಡುವ ಸರ್ಕಲ್‌ಗೆ ಇರುವ ಹೆಸರು. ಜುಗಾರಿಯೆಂದರೆ ಜೂಜು. ಹೆದ್ದಾರಿ ಬದಿಯಲ್ಲಿರುವುದರಿಂದ ಈ ಕೂಡು ರಸ್ತೆಯಲ್ಲಿ ಧರ್ಮಸ್ಥಳ, ಸುಬ್ರಮಣ್ಯ, ಕೊಲ್ಲೂರು, ಉಡುಪಿ, ಕಾರ್ಕಳ ಮುಂತಾದ ಕಡೆ ಹೋಗುವ ಕವಲು ದಾರಿಗಳಿವೆ. ಈ ಕಥನದ ಅವಧಿ ೨೪ ಗಂಟೆಗಳದ್ದೇ ಆದರೂ ಆ ಅವಧಿಯಲ್ಲಿ ಘಟಿಸಿಹೋದ ಘಟನೆಗಳು ಜೀವಿತಾವಧಿಯ ಅರ್ಧ ಆಯಸ್ಸನ್ನು ಕಬಳಿಸಿದಂತೆ ಗೋಚರವಾಗುತ್ತವೆ. ಎಂದರೆ ಕಾದಂಬರಿ ಪ್ರಪಂಚ; ಜೀವನ ಕ್ರಮದ ಹಲವು ವಿನ್ಯಾಸಗಳನ್ನು ಧ್ವನಿಸುವುದು ಸ್ಪಷ್ಟವಾಗಿದೆ. ಒಳಜಗತ್ತಿನಲ್ಲಿ ತನ್ನದೇ ಕಾರ್ಯಚಟುವಟಿಕೆಗಳಿಗೆ ಬದ್ಧನಾಗಿದ್ದಾನೆ ಎಂದುಕೊಳ್ಳುವ ಪ್ರತಿಯೊಬ್ಬ

ಮನುಷ್ಯನ ಹಿಂದೆ ಕಾಣದ ಯಾವುದೋ ಕೈಚೆಲ್ಲಿ ಸೂತ್ರದಬೊಂಬೆಯಂತಾಗುವುದರ ಚಿತ್ರಣವಿದೆ. ಅಗೋಚರವಾದ ದಾಸ್ಯಕ್ಕೆ ಈಡಾಗುವ ಮೇಲಿನ ಪಾತ್ರಗಳು ಅವುಗಳಿಂದ ಹೊರಬರುವ ಪ್ರಯತ್ನಕ್ಕೆ ಮೊದಲಾಗುತ್ತವೆ.

ಹಗಲು ಮೂರು ರಾತ್ರಿ ನಿರಂತವಾಗಿ ಬೀಸಿದ ಬಿರುಗಾಳಿಯ ದೆಸೆಯಿಂದ ಮುರಿದು ಬಿದ್ದ ಹಲಸಿನ ಮರದೊಂದಿಗೆ ಘಟಿಸುವ ಕಿರುಗೂರಿನ ಹಲವು ಪ್ರಕರಣಗಳು ಬೇರೆ ಬೇರೆ ತಿರುವನ್ನು ಪಡೆದುಕೊಳ್ಳುತ್ತವೆ. ಹಿಂದಿನಿಂದ ಪೋಷಿಸಿಕೊಂಡು ಬಂದಿದ್ದ ಸನಾತನ ಸಂಪ್ರದಾಯಗಳು ಈ ಪ್ರಕರಣದ ಸಂದರ್ಭದಲ್ಲಿ ತಮ್ಮ ಅಧಿಕಾರವನ್ನು ವೈಯಕ್ತಿಕವಾಗಿ, ಸಾಮೂಹಿಕವಾಗಿ ಬಲಿಷ್ಠಗೊಳಿಸಲು ಹವಣಿಸುತ್ತವೆ. ಜಾತೀಯತೆ, ವರ್ಗ, ಸ್ತ್ರೀಶೋಷಣೆ, ವ್ಯವಸ್ಥೆಯ ಕ್ರೌರ್ಯ ಹೀಗೆ ಒಂದರೊಳಗೊಂದು ಸೇರಿಹೋಗಿ ಹಲವು ಬೇಗುದಿಗಳಿಗೆ ಕಾರಣವಾಗಿ ಕಿರುಗೂರಿನ ಪರಿಸ್ಥಿತಿ ಬಿಗಡಾಯಿಸುತ್ತದೆ. ಇದೊಂದು ರೀತಿಯ ದಾಸ್ಯ. ಪರಂಪರೆ–ಸಂಪ್ರದಾಯ ಪೋಷಿತ ದಾಸ್ಯ. ಇದರಿಂದ ಹೊರಬರಲು ಗಯ್ಯಾಳಿ ದಾನಮ್ಮ ಕಾರಣಳಾಗುತ್ತಾಳೆ. ಈಕೆಯ ನಾಯಕತ್ವದಲ್ಲಿ ಸಂಘಟಿತಗೊಳ್ಳುವ ಸ್ತ್ರೀಯರಿಂದ, ಪುರುಷ ನಿರ್ಮಿತ ಶೋಷಣೆಯ ಮತ್ತೊಂದು ರೂಪವಾದ ಪಂಚಾಯತಿ ಪ್ರಕರಣ ಬರಖಾಸ್ತುಗೊಳ್ಳುವುದು, ತರಲೆ ಶಂಕ್ರಪ್ಪ ತಲೆ ಮರೆಸಿಕೊಂಡು ಪಾರಾಗುವುದು, ಸೇಂದಿ ಅಂಗಡಿ ನಾಶವಾಗುವುದು ನಡೆಯುತ್ತದೆ. ಇವೇ ರೈತ ಚಳುವಳಿಗೆ ಸ್ಪೂರ್ತಿಯಾಗುತ್ತದೆ. ಸ್ತ್ರೀ ಸಂಘಟನೆ, ಜಾತಿವಿನಾಶ ಸಂಘಟನೆ ಪ್ರಖರಗೊಳ್ಳುತ್ತದೆ. ಭಾರತೀಯ ಸಾಮಾಜಿಕ ಪರಂಪರೆಯ ನಂಬಿಕೆಗಳನ್ನು ಭಗ್ನಗೊಳಿಸಿದ ಸಾಮೂಹಿಕ ನಾಯಕತ್ವ ಕಿರುಗೂರಿನಂತಹ ಅನೇಕ ಹಳ್ಳಿಗಳು ಸ್ತ್ರೀ ಸಮಾನತೆ, ಸ್ತ್ರೀ ಸ್ವಾತಂತ್ರ್ಯ, ಸ್ತ್ರೀ ಸಂಬಂಧಿತ ವಾದಗಳಾಚೆಗೆ ಬೆಳೆದು ನಿಲ್ಲುವುದಕ್ಕೆ ಸಹಕಾರಿಯಾಗುತ್ತದೆ. ಸ್ತ್ರೀ ಸಮುದಾಯದಲ್ಲಿ ಉಂಟಾದ ಅರಿವು ಸಮೂಹಪ್ರಜ್ಞೆಯಾಗಿ ಹೊಸ ಹೊಸ ಚಿಂತನೆಗಳಿಗೆ ಆಸ್ಪದ ಮಾಡಿಕೊಡುತ್ತದೆ.

ದೆವ್ವದ ಅಸ್ತಿತ್ವ ಶೋಧಿಸಲು ಹೊರಟ ನಿರೂಪಕ ಮತ್ತು ಆತನ ಗೆಳೆಯ ಷಾ ಇಬ್ಬರೂ ಸ್ಮಶಾನದಲ್ಲಿ ಗೊಂದಲಕ್ಕೆ ಒಳಗಾಗುತ್ತಾರೆ. ಗೊಂದಲವಿಷ್ಟೇ, ದೆವ್ವದ ಅಸ್ತಿತ್ವ ದೃಷ್ಟಿಗೋಚರವಾಗದೆ ಅನ್ಯರೂಪ ಧಾರಣೆಯಾದಲ್ಲಿ ಅದರ ಸ್ಪಷ್ಟತೆಯಾಗುವುದು ಹೇಗೆ? ಎಂಬುದು. ಈ ಗೊಂದಲವನ್ನು ಪರಿಹರಿಸಲು ಚೈನೀ ಮಂತ್ರಸೃಷ್ಟಿಯಾಗುತ್ತದೆ. ಅನ್ಯಭಾಷೆಯ ಮಂತ್ರ ನಿರೂಪಕನಿಗೆ, ಸಂದರ್ಭದಲ್ಲಿ ಕೈಕೊಟ್ಟು ಫಜೀತಿಯನ್ನು ಹುಟ್ಟು ಹಾಕುತ್ತದೆ. ಇಬ್ಬರಲ್ಲೂ 'ಅಸ್ತಿತ್ವದಗ್ರಹಿಕೆ'ಯ ಬಗ್ಗೆ ವಾದವೇಳುತ್ತದೆ. ಸ್ಮಶಾನದಲ್ಲಿ ಬೂದಿರಾಶಿ ದೆವ್ವದ ಆಕಾರ ತಾಳಿ ಇಬ್ಬರ ವೈಚಾರಿಕಗ್ರಹಿಕೆಯನ್ನು ಕಲಕಿ ಬಿಡುತ್ತದೆ. ಅದೇ ಭಯ ಮತ್ತು ಮೃತ್ಯುಛಾಯೆ ನಾಯಿಯ ರೂಪದಲ್ಲಿ ಬೆನ್ನಟ್ಟುತ್ತದೆ. ಇದರಿಂದ ದೂರಸರಿದು ಹೋದಂತೆಲ್ಲಾ ಮಾಯಾಮೃಗವು ಇವರಿಬ್ಬರನ್ನು ಹಿಂಬಾಲಿಸುತ್ತಲೇ ಬರುತ್ತದೆ. ಇದನ್ನು ದಾಸ್ಯವೆನ್ನಲು ಸಾಧ್ಯಾವಾದೀತೇ? ಇದಂತೆಹ ದಾಸ್ಯ? ಆದರೂ ಇದೊಂತರ ದಾಸ್ಯವೇ. ಹೊರಬರಲಾಗದ ದಾಸ್ಯ, ಮೃತ್ಯುಛಾಯೆಯ ದಾಸ್ಯ, ಮೃತ್ಯುವಿನ ದಾಸ್ಯ. ದಾಸ್ಯದ ಸರಪಳಿ, ಸಂಕೋಲೆಗಳನ್ನು ಬಿಚ್ಚಬೇಕೆಂದು ಹೊರಟರೆ ಇನ್ನೂ ಹೆಚ್ಚು ಹೆಚ್ಚು ಸುತ್ತಿಕೊಳ್ಳುತ್ತದೆ. ಮಾನಸಿಕ ದಾಸ್ಯವದು ದಾಸ್ಯದಿಂದ ಹೊರಬಂದರೆ ಔನ್ನತ್ಯವೇ ಅಥವಾ ಹೀಗೆ ಇದ್ದರೆ ಅವನತಿಯೇ ಎಂದು ನಿಷ್ಕರ್ಷಿಸಲಾಗದ ದಾಸ್ಯ.

ಮಾನವ ಸಂಕುಲವನ್ನು ಎಡೆಬಿಡದೆ ಕಾಡಿದ ವಿಚಾರ 'ಮೃತ್ಯು'. ಮೃತ್ಯುವಿನ ಕರಾಳತೆ ಕಂಡೂ-ಕಾಣದಂತೆ ಭಯವನ್ನೊಡ್ಡುತ್ತದೆ. ಆ ಭಯವೇ ದಾಸ್ಯವಾಗಿ ರೂಪುಗೊಂಡಿರಲೂಬಹುದು. ಆ ದಾಸ್ಯ ಮೃತ್ಯುದಾಸ್ಯ, ಪ್ರಕೃತಿಯೊಂದನ್ನುಳಿದು ಉಳಿದೆಲ್ಲವನ್ನೂ ನಿಯತಕಾಲಿಕವಾಗಿ ತನ್ನೊಳಗೆ ಹುದುಗಿಸಿಕೊಳ್ಳುತ್ತಾ ಸಾಗಿದೆ. ಮೃತ್ಯು, ವ್ಯಕ್ತಿಯ ಅಂತಃಸತ್ವವನ್ನು ಕಲಕಿ ನಿರಾಳವಾಗಿ ಉಳಿದುಬಿಡುವುದು. ಇದು ಬಿಡಿಸಲಾಗದ ಕಗ್ಗಂಟು ಮತ್ತು ವ್ಯಕ್ತಿಯ ವೈಚಾರಿಕ ಗ್ರಹಿಕೆಗಳಿಗೆ ಒಡ್ಡುವ ಸವಾಲು! ಆದರೆ ಇದರ ಇತ್ಯರ್ಥ ಮಾತ್ರ ಸಾಂದರ್ಭಿಕ ಸ್ವರೂಪದ ಹೊರಗೆ ಉಳಿದು ಬಿಡುತ್ತದೆ.

## ೩.೧.೫: ತರ್ಕ ಮತ್ತು ಅನುಭವ ಸಿದ್ಧಾಂತ: ತಾರ್ಕಿಕತೆಯ ಭೌತಿಕ ದರ್ಶನ

**ತರ್ಕ:** ಕಲಿತ ಶಿಕ್ಷಣದ ಆಧಾರದಿಂದ, ಮತ್ತೊಬ್ಬರ ಅನುಭವಗಳಿಂದ, ಕೆಲವೊಂದು ವೈಜ್ಞಾನಿಕ ಫಲಿತಗಳ ಆಧಾರದಿಂದ ಕಾರ್ಯಾಕಾರಣ ಸಂಬಂಧ ಕಲ್ಪಿಸಿ ನಿರ್ಣಯಗಳಿಗೆ ಬರುವುದು. **ಅನುಭವ:** ತಮ್ಮ ಸಂವೇದನೆಗಳಿಗೆ ಎಟಕುವ ಸಂಗತಿಗಳು, ಪಂಚೇಂದ್ರಿಯಗಳ ಮೂಲಕ ಪರಿಶೀಲನೆಗೆ ಒಳಪಟ್ಟು ವಾಸ್ತವಿಕ ಸತ್ಯಕ್ಕೆ ತಲುಪುವುದು.

ವೈಯಕ್ತಿಕ ಆಲೋಚನೆಗಳು ಬೇರೆಬೇರೆಯಾದಂತೆ ಚಿಂತನೆಗಳೊಂದಿಗೆ ಪ್ರತಿಯೊಬ್ಬರ ಮನೋಧರ್ಮವೂ ಬದಲಾಗುತ್ತಿರುತ್ತದೆ. ಒಂದು ನಿಗೂಢ ವಿಷಯವನ್ನು ಅನ್ವೇಷಿಸ ಹೊರಡುವ ಹಲವಾರು ಜನರ ದೃಷ್ಟಿಕೋನ ಅಭಿಪ್ರಾಯ ಭೇಧಕ್ಕೆ ಎಡೆಮಾಡಿಕೊಡುವುದು ಸಹಜ. ಪ್ರತಿಯೊಬ್ಬರ ಆಲೋಚನೆಗಳು ಒಂದಕ್ಕಿಂತ ಒಂದು ತೀರಾ ಭಿನ್ನವಾಗಿರುತ್ತದೆ. ತಮ್ಮ ತಮ್ಮ ಆಲೋಚನೆಗಳಿಂದ ಅಥವಾ ತಮ್ಮ ಅನುಭವಕ್ಕೆ ಬಂದ ರೀತಿಯಲ್ಲಿ ಗ್ರಹಿಸಿ ಕೊಡುವ ಕಾರಣಗಳು, ಸಮರ್ಥನೆಗಳು ತೀರಾ ಭಿನ್ನವಾಗಿದ್ದು ಅವರವರ ತಾರ್ಕಿಕ ನೆಲೆಯ ಮೇಲೆ ನಿಂತಿರುತ್ತದೆ. ಒಂದು ಘಟನೆಯನ್ನು ಹಲವಾರು ರೀತಿಯಲ್ಲಿ ತಿರುಚಬಹುದಾಗಿದ್ದು ತಿರುಚಲ್ಪಟ್ಟ ಪ್ರತೀ ಮುಖವೂ ಸತ್ಯವೆಂದೇ ಬಿಂಬಿಸಲ್ಪಡುತ್ತದೆ. ತರ್ಕದ ಆಧಾರದ ಮೇಲೆ ಅದೇ ಅಂತಿಮ ಸತ್ಯವಾಗಿರುತ್ತದೆ. ಒಬ್ಬೊಬ್ಬರಿಗೆ ಸತ್ಯವು ಒಂದೊಂದು ರೀತಿಯಲ್ಲಿ ದರ್ಶನವನ್ನೀಯುತ್ತದೆ. ಯಾವುದೇ ಒಂದು ಘಟನೆಯನ್ನು ತಾರ್ಕಿಕತೆಯ ಆಧಾರದ ಮೇಲೆ ಸತ್ಯವೆಂದು ಸಾಧಿಸಲು ಸಾಧ್ಯವಿದೆಯೋ! ಅದೇ ರೀತಿ ತರ್ಕದಿಂದಲೇ ಅದನ್ನು ಸತ್ಯ ಅಲ್ಲ ಎಂದು ಸಾಧಿಸಿ ತೋರಿಸಲು ಸಾಧ್ಯವಿದೆ. ಇದರಿಂದ ಸತ್ಯ ಎಂಬುದು ಒಂದು ನಿರ್ದಿಷ್ಟ ಆಕಾರವಲ್ಲ. ಅದು ನೋಡುವ ದೃಷ್ಟಿಕೋನಕ್ಕೆ ತಕ್ಕಂತೆ ರೂಪುಗೊಳ್ಳುತ್ತದೆ ಎಂಬ ಸೂಕ್ಷ್ಮ ತತ್ವ ಧ್ವನಿತವಾಗುತ್ತದೆ.

ವಾಸ್ತವವು ತರ್ಕಕ್ಕಿಂತ ತೀರಾ ಭಿನ್ನವಾಗಿದ್ದರೂ, ವಾಸ್ತವದ ಗ್ರಹಿಕೆ ಒಂದೇ ರೀತಿಯಲ್ಲಿ ಅನುಭವಕ್ಕೆ ಬರುತ್ತದೆ ಎನ್ನಲಾಗುವುದಿಲ್ಲ. ಮನುಷ್ಯಪ್ರಜ್ಞೆಯ ಸ್ವರೂಪವನ್ನು ಜೀವನವು ತೀರ್ಮಾನಿಸುತ್ತದೆಯೇ ಹೊರತು ಮನುಷ್ಯಪ್ರಜ್ಞೆಯೇ ಜೀವನದ ರೂಪುರೇಷೆಗಳನ್ನು ನಿರ್ಧರಿಸುವುದಿಲ್ಲ. ವಾಸ್ತವವು ತಾರ್ಕಿಕತೆಯ ಆಧಾರದ ಮೇಲೆ ಘಟಿಸುವುದಿಲ್ಲ. ಅಂದರೆ ವಾಸ್ತವವೂ ಸ್ಥಿರವಾದ ಸತ್ಯ ಅಲ್ಲ ಎಂದಾಗ ಯಾವುದೇ ತರ್ಕ ನಿಲ್ಲುವುದಿಲ್ಲ. ಏಕೆಂದರೆ ಮನುಷ್ಯಪ್ರಜ್ಞೆಯೂ ವಾಸ್ತವದಂತೆ ಕಾಲದೇಶ ಹಾಗೂ ಸಂದರ್ಭಗಳಿಗೆ ಅನುಗುಣವಾಗಿ ಪರಿವರ್ತನೆಗೆ ಒಳಗಾಗುತ್ತಿರುತ್ತದೆ. ತಾರ್ಕಿಕತೆಯು ವಾಸ್ತವದ ಭೌತಿಕರೂಪವನ್ನು ಪ್ರತ್ಯಕ್ಷೀಕರಿಸಿಕೊಂಡಾಗ ಅವೆರಡರ ಮಧ್ಯೆ ಸಂಘರ್ಷವೇರ್ಪಟ್ಟು ನಿರಂತರ ಬದಲಾವಣೆಗೆ ಒಳಗಾಗುತ್ತಿರುತ್ತದೆ.

ತರ್ಕ ಮತ್ತು ಅನುಭವ ಪರಸ್ಪರ ಎದುರಾಗಿ ನಿಂತು ಒಂದು ಮತ್ತೊಂದನ್ನು ಪರೀಕ್ಷಿಸುತ್ತದೆ. ಸರಳ ರೇಖಾತ್ಮಕ ನೆಲೆಯಲ್ಲಿ ಗ್ರಹಿಸಿದಾಗ ಹುಟ್ಟುವ ತಾರ್ಕಿಕ ಸ್ವರೂಪಕ್ಕೂ ಸಂಕೀರ್ಣ ನೆಲೆಯಲ್ಲಿ ಪರಿಭಾವಿಸಿದಾಗ ಹುಟ್ಟುವ ಚಿಂತನೆಗಳಿಗೂ ಪರಸ್ಪರ ವೈರುಧ್ಯಗಳೇರ್ಪಟ್ಟು ಎರಡರ ನಡುವೆ ಬಿಕ್ಕಟ್ಟು ತಲೆದೋರುತ್ತದೆ.[೧೬]

ತಂದೆಯ ಅಧಿಕಾರ, ಹುಲಿಯೂರಿನ ಮನೆತನ-ಪಂಪರೆ ಎಂಬೆಲ್ಲ ಸಾಂಪ್ರದಾಯಿಕ ವಾತಾವರಣದಲ್ಲಿ ಬಂಧಿತನಾದ ಸೋಮು ಆ ಸರಹದ್ದನ್ನು ಮೀರುವ ತುಡಿತದಲ್ಲಿರುತ್ತಾನೆ. ತನ್ನ ಸಹಜ ಪ್ರವೃತ್ತಿಗಳಾದಿಯಾಗಿ ಎಲ್ಲವೂ ತಂದೆಯ ಅಣತಿಗೆ ಒಳಪಡುತ್ತಿವೆಯೇನೋ! ಎಂಬ ಭಾವದಲ್ಲಿ ತಂದೆಯ ಅಧೀನತೆಯಿಂದ ಹೊರಬರಲು ಉದ್ದೇಶಿಸುತ್ತಾನೆ. ಅದರ ಮೊದಲನೆಯ ಹಂತವೇ 'ಗರುಡನನ್ನು ಕೊಲ್ಲು' ಎಂಬ ತಂದೆಯ ಆಜ್ಞೆಯನ್ನು ಪ್ರಜ್ಞಾಪೂರ್ವಕವಾಗಿ ತಿರಸ್ಕರಿಸುವುದು, ವಿಷ್ಣುವಾಹನನಾದ ಗರುಡನನ್ನು ಕೊಂದು ಯಾವ ನರಕಕ್ಕೆ ಹೋಗಲಿ ಎಂದು ಗರುಡನ ಬಗೆಗೆ ತಾಳುವ ಶ್ರದ್ಧೆ, ನಂಬಿಕೆ ತಂದೆಯ ವಿಚಾರಗಳಿಗೆ ತದ್ವಿರುದ್ಧವಾದ ಮನಸ್ಥಿತಿಯಿಂದ ಉದ್ಭವಿಸಿದ್ದು. ತಂದೆಯ ಅಶ್ರದ್ಧೆ-ಈತನಲ್ಲಿ ಶ್ರದ್ಧೆಯ ಹೆಸರಿನಲ್ಲಿ ಮಾರ್ಪಟ್ಟಿತ್ತು. ತಂದೆಯ ಆದೇಶ, ಆಚಾರ-ವಿಚಾರಗಳನ್ನು ಬಂಧನವೆಂದು ಪರಿಗಣಿಸುವ ಸೋಮು ಪ್ರಜ್ಞಾಪೂರ್ವಕವಾಗಿ ಆದರಿಂದ ಹೊರಹೋಗಬರಲು ಹಾತೊರೆಯುತ್ತಾನೆ. ಆಗ ಆತನ ನಡವಳಿಕೆಗಳು ಧಾರ್ಮಿಕ ಶ್ರದ್ಧೆಯ ರೂಪ ತಾಳಿ ಗರುಡನನ್ನು ಕೊಲ್ಲದಂತೆ ತಡೆಹಿಡಿದರೂ ತಾನೇ ಗರುಡನಿಂದ ಆಕ್ರಮಣಕ್ಕೊಳಗಾದಾಗ ಗರುಡನನ್ನು ಕೊಲ್ಲುವಂತಾಗುತ್ತದೆ. ಗರುಡನನ್ನು ಕೊಲ್ಲುವ ಮನೋಭಾವದ ಹಿಂದೆ ತಂದೆಗಿದ್ದುದು ಕೋಳಿಗಳ ರಕ್ಷಣೆ ಮಾತ್ರ. ತಂದೆಯ ಆಜ್ಞೆಯನ್ನು ನಿರಾಕರಿಸುವುದಕ್ಕೆ ಸಾಂದರ್ಭಿಕವಾಗಿ ಹುಟ್ಟಿಕೊಂಡ ಅಹಿಂಸಾತತ್ವ ಗರುಡನಿಂದ ಆಕಸ್ಮಿಕ ಆಕ್ರಮಣಕ್ಕೊಳಗಾದ ಸಂದರ್ಭದಲ್ಲಿ ಗರುಡನನ್ನು ಕಚಕಚನೆ ಜಗಿದು ಕೊಲ್ಲುವುದರ ಮೂಲಕ ಹಿಂಸೆಯಾಗಿ ಪರಿವರ್ತಿತವಾಗುತ್ತದೆ. ಸೋಮು ತಂದೆಯನ್ನು ವಿರೋಧಿಸುವುದಕ್ಕೆ ಬಳಸಬೇಕೆಂದಿದ್ದ ಅಹಿಂಸಾತತ್ವದ ತರ್ಕ ವಾಸ್ತವದೆದುರು ಸೋತು ಹೊಸ ಅನುಭವದೊಂದಿಗೆ ಅಲ್ಲಿಂದ ಹೊರ ನಡೆಯುವ ದಾರಿ ಕಲ್ಪಿಸಿಬಿಡುತ್ತದೆ. ಆಳು ಲಿಂಗನ ಮುಗ್ಧತೆಯನ್ನು, ತಂದೆಯ ಅಶ್ರದ್ಧೆ, ಅಧಿಕಾರ ಪ್ರವೃತ್ತಿಯನ್ನು ತಾರ್ಕಿಕ ನೆಲೆಯಲ್ಲೇ ಖಂಡಿಸುತ್ತಿದ್ದ ಸೋಮು ಆದರಿಂದ ಹೊರಬರಲಾಗದೆ ಚಡಪಡಿಸುತ್ತಿದ್ದವನು ತನ್ನ ಉಳಿವಿಗಾಗಿ ಗರುಡನ ಕತ್ತನ್ನು ಜಗಿದು ಕೊಲ್ಲಬೇಕಾಗಿ ಬಂದದ್ದು ಆಕಸ್ಮಿಕವಾಗಿದ್ದರೂ ತಂದೆಯ ಅವಹೇಳನಕಾರಿ ಮಾತು ಆತನನ್ನು ಈ ಎಲ್ಲಾ ಸರಹದ್ದನ್ನು ಮೀರಿಕೊಂಡು ಹೊರನಡೆಯುವ ದಾರಿಯನ್ನು ನಿರ್ಮಾಣಮಾಡಿಬಿಡುತ್ತದೆ. ತಂದೆಯೊಂದಿಗಿನ ವಿರೋಧಾಭಾಸದ ಬದುಕು ತಾನು ಗಳಿಸಿದ ಅನುಭವದಿಂದಾಗಿ ಮಾರ್ಪಡುತ್ತದೆ.

ನಿಗೂಢ ಮನುಷ್ಯರು ಕಥೆಯಲ್ಲಿನ ಜಗನ್ನಾಥ ಮತ್ತು ರಂಗಪ್ಪರ ನುಗುಬೀಡಿನ ಪ್ರಯಾಣ ಆಕಸ್ಮಿಕವಾಗಿ ನಿರ್ಧರಿತಗೊಂಡದ್ದು. ಕತ್ತಲೆಯ ಲೋಕಕ್ಕೆ ಪ್ರವೇಶಿಸುವ ಇವರಿಬ್ಬರೂ ಗೋಪಾಲಯ್ಯನಂತಹ ನಾಗರಿಕ ಅನುಭವಿ ವ್ಯಕ್ತಿಯ ಜೊತೆಗೆ ಕಾಂಪ್ರ, ಕುಳುಪ, ಮರಸರಂತಹ ಅನಾಗರಿಕ ಆದಿಮಾನವರನ್ನು ದರ್ಶಿಸುತ್ತಾರೆ. ಇದುವರೆಗಿನ ಆದರ್ಶ ತತ್ವ ಸಿದ್ಧಾಂತಗಳೂ ನಿಗೂಢವಾಗುತ್ತಿರುವ ರಹಸ್ಯವನ್ನು ಭೇದಿಸಲು ಅಸಮರ್ಥವಾದಾಗ ಗೋಪಾಲಯ್ಯ ಪ್ರಕೃತಿಯೊಂದಿಗಿನ ಹೋರಾಟದಲ್ಲಿ ನಿರತನಾದರೆ; ಜಗನ್ನಾಥ-ರಂಗಪ್ಪ ಕೆಸರಿನಲ್ಲಿ ಹೂತು ಹೋಗಿದ್ದ ಕಾರನ್ನೂ ಬಿಟ್ಟು ಉಜಿರೆಗೆ ಸಾಗುವ ಮಾರ್ಗ ಹಿಡಿದು ಬೇರೆ ದಿಕ್ಕಿನತ್ತ ಚಲಿಸುತ್ತಾರೆ. ತರ್ಕಕ್ಕೆ ಒಡ್ಡಿಯೇ ಅನುಭವಕ್ಕೆ ಒಳಗಾಗುತ್ತಿದ್ದ ಗೋಪಾಲಯ್ಯ-ಜಗನ್ನಾಥ ತಾರ್ಕಿಕವಾದ ಅನುಭವಕ್ಕಿಂಥ ವಿಭಿನ್ನ ಅನುಭವಕ್ಕೆ ಒಡ್ಡಿಕೊಳ್ಳಲು ಸಿದ್ಧರಿರುವವರು. ಗೋಪಾಲಯ್ಯನ ತದ್ರೂಪ ರಂಗಪ್ಪನದಾದರೆ, ಜಗನ್ನಾಥನ ಮುಂದುವರೆದ ರೂಪವೇ ಗೋಪಾಲಯ್ಯ. ಅನುಭವದ ಮೂಲಕ

ಬದುಕನ್ನು ಅರ್ಥೈಸಿಕೊಳ್ಳಲು ಹೊರಟು ಅನುಭವತೀತವಾದ ನೆಲೆಗೆಬಂದು ಹೊಸದಾರ್ಶನಿಕತೆಗೆ ಎದುರಾಗುತ್ತಾರೆ. ಹೊಸ ಹೊಸ ಅನುಭವಗಳ ಬೆನ್ನುಹತ್ತಿದ ಗೋಪಾಲಯ್ಯ ತರ್ಕಗಳೇ ತಲೆಕೆಳಗಾಗಿ ಅನುಭವವೂ ಸೀಮಿತವಾದ ಅರ್ಥಮಿತಿಗೆ ನಿಂತುಬಿಟ್ಟಾಗ, ಹಾಗೆ ಅರ್ಥೈಸಿಕೊಳ್ಳಲು ಹೊರಡುವುದೇ ಮೂರ್ಖತನ ಎಂದು ಅಭಿಪ್ರಾಯಕ್ಕೆ ಬಂದಿರುವುದನ್ನು ಸ್ಪಷ್ಟಪಡಿಸುತ್ತಾನೆ.

'ಗುಡುಗುಹೇಳಿದ್ದೇನು'? ಕಥೆಯ ಸೋಮ ಮತ್ತು ಲಕ್ಕರಿಗೆ, ಅಪಘಾತದಲ್ಲಿ ಸಿಕ್ಕು ಮರಣಿಸಿದ ಮಂಜಪ್ಪನ ತಂದೆಯಿಂದಾಗಿ ದೊರೆತ ಪರಿಹಾರ ಧನ; ಅಂತರಂಗದ ಮೂಲೆಯಲ್ಲಿ ಅಡಗಿದ್ದ ಶ್ರಮವಿಲ್ಲದೆ, ದುಡಿಮೆಯೂ ಇಲ್ಲದೆ ಹಣಗಳಿಸುವ ಮಾರ್ಗವನ್ನು ಹೊರಗೆಳೆಯುತ್ತದೆ. ಪರಿಹಾರ ಧನದ ಆಸೆಗೆ ಬಿದ್ದು ಕೈಲಾಗದ, ತಮ್ಮ ಪ್ರಯೋಜನಕ್ಕೂ ಬಾರದ, ಅಸಹಾಯಕ ಅಜ್ಜಿಯನ್ನು ಯಾವುದೇ ಗೌರವ-ಮಮಕಾರಗಳಿಲ್ಲದೆ ಕಾರಿನ ಚಕ್ರಕ್ಕೆ ದೂಡಿಬಿಡುತ್ತಾರೆ. ಸಾವಿನಂಚಿನಲ್ಲಿದ್ದ ಅಜ್ಜಿಯ ಅಸ್ತಿತ್ವವನ್ನು ನಿರಾಕರಿಸಿ ಕಾರಿನ ಮಾಲೀಕನಲ್ಲಿ ಹಣ ವಸೂಲಿ ಮಾಡುವತ್ತ ಮನಸ್ಸು ಧಾವಿಸುತ್ತದೆ. ಪರಿಹರಧನವಾಗಿ ಬಂದ ಹಣ ಅಜ್ಜಿಮಾಡಿದ್ದ ಸಾಲಕ್ಕೆ ಚುಕ್ತವಾದಾಗ ಇವರ ನಿರೀಕ್ಷೆಯೆಲ್ಲವೂ ಹುಸಿಯಾಗಿ ಅದುವರೆಗಿನ ಲೆಕ್ಕಾಚಾರವೆಲ್ಲವೂ ತಲೆಕೆಳಗಾಗುತ್ತದೆ. ಇಲ್ಲಿ ಸೋಮ, ಲಕ್ಕರ ತರ್ಕ ಅವರೆದುರಿಗೆ ವಾಸ್ತವವೆಂಬ ಕನ್ನಡಿಯನ್ನು ಹಿಡಿದು ತೋರುತ್ತದೆ.

ಮಾಯಾಮೃಗ ಕಥೆಯ ಷಾ ಮತ್ತು ನಿರೂಪಕರಿಬ್ಬರೂ ದೆವ್ವದ ಅಸ್ತಿತ್ವದ ಶೋಧನೆಗಾಗಿ ಸ್ಮಶಾನಕ್ಕೆ ಹೋಗಿ ಭ್ರಮೆ ಮತ್ತು ಭಯಗಳ ನಡುವಿನ ಸ್ಥಿತಿಯಲ್ಲಿ ಸಿಲುಕಿ ಬೆಚ್ಚಿ ಬೀಳುತ್ತಾರೆ. ದೆವ್ವದ ಅಸ್ತಿತ್ವದ ಬಗ್ಗೆ ಯಾವುದೇ ಒಂದು ನಿಶ್ಚಿತ ತೀರ್ಮಾನವನ್ನು ತೆಗೆದುಕೊಳ್ಳದ ಹಾಗೆ ಕೌತುಕ ಮತ್ತು ಭ್ರಮಾತೀತ ಘಟನೆಯಲ್ಲಿ ತರ್ಕ ಮತ್ತು ಅನುಭವ ಸಿದ್ಧಾಂತಗಳು ಸಂಪೂರ್ಣ ವ್ಯತಿರೇಕವಾಗುತ್ತವೆ. ಇಲ್ಲಿ ದೆವ್ವ ಇಲ್ಲ ಎಂಬ ತರ್ಕವೇ ದೆವ್ವ ಇದೆಯೆಂದು ಪಲ್ಲಟಗೊಳ್ಳುತ್ತದೆ. ಅನುಭವಸಿದ್ಧಾಂತವು ಇಲ್ಲಿ ಕೇವಲ ತರ್ಕಾತೀತವಾದ ನೆಲೆಯಲ್ಲಿ ನಿಲ್ಲುವಂತಾಗುತ್ತದೆ. ನಿರೂಪಕರು ಚಿತ್ರಿಸುವ ಅನುಭವ ಜಗತ್ತು, ವೈಚಾರಿಕ ದೃಷ್ಟಿಕೋನವನ್ನು ಒಳಗೊಂಡ ಅಮೂರ್ತವಾದ ಕಥಾವಸ್ತುವನ್ನು ಹೊಂದಿದ್ದರೂ ಜಿಜ್ಞಾಸೆಯಿಂದ ಕೂಡಿದ್ದು ಇತ್ಯರ್ಥವಾಗದ ನೆಲೆಯಲ್ಲಿ ಕೊನೆಗೊಳ್ಳುತ್ತದೆ.

'ಕಿರುಗೂರಿನ ಗಯ್ಯಾಳಿಗಳು' ಕಥೆಯಲ್ಲಿ ಒಂದೇ ಸಮನೆ ಬೀಸಿದ ಬಿರುಗಾಳಿಯ ದೆಸೆಯಿಂದ ಒಂದು ಪಾರ್ಶ್ವಕ್ಕೆ ವಾಲಿನಿಂತ ಹೆಬ್ಬಲಸಿನ ಮರವನ್ನು ಕಡಿಸುವ ಪ್ರಯತ್ನದ ಹಲವು ವಿದ್ಯಮಾನಗಳು ವ್ಯಕ್ತಿಗತ ಸಮಸ್ಯೆಯಿಂದ ಮೊದಲುಗೊಂಡದ್ದು ಕ್ರಮೇಣ ಸಾರ್ವಜನಿಕ ವಲಯಕ್ಕೆ ಹರಡುತ್ತದೆ. ಹಲಸಿನಮರ ಉರುಳಿಬಿದ್ದು ಅದನ್ನು ಕಡಿಯಲು ಕಿರುಗೂರಿನವರೇ ಆದ ಮಾರ-ಸಿದ್ಧರನ್ನು ಅರ್ಧಪಲ್ಲ ಭತ್ತಕ್ಕೆ ಸುಬ್ಬೇಗೌಡ ಒಪ್ಪಿಸಿರುತ್ತಾನೆ. ನಾಲ್ಕು ದಿನಗಳವರೆಗೆ ಕಡಿದೂ ಕಡಿದೂ ರಟ್ಟೆ ಸೇದಿ ಸುಸ್ತಾಗಿಹೋಗಿದ್ದ ಇಬ್ಬರೂ ಪರಸ್ಪರ ರೇಗಾಡಿಕೊಂಡು ಸುಬ್ಬೇಗೌಡನನ್ನು ಇನ್ನರ್ಧ ಪಲ್ಲ ಭತ್ತಕೊಡುವಂತೆ ಒತ್ತಾಯಿಸುತ್ತಾರೆ. ಒಪ್ಪಿಸಿ ಹೋದ ರಾತ್ರಿಯೇ ಆ ಹೆಮ್ಮರ ತುಂಡಾಗಿ ಬಿದ್ದು ಅದು ಬೇರೆಯೇ ಸ್ವರೂಪವನ್ನು ಪಡೆದುಕೊಳ್ಳುತ್ತದೆ.

ಅರ್ಧಪಲ್ಲಕ್ಕೆ ಕಡಿದೇ ಬಿಡುತ್ತೇವೆಂದು ಒಪ್ಪಿಕೊಂಡು ನಾಲ್ಕುದಿನಗಳವರೆಗೆ ಕಡಿದು ಸುಸ್ತಾದ ಮಾರ-ಸಿದ್ಧರು ಅರ್ಧಕಡಿದ ಮರವನ್ನು ಒತ್ತೆಯಾಗಿಸಿ ಇನ್ನರ್ಧ ಪಲ್ಲಕ್ಕೆ ಕ್ಯಾತೆ

ತೆಗೆಯುತ್ತಾರೆ. ಇಕ್ಕಟ್ಟಿಗೆ ಸಿಕ್ಕಿದ ಸುಬ್ಬೇಗೌಡ ಅರ್ಧಕಡಿದು ಬಿಟ್ಟ ಮರದಿಂದ ಎದುರಾಗಬಹುದಾದ ಅಪಾಯವನ್ನರಿತು ಉಳಿದರ್ಧ ಕೊಡಲು ಒಪ್ಪಿಗೆ ಸೂಚಿಸಿದ್ದ ರಾತ್ರಿಯೇ ಮರ ತುಂಡಾಗಿ ಭೈರಪ್ಪನ ಮನೆಯವರೆಗೂ ಬೀಳುತ್ತದೆ. ಇನ್ನರ್ಧ ಪಲ್ಲ ಕೊಟ್ಟು ಮರ ಕೊಯ್ಯಿಸಲು ತ್ರಾಣವಿಲ್ಲದ ಸುಬ್ಬೇಗೌಡ ಮರ ತನ್ನದಲ್ಲವೆಂದು ಯಾರು ಬೇಕಾದರೂ ಕುಯ್ಯಿಸಿ ಒಯ್ಯಬಹುದೆಂದು ಸರಾಸಗಟಾಗಿ ನಿರಾಕರಿಸಿ ಬಿಡುತ್ತಾನೆ. ಸುಬ್ಬೇಗೌಡನ ತರ್ಕವಾಗಲಿ ಮಾರಸಿದ್ಧರ ತರ್ಕವಾಗಲಿ ವಾಸ್ತವಕ್ಕೆ ವಿರುದ್ಧವಾದುದೇ ಆಗಿದೆ. ಅರ್ಧಪಲ್ಲ ಭತ್ತದಲ್ಲಿ ಮರ ಕೊಯ್ಯುವ ಮತ್ತು ಕೊಯ್ದುಕೊಡುವ ಕ್ರಿಯೆ ತದ್ವಿರುದ್ಧವಾದ ಅನುಭವವನ್ನು ನೀಡುತ್ತದೆ.

ತನ್ನ ಮನೆ ಮುಂದೆ ಬಿದ್ದ ಮರವನ್ನು ಕಡಿಸುವ ಜವಾಬ್ದಾರಿ ಭೈರಪ್ಪನ ಹೆಗಲೇರುತ್ತದೆ. ಗ್ರಾಮಸೇವಕ ಶಂಕ್ರಪ್ಪನ ಅವಾಂತರಗಳಿಂದ ಕಿರುಗೂರಿನ ಐವರು ಗೌಡರು ಒಂದು ರಾತ್ರಿ ಲಾಕ್‌ಅಪ್‌ನಲ್ಲಿ ಅನುಭವಿಸಿದ ಮಾನಸಿಕ ಹಿಂಸೆಯೇ ಹರಿಜನರ ಬಗ್ಗೆ ದ್ವೇಷದ ಒಳಗುದಿಗೆ ಕಾರಣವಾಗುತ್ತದೆ. ಮರ ಕೊಯ್ದು ಉರುಳಿಸುವ ಕಾರ್ಯಾಚರಣೆಗೆ ಪುಷ್ಟಿ ಒದಗುವುದು ಸೋನ್ಸ್ ಮತ್ತು ಮಳೆಯಾಳಿಯಿಂದ. ಸುಲಭದಲ್ಲಿ-ಕ್ಷಣಾರ್ಧದಲ್ಲಿ ಮರ ಕಡಿದು ಉರುಳಿಸಿ ಸಾಗಿಸಿಬಿಡುತ್ತೇನೆಂದು ಬಡಾಯಿ ಕೊಚ್ಚಿದ್ದ ಸೋನ್ಸ್ ಆ ಸಾಹಸಕ್ಕೆ ಮುಂದಾಗುವುದರಲ್ಲಿ ಸಮಯ ತೆಗೆದುಕೊಂಡರೂ ಸಫಲನಾಗುತ್ತಾನೆ. ಹಲಸಿನ ಮರದ ದಿಮ್ಮಿಯನ್ನು ಮಾತ್ರ ತನ್ನ ತರ್ಕಕ್ಕೆ ಅನುಗುಣವಾಗಿ ಉರುಳಿಸಲಾಗದೆ ಇನ್ನಿತರರ ಶ್ರಮದೊಂದಿಗೆ ಕಾರ್ಯೋನ್ಮುಖನಾಗುತ್ತಾನೆ. ಒಳವೈಮನಸ್ಯಗಳ ಕಾರಣದಿಂದ ಹರಿಜನರ ಸಹಾಯವನ್ನು ಉಪೇಕ್ಷಿಸಿದ ಮೂವರು ಒಕ್ಕಲಿಗ ಗಂಡಸರು ಸ್ವತಃ ತಾವೇ ಹಲಸಿನ ದಿಮ್ಮಿಯನ್ನು ಬೆನ್ನು ಕೊಟ್ಟು ನೂಕುವಾಗ ಸೊಂಟ ಉಳುಕಿಸಿಕೊಂಡು ಮತ್ತೊಂದು ಸಮಸ್ಯೆಯನ್ನು ಮೈಮೇಲೆ ಎಳೆದುಕೊಳ್ಳುತ್ತಾರೆ. ಮರದ ದಿಮ್ಮಿ ಉರುಳಿ ಅದು ಪಡೆದುಕೊಳ್ಳುವ ತಿರುವು ಅಲ್ಲಿದ್ದ ಒಬ್ಬೊಬ್ಬರನ್ನೂ ಕಂಗೆಡಿಸುತ್ತದೆ. ಸೋನ್ಸ್‌ಗಾಗಲಿ, ಕಾಳೇಗೌಡನಿಗಾಗಲಿ ದಾನಮ್ಮನಿಗಾಗಲಿ ಯಾರ ತರ್ಕಕ್ಕೂ ನಿಲ್ಲದ ರೀತಿಯಲ್ಲಿ ಉರುಳುರುಳಿ ಯಾರ ಕಣ್ಣಿಗೂ ಕಾಣದಂತೆ ಅಂತರ್ಧಾನವಾಗುತ್ತದೆ.

ಕಾಡು ಮತ್ತು ಕ್ರೌರ್ಯ ಕಾದಂಬರಿಯಲ್ಲಿ ತರ್ಕ ಹಾಗೂ ಅದಕ್ಕಿಂತ ಅತೀತವಾದ ವಾಸ್ತವದ ಅನಾವರಣವಾದ ಸಂದರ್ಭದಲ್ಲಿ ವ್ಯಕ್ತಿಯಲ್ಲಾಗುವ ಸಂಘರ್ಷಗಳು ಕಾಣಸಿಗುತ್ತವೆ. ವೆಂಕು ಪೂಜಾರಿಯು ಅವಕಾಶವಾದಿತನದಿಂದ ರಂಗಪ್ಪನವರ ಸಾವಿನಲ್ಲಿಯೂ ತನಗೆ ಗೌರವ ಸಿಗಬಹುದುದೆಂದು ತರ್ಕಿಸಿ ಅಲ್ಲಲ್ಲಿಯೂ, ಆಚೀಚೆ ಸುಳಿದಾಡಿದರೂ ಅನುಭವವು ಅದಕ್ಕಿಂತ ತೀರಾ ವ್ಯತಿರಿಕ್ತವಾಗಿ ಅಂದರೆ ಯಾರೂ ವಿಭೂತಿಯನ್ನೂ ಕೇಳದಂತೆ ಉಂಟಾದುದು ತರ್ಕವು ಎಲ್ಲಕಡೆಗಳಲ್ಲಿಯೂ ಒಂದೇ ತೆರನಾಗಿರಲಾರದು ಎಂದು ಸ್ಪಷ್ಟವಾಗುತ್ತದೆ. ಹೀಗೆ ತಾರ್ಕಿಕತೆ ಮತ್ತು ವಾಸ್ತವವು ಸಂಘರ್ಷಕ್ಕೀಡಾದಾಗ ಅದರಿಂದುಂಟಾಗುವುದು ನಿರಾಸೆ ಮಾತ್ರ. ಹಾಗೆಯೇ ನಳಿನಿಗೆಂದು ಸುಭದ್ರೆಯು ಬರೆದ ಪತ್ರದಲ್ಲಿ ಸುಭದ್ರೆಯ ಆಶಯವು/ತರ್ಕವು ಬೇರೆಯದೇ ಆಗಿತ್ತು. ಅದೇನೆಂದರೆ-ಸೋಮುವಿನ ಪ್ರೇಮ ಭಗ್ನವಾದ ನಂತರ ಎಷ್ಟು ವ್ಯವಹಾರ ಪರಿವರ್ತನೆಯಾಗಿದೆ ಎಂಬುದಾಗಿತ್ತು. ಆದರೆ ವಾಸ್ತವವು ನಳಿನಿಯಿಂದ ತಿಳಿಸಲ್ಪಟ್ಟಿದ್ದರೂ ಸುಭದ್ರೆಯ ಅವಗಾಹನೆಗೆ ಬಂದಿರಲಿಲ್ಲವೆಂಬುದೂ ಮತ್ತೊಂದು ವಾಸ್ತವವೇ ಈ ತರ್ಕ ಮತ್ತು ಅನುಭವದ ಸಂಘರ್ಷವನ್ನು ತೇಜಸ್ವಿಯವರೇ ಕಾಡು ಮತ್ತು ಕ್ರೌರ್ಯದಲ್ಲಿ ಹೇಳುವಂತೆ; 'ಭೂತಕಾಲ ಒಂದಿರುವುದರಿಂದಲೇ ಭವಿಷ್ಯತ್ ಒಂದಿದೆ ನಮಗೆ. ಹಿಂದಾದುದನ್ನು ನೋಡೇ ಮುಂದಾಗುವುದನ್ನು ಕಲ್ಪಿಸುತ್ತೇವೆ. ಆದರೆ ಊಹಿಸಿದಂತೆ

ಆಗುವುದೇ ಇಲ್ಲ'[೧೭] ಇನ್ನು ಲಿಂಗನ ವಿಷಯಕ್ಕೆ ಬಂದರೆ ಹಾಡಲು ಹಕ್ಕಿಗಳನ್ನು ಹೊಡೆಯಲು ಬೆಟ್ಟಕ್ಕೆ ಹೋದಾಗ ಹಕ್ಕಿಗಳಿಗೆ ಹೊಡೆಯಬೇಕೆಂಬುದು ತರ್ಕವಾದರೂ ಅನುಭವಸಿದ್ಧಾಂತದಲ್ಲಿ ಆಗಿದ್ದೇ ಬೇರೊಂದು. ಹಕ್ಕಿಯನ್ನು ಹೊಡೆಯುವುದಿರಲಿ, ಬಂದದಾರಿಯೂ ನೆನಪಿಲ್ಲದಂತಹ ತರ್ಕದ ತಲೆಕೆಳಗಾಗುವಿಕೆಯ ಮೂಲಕ ಭೌತಿಕವಾಸ್ತವದ ದರ್ಶನವನ್ನು ಪಡೆಯುತ್ತಾನೆ.

ಚಿದಂಬರ ರಹಸ್ಯ ಕಾದಂಬರಿಯ ಮೂಲಕ ನಿಗೂಢವನ್ನು, ಸತ್ಯವನ್ನು ಅನ್ವೇಷಿಸಲು ನಿರ್ದಿಷ್ಟವಾದ ಎರಡು ದಾರಿಗಳನ್ನು ಬಳಸಿಕೊಂಡಿದ್ದಾರೆ ತರ್ಕ ಮತ್ತು ವಾಸ್ತವ ಒಂದಕ್ಕೊಂದು ಬೆಸೆದುಕೊಂಡಿರುವುದನ್ನು ಪಾಟೀಲರ ಮೂಲಕ ಸಾಬೀತುಪಡಿಸುತ್ತಾರೆ. ಕೆಸರೂರಿನ ಪ್ರತಿಯೊಬ್ಬರಿಗೂ ಅವರದೇ ಆದ ತರ್ಕಗಳಿವೆ. ತಮ್ಮ ತಮ್ಮ ತರ್ಕಕ್ಕೆ ತಾವು ವಾಸ್ತವದಿಂದ ಸಾಕ್ಷಿ ಹುಡುಕುತ್ತಾರೆ. ಪಾಟೀಲರೇ ವಾಸ್ತವತೆಯ ಆಧಾರದ ಮೇಲೆ ತೆರೆದುಕೊಂಡ ತಾರ್ಕಿಕ ಸತ್ಯವನ್ನು ಅದೇ ವಾಸ್ತವತೆಯ ಆಧಾರದಿಂದ ಅಸತ್ಯವಾಗಿಸುವುದು ಸಾಧ್ಯ ಎಂಬುವುದನ್ನು ಸಾಧಿಸುತ್ತಾರೆ. ತರ್ಕದಿಂದ ಅನಾವರಣಗೊಳ್ಳುವ ವಾಸ್ತವವೂ ಸ್ಥಿರವಾದ ಸತ್ಯ ಅಲ್ಲ ಸಂದರ್ಭ, ಕಾಲ, ದೇಶ ಒಂದೇ ಆದರೂ ವಾಸ್ತವ ಮತ್ತು ತರ್ಕ ಒಂದಕ್ಕೊಂದು ಬೆಸೆದುಕೊಂಡರೂ ಅನುಭವ ಮಾತ್ರ ಹಲವು ವೈರುಧ್ಯಗಳೊಂದಿಗೆ ಹೊಸ ಹುಡುಕಾಟಕ್ಕೆ ತೊಡಗುತ್ತದೆ.

'ಹೊಸ ಹೊಸ ಜೀವನಾನುಭವಗಳು ನಮ್ಮ ಅನುಭವ ವಿಶ್ವಕ್ಕೆ ಸೇರ್ಪಡೆಯಾದಾಗ ಕೇವಲ ಅದರ ಮೊತ್ತ ಹೆಚ್ಚಾಗುವುದಷ್ಟೇ ಅಲ್ಲ, ನಮ್ಮ ಅನುಭವ ವಿಶ್ವದಲ್ಲಿ ಗುಣಾತ್ಮಕ ಬದಲಾವಣೆಯನ್ನು ಉಂಟುಮಾಡುತ್ತದೆ, ಎಂದರೆ ಇಡೀ ಅನುಭವ ವಿಶ್ವ ವ್ಯವಸ್ಥೆಯೇ ಹೊಸದಾಗಿ ಸಂಯೋಜನೆಗೊಳ್ಳುತ್ತದೆ, ಅಥವಾ ನಿರಂತರವಾಗಿ ಸಂಯೋಜನೆಗೊಳ್ಳುತ್ತಲೇ ಇರುತ್ತದೆ.'[೧೮] ಎನ್ನುವ ಮಾತುಗಳನ್ನು ಪುಷ್ಟೀಕರಿಸಬಹುದು.

ವಾಸ್ತವಪ್ರಜ್ಞೆಯು ಯಾರಲ್ಲಿಯೇ ಆದರೂ ತರ್ಕದ ಎಲ್ಲೆಯನ್ನು ಮೀರಿ, ಗೋಡೆಯನ್ನು ಒಡೆದು ನಿಂತಾಗ ಮಾನಸಿಕ ಬೌದ್ಧಿಕ ಭೌತಿಕವಾಗಿ ಚಂಚಲತೆಯನ್ನು, ಅಸ್ಥಿರತೆಯನ್ನೂ ಸಂಘರ್ಷವನ್ನು ಒಟ್ಟಿಗೇ ಉಂಟುಮಾಡುತ್ತದೆ. ಇಂತಹ ಉದಾಹರಣೆಗಳು ನಮಗೆ ಪ್ರತ್ಯಕ್ಷವಾಗಿಯೇ ದೊರಕುವಂತಹವಾಗಿವೆ. ಹೇಗೆಂದರೆ–ನಮ್ಮ ಪೂರ್ವಜರ ತರ್ಕವು ಸೂರ್ಯನು ಭೂಮಿಯನ್ನು ಸುತ್ತುತ್ತಾನೆಂಬುದಾಗಿತ್ತು. ಆಗಿನ ಕಾಲದಲ್ಲಿ ಆ ತರ್ಕವು ವಾಸ್ತವವೇ ಆಗಿದ್ದರೂ ಅದು ಚಂಚಲವೇ. ಅದು ಸತ್ಯವಲ್ಲವೆಂಬ ಯಾಥಾರ್ಥ ಜನಕ್ಕೆ ತಿಳಿದಾಗ ಕೇವಲ ಭೌತಿಕ–ಬೌದ್ಧಿಕ ಸಂಘರ್ಷವಲ್ಲದೇ ವರ್ಗಸಂಘರ್ಷವೂ ಆಗಿತ್ತು. ಭೂಮಿ ಸ್ಥಿರವಲ್ಲ ಎಂಬ ಸತ್ಯ ತಿಳಿದರೂ ಅದನ್ನೊಪ್ಪಿಕೊಳ್ಳಲು ಸಾದ್ಯವಾಗಿರಲಿಲ್ಲ; ಅದು ತರ್ಕಾತೀತವಾಗಿತ್ತು. ಇದೇ ಸಂಘರ್ಷಕ್ಕೆ ಕಾರಣವಾಗಿ, ಆ ಸಂಘರ್ಷದಿಂದಲೇ ಮುಂದೆ ಸೂರ್ಯನೇ ಸ್ಥಿರ ಎಂದು ಬೌದ್ಧಿಕ ಸ್ಥಿತ್ಯಂತರ ಸಾಧ್ಯವಾಗಿದ್ದು, ಹೀಗೆ ಈ ಸತ್ಯವೂ ಮುಂದೊಂದು ದಿನ, ಮತ್ತೊಂದು ಸತ್ಯದ ಎದುರಿನಲ್ಲಿ ಕೊಚ್ಚಿಹೋಗಬಹುದು. ಹೀಗೆ ನಾನಾ ಮುಖಗಳನ್ನು ಹೊತ್ತಂತಹ ಸತ್ಯ ವಿವಿಧ ಮಗ್ಗುಲುಗಳಲ್ಲಿ ವಿಭಿನ್ನ ಜನರಿಗೆ ತರ್ಕಕ್ಕಿಂತ ತೀರಾಭಿನ್ನವಾಗಿ ಗೋಚರಿಸಬಹುದು. ತೇಜಸ್ವಿಕಥನಗಳಲ್ಲಿ ಮುಖ್ಯವಾಗಿ ಮಾಯಾಮೃಗದ ದೆವ್ವದ ವಿಷಯ, ತ್ಯಕ್ತದಲ್ಲಿ ಕಂಡುಬರುವ ಭಾಷೆಯ ಸಮಸ್ಯೆ, ಹುಲಿಯೂರಿನ ಸರಹದ್ದು, ನಿಗೂಢಮನುಷ್ಯರು, ಗುಡುಗು ಹೇಳಿದ್ದೇನು ಕಥೆಯಲ್ಲಿನ ಅಜ್ಜಿಯನ್ನು ಸಾವಿಗೆ ನೂಕುವ ಪ್ರಸಂಗ ಹಾಗೂ ಕಿರಗೂರಿನ ಗಯ್ಯಾಳಿಗಳಲ್ಲಿನ ದಾನಮ್ಮ ಹಾಗೂ ಮರದ

ಪ್ರಸಂಗ, ಕೃಷ್ಣೇಗೌಡನ ಆನೆ ಕಥೆಯಲ್ಲಿ ಊರವರ ಊಹೆಗೆ ನಿಲುಕುವ ಕಥನಗಳು, ಚಿದಂಬರ ರಹಸ್ಯದ ಜೋಗಿಹಾಳರ ಮರಣ, ಇಂತಹ ಅನೇಕ ಪ್ರಸಂಗಗಳಲ್ಲಿ ಅನುಭವವು ತರ್ಕದೆದುರಿಗೆ ಅನಾವರಣಗೊಂಡು ಸಂಘರ್ಷಕ್ಕೀಡಾಗುವುದನ್ನು ಕಂಡುಕೊಳ್ಳಬಹುದಾಗಿದೆ.

## ೩.೨ ವ್ಯಕ್ತಿ ಮತ್ತು ಸಾಮಾಜಿಕ ಸಂಘರ್ಷ

### ಗುಂಪಿನ ಮಧ್ಯೆ ಸಂಘರ್ಷಣೆ –

ಬಲಿಷ್ಟವಾದ ಕಾರಣಗಳಿಂದಲೇ ಸಂಘರ್ಷವೆಂಬುದು ಘಟಿಸುತ್ತದೆ ಎಂದು ಹೇಳಲು ಆಗುವುದಿಲ್ಲ. ಗುಂಪುಗಳ ನಡುವಿನ ಸಂಘರ್ಷಗಳಿಗೆ ವ್ಯಕ್ತಿಪ್ರತಿಷ್ಠೆ ಮತ್ತು ಹಿತಾಸಕ್ತಿಗಳ ಅಲಭ್ಯತೆ, ಅಪೂರ್ಣತೆ ಹಾಗೂ ಭಿನ್ನಾಭಿಪ್ರಾಯಗಳೂ ಸಾಕಾಗಬಹುದು. ಗುಂಪು ಎಂದಾಗ ಒಂದೇ ಮಾನಸಿಕತೆ/ಸಮಾನ ಗುಣಗಳನ್ನು ಹೊಂದಿರುವ ಅನೇಕ ಜನರ ಗುಂಪು ಎಂದು ಮೇಲ್ನೋಟಕ್ಕೆ ತೋರಿಬಂದರೂ ಅದೇ ಗುಂಪಿನಲ್ಲಿಯೂ ಭಿನ್ನಾಭಿಪ್ರಾಯಗಳೂ ಉಂಟಾಗುವ ಸಾಧ್ಯತೆಗಳಿರುತ್ತವೆ. ಯಾವುದೋ ಒಂದು ವಿಷಯದಲ್ಲಿನ ಒಮ್ಮತವು ವ್ಯಕ್ತಿಗಳನ್ನು 'ಗುಂಪು' ಎಂಬುದಕ್ಕೆ ಕ್ರೋಢೀಕರಿಸಿದರೆ, ಒಂದೇ ಒಂದು ಭಿನ್ನಾಭಿಪ್ರಯವೂ ಗುಂಪಿನ ಒಡಕಿಗೆ ಕಾರಣವಾಗುತ್ತದೆ.

ವ್ಯಕ್ತಿಗಳಾಗಲಿ, ಗುಂಪುಗಳಾಗಲಿ ತಮಗೆ ಬೇಕಾದ್ದು ದೊರಕದೇ ಇದ್ದಾಗ ಅಥವಾ ತಮ್ಮ ಹಿತಾಸಕ್ತಿಗಳು ಈಡೇರದೇ ಇದ್ದಾಗ ಇಂತಹ ಸಂಘರ್ಷ ಉದ್ಭವಿಸುತ್ತದೆ. ಸಂಘರ್ಷ ಒಮ್ಮೆಲೇ ಭುಗಿಲೇಳುವುದಿಲ್ಲ ಅದು ವರ್ಷಗಳಿಂದಲೇ ಜ್ವಾಲಾಮುಖಿಯಂತೆ ಸುಪ್ತವಾಗಿರುತ್ತದೆ. ಅಸಂತೋಷ, ಅಸಮಧಾನ, ಅಸಮರ್ಪಕ ಸಂವಹನ, ದುರ್ಬಲ ನಾಯಕತ್ವ ಹಾಗೂ ಅಪಾರದರ್ಶಕತೆಗಳು ತುಂಬಿ ತುಳುಕಾಡುತ್ತಿರುವಾಗ ವಿಶ್ವಾಸ ಕುಂಠಿತಗೊಳ್ಳುತ್ತದೆ. ಇವೇ ಭಿನ್ನಾಭಿಪ್ರಾಯಗಳಿಗೆ ಆಸ್ಪದಮಾಡಿಕೊಡುತ್ತವೆ. ಪರಸ್ಪರ ಸಂಘರ್ಷಕ್ಕೀಡಾಗಿ ಸೆಣಸಾಟಕ್ಕಿಳಿಯುವಂತಾಗುತ್ತದೆ.

ವ್ಯಕ್ತಿಗಳ ಸಾರ್ವಜನಿಕ ಬದುಕು ವೈಯಕ್ತಿಕ ಬದುಕಿಗಿಂತ ತೀರಾ ಭಿನ್ನವಾಗಿದ್ದು ಅವುಗಳ ನಡುವೆಯೇ ಕಲಮೊಮ್ಮೆ ವೈರುಧ್ಯ ವೈಮನಸ್ಯಗಳು ಉಂಟಾಗುತ್ತವೆ. ವೈಯಕ್ತಿಕ ಸಮಸ್ಯೆಗಳಿಂದ ಬಳಲುತ್ತಿರುವವರು ಸಾಮಾಜಿಕವಾಗಿ ಯಾವುದೇ ಸಮಸ್ಯೆಗಳಿಂದ ಬಾಧಿತರಾಗದೆ ಇರಬಹುದು ಅಥವಾ ಸಾಮಾಜಿಕವಾಗಿ ಸಮಸ್ಯೆಗಳಿರುವ ವ್ಯಕ್ತಿ ವೈಯಕ್ತಿಕವಾಗಿ ಸಂತೋಷದಿಂದ ಇರಬಹುದು. ಹೀಗಿರುವಾಗ ವೈಯಕ್ತಿಕ ಮತ್ತು ಸಾಮಾಜಿಕ ಜೀವನದ ನಡುವೆ ಘರ್ಷಣೆಯಾಗಬಹುದು ಅಂತೆಯೇ ಸಮಾಜ ಮತ್ತು ವ್ಯಕ್ತಿಯ ನಡುವೆಯೂ ತಿಕ್ಕಾಟವಾಗುವ ಸಾಧ್ಯತೆ ಇರುತ್ತದೆ. ಸ್ವಪ್ರತಿಷ್ಠೆಯ ದ್ಯೋತಕವಾಗಿ ಎರಡು ಗುಂಪುಗಳ ನಡುವೆ ಘರ್ಷಣೆಯಾಗುವುದನ್ನು ತೇಜಸ್ವಿ ಕಥನಗಳಲ್ಲಿ ಗುರುತಿಸುವುದಕ್ಕೆ ಸಾಧ್ಯವಿದೆ. ಕಿರುಗೂರಿನ ಗಯ್ಯಾಳಿಗಳು ಕಥನದಲ್ಲಿನ ಎರಡು ಸಂದರ್ಭಗಳು ಕಿರುಗೂರಿನ ಐವರು ಒಕ್ಕಲಿಗ ಗಂಡಸರು ಮತ್ತು ಹರಿಜನರ ನಡುವಿನ ವೈಮನಸ್ಯ, ಚಿದಂಬರ ರಹಸ್ಯದ ಧರ್ಮ, ಜಾತಿ, ರಾಜಕಾರಣಗಳಿಂದ ಉದ್ಭವಿಸಿದ ದ್ವೇಷ–ವೈಷಮ್ಯ, ಸ್ವಹಿತಾಸಕ್ತಿಗಳಿಗಾಗಿ ನಡೆಯುವ ಗುಂಪಿನ ಸಂಘರ್ಷವನ್ನು 'ಮಾಯಾಲೋಕ'ದಲ್ಲೂ ಗುರುತಿಸಬಹುದು. ಗುಂಪಿನಲ್ಲಿ ಹುಟ್ಟುವ ಸಂಘರ್ಷದಲ್ಲಿ [ನೇರಾನೇರವಾಗಿ] ಮುಖಾಮುಖಿಯಾಗಿ ಹೊಡೆದಾಟ, ನಿಂದನೆ, ಪರಸ್ಪರ ಜಗಳ ಇವುಗಳು ಇರಲೇಬೇಕೆಂದೇನೂ ಇಲ್ಲ. ಶೀತಲ ಸಮರದಂತೆ ಒಳಗಿಂದೊಳಗೇ ಕುದಿಯುತ್ತಲಿದ್ದು ತಣಿಯಬಹುದು ಇಲ್ಲವೆ ಇನ್ನೂ ಬಿಗಡಾಯಿಸಲೂಬಹುದು. ಅಬಚೂರಿನಲ್ಲಿ, ಭೈರಾಪುರದಲ್ಲಿ,

ಕಿರುಗೂರಿನಲ್ಲಿ, ಕೆಸರೂರಿನಲ್ಲಿ, ಗೊಂದಲಗೇರಿಯಲ್ಲಿ ಈ ಊರುಗಳಲ್ಲಿ ಇದರ ಸ್ವರೂಪ ಸ್ಪಷ್ಟವಾಗಿ ಗೋಚರವಾಗುತ್ತದೆ.

## ೩.೨.೧: ವ್ಯಕ್ತಿ ಮತ್ತು ಸಮುದಾಯ: ವೈಯಕ್ತಿಕ ಪ್ರತಿಷ್ಠೆಯ ಸಾಮುದಾಯಿಕ ನಿಲುವು

ವ್ಯಕ್ತಿಯ ನೆಲೆಯನ್ನು ಆಶ್ರಯಿಸಿಯೆ ವ್ಯಕ್ತಿಯ ಮತ್ತು ಸಮಾಜದ ಸಂಬಂಧ ಏರ್ಪಡುತ್ತದೆ. ಸಮಾಜ ಜೀವಿಯಾದ ವ್ಯಕ್ತಿ ಇತರರೊಂದಿಗೆ ಇಟ್ಟುಕೊಳ್ಳುವ ಸಂಬಂಧಗಳ ನೆಲೆಗಳು ಯಾವಾಗಲೂ ಸಾಮಾಜಿಕ ಆವರಣವನ್ನು ಪಡೆದಿರುತ್ತವೆ. ವ್ಯಕ್ತಿ ಕೇಂದ್ರಿತ ನೆಲೆಯಲ್ಲಿ ಆಲೋಚಿಸುವ ಸಂದರ್ಭದಲ್ಲಿ ಕೇಂದ್ರಬಿಂದು ಸಮಾಜಕ್ಕಿಂತ ವ್ಯಕ್ತಿಯೇ ಆದ್ದರಿಂದ ವ್ಯಕ್ತಿಗತ ಚಿಂತನೆಗಳು-ಆಲೋಚನೆಗಳು ಏಕಮುಖವಾದ ಸಿದ್ಧಾಂತವನ್ನು ಮಂಡಿಸುವುದರಿಂದ ಸಾಮಾಜಿಕ ರೂಪದಲ್ಲಿ ಅಂಗೀಕಾರಕ್ಕೆ ಒಳಪಡುವುದಿಲ್ಲ. ಏಕೆಂದರೆ ಕೇವಲ ವೈಯಕ್ತಿಕ ನೆಲೆಯಿಂದಲೇ ಇಡೀ ಬದುಕನ್ನು ಅರ್ಥೈಸಿಕೊಳ್ಳುವುದು ಸ್ವಹಿತಕ್ಕೆ ಸೀಮಿತವಾಗಿ ಬಿಡುತ್ತದೆಯೇ ಹೊರತು ಸಮಾಜದ ಸಾಮುದಾಯಿಕ ಹಿತಾಸಕ್ತಿಗೆ ಸಮರ್ಪಿತವಾಗುವುದಿಲ್ಲ ಎಂದಾಗ ಸಮಾಜ, ವ್ಯಕ್ತಿಕೇಂದ್ರಿತ ಆಶಯಗಳನ್ನು ಸಂಪೂರ್ಣವಾಗಿ ಅಲಕ್ಷಿಸುತ್ತದೆ.

'ಮನುಷ್ಯನೆಂದರೆ ಕೇವಲ ವಸ್ತುವೂ ಅಲ್ಲ, ವಿಚಾರವೂ ಅಲ್ಲ 'ಆಗುವಿಕೆ' (becoming) ಯೆಂಬ ಕ್ರಿಯೆಯಲ್ಲಿ ಇವೆರಡೂ ಸಹಭಾಗಿಗಳಾಗಿದ್ದು, ಬೆಳೆಯುತ್ತ, ಬದಲಾಗುತ್ತ ಹೋಗುತ್ತವೆ. ನಿಜವಾದ ಮನುಷ್ಯನೆಂದರೆ ಸದ್ಯದವನಲ್ಲ, ಭವಿಷ್ಯದವನು. ಇತಿಹಾಸ ಇಂದಿಗೆ ಸೇರಿದ್ದಲ್ಲ, ನಾಳೆಗೆ ಸೇರಿದ್ದು, ನಿರಂತರವೂ ತನ್ನನ್ನು ತಾನು ಮೀರುವುದೇ ಇತಿಹಾಸ ಸ್ವಭಾವ'[೧೯] ತನ್ನನ್ನು ತಾನು ಮೀರುವ ಪ್ರಯತ್ನ ಸಂಘರ್ಷದಿಂದಲೇ ಜನ್ಮಿಸುವಂತದ್ದು. ಆಗುವಿಕೆಯ ಪರಿಣಾಮವೇ ಅಂತಿಮ ತೀರ್ಮಾನವಲ್ಲ. ಸಮಾಜದೊಂದಿಗೆ ಹಲವು ಬದಲಾವಣೆಗೆ ಸಜ್ಜುಗೊಳ್ಳುತ್ತಿರುತ್ತದೆ.

ವ್ಯಕ್ತಿಗತವಾದ ಹಲವಾರು ವಿಚಾರಗಳು ವೈಯಕ್ತಿಕತೆಗಿಂತ ವಿಭಿನ್ನ ಆಯಾಮ ಪಡೆದು ಸಮಾಜದೊಂದಿಗೆ ವಿಲೀನವಾದಾಗ ಸಾಮಾಜಿಕವಾದವೆನಿಸುತ್ತದೆ. ಅದೇ ಸಮಾಜವಾದ ಮನುಷ್ಯ ಸಮಾಜದಿಂದ ಪರಿಸರದೆಡೆಗೆ ಹೊರಳಿದಾಗ ಪರಿಸರವಾದವೆನಿಸುತ್ತದೆ. ಹೀಗೆ ಅನೇಕ 'ಇಸಂ'ಗಳು ಬದುಕಿನಾದ್ಯಂತ ಆವರಿಸಿಕೊಂಡಿರುವುದು ನಿರಂತರವಾಗಿ ಸಾಗೇ ಇರುತ್ತದೆ. ಯಾವುದೇ 'ಇಸಂ'ಗಳು ಕಾಲ ಕಾಲಕ್ಕೆ ವ್ಯತ್ಯಾಸ ಹೊಂದುತ್ತಾ ಹಲವು ಬಗೆಯ ತಿರುವು ಪಡೆದುಕೊಳ್ಳುತ್ತಿರುತ್ತವೆ.

ಮನುಷ್ಯನಿರ್ಮಿತ ಸಮಾಜದಲ್ಲಿ ವ್ಯಕ್ತಿಗತ ಸಮಸ್ಯೆಗಳಿಗಿಂತ ಪ್ರಮುಖವಾಗಿ ಕಂಡುಬರುವುದು ಸಾಮಾಜಿಕ ಸ್ವರೂಪದಲ್ಲಿ ಅಡಗಿರುವ ವಿಭಿನ್ನ ಅಭಿರುಚಿಯ ವೈರುದ್ಧ್ಯ ಮನೋಭಾವನೆಯನ್ನೊಳಗೊಂಡ ಮನುಷ್ಯ ಮನುಷ್ಯರ ನಡುವಿನ ಸಂಘರ್ಷ. ಇದರ ತೀವ್ರತೆ ಕೇವಲ ವ್ಯಕ್ತಿಗಳಿಗೆ ಮಾತ್ರ ಸೀಮಿತವಾಗುಳಿಯದೆ ತಮ್ಮ ಕುಟುಂಬವನ್ನು ಸಮಾಜವನ್ನು ವ್ಯವಸ್ಥೆಯನ್ನೂ ಆವರಿಸಿ ಇಡೀ ವಾತಾವರಣವನ್ನೇ ಕಲುಷಿತಗೊಳಿಸುವ/ಬುಡಮೇಲು ಮಾಡುವ ಅದೃಶ್ಯರೂಪದಲ್ಲಿರುತ್ತದೆ. ಇವುಗಳನ್ನು ಲೌಕಿಕ ವಿದ್ಯಮಾನಗಳ ಮೂಲಕ ವರ್ಣಿಸುತ್ತಾ ಅಲೌಕಿಕವಾದ ಆಯಾಮಗಳಲ್ಲಿ ಹುದುಗಿಸಿ ನಿರ್ದಿಷ್ಟತೆಯನ್ನೂ ಮೀರಿದ ಮನುಷ್ಯನ

ಅವಸ್ಥೆಯನ್ನು, ಅವಸ್ಥೆಯನ್ನೂ ಮೀರಿದ ವ್ಯವಸ್ಥೆಯನ್ನು ಪರಿಶೀಲನೆಗೆ ಒಳಪಡಿಸಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ ಕೆಲವು ಕೃತಿಗಳನ್ನು ಉದಾಹರಿಸಬಹುದು.

'ಹುಲಿಯೂರಿನ ಸರಹದ್ದು' ಕಥೆಯ ವಾಸ್ತವಿಕ ವಿವರಣೆಯೇ ಸೋಮುವಿನ ಕವಲು ದಾರಿಯನ್ನು ನಿರೂಪಿಸುತ್ತದೆ. ಮನಸ್ಸಿನ ತುಮುಲವು ಯಾವುದೇ ಒಂದು ಸ್ಥಿತಿಗೆ ಬರಲಾರದೆ ಡೋಲಾಯಮಾನವಾಗಿ ಮನೆಯ ಮೇಲೆ ಆಗಸದಲ್ಲಿ ಗಿರಗಿರ ಸುತ್ತುತ್ತಿರುವ ಗಿಡುಗನಂತೆ ಗಿರಕಿ ಹೊಡೆಯುತ್ತಲೇ ಇದೆ. ಪರಂಪರೆ, ಮನೆತನ, ತಂದೆ-ಅಜ್ಜ ಇವುಗಳ ಜಂಜಾಟದಲ್ಲಿ ಕಳೆದುಕೊಳ್ಳುತ್ತಿರುವ ಅಸ್ತಿತ್ವವನ್ನು ಪುನರ್‌ಸ್ಥಾಪಿಸುವ ಆಶಯ ಒಂದೆಡೆಯಾದರೆ ಇವೆಲ್ಲವನ್ನೂ ಧಿಕ್ಕರಿಸಿ ಹೊರಟುಹೋಗಬೇಕೆಂಬ ಬಯಕೆಯು ಮತ್ತೊಂದೆಡೆಯಾಗಿ ಇವೆರಡೂ ಘರ್ಷಿಸುತ್ತದೆ. ಒಂದು ಮತ್ತೊಂದಕ್ಕಾಗಿ ಬದುಕಬೇಕೆಂಬ ತಂದೆಯ ನಿರ್ದೇಶನವನ್ನು ಸೋಮು ಒತ್ತಡ, ಅಸಹನೆಯಿಂದ ಸ್ವೀಕರಿಸಿದ್ದಾನೆ. ಪರಂಪರೆಯ ಹಿನ್ನಲೆಯಲ್ಲಿ ಸೃಷ್ಟಿಯಾದ ಕೌಟುಂಬಿಕ ವಾತಾವರಣ-ಸಮಾಜ ಇವುಗಳಿಂದ ಬಿಡುಗಡೆ ಪಡೆದು ಸ್ವಂತಿಕೆಯನ್ನು ಸ್ಥಾಪಿಸಬೇಕೆಂಬ ಆಶಯ ತಾನಿದ್ದ ಪರಿಸ್ಥಿತಿಯೊಂದಿಗೆ ರಾಜಿಯಾಗಲು ಒಪ್ಪದೆ ಘರ್ಷಿಸುತ್ತದೆ. ಮಳೆಹುಳುವಿನ ಚಿತ್ರಣದ ಜೊತೆಗೆ ಸೋಮುವಿನ ಗ್ರಹಿಕೆಯ ಹಿನ್ನಲೆಯನ್ನು ನಿರೂಪಿಸುತ್ತಾ ಆತನ ಆಲೋಚನೆಗಳು ನಿಖರತೆಯನ್ನು ಪಡೆದುಕೊಳ್ಳುವ ಸೂಕ್ಷ್ಮತೆಯನ್ನೂ ವಾಸ್ತವದ ಹಿನ್ನೆಲೆಯಲ್ಲಿ ತೆರೆದಿಡಲಾಗಿದೆ.

'ಸ್ವರೂಪ'ದ ಶ್ರೀನಿವಾಸನ ಅಂತರಪ್ರಜ್ಞೆಗೂ-ಸೋಮುವಿನ ಸ್ವಪ್ರಜ್ಞೆಗೂ ಬಹಳಷ್ಟು ಅಂತರವಿದೆಯಾದರೂ ಪರಂಪರಾಗತ ನಂಬಿಕೆ, ಸಂಪ್ರದಾಯ ಕೌಟುಂಬಿಕ ಆಶಯ-ಆದರ್ಶಗಳ ಬಗೆಗಿನ ತಿರಸ್ಕರಣೆಯ ಭಾವ ಒಂದೇ ರೀತಿಯಾಗಿದೆ. ಸೋಮುವಿನ ಪ್ರಜ್ಞೆ ಕುಟುಂಬ-ಪರಂಪರೆ-ಪ್ರೀತಿ-ತ್ಯಾಗ-ಬಲಿದಾನ ಇವುಗಳ ನಡುವೆ ಸುತ್ತಿಸುಳಿದು ಶ್ರೀನಿವಾಸನ ಮುಖಾಂತರ ಸಾಮಾಜಿಕ-ರಾಜಕೀಯ-ಧಾರ್ಮಿಕ ಒಟ್ಟಾರೆ ಜಾಗತಿಕ ವಲಯವನ್ನೂ ವ್ಯಾಪಿಸಿಕೊಳ್ಳುತ್ತದೆ. ವ್ಯಕ್ತಿಪ್ರಜ್ಞೆ ಸಾಮೂದಾಯಿಕ ಪ್ರಜ್ಞೆಯಾಗುವಲ್ಲಿ ಸೋಲನ್ನು ಅನುಭವಿಸುತ್ತದೆ.

ಯಾವುದೇ ವ್ಯಕ್ತಿ ಅಸ್ತಿತ್ವವನ್ನು ಕುರಿತು ಆಲೋಚಿಸುವುದು ಮುಖ್ಯವಾಗಿ ಸಂಕ್ರಮಣಕಾಲಗಳಲ್ಲಿಯೇ. ತಮ್ಮ ಬದುಕಿನ ರೀತಿ-ನೀತಿಗಳು ಮತ್ತು ತಮ್ಮ ವ್ಯಕ್ತಿತ್ವ; ಇವೆರಡರ ನಡುವೆ ಸಮರಸವಿಲ್ಲದ ಸನ್ನಿವೇಶಗಳು ಎದುರಾದಾಗ ತಮ್ಮ ಅಸ್ತಿತ್ವದ ಬಗ್ಗೆ ಕ್ರಿಯಾಶೀಲರಾಗುತ್ತಾರೆ. ಇದರಿಂದ ಹೊಸ ಆಲೋಚನೆಗಳು ಮೂಡುತ್ತವೆ. ಅವು ಯಾಂತ್ರಿಕವಾದ ವಾತಾವರಣದಿಂದ ಹೊರಬರಲು ಪ್ರೇರೇಪಿಸುತ್ತವೆ. ದಿನ ನಿತ್ಯದ ಕಾರ್ಯಗಳು ಪುನರಾವರ್ತನೆಯಾಗುವ ವಿನ್ಯಾಸದಲ್ಲಿ ಬದುಕಿನ ಶೈಲಿ ಜಡಗೊಂಡಿರುತ್ತದೆ. ಅಂದರೆ ದಿನನಿತ್ಯದ ಬದುಕು ವ್ಯಕ್ತಿಯ ಪ್ರಜ್ಞಾಪೂರ್ವಕ ಕ್ರಿಯೆಯೇನೂ ಆಗಿರುವುದಿಲ್ಲ. ಕೆಲವೊಮ್ಮೆ ಆಪ್ತವಾಗಿ, ಕೆಲವೊಮ್ಮೆ ಪ್ರಚೋದನೆಗೆ ಒಳಗಾಗಿ, ಕೆಲವು ಸಲ ಆವೇಶಕ್ಕೆ ಒಳಗಾಗಿ ಕೆಲವೊಮ್ಮೆ ಯಾಂತ್ರಿಕ ಬಲದ ಮೇಲೆ ಸಾಗುವ ಈ ಬದುಕಿನ ಯಾವ ಕಾರ್ಯವೂ ಮೂರ್ತರೂಪದ ಬದುಕಿನ ಗ್ರಹಿಕೆಗೆ ಒಳಪಡುವುದಿಲ್ಲ. ತಿಂದು, ಉಂಡು, ಮಲಗುವ ಪ್ರಕ್ರಿಯೆಗಳು ವ್ಯಕ್ತಿಯ ಬೌದ್ಧಿಕ ಜಗತ್ತನ್ನು ಕತ್ತಲುಮಯಗೊಳಿಸುತ್ತದೆ. ಒಂದು ರೀತಿಯ ಜಡ ಪ್ರವೃತ್ತಿ ಆವರಿಸಿ ಎಲ್ಲಾ ಕ್ರಿಯೆಗಳೂ ವೈಯಕ್ತಿಕ ಮಿತಿಯೊಳಗೆ ರೂಪುಗೊಳ್ಳುತ್ತಾ ಪ್ರತ್ಯೇಕ ಜಗತ್ತನ್ನು ರೂಪಿಸಿಬಿಡುತ್ತದೆ.

ಇಂತಹ ಜಗತ್ತೊಳಗೆ ಪರಿಭ್ರಮಿಸುವ ಮನುಷ್ಯರ ಮನಸ್ಸು ಅನ್ವೇಷಣೆಯತ್ತ ಮುಖಮಾಡುವುದಿಲ್ಲ. ಅಂತೆಯೇ ಆಕಸ್ಮಿಕ ಘಟನೆಗಳಿಂದ ಪುನಶ್ಚೇತನಗೊಂಡು ಮತ್ತದೇ ಜಗತ್ತಿನೊಳಗೆ ಅಂತರ್ಧಾನವಾಗಿ ಬಿಡುತ್ತದೆ. ಇದಲ್ಲದೆ ತನ್ನ ಸುತ್ತಲ ಸಮಾಜಕ್ಕೂ ಜಡ ಪ್ರವೃತ್ತಿಗಳನ್ನು ಹರಡುತ್ತದೆ. ಇಂತಹ ಜಡ ಪ್ರವೃತ್ತಿಗಳೇ ಆಚರಣೆಗಳ ಹೆಸರಿನಲ್ಲಿ ದಿನನಿತ್ಯದ ಕ್ರಮದ ಮೇಲೆ ಅಧಿಪತ್ಯವನ್ನು ಸಾಧಿಸುತ್ತವೆ. ಕ್ರಮೇಣವಾಗಿ ಈ ಆಚರಣೆಗಳೇ ಸಂಪ್ರದಾಯ ನಿಷ್ಠ ನೆಲೆಗಳಾಗಿ ಸ್ಥಗಿತಗೊಂಡ ವಾತವರಣವನ್ನು ನಿರ್ಮಾಣ ಮಾಡಿಬಿಡುತ್ತವೆ. ಈ ವಾತಾವರಣ ಮನುಷ್ಯನ ಜೀವನಕ್ರಮವನ್ನು ವ್ಯತ್ಯಸ್ಥಗೊಳಿಸಿ, ಅವರ ಅಸ್ತಿತ್ವವನ್ನು ಕಬಳಿಸಿಬಿಡುತ್ತದೆ. ಜೀವನ ಕ್ರಮ ವ್ಯತ್ಯಸ್ಥಗೊಂಡಾಗ ಇಲ್ಲವೆ ಅಸ್ತಿತ್ವದ ಪ್ರಶ್ನೆ ಎದುರಾದಾಗ ಇದರಿಂದ ಹೊರಬರಲು ಆಲೋಚಿಸುವುದು ನಡೆಯುತ್ತದೆ. ಧುತ್ತೆಂದು ಸಮಸ್ಯೆಗಳು ಎದುರಾದಾಗ ಅಂದರೆ ಸಾವು-ನೋವು, ದುಃಖ-ದುಮ್ಮಾನ, ಶೋಷಣೆ-ದೌರ್ಜನ್ಯ ಇಂಥ ಸಂದರ್ಭಗಳಲ್ಲಿ ಸಮಸ್ಯೆಗಳನ್ನು ಕೆಲವೊಮ್ಮೆ ಸಹಜವೆಂಬಂತೆ, ಅನಿವಾರ್ಯವೆಂಬಂತೆ ಸ್ವೀಕರಿಸಿದರೆ ಇನ್ನು ಕೆಲವೊಮ್ಮೆ ಇದರಿಂದ ಹೊರಬರುವ ಪ್ರಕ್ರಿಯೆಗೆ ತೊಡಗುವುದು ನಡೆದೇ ಇರುತ್ತದೆ.

ಹಳೆಬೀಡಿನ ಹತ್ತಿರದ ಪನ್ನಾಪುರದವನು ಸೂರಾಚಾರಿ. ಹೊಯ್ಸಳರ ಕಾಲದ ಶ್ರೇಷ್ಠ ಶಿಲ್ಪಿಗಳ ವಂಶಜನಾಗಿದ್ದರಿಂದ ಶ್ರೇಷ್ಠ ಕಲಾವಂತಿಕೆ ಸೂರಾಚಾರಿಯ ಕೈಗೂ ಸಿದ್ದಿಸಿತ್ತು. ಕಟ್ಟಲಿದ್ದ ಈಶ್ವರ ದೇವಸ್ಥಾನಕ್ಕೆ ಕುಸುರಿ ಕೆತ್ತನೆಯ ಕೆಲಸದ ಸಲುವಾಗಿ ಇಸ್ಲಾಪುರಕ್ಕೆ ಬಂದಿದ್ದ ಸೂರಾಚಾರಿ ಕಾರಣಾಂತರಗಳಿಂದ ರದ್ದಾಗಿ ಹೋದ ನಿರ್ಮಾಣದಿಂದ ಅವಕಾಶವಂಚಿತನಾದನು. ಜೀವನ ನಿರ್ವಹಣೆಗಾಗಿ ಇಸ್ಲಾಪುರವನ್ನು ವಾಸಸ್ಥಳವನ್ನಾಗಿ ಆರಿಸಿಕೊಂಡಿದ್ದ ಆತ ಅಲ್ಲಿಯ ಮುಪ್ಪಿನ ಮುದುಕ ವಾಸಾಚಾರಿಯ ಬಲವಂತಕ್ಕೆ ಕಟ್ಟುಬಿದ್ದು ಆತನ ಮಗಳು ಯಶೋಧೆಯನ್ನು ಕಟ್ಟಿಕೊಳ್ಳುತ್ತಾನೆ. ಮಲೆಸೀಮೆಯ ಥಂಡಿ, ಹವಮಾನ ಒಗ್ಗದ ಸೂರಾಚಾರಿ ಹೆಂಡತಿಯನ್ನು ತನ್ನೂರಿಗೆ ಕರೆದೊಯ್ಯಲು ಸಾಧ್ಯವಾಗದೆ ಅನಿವಾರ್ಯವಾಗಿ ಇಸ್ಲಾಪುರದಲ್ಲೇ ನೆಲೆಯೂರಬೇಕಾಗುತ್ತದೆ. ಅನಿವಾರ್ಯವಾಗಿ ಒಗ್ಗಿಕೊಂಡ ಸೂರಾಚಾರಿಯ ಬದುಕನ್ನು ಅದೇ ಪರಿಸರ ಛಿದ್ರಗೊಳಿಸುತ್ತದೆ. ಆತನ ಅಸಮಾನ್ಯ ಕಲೆಗಾರಿಕೆಯ ಬಗ್ಗೆ ಇಸ್ಲಾಪುರ ಜನತೆಯಲ್ಲಿದ್ದ ಅಲಕ್ಷ್ಯದಿಂದಾಗಿ ಆತನಲ್ಲಿ ಸುಪ್ತವಾಗಿದ್ದ ಕಲೆಗಾರಿಕೆಯು ಇತರ ಕಸುಬುಗಳ ಮರೆಯಲ್ಲಿ ಹೂತುಹೋಗುತ್ತದೆ ಮತ್ತು ಊರವರಿಗಾಗಿ ಮಾರಿಗೊಂಬೆಗಳನ್ನು ಸೃಷ್ಟಿಸುವ ಹಂತಕ್ಕೆ ಆತನನ್ನು ಕೊಂಡೊಯ್ಯುತ್ತದೆ. ಹೊಸಕಸಬುಗಳತ್ತ ಮುಖಮಾಡಿದ ಸೂರಾಚಾರಿ ಜೀವಂತಿಕೆಯನ್ನು ಕಳೆದುಕೊಂಡು ತನ್ನ ಹೆಂಡತಿಯ ಖಾಯಿಲೆಯನ್ನು ತಾನು ಕಲಿತ ವಿದ್ಯೆಯನ್ನೆಲ್ಲಾ ಪ್ರಯೋಗಿಸಿದರೂ ವಾಸಿಮಾಡಲು ಸಾಧ್ಯವಾಗದೆ ಅಜಮೀರಿನ ಫಕೀರಪ್ಪನ ಬಳಿ ಭೂತೋಚ್ಚಾಟನಾ ವಿಧಿವಿಧಾನಗಳಿಗೆ ಮೊರೆಹೋಗುತ್ತಾನೆ. ಆದರೂ ಆಕೆ ದಿನದಿನಕ್ಕೆ ನವೆಯುತ್ತಾ ಆತನೇ ನಿರ್ಮಾಣ ಮಾಡುತ್ತಿದ್ದ ಮಾರಿಗೊಂಬೆಯ ಸ್ಥಿತಿ ಮುಟ್ಟುತ್ತಾಳೆ. ತನ್ನ ಹೆಂಡತಿಯ ರೋಗವನ್ನು ವಾಸಿಮಾಡುವಲ್ಲಿ ಅಸಫಲನಾಗುವ ಸೂರಾಚಾರಿ ಇತ್ತಾವರದ ಸುಬ್ಬಯ್ಯನ ಸಮಸ್ಯೆಗೆ ಗೌರಿಯ 'ಮಲೆದೋಸ'ವೇ ಕಾರಣವೆಂದೂ ಸಹಜ ಸೌಂದರ್ಯಕ್ಕೆ ಬರೆ ಇಡುವುದರ ಮುಖೇನ ಪರಿಹಾರ ದೊರೆಯುವುದೆಂದು ಆಶ್ವಾಸನೆ ನೀಡುವುದು ಪರಿಸ್ಥಿತಿಯ ವಿಡಂಬನೆಯಾಗುತ್ತದೆ. ಈತನ ವೈಯಕ್ತಿಕ ಅಸಹನೆ ಹಲವಾರು ರೀತಿಯಲ್ಲಿ ಇಸ್ಲಾಪುರವನ್ನು ಹಾಳುಗೆಡುವುದಕ್ಕೆ ಕಾರಣವಾಗುತ್ತದೆ.

ತುಕ್ಕೋಜಿ ಕಥೆಯು ತುಕ್ಕೋಜಿಯ ಭೌತಿಕ ಸ್ಥಿತ್ಯಂತಂತರದ ಜೊತೆಗೆ ರೈಲುನಿಲ್ದಾಣದ ಆಗಮನದಿಂದ ಗುರುಗಳ್ಳಿಯಲ್ಲಾದ ಸಾಮಾಜಿಕ ಸ್ಥಿತ್ಯಂತರ ವೈಯಕ್ತಿಕ ಬದುಕಿನ ಪಲ್ಲಟಗಳಿಗೂ ಕಾರಣವಾಗಿಬಿಡುತ್ತದೆ. ದರ್ಜಿಯಾಗಿದ್ದ ತುಕ್ಕೋಜಿ ವೃತ್ತಿ ಬದುಕಿನಲ್ಲಿ ಸಾಫಲ್ಯಗಳಿಸುತ್ತಾ ಸಮಾಜದಲ್ಲಿ ಪ್ರತಿಷ್ಠಿತನಾಗುತ್ತಾನೆ. ಬಿರುಸಿನ ಸ್ಥಿತ್ಯಂತರದ ದಿನಗಳಲ್ಲಿ ಕೌಟುಂಬಿಕ ಮತ್ತು ಮಾನಸಿಕ ತಲ್ಲಣಕ್ಕೆ ಒಳಗಾಗಿದ್ದ ತುಕ್ಕೋಜಿ ಕ್ರಮೇಣವಾಗಿ ಸಂಸಾರವನ್ನು ನಿರ್ಲಕ್ಷಿಸುವಂತಾಗುತ್ತದೆ. ಇದು ಆತನ ಹೆಂಡತಿ ಸರೋಜಾಳೂ ಕೂಡ ಸಂಸಾರವನ್ನೂ, ಮಗುವನ್ನೂ ಉಪೇಕ್ಷಿಸುವ ಮಟ್ಟಿಗೆ ಬೆಳೆಯುತ್ತದೆ. ಒಬ್ಬರಿಗೊಬ್ಬರು ಸಹಕರಿಸದೆ ಆಂತರಿಕವಾಗಿ ಘರ್ಷಣೆಗಿಳಿಯುತ್ತಾರೆ. ಗಂಡಹೆಂಡತಿಯರ ಈ ಪ್ರಕ್ರಿಯೆಯ ಹಿನ್ನಲೆಯಲ್ಲಿ ಪರಸ್ಪರರ ನಿರ್ಣಯಗಳು ಹೊರಕ್ಕೆ ಬಾರದೆ ತಮ್ಮ ತಮ್ಮ ಚಟುವಟಿಕೆಗಳ ಮೂಲಕ ಹೋರಾಟಕ್ಕಿಳಿಯುತ್ತವೆ. ತುಕ್ಕೋಜಿ ಈ ಮೊದಲು ಆಕೆಯನ್ನು ತನ್ನ ಅದೃಷ್ಟದೇವತೆಯೆಂದು ಪರಿಗಣಿಸಿದ್ದಾತ, ಈಗ ಆಕೆಯ ವ್ಯಕ್ತಿತ್ವವನ್ನು ತನ್ನಂತೆಯೇ ಗೌರವಿಸುವ ಮತ್ತು ವೃತ್ತಿ ಬದುಕಿನಲ್ಲಿ ಪಾಲುದಾರಳಾಗುವಂತೆ ಪ್ರೇರೇಪಿಸುವ ಸ್ವಂತಿಕೆಯನ್ನು ತೋರುವುದಿಲ್ಲ. ಗಂಡನಿಂದ ಉಪೇಕ್ಷಿಸಲ್ಪಡುತಿದ್ದೇನೆ ಎಂಬ ಭಾವನೆಯಿಂದ ತುಕ್ಕೋಜಿಯ ಆಶಯಗಳಿಗೆ ಪ್ರತಿಸ್ಪಂದಿಸದೆ ಆತನ ವ್ಯಾವಹರಿಕ ಪ್ರವೃತ್ತಿಯನ್ನು ತಿರಸ್ಕರಿಸಿ, ಕುಟುಂಬದ ಬಗೆಗೆ ಕಾಳಜಿ ವಹಿಸದೆ ತನ್ನ ಸೀಮಿತ ಆವರಣದಲ್ಲಿ ಪ್ರತಿಭಟನೆಯನ್ನು ವ್ಯಕ್ತಪಡಿಸುತ್ತಾಳೆ.

ಅಸ್ತವ್ಯಸ್ತಗೊಂಡ ವೃತ್ತಿಬದುಕಿನಿಂದಾಗಿ ನಿರಾಂತಕವಾಗಿ ಸಾಗುತ್ತಿದ್ದ ಕೌಟುಂಬಿಕ ಬದುಕಿನಲ್ಲಿ ಬಿರುಕು ಮೂಡುತ್ತದೆ. ಇಬ್ಬರ ತುಡಿತಗಳು ಮೌನ ಮೀರಿ ಸಂಘರ್ಷಕ್ಕೆ ಮುಖಾಮುಖಿಯಾಗುವ ಸಂದರ್ಭವಿದ್ದಾಗ್ಯೂ ಆ ಸಾಧ್ಯತೆಗಳನ್ನು ತಪ್ಪಿಸುವ ಪರಿಸ್ಥಿತಿ ಎದುರಾಗುತ್ತದೆ. ತಮ್ಮಿಬ್ಬರ ಉಪೇಕ್ಷೆಯ ಮಗುವಾದ ಕೃಷ್ಣೋಜಿ ಸ್ವಲ್ಪಸಮಯ ಕಾಣೆಯಾಗುತ್ತಾನೆ. ಆತನ ಕಣ್ಮರೆಗೆ ತಾವೇ ಕಾರಣರಾಗಿದ್ದರಿಂದ ಇದುವರೆಗೂ ಕಟ್ಟಿಕೊಂಡಿದ್ದ ಬಿಗುಮಾನದಿಂದ ಹೊರಬರುವಂತಾಗುತ್ತದೆ. ಒಟ್ಟಿನಲ್ಲಿ ಇಬ್ಬರೂ ತಾವು ಬದುಕುವ ಸಂದರ್ಭದಲ್ಲೇ ತಮ್ಮ ತಮ್ಮಲ್ಲೇ ಉಲ್ಬಣಗೊಳ್ಳುತ್ತಿದ್ದ ವೈರುಧ್ಯ ಘಟಕಗಳನ್ನು ಮಗುವನ್ನು ಕಳೆದುಕೊಂಡಿದ್ದ ಆ ಸಂದರ್ಭದ ಆವರಣದೊಳಗೆ ವಿಶ್ಲೇಷಿಸಿಕೊಂಡು ನೆಮ್ಮದಿ ಸ್ಥಿತಿಗೆ ಮರಳಿ ಶಾಂತ ಮನಸ್ಥಿತಿ ಪಡೆಯುತ್ತಾರೆ. ಹೀಗೆ ಪರಂಪರೆಯಿಂದ ಪೋಷಕವಾಗಿ ಬಂದ ನೆಮ್ಮದಿಯುತ ಸ್ಥಿತಿಯ ಬದುಕನ್ನು ನಿರೀಕ್ಷಿಸುವ ಘಟಕವೊಂದಕ್ಕೆ ಈ ಕಥೆಯು ಸಮರ್ಪಿತವಾಗುತ್ತದೆ.

ವಿಚಾರವಾದಿಯಾದ ಡಾ. ಕುಬಿ ತಾನು ನಂಬಿರುವ ಸಿದ್ಧಾಂತಗಳಿಂದಾಗಿ ಭೈರಾಪುರದದಂತಹ ಮೌಢ್ಯ ತುಂಬಿದ ಸಮಾಜವನ್ನು ಬದಲಾಯಿಸಿ ಬಿಡುವೆಂಬ ವಿಶ್ವಾಸದಿಂದ ಯಾರೂ ಬರುವುದಕ್ಕೆ ಹಿಂದೇಟು ಹಾಕುತ್ತಿದ್ದ ಆ ಊರಿಗೆ ವೈದ್ಯವೃತ್ತಿ ನಿರ್ವಹಿಸಲು ಬರುತ್ತಾನೆ. ಭೈರಾಪುರದ ಜನತೆಯ ನಂಬಿಕೆಗೂ ತನ್ನ ವೈಚಾರಿಕ ಜಗತ್ತಿಗೂ ಇರುವ ವೈರುಧ್ಯವು ಮೊದಲಿಗೆ ಗೋಚರವಾಗುತ್ತದೆ. ಅವೆಲ್ಲವನ್ನೂ ತೊಡೆದು ಹಾಕುವ ಕ್ರಿಯೆಯಲ್ಲಿ ಭಾಗಶಃ ಸೋಲನ್ನು ಅನುಭವಿಸುತ್ತಾನೆ. ಅವನ ಆಲೋಚನೆಗಳೆಲ್ಲ ವ್ಯಕ್ತಿಗತವಾಗಿ ಸೀಮಿತ ಆವರಣದಲ್ಲೇ ಪ್ರಯೋಗಿಸಲ್ಪಡುತ್ತವೆ.

ವ್ಯಕ್ತಿ ದುರ್ಬಲನಾಗಿದ್ದಾಗ ಆತನ ದೌರ್ಬಲ್ಯವನ್ನು ತಮ್ಮ ಸ್ವಾರ್ಥಕ್ಕೆ ಬಳಸಿಕೊಳ್ಳುವುದು ಸಮಾಜದ ಕರಾಳತೆಯನ್ನು ಅಮಾನವೀಯತೆಯನ್ನು ಸಾಕ್ಷೀಕರಿಸುತ್ತದೆ. ತಬರ, ಬೋಬಣ್ಣ, ಮಂದಣ್ಣ, ಕುಬಿ ಮತ್ತು ಇಯಾಲ ಕಥೆಯ ಹಮಾಲಿಗಳಾದ ರೆಹಮಾನ್, ರಂಗ ಇವರುಗಳ ಸ್ಥಿತಿಯಂತೆಯೇ ಚಿದಂಬರ ರಹಸ್ಯದಲ್ಲಿನ ಅಂಗಾಡಿ ಮತ್ತು ಜಯರಾಂರ ವ್ಯಕ್ತಿತ್ವವನ್ನೆ ನೋಡಬಹುದು. 'ಈ ಅಂಗಾಡಿ ಅವನೇ ಹೇಳಿಕೊಂಡಂತೆ ನಾನಾ ಹೆಸರುಗಳಲ್ಲಿ, ಉದ್ಯೋಗದ ಬದಲಾವಣೆಯಲ್ಲಿಯೆ ಬದುಕುತ್ತ ತನ್ನ ಬಗ್ಗೆ, ಪರಿಸರ, ಸಮಾಜದ ಬಗ್ಗೆ ಕಲ್ಪನೆಗಳನ್ನು ಕಟ್ಟುತ್ತಾ ಇರುವವನು. ಇವನ ಕಲ್ಪನೆ, ತಾರ್ಕಿಕತೆ, ಪತ್ತೇದಾರಿಕೆ ಎಲ್ಲ ಒಂದೇ ಒಂದು ಎಳೆ ತಪ್ಪಿದರೂ ನಗೆಪಾಟಲಾಗಿ, ಇವನ ಅಂತಃಸಾಕ್ಷಿ ದಿಗಿಲುಗೊಳ್ಳುತ್ತದೆ ಎಂಬುವುದು ಗೋಸಾಯಿಗಳ ಪಲಾಯನದಿಂದ ಗೊತ್ತಾಗುತ್ತದೆ. ಇದೇ ರೀತಿ ಇದ್ದ ಜಯರಾಂ, ತನ್ನ ಪರಿಸರದ ಸಂಬಂಧವನ್ನು ಅರ್ಥೈಸಿಕೊಂಡು, ವಸ್ತುನಿಷ್ಠವಾದ, ಮೌಲಿಕವಾದ ವ್ಯಕ್ತಿಯಾಗುತ್ತಾನೆ. ಆದರೆ ಅಂಗಾಡಿಗೆ ಬದಲಾವಣೆ ಸಾಧ್ಯವಾಗುವುದೇ ಇಲ್ಲ. ಹೀಗೆ ಪ್ರಯೋಗದ ನಂತರ ಜೀವನಸೃಷ್ಟಿಯ, ನಿಗೂಢವನ್ನು ಶಕ್ತಿಯನ್ನು ಒಪ್ಪಿಕೊಂಡು ಜಯರಾಂ ಮತ್ತು ತನ್ನದೇ ಪ್ರಭಾವವಲಯದ ಒಳಗೆ ಇರುವ ಅಂಗಡಿ ವ್ಯಕ್ತಿತ್ವದ ಎರಡು ಮಾದರಿಗಳು'.[20] ಇವರಂತೆಯೇ ಬದಲಾವಣೆಯೊಂದಿಗೆ ಹೊಂದಾಣಿಕೆಯ ಬದುಕನ್ನು ಸಾಗಿಸುತ್ತಿರುವ ಅನೇಕರಿದ್ದಾರೆ.

ಸ್ಥಿರೀಕೃತ ಮೌಲ್ಯಗಳನ್ನು, ಪರಂಪರಾಗತ ಕೌಟುಂಬಿಕ ಲಕ್ಷಣಗಳನ್ನು ಧಿಕ್ಕರಿಸುವ ಪ್ರವೃತ್ತಿಯನ್ನು, ಸಾಮಾಜಿಕ ಆವರಣದಲ್ಲಿ ಪ್ರತಿಭಟಿಸುವ ಪರಿಯನ್ನು ಕಿರುಗೂರಿನ ಗಯ್ಯಾಳಿಗಳು ಕಥೆಯ ದಾನಮ್ಮನಲ್ಲಿ ಕಾಣುತ್ತೇವೆ. ಕ್ರಾಂತಿಕಾರಿ ಧೋರಣೆಯ ಮೂಲಕ ಸ್ತ್ರೀ ಸಮುದಾಯವು ಭೋಗಿಕ ವಸ್ತುವಾಗಿ ಬಳಕೆಗೊಳ್ಳುತ್ತಿರುವ ಸಂದರ್ಭಗಳನ್ನೂ, ಕ್ರಿಯಾಶೀಲತೆಯನ್ನು ಕಳೆದುಕೊಂಡು ನಿರ್ಜೀವವಾಗುವ ಅಸಹಾಯಕತೆಯನ್ನು ದುರುಪಯೋಗ ಪಡಿಸಿಕೊಳ್ಳುವ ಸಮಾಜವನ್ನೂ, ಗಂಡಿನ ಸರ್ವಾಧಿಕಾರದ ಅಡಿಯಲ್ಲಿ ನಜ್ಜುಗುಜ್ಜಾಗುವುದನ್ನು ತಡೆಗಟ್ಟುವುದಕ್ಕಾಗಿ ಸ್ಫೋಟಗೊಳ್ಳುವುದು ಕಿರುಗೂರಿನಂತಹ ಸಾಮಾನ್ಯ ಹಳ್ಳಿಯೊಂದರಲ್ಲಿ ನಡೆಯುತ್ತದೆ.

ನಾಗಮ್ಮನಂತಹ ಹೆಣ್ಣುಮಕ್ಕಳ ವಿಮೋಚನೆಗೆ ನಾಂದಿ ಹಾಡಲು ಗಂಡು ಹೃದಯದ ಹೆಣ್ಣು ದನಮ್ಮ ಕಾರಣಳಾಗಿ ಸಾಮುದಾಯಿಕ ಶೋಷಣೆಯನ್ನು, ಪುರುಷನನ್ನೇ ಆಶ್ರಯಿಸಿ ತನ್ನ ಅಸ್ತಿತ್ವವನ್ನು ಗುರುತಿಸಿಕೊಳ್ಳಬೇಕೆಂಬ ಪರಂಪರೆಯ ಚೌಕಟ್ಟನ್ನು ಮುರಿದು, ತನ್ನದೇ ಆದ ಸ್ವಂತಿಕೆಯನ್ನು ಸ್ಥಾಪಿಸುವಲ್ಲಿ ದಾನಮ್ಮ ಯಶಸ್ವಿಯಾಗುತ್ತಾಳೆ. ಕಿರುಗೂರಿನ ಹಲವು ಹೆಂಗಳೆಯರ ಮನದಲ್ಲಿ ತನಗರಿವಿಲ್ಲದಂತೆ ಹೊಸ ಬದಲಾವಣೆಯ ಅಲೆಯೇಳಲು ದನಮ್ಮ ಪ್ರಮುಖ ಕಾರಣವಾಗುತ್ತಾಳೆ. ಇದು ಸಂಸ್ಕೃತಿಯ ಹಿನ್ನೆಲೆಯಲ್ಲಿ ಬದುಕಿನ ಅಂತಿಮ ಸಾಧ್ಯತೆಯ ಬಗೆಗೆ, ಅದನ್ನು ಪ್ರೀತಿಸುವ ವ್ಯಕ್ತಿ ಅದರ ಬಗೆಗೆ ತೆಗೆದು ಕೊಳ್ಳುವ ಅಂತಿಮ ತೀರ್ಮಾನವಾಗಿದೆ. ಸಮಾಜದ ಸಾಮೂಹಿಕ ಇಚ್ಛೆಯನ್ನು ದಾನಮ್ಮನ ವೈಯಕ್ತಿಕ ಇಚ್ಛೆಯು ವಿರೋಧಿಸುತ್ತದೆ ಮತ್ತು ತನ್ನದೇ ಸ್ವತಂತ್ರ ನೆಲೆಯನ್ನು ಬದುಕಿನ ಸೀಮಿತ ಅರಿವಿನಲ್ಲಿ ಶೋಧಿಸುವ ಛಲ ತೋರುತ್ತದೆ. ಜೀವನಾನುಭವವೊಂದಕ್ಕೆ 'ರೂಪಕ'ವಾಗಿ ಬರುವ ಈ ಕಥೆ ದಾನಮ್ಮನಂತಹ ಪಾತ್ರ ಪ್ರಾತಿನಿಧ್ಯತೆಯ ಮೂಲಕ ಕಿರುಗೂರಿನ ಸಾಮಾಜಿಕ ಸಂಚಲನೆಗೆ ಮುಂದಾಗುತ್ತದೆ.

ಸಮುದಾಯದೊಂದಿಗೆ ಹೆಜ್ಜೆ ಹಾಕುವ ವ್ಯಕ್ತಿ ತಾನು ಸಮಾಜದೊಂದಿಗೆ ಹೊಂದಿರುವ ಸಂಬಂಧ ಮತ್ತು ಸ್ವೀಕೃತಗೊಂಡ ಸಾಮಾಜಿಕ ಮೌಲ್ಯಗಳನ್ನು ಒಪ್ಪಿನಡೆದಾಗ ಸಮಾಜದೊಂದಿಗಿನ ಒಡಂಬಡಿಕೆ ಸಮರಸದಿಂದ ಕೂಡಿರುತ್ತದೆ. ಇಲ್ಲದೇ ಹೋದಲ್ಲಿ ವ್ಯಕ್ತಿ ಸಮುದಾಯದೊಂದಿಗೆ ಘರ್ಷಣೆಗೆ ಒಳಗಾಗುತ್ತಾನೆ. ಅಂತೆಯೇ ವ್ಯಕ್ತಿಯ ನಡವಳಿಕೆಗಳು ಅಸಹಜವೆನಿಸಿದಾಗ ಸಮುದಾಯವೂ ಆತನನ್ನು ತಿರಸ್ಕರಿಸುತ್ತದೆ. ಅಬಚೂರಿನ ಪೋಸ್ಟಾಫೀಸು ಕತೆಯ ಬೋಬಣ್ಣ, ಕಿರುಗೂರಿನ ಗಯ್ಯಾಳಿಗಳೂ ಕಥೆಯ ದಾನಮ್ಮ ಇವರಿಗೆ ಪ್ರತಿಕ್ರಿಯಿಸುವ ಸಮುದಾಯಿಕ ಪರಿಸರವನ್ನು ಗಮನಕ್ಕೆ ತಂದುಕೊಳ್ಳಬಹುದು.

ಕುಟುಂಬ–ಸಮಾಜ–ವ್ಯವಸ್ಥೆ ಪರಸ್ಪರ ಜಿದ್ದಾಜಿದ್ದಿಗೆ ಬಿದ್ದಂತೆ ವರ್ತಿಸಿದಾಗ ಅದಕ್ಕೆ ಎದುರಾಗುವ ವ್ಯಕ್ತಿ ಅಸಹಾಯಕನಾಗಿ ಬಿಡುತ್ತಾನೆ. ವ್ಯಕ್ತಿಯ ಅಸಹಾಯಕತೆ ಮತ್ತು ಸಮುದಾಯದ ಕ್ರೌರ್ಯಗಳ ನಡುವಿನ ಘರ್ಷಣೆ ವ್ಯಕ್ತಿಯ ಬದುಕನ್ನು ಛಿದ್ರಗೊಳಿಸಿ ಆ ವ್ಯವಸ್ಥೆಗೆ ಹೊಂದಿಕೊಳ್ಳಲಾಗದೆ ಬದುಕಿನ ಮತ್ತೊಂದು ಆಯಾಮದತ್ತ ಚಲಿಸುವುದು ಹೊಸ ಬದುಕಿಗೆ ಮುನ್ನುಡಿಯಾಗುತ್ತದೆ. ಪ್ರತಿಯೊಬ್ಬ ವ್ಯಕ್ತಿಗೂ ತನ್ನ ಬದುಕಿನ–ತನ್ನದೇ ಎನ್ನಬಹುದಾದ ವ್ಯಕ್ತಿಗತ ನೆಲೆಯ ಇತಿ–ಮಿತಿಗಳಿವೆ. ಆದಾಗ್ಯೂ ಅವುಗಳನ್ನು ಮೀರುವ ಪ್ರಯತ್ನ ನಿರಂತರವಾಗಿರುತ್ತದೆ.

## ೩.೨.೨: ವ್ಯವಸ್ಥೆ ಮತ್ತು ಸಮಕಾಲೀನತೆ: ವ್ಯವಸ್ಥೆ ತಾಳಿದ ವಿಕೃತ ರೂಪ

ಯಾವುದೇ ವ್ಯವಸ್ಥೆಯಾಗಿರಲಿ ಸಮಕಾಲೀನತೆಯಾಗಿರಲಿ, ಸಮಕಾಲೀನತೆಯನ್ನು ಒಪ್ಪಿಕೊಳ್ಳುವುದು ವ್ಯವಸ್ಥೆಯಿಂದ ಸಾಧ್ಯವಾಗಿಲ್ಲ; ವ್ಯವಸ್ಥೆಯನ್ನು ಸಮಕಾಲೀನತೆ ಒಪ್ಪಿಕೊಂಡಿಲ್ಲವಾದ್ದರಿಂದ ಅವುಗಳ ನಡುವಣ ಸಂಘರ್ಷ ನೈರಂತರ್ಯವನ್ನು ಪಡೆದುಕೊಂಡು ಸಾಗುತ್ತಲೇ ಇದೆ. ವ್ಯಕ್ತಿ, ಸಮುದಾಯದ ಅವಿಭಾಜ್ಯ ಅಂಗ, ಸಮಾಜದೊಂದಿಗೆ ತನ್ನ ಸಂಬಂಧ ಅಹಿತಕರವಾಗಿದ್ದಾಗ, ಪ್ರತ್ಯಕ್ಷವಾಗಿಯೇ ಸಮಾಜದ ನಿರ್ಬಂಧಕ್ಕೆ ಒಳಾಗಿರುವುದರ ಬಗೆಗಿನ ಆಕ್ಷೇಪವೇ ವ್ಯಕ್ತಿತ್ವ ಶೋಧನೆಗೆ ಅನುವು ಮಾಡುತ್ತದೆ. ತಾನು ತನ್ನ ಕುಟುಂಬ ಎಂಬ ಸೀಮಿತ ಪರಿಧಿಯಲ್ಲಿ ಯಾವುದೇ ಭದ್ರತೆಯು ದೊರೆಯದೇ ಇದ್ದಾಗ, ಸಾಮಾಜಿಕ ಅಭದ್ರತೆ ತೀವ್ರವಾಗಿ ಕಾಡಿದಾಗ ಇಬ್ಬಂದಿತನಕ್ಕೆ ಒಳಗಾದಾಗ ವ್ಯಕ್ತಿಯ ಪಯಣ ತನ್ನದೇ ನೆಲೆಯನ್ನು ಕಂಡುಕೊಳ್ಳುವತ್ತ ಸಾಗುತ್ತದೆ. ಇಂತಹ ಪಯಣ ಸಾಮಾಜಿಕ ಸಂಬಂಧಗಳಿಂದ ಆತನನ್ನು ಬೇರ್ಪಡಿಸುತ್ತದೆ ಮತ್ತು ಸಮಾಜದಿಂದ, ಸಮುದಾಯದಿಂದ ಹೊರಗುಳಿಯುವುದಕ್ಕೆ ಪ್ರೇರೇಪಿಸುತ್ತದೆ. ಏಕೆ ಇಂತಹ ಸ್ಥಿತಿ ನಿರ್ಮಾಣವಾಗುತ್ತದೆ ಎಂದರೆ ಒಂದು ಅಜ್ಞಾನದ ಕಾರಣದಿಂದ ಮತ್ತೊಂದು ವ್ಯವಸ್ಥೆಯ ಕಾರಣದಿಂದ.

ಸಾಮಾಜಿಕತೆ ಎಂದರೆ ಅದು ಕೇವಲ ಸಾಮಾಜಿಕ ಜೀವನವನ್ನು ಕುರಿತ ವಿವರಣೆಯಲ್ಲ. ಬದುಕಿನ ಕ್ರಮದೊಳಗೆ ಹಾದುಹೋಗುವ ಪ್ರತಿಯೊಂದು ಜೀವಿಯ ಜೀವಾತ್ಮವನ್ನೂ ಒಳಗೊಂಡಂತೆ ಅವುಗಳ ಸಾಂದ್ರಗುಣಗಳೊಡನೆ ಜೀವಜಾಲದ ವಿಶಿಷ್ಟತೆಗಳನ್ನು ಗುರುತಿಸುವುದು ಮತ್ತು ಸಾಹಿತ್ಯದ ಮುಖೇನ ಸಾಮಾಜಿಕ ಸಮಸ್ಯೆಗಳಿಗೆ ಹುಡುಕುವ ಪರಿಹಾರೋಪಾಯಗಳು.

ಜುಗಾರಿಕ್ರಾಸ್‌ನಲ್ಲಿ ಬರುವ ಕೆಲವು ಸನ್ನಿವೇಶಗಳು ಮತ್ತು ಪಾತ್ರಗಳು ಯಾವುದೇ ಆಯಾಮದಿಂದ ನೋಡಿದರೂ ಅನರ್ಥಕವೆನಿಸುವುದಿಲ್ಲ. ಬದಲಿಗೆ ಓದುಗನನ್ನೂ ಶೋಧಕ್ಕಣಿಗೊಳಿಸುತ್ತದೆ. ಅಲ್ಲಿ ನಡೆಯುವ ಪ್ರತಿಯೊಂದು ವಿದ್ಯಮಾನಗಳೂ[31] ತರ್ಕಬದ್ಧವಾಗಿದ್ದು ಕಾರ್ಯ-ಕಾರಣ ಸಂಬಂಧವನ್ನು ಪೋಷಿಸುತ್ತವೆ. ಜುಗಾರಿಕ್ರಾಸ್ ಕೇವಲ ಭೂಪಟದಲ್ಲಿ ಗುರುತಿಸುವ ಭೌಗೋಳಿಕವಾದ ಒಂದು ಪರಿಸರ ಮಾತ್ರವಲ್ಲ. ಅದು ಕಾಳದಂಧೆಗಳ ರಹಸ್ಯತಾಣ ಮತ್ತು ಮಾದಕ ದ್ರವ್ಯಗಳ ಸಾಗಾಟದ ತವರು. ಯಾರಿಂದಲೋ ದೆಹಲಿಯಲ್ಲಿ ಕುಳಿತವರಿಂದಲೋ ಗೊತ್ತಿಲ್ಲದಂತೆಯೇ ಜನ ಆಡಿಸಲ್ಪಡುತ್ತಾರೆ. ಹೊಟ್ಟೆಪಾಡಿಗಾಗಿ ದುಡಿಯುವ ವರ್ಗದವರ ಮೇಲಿನ ಶೋಷಣೆ, ಏನೂ ಅರಿಯದ ಜನಸಾಮಾನ್ಯ ಬದುಕನ್ನಾಗಲಿ, ಅಲ್ಲಿನ ವ್ಯವಹಾರ-ವಹಿವಾಟುಗಳಾಗಲಿ, ಏಲಕ್ಕಿ ಮಾರಾಟವಾಗಲಿ ಏನನ್ನು ಗಮನಿಸಿದರೂ ಎಲ್ಲವೂ ಗೊಂದಲ-ಗೋಜಲಿನಿಂದ ಕೂಡಿದ್ದೇ ಆಗಿವೆ. ಅಲ್ಲಿನ ಪ್ರಧಾನ ಸಮಸ್ಯೆಯಾಗಿ ಏಲಕ್ಕಿಯನ್ನೇ ಇಟ್ಟುಕೊಂಡರೂ ಇನ್ನಿತರ ಸಮಸ್ಯೆಗಳಂತೆ ಅದು ಕೂಡ ವ್ಯೂಹದೊಳಗೆ ಸಿಕ್ಕಿ ಸ್ಥಾನ-ಪಲ್ಲಟಗೊಳ್ಳುತ್ತದೆ. ಇಂತಹ ಸಾಮಾಜಿಕ ಸಮಸ್ಯೆಗಳಲ್ಲಿ ಬಿದ್ದು ಒದ್ದಾಡುವುದು ಸಮಕಾಲೀನತೆ. ಅದಕ್ಕೆ ಇಂಥದ್ದೊಂದು ವ್ಯವಸ್ಥಿತ ಜಾಲ ಹೇಗೆ ಎಲ್ಲವನ್ನೂ ನಿಯಂತ್ರಿಸುತ್ತದೆ ಎಂಬುದು ತಿಳಿಯದು. ಪರಿಣಾಮವಾಗಿ ಸುರೇಶ ಗೌರಿಯಂಥ ಪಾತ್ರಗಳು ಮೈದಳೆಯುತ್ತವೆ. ಅಲ್ಲಿನ ಏಲಕ್ಕಿ ವ್ಯಾಪಾರ ಕೆಂಪು ಕಲ್ಲಿನ ವ್ಯವಹಾರಗಳಲ್ಲಿ ಇಂತಹ ಪಾತ್ರಗಳು ನೂಕಲ್ಪಡುತ್ತವೆ ಮತ್ತು ಅದರಿಂದ ಹೊರಬರುವ ದಾರಿಯನ್ನು ಕಂಡುಕೊಳ್ಳುವಲ್ಲಿ ಯಶಸ್ವಿಯಾಗುತ್ತವೆ.

ಖುದ್ದೂಸ್ ಎಕ್ಸ್‌ಪ್ರೆಸ್ ಬಸ್ಸಿನಲ್ಲಿ ಪಯಣಿಸುವ ಸುರೇಶ ಮತ್ತು ಗೌರಿ ಏಲಕ್ಕಿಯ ಸಾಗಾಟದಲ್ಲಿ ಅರಿಯದೆ ಜಾಲದೊಳಗೆ ಸಿಲುಕುತ್ತಾರೆ. ಆನಂತರ ತಮ್ಮ ಬುದ್ಧಿ ಮತ್ತು ಚಾಣಾಕ್ಷತನದಿಂದ ಆ ಅಭೇದ್ಯವನ್ನು ಹಾದು ಬಿಡುಗಡೆಗೊಳ್ಳುತ್ತಾರೆ. ಆ ಸಂದರ್ಭಗಳು ರಹಸ್ಯದ ವಾತಾವರಣವನ್ನು ನಿರ್ಮಾಣಮಾಡಿ ಪತ್ತೇದಾರಿ ಅಂಶಗಳಿಂದ ಸ್ವಾರಸ್ಯಕರವೆನಿಸುತ್ತವೆ. ಆದರೆ ಇದಕ್ಕೂ ಮಿಗಿಲಾಗಿ ಸಾಮಾನ್ಯರನ್ನು ಸಾಮಾನ್ಯರಂತೆ ಬದುಕಲು ಆಸ್ಪದಗೊಡದ ವ್ಯವಸ್ಥೆಯ ಕರಾಳತೆಯ ಚಿತ್ರಣ ಸಾಮಾಜಿಕ ತುಡಿತವನ್ನು ವ್ಯಕ್ತಪಡಿಸುತ್ತದೆ. ಜುಗಾರಿಕ್ರಾಸ್ ಮಾತ್ರವಲ್ಲದೆ ಸುತ್ತಮುತ್ತಲ ಪ್ರದೇಶಗಳನ್ನು ಯಾವುದೋ ಕಾಣದ ಕೈಗಳು ನಿಯಂತ್ರಿಸುವುದು; ಭೂಗತ ಜಗತ್ತು ಇಲ್ಲಿನ ಆರ್ಥಿಕ-ಸಾಮಾಜಿಕ ಪರಿಸ್ಥಿತಿಯನ್ನು ನಿಭಾಯಿಸುವಲ್ಲಿ ಯಶಸ್ವಿಯಾಗಿರುವುದು ಮತ್ತು ಅನಾಮಧೇಯ-ಅಪರಿಚಿತ ವ್ಯಕ್ತಿಯ ನಿರ್ಣಯ ನಿರಪರಾಧಿಯ ಸಾವು ಇಲ್ಲವೆ ಕಣ್ಮರೆಗೆ ಕಾರಣೀಭೂತವಾಗಿರುವುದು ಎಲ್ಲವೂ ವ್ಯವಸ್ಥೆಯ ಕರಾಳ ರೂಪವನ್ನು ತಿಳಿಸುತ್ತವೆ. ಜುಗಾರಿ ಲೋಕ ಇಂಥ ರಹಸ್ಯಗಳ ಥ್ರಿಲ್ ಹೊರತಾಗಿಯೂ ಸಾಮಾಜಿಕ ಹಾಗೂ ಪರಿಸರದ ಕಾಳಜಿ ಮತ್ತು ಸಾಂಸ್ಕೃತಿಕ, ಸಾಮಾಜಿಕ ಮೌಲ್ಯಗಳ ಅಳಿವು-ಉಳಿವುಗಳು ಪ್ರಾಮುಖ್ಯತೆಯನ್ನು ಪಡೆದುಕೊಳ್ಳುತ್ತವೆ.

ಈ ಎಲ್ಲಾ ಅಂಶಗಳು ತೇಜಸ್ವಿಯವರ ಕಥನಗಳಲ್ಲಿ ಅನುರಣಿಸುತ್ತವೆ. ಅವು ಪ್ರಯೋಗಾತ್ಮಕ ಬರವಣಿಗೆಯೋ ಶೋಧದ ವಿಷಯವೋ ಎಂಬುದಕ್ಕಿಂತ ಹೆಚ್ಚಾಗಿ ಮಾನವ ತನ್ನ ಸ್ವಾರ್ಥಕ್ಕೋಸ್ಕರ ಪರಿಸರವನ್ನು ನಾಶಗೊಳಿಸುತ್ತಾ ತನ್ನೊಡನೆಯೇ ತಾನು ಸಂಘರ್ಷಿಸುತ್ತಾ ಬದುಕುವ ಜೀವನವನ್ನು ಹಾಸ್ಯಲೇಪಿಸಿ ಹೇಳಿದಂತೆ ತೋರಿದರೂ ಅದು ಸಮಕಾಲೀನತೆಯನ್ನು ಹತೋಟಿಯಲ್ಲಿ ಇಡಲಾಗದ ವ್ಯವಸ್ಥೆಯ ವಿಡಂಬನೆಯಾಗಿದೆ. ಕೈಯಾರೆ ತನ್ನ ಸರ್ವನಾಶವನ್ನು ಬರಮಾಡಿಕೊಳ್ಳಹೊರಟ ಮಾನವ ಪ್ರಕೃತಿಯೊಡನೆ ಇಷ್ಟು ಸಂಘರ್ಷಿಸುತ್ತಾ ಇರುವಾಗಲೂ ಇದನ್ನು ತಡೆಯಲಾರದ ವ್ಯವಸ್ಥೆ ಒಂದು 'ವ್ಯವಸ್ಥೆಯೇ'? ಇದು ಸಮಕಾಲಿನತೆಯೊಂದಿಗೆ ಸೆಣಸಾಡುತ್ತಾ ವಿನಾಶದಂಚನ್ನು ತಲುಪಿ ವಿನಾಶವಾಗಿಯೇ ಸ್ಥಿತ್ಯಂತರಗೊಂಡರೆ? ಅಥವಾ ಸಮಕಾಲೀನತೆಯನ್ನು ತಿದ್ದಬೇಕಾದ ವ್ಯವಸ್ಥೆಯೇ ಸಮಕಾಲೀನತೆಯನ್ನು ದುರುಪಯೋಗ ಪಡಿಸಿಕೊಳ್ಳುತ್ತಿರುವುದನ್ನು ಕಂಡೂ ವ್ಯವಸ್ಥೆಯ ವಿರುದ್ಧ ದನಿಯೆತ್ತಲಾರದ ಸಮಕಾಲೀನತೆ ತನ್ನ ಇಂದಿನ ಸುಖದಾಸೆಯಲ್ಲಿ ನಾಳಿನ ಕೈತುತ್ತನ್ನು ವಿಷಯಕ್ತಗೊಳಿಸಿಕೊಳ್ಳುತ್ತಿದೆಯೇ ಎಂಬ ಪ್ರಶ್ನೆ ಏಳುತ್ತದೆ ಮತ್ತು ಮಂಥನಕ್ಕೆ ಹಚ್ಚುತ್ತದೆ.

ವ್ಯವಸ್ಥೆಯೊಂದು ವ್ಯವಸ್ಥಿತವಾಗಿ 'ವ್ಯವಸ್ಥೆ'ಯಾಗಿಯೇ, ಅವಸ್ಥೆಯಾಗದೇ ಉಳಿಯಬೇಕಾದರೆ ಸಮಕಾಲೀನತೆಯ ಸಮಗ್ರ ಅರಿವು, ಚಿತ್ರಣ ಬಹಳ ಅವಶ್ಯಕ. ಸಮಕಾಲೀನತೆಯನ್ನು ಅರ್ಥಮಾಡಿಕೊಳ್ಳದೇ, ಜನರಲ್ಲಿ ವಿಶ್ವಾಸವನ್ನು ಮೂಡಿಸದೇ ಕೇವಲ ತನ್ನ ಕಾರ್ಯಗಳಿಂದ ಜನರಲ್ಲಿ ಭೀತಿಯನ್ನು ಹುಟ್ಟಿಸುವಂತಹುದು ಒಂದು ವ್ಯವಸ್ಥೆಯೆಂದು ಹೇಗೆ ಕರೆಸಿಕೊಳ್ಳಲು ಸಾಧ್ಯ? ವಿಶ್ವಾಸವಿಲ್ಲದ ಸ್ಥಳದಲ್ಲಿ ಪ್ರೀತಿ ನಂಬಿಕೆ ಎಂದೂ ಬರಲಾರದು. ಭೀತಿಯಿದ್ದಲ್ಲಿ ಪ್ರೀತಿಯು ಉದ್ಭವಿಸಲು ಸಾಧ್ಯವಿಲ್ಲ! ಪ್ರೀತಿಯಿಲ್ಲವಾದಲ್ಲಿ ಭೀತಿ, ದಾಸ್ಯದ ನೆರಳು ಮಾತ್ರ ಪ್ರವೇಶ ಪಡೆಯುವುದು.

ತಬರನ ಕಥೆಯ ತಬರಶೆಟ್ಟಿ ಬ್ರಿಟೀಷ್ ಆಳ್ವಿಕೆಯ ಕಾಲಾವಧಿಯಲ್ಲಿ ಸರ್ಕಾರಿ ಉದ್ಯೋಗಿಯಾಗಿ ಸುಂಕದ ಕಟ್ಟೆಯಲ್ಲಿ ಸುಂಕವಸೂಲಿಗಾಗಿ ನೇಮಿಸಲ್ಪಟ್ಟವನು. ಸ್ವಾತಂತ್ರ್ಯಪೂರ್ವದ ಸತ್ಯಾಗ್ರಹ ಸಂದರ್ಭದಲ್ಲಿ ಎದುರಾದ ಸಮಸ್ಯೆಯಿಂದ ಪಾರಾದವನು

ಸ್ವಾತಂತ್ರ್ಯಾನಂತರದ ದಿನಗಳಲ್ಲಿ ಅಂಥದೇ ಸಮಸ್ಯೆ ಎದುರಾದಾಗ ಸುಂಕ ವಸೂಲು ಮಾಡಲು ಸಾಧ್ಯವಾಗದೇ ವಸೂಲಾತಿಗೆಂದು ಬರೆದಿದ್ದ ರಸೀದಿಯಿಂದಾಗಿ ಪೇಚಿಗೆ ಸಿಕ್ಕು ತಾನೇ ಸುಂಕದ ವೆಚ್ಚವನ್ನು ಭರಿಸಬೇಕಾಗುತ್ತದೆ. ಸುಂಕದ ಹಣ ಬೆನ್ ಬಿಡದ ಪೀಡೆಯಾಗಿ ಹೆಂಡತಿಯಾದಿಯಾಗಿ ಆತನ ಬದುಕನ್ನೆ ಛಿದ್ರವಿಚ್ಛಿದ್ರಗೊಳಿಸಿ ಬಿಡುತ್ತದೆ. ಜೀವಮಾನದ ಉದ್ದಕ್ಕೂ ನಿಷ್ಠೆ, ಪ್ರಾಮಾಣಿಕೆಯಿಂದಲೇ ದುಡಿದ ತನಗೆ ಆದ ಅಪಮಾನದಿಂದ ಮುಕ್ತನಾಗಲು ಸಾಧ್ಯವಾಗುವುದಿಲ್ಲ. ಇದರಿಂದ ಬೇಸರಗೊಂಡ ತಬರಶೆಟ್ಟಿ, ಅರಮರೆವಿನಲ್ಲಿ ಪೂರ್ವವ್ಯವಸ್ಥೆ ಮತ್ತು ಪ್ರಸ್ತುತ ವ್ಯವಸ್ಥೆಯನ್ನು ತುಲನೆ ಮಾಡುತ್ತಲೇ ತನ್ನ ದುರ್ಗತಿಗೆ ಕಾರಣವಾದ ಆಡಳಿತಶಾಹಿಯ ಧೋರಣೆಯನ್ನು ಜರಿಯುತ್ತಾನೆ. ಆತನ ಪ್ರತಿಭಟನೆ ವ್ಯವಸ್ಥೆಯ ಪ್ರತಿನಿಧಿಗಳ ಮೇಲೆ ಯಾವುದೇ ರೀತಿಯ ಪರಿಣಾಮವನ್ನು ಬೀರುವುದಿಲ್ಲ.

ವ್ಯವಸ್ಥೆ ಸಾಮಾಜಿಕ ಕುಂದು ಕೊರತೆಗಳನ್ನು ನೀಗುವುದಕ್ಕೆ ಮುಂದಾಗದೆ, ಸಮಕಾಲೀನ ಜನಜೀವನದ ಬದುಕನ್ನು ದುಸ್ತರಗೊಳಿಸಿ ತನ್ನ ವ್ಯವಸ್ಥಿತ ಜಾಲದಲ್ಲಿ ತನ್ನನ್ನೇ ಕೆಡವಿಕೊಳ್ಳುತ್ತಾ ಜನತೆಯ ಅವಿಶ್ವಾಸಕ್ಕೆ ಒಳಗಾಗುತ್ತಿದೆ. ಕಿರುಗೂರಿನಲ್ಲಿಯೂ ನಡೆದಿದ್ದು ಇದೇ ಸಾಂದ್ರ ಬೇಸಾಯದ ವಿಚಾರದಲ್ಲಿ ಕರಿಯನ ಗದ್ದೆಯಿಂದ ಮಾರನಗದ್ದೆಗೆ ಬೋರ್ಡುನೆಟ್ಟಿದ್ದ ಶಂಕ್ರಪ್ಪ. ಆತನ ಅವಾಂತರಗಳಿಂದಾಗಿ ಇಡೀ ಊರಿಗೆ ಊರೇ ತತ್ತರಿಸಿಹೋಗುತ್ತದೆ.

ಮನುಷ್ಯ ನಿರ್ಮಿತ ಸಂಸ್ಥೆಗಳಾದ ಎಲೆಕ್ಟ್ರಿಕ್ ಡಿಪಾರ್ಟಮೆಂಟ್, ಅಬಕಾರಿ ಇಲಾಖೆ ಟೆಲಿಪೋನ್ ಡಿಪಾರ್ಟಮೆಂಟ್, ಪಾರೆಸ್ಟ್ ಡಿಪಾರ್ಟಮೆಂಟ್, ಪೋಲಿಸ್ ಡಿಪಾರ್ಟಮೆಂಟ್, ತಾಲ್ಲೂಕು ಕಚೇರಿ, ಕೋರ್ಟು, ಜೈಲು–ಇತ್ಯಾದಿ ಸರ್ಕಾರಿ ಕಛೇರಿಗಳು ಅಲ್ಲಿನ ನೌಕರಶಾಹಿ ವ್ಯವಸ್ಥೆಯ ಹೆಸರಿನಲ್ಲಿ ದಿನನಿತ್ಯದ ರಗಳೆಯನ್ನು ಸೃಷ್ಟಿಸುತ್ತಿವೆ. ಈ ಆಡಳಿತ ವ್ಯವಸ್ಥೆಯ ವೈಪರೀತ್ಯದಿಂದಾಗುವ ಎಡವಟ್ಟುಗಳಿಗೆ ಕೊನೆಮೊದಲಿಲ್ಲ. ಸಾಮಾಜಿಕ ಸಂಬಂಧಗಳಲ್ಲಿ ಬಿರುಕು ಮೂಡುವುದಕ್ಕೂ, ಪರಸ್ಪರ ಕಾದಾಟಕ್ಕೆ ನಿಂತು ದ್ವೇಷ, ವೈಷಮ್ಯದ ಹಾದಿ ತುಳಿಯುವುದಕ್ಕೂ ಪ್ರತ್ಯಕ್ಷವಾಗಿ ಪರೋಕ್ಷವಾಗಿ ಕಾರಣವಾಗುತ್ತಿರುವುದು ನಮ್ಮ ವ್ಯವಸ್ಥೆಯ ಭೀಕರ ವಿರಾಡ್ರೂಪಕ್ಕೆ ಸಾಕ್ಷಿಯಾಗಿವೆ.

ಗ್ರಾಮೀಣ ಪ್ರದೇಶದ ಮುಗ್ಧ, ಅನಾಮಧೇಯ ವ್ಯಕ್ತಿಗಳನ್ನು ಜೀವಂತವಾಗಿ ಛಿದ್ರೀಕರಣಗೊಳಿಸುವ ಕಾಯಕ, ವ್ಯವಸ್ಥೆಯನ್ನು ನಿರಂಕುಶ ಆಡಳಿತಶಾಹಿಯನ್ನಾಗಿಸಿದೆ. ಕೌರ್ಯ–ಶೋಷಣೆ ಆಡಳಿತಶಾಹಿಯ ಸ್ವಯಂಸಿದ್ಧ ಧೋರಣೆಗಳು. ಇದರಿಂದಾಗಿಯೇ ಸ್ಥಳೀಯ ನೆಲೆಯಲ್ಲಿ ತನ್ನ ಸುಪರ್ದಿಗೆ ಬರುವ ಸಾಮಾನ್ಯ ವರ್ಗದೊಡನೆ ನಡೆಸುವ ಎಲ್ಲ ನಡವಳಿಕೆಗಳೂ ಕ್ರೂರವಾಗತೊಡಗುತ್ತವೆ. ಕನಿಷ್ಠ ಪಕ್ಷದ ಮಾನವೀಯತೆಯನ್ನೂ ಒಳಗೊಳ್ಳದ ಕಾನೂನಿನ ಶಿಸ್ತು ರೀತಿನೀತಿಗಳು, ಸಾಮಾನ್ಯನ ಜೀವನವನ್ನು ದುರ್ಬರಗೊಳಿಸುತ್ತವೆ. ತಬರನ ಕಥೆ, ಕುಬಿ ಮತ್ತು ಇಯಾಲದ ರಹಮಾನ್ ರಂಗ, ಕಿರುಗೂರಿನ ಐವರು ಒಕ್ಕಲಿಗ ಗಂಡಸರು ಇಂತಹವರು ವ್ಯವಸ್ಥೆಯ ಹುನ್ನಾರದ ಬಲಿಪೀಠಕ್ಕೆ ಕುತ್ತಿಗೆಯೊಡ್ಡಿದ–ಒಡ್ಡುವ ನಿರಪರಾಧಿ ಬಲಿಪಶುಗಳು. ಪೋಲಿಸ್ ಸ್ಟೇಷನ್ನಿಗೆ ಬರುವವರು ಅಪರಾಧಿಗಳಾಗಲಿ ಫಿರ್ಯಾದಿಗಳಾಗಲಿ ಎಲ್ಲಾ ಪಕ್ಕಾ ಧೂರ್ತರೆಂಬುದು ಇನ್‌ಸ್ಪೆಕ್ಟರ್‌ನ ಧೃಢ ನಂಬುಗೆ.

'ಸ್ಟೇಷನ್ನಿನ ಒಳಗೆ ತಲೆ ಹಾಕಿದ ಕೂಡಲೆ ಒದ್ದು ಒಳಗೆ ಹಾಕಿ ಭೇದಿ ಕಿತ್ತುಕೊಳ್ಳುವಂತೆ ಗದರಿಸಬೇಕೆಂಬುದು ಇದುವರೆಗೆ ಇನ್‌ಸ್ಪೆಕ್ಟರ್ ಕಲಿತಿದ್ದ ಪಾಠ.... ಇನ್‌ಸ್ಪೆಕ್ಟರಿಗೆ ಯಾರನ್ನೂ ಯಾವುದಕ್ಕೂ ವಿಚಾರಿಸಬೇಕಾದ ಪ್ರಮೇಯ ಕಂಡಿರಲಿಲ್ಲ. ಆತನ ದೃಷ್ಟಿಯಲ್ಲಿ ವಿಚಾರಣೆ ಮೂರ್ಖತನದ ಪರಮಾವಧಿಯಾಗಿತ್ತು...... ವಿಚಾರಣೆ

> ಮಾಡುವುದು ಸಾಕ್ಷ್ಯಾಧಾರಗಳನ್ನು ಸಂಗ್ರಹಿಸುವುದು, ಚಾರ್ಜ್ ಶೀಟ್ ಹಾಕುವುದು ಮುಂತಾದ ಪ್ರಯಾಸಕರ ಕೆಲಸಗಳಿಗೆ ಕೈ ಹಾಕಿ ತನ್ನ ಅಮೂಲ್ಯ ವೇಳೆ ಹಾಳುಮಾಡಿಕೊಳ್ಳುತ್ತಲೇ ಇರಲಿಲ್ಲ ಪೋಲಿಸು ಸ್ಟೇಷನ್ನಿನ ಒಳಗೆ ಸುಳಿದಾಡಿದ ಸಕಲ ಸಾರ್ವಜನಿಕರನ್ನೂ ಒದ್ದು ಒಳಗೆ ಹಾಕಿ ಸರಿಯಾದ ನರಂ ಮಾಡಿ ಕಳಿಸುವುದನ್ನಷ್ಟೇ ಪರಿಪಾಠ ಮಾಡಿಕೊಂಡಿದ್ದ'.[೨೨]

ಇದು ಸುವ್ಯವಸ್ಥೆಯ ಹೆಸರಿನಲ್ಲಿ ದುರಾಡಳಿತದ ಪರಮಾವಧಿಯ ಮತ್ತೊಂದು ಮುಖವನ್ನು ಪರಿಚಯಿಸುತ್ತದೆ. ಇದನ್ನೇ ಹೋಲುವಂತಹುದು ಕುಬಿ ಮತ್ತು ಇಯಾಲದ ರೆಹಮಾನ್, ರಂಗರ ಮೇಲಿನ ಪೋಲಿಸ್ ದೌರ್ಜನ್ಯ ಮತ್ತು ಮಾಯಾಲೋಕದ ಒಡ್ಡ ಬೋಯಿಗಳ ತಪಾಸಣೆಯ ಸಂದರ್ಭ, ಕರ್ವಾಲೋದ ಮಂದಣ್ಣನ ಕಳ್ಳಭಟ್ಟಿ ಸಾರಾಯಿಯ ವಿಚಾರಣೆ.

> ಅಷ್ಟಕ್ಕೆ ಮುಗದಿದ್ರೆ ನಾವ್ಯಾಕೆ ಕೆಲಸ ಕೈದು ಮಾಡಿ ಬರ್ತಿದ್ದು. ಸಂಜೆ ಹೊತ್ತಿಗೆ ಪೋಲಿಸ್ನೋರು ಬಂದು ನಮ್ಮನ್ನ ಟೇಸನ್ನಿಗೆ ಎಳಕೊಂಡು ಹೋಗಿ ಲಾಕಪ್ಪಿಗೆ ಹಾಕಿದ್ರು! ಇರೋ ವಿಷ್ಯ ಹೇಳಿದ್ರೆ ನಂಬ್ತಾರಾ! ಚಿನ್ನದ ವರಾ ಎಲ್ಲಿಟ್ಟಿದ್ದೀರಾ ಬಗುಳ್ರೋ ಅಂತ ಬೂಟು ಕಾಲಲ್ಲಿ ಒದ್ದರು ಸೋಮೇ! ಗಿರವಿ ಅಂಗಡಿ ಮಾರ್ವಾಡಿಗೂ ಟೇಸ್ಸನ್ನಿಗೆ ಕರಸಿ ಒಡ್ಡಾಬೋಯಿಗಳು ಚಿನ್ನಗಿನ್ನ ತಂದು ಕೊಟ್ಟದ್ರೆ ಒಳ್ಳೇ ಮಾತ್ನಲ್ಲಿ ಬಾಯಿ ಬಿಡು! ಇಲ್ಲದಿದ್ರೆ ಕೇಸ್ ಬುಕ್ ಮಾಡ್ತೀವಿ ಅಂತ ಹೆದರಿಸಿದ್ರು. ನಾವು ಮಾರ್ವಾಡಿ ಮೇಲೆ ಚಾಡಿ ಹೇಳಿದೀವಿ ಅಂತ ತಿಳ್ಕೊಂಡು ಅವನು ನಮ್ಮ ಮೇಲೆ ಎಗರಾಡಿದ. ನಮ್ಮ ಗ್ರಾಚಾರಾ ಹೆಂಗಿದೆ ನೋಡಿ, ಆ ಸುಡುಗಾಡಿನ ಮಡಕೆ ಎಂಗ್ಟಾಬೋಯಿ ಹಾರೆಗೆ ತಾಗಿದ್ದಕ್ಕೆ ನಮಗೆ ಇಷ್ಟೊಂದು ಬಂಗ ಬಂತು![೨೩]

ತಬರನ ಕಥೆ, ಕುಬಿ ಮತ್ತು ಇಯಾಲ, ಕಿರುಗೂರಿನ ಗಯ್ಯಾಳಿಗಳು ಇತರ ಕಥನಗಳಲ್ಲಿ ಸ್ವಾತಂತ್ರ್ಯಪೂರ್ವದ ಭಾರತದ ಆರ್ಥಿಕ, ರಾಜಕೀಯ, ಸಾಮಾಜಿಕ ಸ್ಥಿತಿಗಳೊಡನೆ ಸ್ವಾತಂತ್ರ್ಯೋತ್ತರ ವ್ಯವಸ್ಥೆಯ ಕರಾಳತೆಯ ಹಿನ್ನೆಲೆಯಲ್ಲಿ ಹಿಂದಿನ ನಂಬಿಕೆಗಳು ಮತ್ತು ಸಾಂಸ್ಕೃತಿಕ–ನೈತಿಕ ಮೌಲ್ಯಗಳು ಮರುಪರಿಶೀಲನೆಗೆ ಒಳಪಟ್ಟವು. ಆಡಳಿತಶಾಹಿ ವ್ಯವಸ್ಥೆಯು ಸ್ವಾತಂತ್ರ್ಯದ ಅರ್ಥಕಲ್ಪನೆಯನ್ನೇ ವಿರೂಪಗೊಳಿಸಿ ಪ್ರಜಾಪ್ರಭುತ್ವದ ಮೌಲ್ಯಗಳೆಂದರೇನು? ಎಂದು ಪ್ರಶ್ನಿಸುವ ಹಂತಕ್ಕೆ ಅರ್ಥಹೀನಗೊಂಡವು.

ಇಂತಹ ವ್ಯವಸ್ಥೆಯನ್ನು ವಿರೋಧಿಸಲಾಗದೆ ಅಸಹಾಯಕತೆಯ ಮೂಸೆಯಲ್ಲಿ ನರಳುವ ತಬರನಂತ ಅನೇಕರು ಈಗಾಗಲೇ ಬುದ್ಧಿಸ್ತಿಮಿತತೆಯನ್ನು ಕಳೆದುಕೊಂಡು ಬೀದಿಪಾಲಾಗಿರುವ ದುರಂತ ಕಣ್ಣಿಗೆ ರಾಚುತ್ತಿದ್ದರೂ ಇವರನ್ನು ಆ ಸ್ಥಿತಿಯಿಂದ ಹೊರತರುವ ಆಲೋಚನೆಯೂ ಸುಳಿಯದೇ ಇರುವುದು ಸ್ಥಗಿತ ಸಮಾಜಕ್ಕೆ ನಿದರ್ಶನವಾಗಿದೆ. ಬಂಟಪ್ಪನಂತಹ ರಾಜಕೀಯ ವ್ಯಕ್ತಿಗಳ ಸ್ವಾರ್ಥ, ಮೇಲಾಧಿಕಾರಿಗಳ ಒಳ ಇಂಗಿತ ಇಂತಹವಕ್ಕೆ ಕುಮ್ಮಕ್ಕು ಕೊಡುವುದಲ್ಲದೆ ಶೋಷಿತ ವ್ಯವಸ್ಥೆಯ ವಿರುದ್ಧ ಪ್ರತಿಭಟಿಸಲೂ ಅಸಮರ್ಥರಾದ ವ್ಯಕ್ತಿಗಳ ಆರ್ಥಿಕ ಸಾಮಾಜಿಕ ಹಿನ್ನೆಲೆ ಕನಿಷ್ಠ ಮಟ್ಟದಲ್ಲಿರುವುದು ಅವರುಗಳ ಕಡೆಗಣನೆಗೆ ಕಾರಣವಾಗಿ ಶೋಷಣೆ– ದೌರ್ಜನ್ಯದ ಮೇರೆಗೆ ಅವಕಾಶ ಒದಗಿಸುತ್ತದೆ.

ಕುಬಿ ಮತ್ತು ಇಯಾಲ ಕಥೆಯ ರೆಹಮಾನ್, ರಂಗ ತಾವು ಪೋಲಿಸ್ ಇಲಾಖೆಯಿಂದ ವಿನಾಕಾರಣ ದೌರ್ಜನ್ಯಕ್ಕೆ ಒಳಗಾಗುತ್ತಿದ್ದರ ಅರಿವು ಇದ್ದು ಇದರಿಂದ ಹೊರಬರುವ ದಾರಿಗಾಗಿ ಡಾ. ಕುಬೇರಪ್ಪನಲ್ಲಿ ಅಂಗಲಾಚುವಂತಹುದು ಇದೆ. ಪರಿಹಾರ ದೊರೆಯದೆ ಆ ಸ್ಥಿತಿ ಹಾಗೆಯೇ ಮುಂದುವರೆದಾಗ ದೌರ್ಜನ್ಯ ಮುಕ್ತರಾಗಲು ಊರು ಬಿಡುವಂತಾಗುತ್ತದೆ. ಕರ್ವಾಲೋದಲ್ಲಿ ಮಂದಣ್ಣನಂತಹ ಹುಟ್ಟು ಪ್ರತಿಭೆಯನ್ನು ಇಂಥ ಸಂದಿಗ್ಧ ಪರಿಸ್ಥಿತಿಯಿಂದ ಹೊರತರುವ ಜವಾಬ್ದಾರಿಯನ್ನು ಕರ್ವಾಲೋ ಖುದ್ದು ನಿರ್ವಹಿಸಲು ಹೊರಟಾಗ ಅದನ್ನು ಸಂಶಯಿಸುವ ನಿರೂಪಕನೇ ಆನಂತರದಲ್ಲಿ ಸಮಭಾಗಿಯಾಗಿ ಹೊಣೆ ಹೊರುತ್ತಾನೆ.

ಕಿರುಗೂರಿನ ಗಯ್ಯಾಳಿಗಳು ಶೋಷಕ ವ್ಯವಸ್ಥೆಯ ಕ್ರೌರ್ಯದ ಮುಖವನ್ನು ವಿವರಿಸುತ್ತಲೇ ಸಮಾಜದ ವಿಕೃತ ರೂಪವನ್ನು-ಅದರೆಲ್ಲ ವಿಕಾರಗಳೊಂದಿಗೆ ತನ್ನಲ್ಲೆ ಹುದುಗಿಸಿಕೊಂಡುಬಿಡುತ್ತದೆ. ಇದರ ಚಿತ್ರಣ ಕಿರುಗೂರಿನ ಗಯ್ಯಾಳಿಗಳು ಕಥನದಲ್ಲಿನ ಪೋಲಿಸ್ ಇಲಾಖೆಯ ಚಿತ್ರಣ ಕಟ್ಟಿಕೊಡುತ್ತದೆ. ಇವು ವ್ಯವಸ್ಥೆಗಳ ದೌರ್ಬಲ್ಯಗಳನ್ನು ಎತ್ತಿ ತೋರಿಸಿದ್ದೇ ಅಲ್ಲದೆ ತಮ್ಮ ಪಾಲಿಗೆ ಯಮಸ್ವರೂಪಿಯಂತಿರುವ ಕಾರ್ಖಾನೆಗಳನ್ನು ಪರಿಚಯಿಸುತ್ತವೆ.
ಕೃಷ್ಣೇಗೌಡನ ಆನೆಯಲ್ಲಿ ಬರುವ ಚಿತ್ರಣ

ಎರಡು ಖಾಕಿ ಪ್ಯಾಂಟ್ ಧಾರಿ ಕಾಲುಗಳು ನನ್ನತ್ತ ಬರುತ್ತಿರುವುದು ನನಗೆ ಜೀಪಿನ ಅಡಿಯಿಂದ ಕಾಣಿಸಿತು. ನನಗೆ ಪೋಲಿಸ್ ಡಿಪಾರ್ಟಮೆಂಟ್ ಥಟ್ಟನೆ ಜ್ಞಾಪಕಕ್ಕೆ ಬಂದು ಗಾಬರಿಯಾದರೂ, ಅವು ಬೂಟ್ಸ್ ಇಲ್ಲದ ಕಾಲುಗಳಾದ್ದರಿಂದ ಬೇರೆ ಯಾವ ಡಿಪಾರ್ಟಮೆಂಟನವು ಎಂದು ಬೋಲ್ಟುಗಳನ್ನು ಬಿಚ್ಚುತ್ತಾ ಹಾಗೆ ಯೋಚಿಸಿದೆ"...................-'ಅದ್ಯಾಕೆ ಟೆಲಿಫೋನ್ ಡಿಪಾರ್ಟ್ಮೆಂಟಿಗೆ ಥೂ ಅಂತೀಯ? ಅವರನ್ನ ಕಂಡರೆ ನಿಮಗೆ ಆಗೊಲ್ಲವ? ಇಬ್ರದ್ದೂ ಕೆಲಸ ಕಂಬ ಹತ್ತೋದೆ ತಾನೇ? ಅದೊಂದು ತರ್ಲೆ ಡಿಪಾರ್ಟ್ಮೆಂಟ್ ಅಲ್ಲವ ಸಾರ್. ನಮ್ಮ ತಂತಿ ಹತ್ರ ನಿಮ್ಮ ತಂತಿ ತರಬ್ಯಾಡ್ರಿ, ಟೆಲಿಫೋನು ಗೊರಹೊರ ಅನ್ನುತ್ತೆ, ಹಾಗೆ-ಹೀಗೆ, ಅಂತೆಲ್ಲಾ ದಿನಾ ನಮ್ಮ ಜೊತೆ ಪುಕಾರು ತೆಗೀತಾನೇ ಇರ್ತಾರೆ.'[೪]

ನಿರೂಪಕರ ಕೊಡಲಿಯನ್ನು ಕೊಂಡೊಯ್ದಿದ್ದ ಲೈನ್‌ಮನ್ ದುರ್ಗಪ್ಪ ವಾಪಾಸು ಕೊಡಲಿಲ್ಲವಾಗಿ ವಿಚಾರಿಸಿದಾಗ ಫಾರೆಸ್ಟರ್ ನಾಗರಾಜ ವಶಪಡಿಸಿಕೊಂಡಿದ್ದಾಗಿ ತಿಳಿದುಬರುತ್ತದೆ. ನಿಮ್ಮ ಡಿಪಾರ್ಟಮೆಂಟನ ಮರ ಕಡಿದರೆ ನೀವು ಅವನ ಮೇಲೆ ಕ್ರಮ ತಗೊಳ್ಳಿ ಆದರೆ ನನ್ನ ಕೊಡಲಿ ಯಾಕೆ ತಂದು ಆಫೀಸಿನಲ್ಲಿ ಇಟ್ಕೊಂಡಿದ್ದೀರ? ಎಂದು ಕೇಳಿದ್ದಕ್ಕೆ

"ವೆಪನ್ ಸಾರ್, ವೆಪನ್ ನಮಗೆ ಮುಖ್ಯ ಯಾವುದೇ ಅಪರಾಧ ಮಾಡಿದರೂ ಅದಕ್ಕೆ ಸಂಬಂಧಿಸಿದ ಆಯುಧ ನಮಗೆ ತುಂಬಾ ಮುಖ್ಯ. ಕೋರ್ಟಿನ ವ್ಯವಹಾರ ನಿಮಗೆ ಗೊತ್ತಿಲ್ಲಾಂತ್ತ ಕಾಣ್ತದೆ, ನಾಳೆ ಕೋರ್ಟಿನಲ್ಲಿ ಕೇಳ್ತಾರೆ ಅವನು ಯಾವುದರಿಂದ ಮರ ಕಡಿದ ಅಂತ. ಕತ್ತೀಲಿ ಕಡಿದನೋ ಕೊಡಲೀಲಿ ಕಡಿದನೋ ಗರಗಸದಲ್ಲಿ ಕುಯ್ದನೋ? ಅಂತ. ಆವಾಗ ನಾವು ವೆಪನ್ ಹಾಜರು ಪಡಿಸಬೇಕೋ ಬೇಡವೋ ಹೇಳಿ, ನೀವು ಯಾಕೆ ಇಂಥ ಕಾನೂನುಬಾಹಿರ ಕೆಲಸಕ್ಕೆ ಕೊಡಲಿ ಕೊಟ್ರಿ? ಒಂದು ರೀತಿಯಲ್ಲಿ ನಿಮ್ಮದೂ ತಪ್ಪಲ್ಲವೆ?................ಅಲ್ರೀ ಲೈನು ಮೇಲೆ ಬಿದ್ದ ಮರ ತೆಗೆದು ಹಾಕೋದು ಕಾನೂನು ಬಾಹಿರ ಕೆಲಸ ಅಂತ ನಿಮ್ಮ ಬಾಯಲ್ಲೇ ನಾನು ಕೇಳ್ತಿರೋದು. ನಿಮ್ಮ ಡಿಪಾರ್ಟ್‌ಮೆಂಟಿನ ಮರ ಅವನ ಡಿಪಾರ್ಟ್‌ಮೆಂಟಿನ ಕಂಬದ ಮೇಲೆ ಬಿದ್ದರೆ ಅವನು ಅದನ್ನು ತೆಗೆದುಹಾಕಬೇಕೊ ಬೇಡವೋ ಹೇಳಿ'

'ನೋಡಿ ಸಾರ್, ಬೆಳ್ಳಗಿರೋದೆಲ್ಲ ಹಾಲೂಂತ ನಂಬೋರು ನೀವು. ಇದೆಲ್ಲಾ ನೀವು ಹೇಳ್ತಿರೋ ಅಷ್ಟು ಸಿಂಪಲ್ಲಾಗಿಲ್ಲಾ ಸರ್. ನೀವಾಗೆ ಕೇಳ್ತಿರೋದ್ರಿಂದ ವಿಧಿ ಇಲ್ಲದೆ ಹೇಳ್ತಿದೇನೆ. ಪಿಡಬ್ಲ್ಯುಡಿನವರು, ಕರೆಂಟಿನವರು, ಟೆಲಿಫೋನಿನವರು ಈ ಮೂರು ಡಿಪಾರ್ಟ್‌ಮೆಂಟುಗಳು ನಮಗೆ ಎನಿಮಿ ನಂಬರ್ ಒನ್. ಇವರಿಗೆ ಬುದ್ದಿ ಕಲಿಸೋದಕ್ಕೆ ನಮಗೆ ಗೊತ್ತಿದೆ. ರಸ್ತೆಗೆ ಟಾರು ಹಾಕಲು ನಮ್ಮ ರಸ್ತೆ ಮರಾನೆಲ್ಲ ಕಡಿದು ಟಾರು ಕಾಯಿಸ್ಕೋತಾರೆ ಪಿಡಬ್ಲ್ಯುಡಿನವರು. ಈ ಕರೆಂಟಿನವರು ಟೆಲಿಫೋನಿನವರು ಅವರ ಲೈನು ಎಳೆಯೋದಕ್ಕೆ ಫಾರೆಸ್ಟು ಕ್ಲಿಯರ್ ಮಾಡ್ತೀವಿ ಅಂತ ಎಲ್ಲೆಂದರಲ್ಲಿ ಸಾವಿರಾರು ಎಕರೆ ಕಾಡು ಕಡಿದು ಹಾಳು ಮಾಡಿದ್ದಾರೆ. ಈಗ ಹಳ್ಳಿಹಳ್ಳಿಗೆ ಕರೆಂಟು, ಟೆಲಿಫೋನ್ ಕೊಡಬೇಕಂತ ಸರ್ಕಾರ ಪಾಲಿಸಿಮಾಡಿ ಇವರ ರೊಟ್ಟಿ ಜಾರಿ ತುಪ್ಪಕ್ಕೆ ಬಿದ್ದಿದ್ದೇ ಸಾರ್. ಲೈನು ಕ್ಲಿಯರ್ ಮಾಡೊ ನೆವದಲ್ಲಿ ಇವರು ಯಾರೂ ಮನೆಗೆ ಸೌದೆ ಕೊಳ್ತಾನೆ ಇಲ್ಲಾ. ನೀವು ಹೇಳಿದ ಹಾಗೆ ಇವರೂ ಸರ್ಕಾರದ ಡಿಪಾರ್ಟ್‌ಮೆಂಟೇ, ನಾವೂ ಡಿಪಾರ್ಟ್‌ಮೆಂಟೇ. ಆದರೆ ಇವರನ್ನು ಹಾಗೆ ಬಾಲ ಬಿಚ್ಕೋದಕ್ಕೆ ಬಿಟ್ರೆ ಫಾರೆಸ್ಟು ಡಿಪಾರ್ಟ್‌ಮೆಂಟು ಬಾಗಿಲು ಮುಚ್ಚಬೇಕಾಗುತ್ತದೆ. ಇವರಿಗೆ ಬುದ್ಧಿ ಕಲಿಸಬೇಕೋ ಬೇಡವೋ ನೀವೇ ಹೇಳಿ, ಎನ್ನುವ ನಾಗರಾಜನಿಗೆ ನಿರೂಪಕರು-'ನೀವು ಬೇರೆ ಡಿಪಾರ್ಟ್‌ಮೆಂಟಿಗೆ ಬುದ್ಧಿ

ಕಲಿಸ್ತೀನಿ ಅಂದ್ರಲ್ಲಾ ಹಾಗೆ ಅವರೂನು ನಿಮಗೆ ಕಲಿಸಬೇಕು ಅಂತಿರ್ತಾರೆ. ಕಲಿಯೋದಿಕ್ಕೆ ಯಾರಾದರೂ ತಯಾರಿದ್ರೆ ತಾನೇ ಕೇಸು ತೀರ್ಮಾನ ಆಗೋದು".

ನಿರ್ಧಾರದ ಧ್ವನಿಯಲ್ಲಿ ನುಡಿಯುವ ನಾಗರಾಜ "ನೋಡಿ ಸಾರ್, ಈಗ ಕೊಡಲಿ ಕೊಡೋದಕ್ಕೆ ಆಗೋಲ್ಲ. ನಮ್ಮ ಆಫೀಸಿನ ಹೊರಗೆ ನೋಡಿದಿರಾ ನಿಂತಿದಾವೆ ಅಂಬಾಸಿಡರ್ ಕಾರುಗಳು. ಅವೆಲ್ಲ ನಿಮ್ಮ ಕೊಡಲಿ ತರಾನೆ ಕಾನ್‌ಫಿಸಿಕೇಟ್ ಮಾಡಿ ತಂದವು. ಗಂಧ ಕಳ್ಳ ಸಾಗಾಣಿಕೆ ಮಾಡೋರದ್ದು, ಕಾರು ಕದ್ದಿದ್ದು, ಮಾಲೂ ಕದ್ದಿದ್ದು, ಸದ್ಯಕ್ಕೆ ನಿಮ್ಮ ಕೊಡಲಿ ಕದ್ದ ಮಾಲಲ್ಲ ಬಿಡಿ. ಆ ಕಾರುಗಳನ್ನೂ ಕೇಸು ಇತ್ಯರ್ಥವಾದ ಮೇಲೆ ಕೊಟ್ಟುಬಿಡ್ತೀವಿ. ವಾರಸುದಾರರಿಲ್ಲದಿದ್ರೆ ಹರಾಜು ಹಾಕಿಬಿಡ್ತೀವಿ."[೨೫]

ಇದು ವ್ಯವಸ್ಥೆಯ ಇನ್ನೊಂದು ಮುಖ. ದೇಶದ ಆಡಳಿತ ಕಾನೂನುಗಳೆಲ್ಲವೂ ಕೇವಲ ಪ್ರತಿಬಂಧಕಾತ್ಮವಾಗಿ ರೂಪುಗೊಳ್ಳುತ್ತಿವೆಯೇ ಹೊರತು, ಸಮಾಜವನ್ನು ದೇಶದ ಅಭಿವೃದ್ಧಿಯನ್ನು ಉತ್ತೇಜಿಸಲೆಂದು ಅಲ್ಲ ಎಂಬುದು ಇದರಿಂದ ಸ್ವಯಂ ಸ್ಪಷ್ಟಗೊಳ್ಳುತ್ತದೆ.

ಆಧುನಿಕತೆ ಸೃಷ್ಟಿ ಮಾಡಿದ ಕ್ರೌರ್ಯದಂತೆ ಪರಂಪರಾಗತ ಸಮಾಜದ ಕ್ರೌರ್ಯ ಇನ್ನೊಂದು ರೀತಿಯದು;

ಆದರೆ ಕ್ರೌರ್ಯ ಇನ್ನೂ ಸುಸೂಕ್ಷ್ಮವಾಗಿ ಹೆಣೆದುಕೊಂಡಿತ್ತು. ಗೇಣಿ ಬರಲಿಲ್ಲವೆಂದು ಕಟ್ಟಿಹಾಕಿಸಿ ಹೊಡೆದರಂತೆ, ಬತ್ತಕದಿಯುವನೆಂದು ಬರೆ ಎಳೆದರಂತೆ, ಚೆಂದುಳ್ಳಿ ಹೆಣ್ಣನ್ನು ತಮಗೆ ಬೇಕಾದ ಆಳಿಗೆ ಜುಲುಮೆಯಿಂದ ಮದುವೆ ಮಾಡಿ ತಮ್ಮ ಮನೆಯಲ್ಲೇ ಇಟ್ಟುಕೊಂಡರಂತೆ. ಹೀಗೆ ಗೌಡರ ದರಬಾರಿನ ಪರಾಕುಗಳೂ ಅಸಂಖ್ಯವಾಗಿದ್ದವು. ಆದರೆ ಯಾರಿಗೂ ಇದು ತಪ್ಪಿರಲಿಲ್ಲ, ಈ ಕ್ರೌರ್ಯ.[೨೬]

ಒತ್ತಡಗಳು ಇಂತಹ ಕ್ರೌರ್ಯವನ್ನು ಹಿಂದೆ ಸರಿಸುವುದೇ ವಿನಹ ನಿತ್ಯ ನಿರಂತರ ಕ್ರಿಯೆ ಇದಾಗಿದೆ.

ಆಡಳಿತಶಾಹಿಯ ಕ್ರೌರ್ಯ, ಶೋಷಣೆ, ದೌರ್ಜನ್ಯ ದಬ್ಬಾಳಿಕೆ ಆಡಳಿತ ವ್ಯವಸ್ಥೆಯ ಲೋಪದೋಷಗಳಾಗಿವೆ. ಇವುಗಳೊಡನೆ ಜನಸಾಮಾನ್ಯರ ಬದುಕು ನಿತ್ಯ ಘರ್ಷಣೆಗೆ ಒಳಗಾಗುತ್ತಲೇ ಇರುತ್ತದೆ. ಇಂತಹ ಅತ್ಯಾಚಾರ-ಅನಾಚಾರಗಳು ಸಾಂಸ್ಕೃತಿಕವಾಗಿ-ಸಾರ್ವಜನಿಕ ಬದುಕಿನ ಮೇಲೆ ಅಪಾರ ಪ್ರಭಾವ ಬೀರುತ್ತವೆ. ಇಂಥ ವ್ಯವಸ್ಥೆಗಳ ಬಗೆಗೆ ಜನತಾಸಮೂಹ ಅವಜ್ಞೆ ತಾಳುತ್ತದೆ. ಸಾಂಸ್ಕೃತಿಕ ಬದುಕಿಗೆ ವ್ಯವಸ್ಥೆಗಳ ಕೊಡುಗೆ ಏನೂ ಇಲ್ಲವಾದಾಗ ಇಂಥ ವಿಘಟನ ಸ್ಥಿತಿ ಎದುರಾಗುತ್ತದೆ.

ಈ ವ್ಯವಸ್ಥೆಗಳು ಜನಸಾಮಾನ್ಯರಿಂದಲೇ ಉಳಿದಿರುವುದಾದರೂ ಅದನ್ನು ಸಂಪೂರ್ಣವಾಗಿ ಮರೆತು ವ್ಯವಹರಿಸುತ್ತಿದೆ. ಇದರ ಪರಿಣಾಮವೇ ಅಧಿಕಾರಿಶಾಹಿ ಆಡಳಿತ ಮತ್ತು ಮಾನವನ ನಡುವಿನ ಸಂಬಂಧ ಅತ್ಯಂತ ಪರೋಕ್ಷವೂ ಅಮೂರ್ತವು ಆಗುತ್ತಾ ಸಾಗಿರುವುದು, ಇದೇ ಕಾರಣಕ್ಕೆ ಸರ್ಕಾರಿ ಕಛೇರಿ, ಅಲ್ಲಿನ ಜವಾನರು, ಕಾನೂನು-ಕೋರ್ಟು, ಜೈಲು ಎಂದಾಗ ಮೂಗು ಮುರಿಯುವಂತಾಗುವುದು. ಕಿರುಗೂರಿನಲ್ಲಿನ ಕರಿಯನ ಗದ್ದೆಗೆ, ಸಾಂದ್ರ ಬೇಸಾಯದ ನಿಮಿತ್ತವಾಗಿ ನಿರೀಕ್ಷಣೆಗೆ ಬರಲಿದ್ದ ಅಧಿಕಾರಗಳ ಸುದ್ದಿ ಕೇಳುತ್ತಿದ್ದಂತೆಯೇ ಊರಿನ ಗಂಡಸರೆಲ್ಲರ ಮನೆಬಿಟ್ಟು ಕಾಡು ಸೇರುತ್ತಾರೆ-"ಪ್ಯಾಂಟು ಸೂಟಿನ ಅಧಿಕಾರಿಗಳೆಲ್ಲಾ ಊರಿಗೆ ವಕ್ಕರಿಸುತ್ತಾರೆಂದು ತಿಳಿದು ಹೌಹಾರಿದರು. ಅಧಿಕಾರಶಾಹಿಯ ಲಂಚ, ಕಿರುಕುಳ, ನೋಟಿಸುಗಳಿಂದ ತತ್ತರಿಸಿದ್ದ ಅವರಿಗೆ ಸೂಟುಬೂಟಿನ ಅಧಿಕಾರಿಗಳೆಲ್ಲಾ ಊರಿಗೆ ಬರುತ್ತಾರೆಂದರೆ ಊರಿಗೆ ಮಾರಿ ಹೊಕ್ಕಂತೆಯೇ ಎಂಬ ಒಮ್ಮತಾಭಿಪ್ರಾಯ ಆಗಿತ್ತು."[೨೭]

ವಿನಾಕಾರಣವಾಗಿ ಲಾಕಪ್‌ನ ನರಕ ಸದೃಶ ಅನುಭವ ಪಡೆದು ಬರುವ ಕಿರುಗೂರಿನ ಐವರು ಗಂಡಸರು ತಮ್ಮ ಮೇಲೆ ನಡೆದ ದೌರ್ಜನ್ಯಕ್ಕೆ ತಮ್ಮೂರಿನ ಹರಿಜನರೇ ಕಾರಣವೆಂದು ಸಿಟ್ಟುಗೊಳ್ಳುವುದು ದಿನನಿತ್ಯದ ಜಗಳದೊಂದಿಗೆ ಈ ಮತೀಯ ಆರೋಪವೂ ಸೇರಿ ವರ್ಗಕಲಹಕ್ಕೆ ತಿರುಗುತ್ತದೆ. ಇಂತಹ ಸಣ್ಣಮಟ್ಟದ ವರ್ಗಕಲಹಗಳೇ ಗಂಭೀರ ಸಮಸ್ಯೆಗಳಾಗಿ ಸಾಂಸ್ಕೃತಿಕ-ಸಾಮಾಜಿಕ ಅವನತಿಗೆ ಕಾರಣವಾಗುವುವು. ಇದಕ್ಕೆ ಪ್ರಾತ್ಯಕ್ಷಿಕೆ ಕೆಸರೂರಿನ ದುರಂತ. ದುರಂತಗಳ ಅರಿವು ಅಪ್ರಜ್ಞಾಪೂರ್ವಕವಾಗಿಯಾದರೂ ಸರಿ ಕಿರುಗೂರಿನ ಹೆಣ್ಣುಮಕ್ಕಳಲ್ಲಿ ಸುಪ್ತವಾಗಿತ್ತು. ಮತ್ತೆ ಕೆಸರೂರಿನಂತಹ ಸ್ಥಿತಿ ತಲುಪಬಹುದಾಗಿದ್ದ ಕಿರುಗೂರಿನ ಮತೀಯಕಲಹಕ್ಕೆ ಯಾವುದೇ ಬೆಂಬಲವಿಲ್ಲದೆ ಕೇವಲ ಒಳಗುದಿಯಾಗಿ ಉಳಿಯುತ್ತದೆ. ಚಲನಶೀಲ ಸಂಸ್ಕೃತಿಯ ಜೀವಂತಿಕೆ ಇರುವುದು ಪರಸ್ಪರ ಅವಲಂಬನೆಯಿಂದಲೇ ಎಂಬ ಸತ್ಯವನ್ನು ಮನಗಾಣಿಸುವ ಕಿರುಗೂರಿನ ಹೆಣ್ಣುಮಕ್ಕಳು ಆಸ್ಫೋಟಕ ಸಿಡಿಯುವ ಮೊದಲೇ ನಂದಿಸಿಬಿಡುತ್ತಾರೆ. ಊರಿನ ಪಂಚಾಯಿತಿ ಪ್ರಕರಣದಲ್ಲಿ ಪುರುಷ ಕೇಂದ್ರಿತ ಸಮಾಜ ಕ್ರೂರಗೊಳ್ಳುವ ಸಾಧ್ಯತೆಯನ್ನು ತನ್ನದೇ ರೀತಿಯಲ್ಲಿ ದಾನಮ್ಮ ತಡೆಯುತ್ತಾಳೆ. ಮುಂದೊದಗಲಿರುವ ಅಪಾಯವನ್ನು ಗ್ರಹಿಸಿ ಎರಗುವುದಕ್ಕೆ ಮೊದಲೇ ವಿರೋಧಿಸುತ್ತಾಳೆ. ತಾನು ಉಳಿಯುವುದರೊಂದಿಗೆ ಇತರರು ಉಳಿಯಲು ಸಾಧ್ಯವಾಗುವ ಬದಲೀ ಸ್ಥಿತಿಯೊಂದನ್ನು ಆಹ್ವಾನಿಸುತ್ತಾಳೆ. ವಿರಸಕ್ಕೊಳಗಾಗಿ ವಿಘಟನೆಯೆಡೆಗೆ ಸರಿಯುತ್ತಿದ್ದ ಕುಟುಂಬಗಳನ್ನು ಆಕೆಯ ಬಂಡಾಯ, ಸಾಮರಸ್ಯದಿಂದ ಬದುಕಲು ಅನುವುಮಾಡಿಕೊಡುತ್ತದೆ. ಮತ್ತು ಕಿರುಗೂರಿನಂತಹ ಗ್ರಾಮೀಣ ಸಮಾಜದ ಅಂತಃ ಸಂಬಂಧಗಳನ್ನು ಪುನಃ ಬೆಸೆಯುವಲ್ಲಿ ಸಫಲವಾಗುತ್ತದೆ. ಬದುಕನ್ನು ಸೃಜನಶೀಲವಾಗಿ ಸ್ವೀಕರಿಸುವ ಛಲವನ್ನು ತೋರಿದ ಕಿರುಗೂರಿನ ಮಹಿಳೆಯರ ದಿಟ್ಟತನಕ್ಕೆ ಸಾಂಸ್ಕೃತಿಕ ಮಹತ್ವ ಒದಗಿ ಬಂದು ವ್ಯಕ್ತಿಪ್ರಜ್ಞೆ ಸಾಮುದಾಯಿಕ ಪ್ರಜ್ಞೆಯಾಗಿ ಸಂಘಟಿತಗೊಂಡಿರುವುದನ್ನು ಎತ್ತಿಹಿಡಿಯುತ್ತದೆ.

ವ್ಯವಸ್ಥೆಯ ಅವ್ಯವಸ್ಥೆಯ ಹಿಂದಿನ ಕಾರಣಗಳನ್ನು ಪ್ರತಿಭಟಿಸುತ್ತಿದ್ದ ತೇಜಸ್ವಿಯವರು 'ಮಾಯಾಲೋಕ'ದಲ್ಲಿ ಬದುಕನ್ನು ಬೇರೆಯದೆ ನೆಲೆಯಲ್ಲಿ ಗ್ರಹಿಸುತ್ತಾರೆ. ವ್ಯವಸ್ಥೆಯ ಆಕರಗಳು ಸಾಮಾಜಿಕವಾಗಿ ಉಂಟುಮಾಡುವ ಪರಿಣಾಮಗಳನ್ನು ಸಂಶಯಾತ್ಮಕ ದೃಷ್ಟಿಯಿಂದ ಪರೀಕ್ಷಿಸುತ್ತಿದ್ದ ತೇಜಸ್ವಿಯವರು ಮಾಯಾಲೋಕದಲ್ಲಿ ತಾಟಸ್ಥ್ಯರಾಗಿ ನಿಲ್ಲುತ್ತಾರೆ. ನೀರಿನ ಸಮಸ್ಯೆ, ವಿದ್ಯುತ್ ಸಮಸ್ಯೆ, ಅಣ್ಣಪ್ಪಣ್ಣನ ಆರೋಪಗಳು ಇತ್ಯಾದಿ ಯಾವುದೇ ಸಂದರ್ಭಗಳಲ್ಲೂ ಭಾಗಿಯಾಗದೆ ದೂರದಲ್ಲಿ ನಿಂತು ಮೂಕ ಪ್ರೇಕ್ಷಕರಾಗುತ್ತಾರೆ. ಮಾಯಾಲೋಕದಲ್ಲಿನ ನಿರೂಪಕರ ನಿರ್ಲಿಪ್ತ ಮನೋಭಾವದ ಧ್ವನಿ ಈ ಕೆಳಗಿನ ಮಾತುಗಳಲ್ಲಿ ಇದೆ.

'ನಾನು ಅವನು ಹೇಳಿದ್ದು ಸರಿ ಎನ್ನುವಂತೆ ತಲೆಯಾಡಿಸಿ ಮಾತಾಡದೆ ಯೋಚಿಸುತ್ತಾ ನಿಂತೆ ಅವರು ಮೂವರಿಗೂ ನಾನು ಯೋಚನೆಯಲ್ಲಿ ಮುಳುಗಿ ಮೌನವಾಗಿದ್ದು ನೋಡಿ ಅಚ್ಚರಿಯಾಯಿತು'

'ಜಲೀಲನ ತರಕಾರಿ ಅಂಗಡಿ ಎದುರು ನಡೆಯುತ್ತಿದ್ದ ಜೀವನ ನಾಟಕದ ವಿಸ್ಮಯಕರ ಅಂಕಗಳಿಗೆ ಮೌನ ಪ್ರೇಕ್ಷಕನಾಗಿ ಸ್ಕೂಟರ್ ನಿಲ್ಲಿಸಿಕೊಂಡು ನಿಂತಿದ್ದವನು ಬಿಸಿಲು ಜೋರಾಗಿದ್ದುದರಿಂದ ಹೊರಡಲು ಸಿದ್ಧನಾದೆ.'

'ಒಂದು ಮಳೆ ಬಂದಿದ್ದರೆ ಇವರಿಬ್ಬರ ಜಗಳ ಪರಿಸಮಾಪ್ತಿ ಆಗುತ್ತಿತ್ತು. ನಾನು ಇವರಿಬ್ಬರ ಜಗಳದ ಮಧ್ಯೆ ಬಾಯಿ ಹಾಕಲು ಹೋಗಲಿಲ್ಲ'

'ನಾನು ಮಹಮದ್ ಕಾಕನ ಮಾತಿಗೂ ಯಾವ ಪ್ರತಿಕ್ರಿಯೆಯನ್ನು ತೋರದೆ ತಟಸ್ಥನಾಗೇ ಇದ್ದುದ್ದನ್ನು ನೋಡಿ ಕಾಕನಿಗೆ ಹಾಗಾದರೆ ನಾನ್ನು ಯಾರ ಪರ ಎಂದು ಗೊಂದಲ ಉಂಟಾಗಿರಬೇಕು.'[೨೮]

ತಬರ ಕಥೆಯಲ್ಲಿ ವ್ಯವಸ್ಥೆಯ ಕರಾಳತೆ, ಕುಬಿ ಮತ್ತು ಇಯಾಲದ ರಹಮಾನ್-ರಂಗ, ಕಿರುಗೂರಿನ ಪೋಲೀಸ್ ಸ್ಟೇಷನ್ ಪ್ರಸಂಗ ಮತ್ತು ಪಂಚಾಯತಿ ಪ್ರಕರಣ, ಕರ್ವಾಲೋದ ಮಂದಣ್ಣನ ಪ್ರಕರಣ, ಕೃಷ್ಣೇಗೌಡನ ಫಾರೆಸ್ಟರ್ ನಾಗರಾಜನ ಆರೋಪ, ಜುಗಾರಿಕ್ರಾಸ್‌ನ ಫಾರೆಸ್ಟ್ ಇಲಾಖೆ ಹೀಗೆ ವ್ಯವಸ್ಥೆಯ ಆಕರಗಳು ತಮ್ಮೊಳಗೆ ತಾವೇ ಹೇಗೆ ಭ್ರಷ್ಟಗೊಳ್ಳುತ್ತಿವೆ ಎಂಬುದನ್ನು ಪ್ರಧಾನವಾಗಿ ಮಂಡಿಸಿದರೆ, ಮಾಯಾಲೋಕ ವ್ಯವಸ್ಥೆಗೆ ಹೊರತಾಗಿ ಬದುಕಬೇಕೆಂಬ ಛಲವನ್ನು ಕೇಂದ್ರೀಕರಣಗೊಳಿಸಿದೆ. ಮೇಲಿನ ಈ ಎರಡು ಚಿಂತನೆಗಳು ಪರಸ್ಪರ ಭಿನ್ನವಾಗಿವೆ. ಆದರೆ ಸಾಮಾಜಿಕ ವ್ಯವಸ್ಥೆ ಹಾಗೆ ಭ್ರಷ್ಟಗೊಳ್ಳುತ್ತಿರುವುದಕ್ಕೆ ಕಾರಣಗಳನ್ನು ಸಪ್ರಮಾಣವಾಗಿ ಶ್ರುತಪಡಿಸುವ ತೇಜಸ್ವಿಯವರು ಒಂದು ಸಮಾಜ ಭ್ರಷ್ಟವಾಗುವ ಹಿನ್ನೆಲೆಯಲ್ಲಿ ಬೇರೊಂದಕ್ಕೆ ಪ್ರವೇಶ ಪಡೆಯುವ ಸ್ಥಿತಿಯನ್ನು ಸಹಜವಾಗಿ ಗುರುತಿಸುತ್ತಾರೆ.

ವ್ಯವಸ್ಥೆ, ರಾಜಕೀಯ, ಭ್ರಷ್ಟಾಚಾರ ಇತ್ಯಾದಿ ಎಲ್ಲವನ್ನೂ ಒಡೆದು ನೋಡುವ ಯಜಮಾನ್ಯವನ್ನು ಬಿಟ್ಟು ಇಡಿಯಾಗಿ ನೋಡುವ ಪೂರ್ಣತ್ವವನ್ನು ಗಳಿಸಿಕೊಂಡಾಗ ಈ ಕ್ಲೀಷೆ ಸ್ವಲ್ಪ ಮಟ್ಟಿಗೆ ಬಗೆ ಹರಿಯಬಹುದು ಎಂಬ ಆಶಾವಾದ ಈ ಕೃತಿಯಿಂದ ಹೊಮ್ಮುತ್ತಿರುವಂತೆ ಕಾಣುತ್ತದೆ. ಇದು ತೇಜಸ್ವಿ ಕಥನಕ್ರಮದಲ್ಲಿ ಮತ್ತು ಜೀವನದೃಷ್ಟಿಯಲ್ಲಾದ ಸ್ಥಿತ್ಯಂತರದ ಮತ್ತೊಂದು ರೂಪ. ಸಮುದಾಯದಲ್ಲಿ ಉಂಟಾಗುವ ಜಾಗೃತಿ ಹೊಸ ಹೊಸ ಚಿಂತನೆಗಳಿಗೆ ಅವಕಾಶವೀಯುತ್ತದೆ. ಅಂತೆಯೇ ವರ್ತಮಾನದಲ್ಲಿನ ಪ್ರತಿಕ್ರಿಯೆಗಳು ಭವಿಷ್ಯತ್ತಿನ ಹೊಂಗನಸುಗಳ ಸಾಕಾರಕ್ಕೆ ಅರ್ಥವತ್ತಾದ ಮಾರ್ಗಸೂಚಿಯು ಆಗಿವೆ.

## ೩.೨.೨.೧: ಪ್ರಕೃತಿ-ಮಾನವ ಸಂಘರ್ಷ: ಸಂಘಟನೆ-ವಿಘಟನೆ

ಪ್ರಕೃತಿಯಲ್ಲಿನ ವೈಚಿತ್ರ್ಯಗಳಿಗೂ ಸಾಮಾಜಿಕ ಬದುಕಿನ ನಡವಳಿಕೆಗಳಿಗೂ ಅದಮ್ಯ ವ್ಯತ್ಯಾಸವಿದೆ. ಪ್ರಕೃತಿಯ ಅಣುರೇಣುವಿನಿಂದ ಬ್ರಹ್ಮಾಂಡ ಸೃಷ್ಟಿಯಾದಂತೆ, ಬ್ರಹ್ಮಾಂಡದೊಳಗಿನ ಜೀವಸಂಕುಲ ವಿಕಸನಗೊಂಡು ಸಂಕೀರ್ಣತೆಗಳನೆಲ್ಲಾ ಹಾದು ಸಮಕಾಲೀನ ಅಗತ್ಯಗಳ ಕುಲುಮೆಯಲ್ಲಿ ಬೆಂದು ಅವಸ್ಥಾಂತರ ಹೊಂದುತ್ತಲೇ ಇವೆ. ಈ ಅವಸ್ಥಾಂತರಗಳಲ್ಲಿ ಮಾನವಜೀವಿ ಮಿಲಿಯಂತರ ವಿಷಯಗಳನ್ನು ದಾಟುತ್ತಲೇ ಅನುಭವ ದ್ರವ್ಯವನ್ನು ತನ್ನದಾಗಿಸಿಕೊಳ್ಳುತ್ತಾ ಹೊಸಹೊಸ ಆವಿಷ್ಕಾರಗಳಿಗೆ ಕಾರಣಿಭೂತನಾಗುತ್ತಿದ್ದಾನೆ. ತನ್ನ ಅನುಭವದ ಮೂಸೆ ಹಿರಿದಾಗುತ್ತಾ ಆವಿಷ್ಕಾರಗಳ ಪಟ್ಟಿ ಬೆಳೆಯುತ್ತಲೇ ಸಾಗಿ ಹಲವಾರು ಏರಿಳಿತಗಳ ಮಧ್ಯೆ ಘರ್ಷಣೆ ಅಥವಾ ತಿಕ್ಕಾಟಗಳ ಸುಳಿಗೆ ಸಿಕ್ಕು ಅನಂತ ಜೀವಿಗಳು ಬಲಿಯಾಗುವುದಲ್ಲದೇ ಸೃಷ್ಟಿಶೀಲ ಸಮಾಜವು ತನ್ನ ಸಮಾಧಿಯನ್ನು ತಾನೇ ತೋಡಿಕೊಳ್ಳುತ್ತದೆ ಎಂಬುದು ಸತ್ಯ. ಜೀವವಿಕಾಸದ ಈ ಹಾದಿಯಲ್ಲಿ ಮನುಷ್ಯನ ಬೌದ್ಧಿಕ ವಿಕಾಸ ಹಲವು ಸಂಕ್ರಮಣಗಳಿಗೆ ಕಾರಣವಾಗಿದೆಯಾದರೂ ಪ್ರಕೃತಿಯಂತೆ ಸಮತೋಲನವನ್ನು ಕಾಯ್ದುಕೊಳ್ಳುವ ಶಕ್ತಿ, ಸಾಮರ್ಥ್ಯ ಮಾನವನಿಗಿದೆಯೇ? ಎಂಬ ಪ್ರಶ್ನೆ ಎದುರಾಗುತ್ತದೆ. ಪ್ರಕೃತಿಯ ಪ್ರಯೋಗಕ್ಕೆ ಹಳೆಯದರ ನಿಷ್ಕ್ರಮಣ, ಹೊಸ ಜೀವಿಗಳ ಹುಟ್ಟು; ವಿಕಸನವಾದಕ್ಕೆ ಪುಷ್ಟಿಕೊಡುತ್ತದೆಯಾದರೂ ಮನುಷ್ಯನ ಕೋಟ್ಯಂತರ ಪ್ರಯೋಗಗಳಿಗೆ ಪ್ರಕೃತಿ ತೆರುತ್ತಿರುವ ಬೆಲೆ ಜೀವಿಗಳ ಸರ್ವನಾಶವಷ್ಟೇ..! ನಿಸರ್ಗದ ವಿಕಾಸ ಸ್ಥಿತಿಯಲ್ಲಿ ಒಂದು ಜೀವಿ ನಾಶವಾಯಿತೆಂದರೆ ಕೋಟ್ಯಂತರ ವರ್ಷಗಳಿಂದ ಪಡೆದುಕೊಂಡು ಬಂದಿದ್ದ ಜ್ಞಾನ-ಕೌಶಲ ಗುಣ ಎಲ್ಲವೂ ನಿರ್ನಾಮವಾದಂತೆ.

'ಪ್ರಕೃತಿ ಎನ್ನುವುದು ಅನುಭಾವದ ವಿಚಾರಗಳಲ್ಲಿ ಮುಖ್ಯವಾಗಿ ನಾಲ್ಕು ರೀತಿಯ ಅರ್ಥಗಳನ್ನು ಪಡೆದುಕೊಂಡಿದೆ. ಒಂದನೆಯದು-ಸೃಷ್ಟಿಯಲ್ಲಿ ಪ್ರಮುಖ ಅಂಶವಾದ ಸ್ತ್ರೀ ತತ್ವ; ಎರಡನೆಯದು ತಾರ್ಕಿಕವಲ್ಲದ, ಸಹಜಾನುಭವದ ಸುಪ್ತಪ್ರಜ್ಞೆ; ಮೂರನೆಯದು ಸದಾ ಬದಲಾಗುವ, ನಾಶವಾಗುವ, ಮತ್ತೆ ಮರುಹುಟ್ಟಿಗೆ ಕಾರಣವಾಗುವ ಪ್ರಕೃತಿ ಮತ್ತು ನಾಲ್ಕನೆಯದು-ಕಾಲದ ಅನಂತತೆ ಶಾಶ್ವತತೆಯನ್ನು ಪ್ರತಿನಿಧಿಸುವ ಪ್ರಕೃತಿ'[37] ಈನಾಲ್ಕು ಅಂಶಗಳ ಆಧಾರದ ಮೇಲೆ ತೇಜಸ್ವಿ ಕೃತಿಗಳನ್ನು ಅಧ್ಯಯನಕ್ಕೆ ತೆಗೆದುಕೊಂಡಿದ್ದೇನೆ.

**ಒಂದನೆಯದು-ಸೃಷ್ಟಿಯಲ್ಲಿ ಪ್ರಮುಖ ಅಂಶವಾದ ಸ್ತ್ರೀ ತತ್ವ:** ಕಿರುಗೂರಿನ ಮೇಲೆ ಮೂರು ಹಗಲು, ಮೂರು ರಾತ್ರಿ ಬೀಸಿದ ಗಾಳಿಯ ಪರಿಣಾಮ, ಅವಸ್ಥೆಗಳನ್ನು ನಿರೂಪಿಸುವ ಲೇಖಕರು ಬಿರುಗಾಳಿ ಮೊದಲು ನಿಸರ್ಗದಲ್ಲಿ ಪ್ರಕೃತಿಯ ಮೇಲೆ ನಂತರ ಸೀಗೇಗೌಡರ ಸೊಸೆಯ ಮುಖಾಂತರ ಕಿರುಗೂರಿನ ಜನತೆಯ ಮೇಲೆ ಆದ ಪರಿಣಾಮಗಳನ್ನು ಸಾದ್ಯಂತವಾಗಿ ಚಿತ್ರಿಸುತ್ತಾರೆ. ಕತೆಯ ಉದ್ದಕ್ಕೂ 'ಪ್ರಕೃತಿ' ಪಡೆದಿರುವ ಸ್ಥಾನ, ಅದು ತಳೆದಿರುವ ಹರಿವು ಜೀವನ ಪ್ರವಹತೆಗೆ ಸಾಕ್ಷಿಯಾಗುತ್ತದೆ. ಪ್ರಕೃತಿ ನಿಸರ್ಗದ ಅಲುಗುವಿಕೆಗೆ ಸಾಕ್ಷಿಯಾಗದಂತೆ, ಕಿರುಗೂರಿನ ಹೆಣ್ಮಕ್ಕಳ ಸೌಂದರ್ಯದಲ್ಲಿ ಗುಪ್ತಗಾಮಿನಿಯಾಗಿರುವ ಕೆಚ್ಚು, ಆವೇಶಕ್ಕೆ ಪ್ರತಿಭಟನೆಯ ರೂಪ ನೀಡುತ್ತದೆ. ಪ್ರಕೃತಿ ಹಿನ್ನೆಲೆಯಲ್ಲಿ ಸ್ತ್ರೀ ಪ್ರಕೃತಿ ಪ್ರಖರವಾಗಿ ಪ್ರಜ್ವಲಿಸುತ್ತದೆ ಮತ್ತು ಕಿರುಗೂರಿನ ಸಂಸ್ಕೃತಿಯೊಳಗೆ ಹುದುಗಿಕೊಂಡಿರುವ ಪ್ರಜ್ಞೆಯನ್ನು ಜಾಗೃತಗೊಳಿಸುತ್ತದೆ.

**ಎರಡನೆಯದು ತಾರ್ಕಿಕವಲ್ಲದ, ಸಹಜಾನುಭವದ ಸುಪ್ತಪ್ರಜ್ಞೆ:** ನಿಸರ್ಗ, ಸೃಷ್ಟಿ, ಬದುಕು ಮತ್ತು ವ್ಯಷ್ಟಿ-ಸಮಷ್ಟಿಯೊಳಗಿನ ಮುಸುಕಿನ ಗುದ್ದಾಟಗಳಲ್ಲಿ ಜೀವನದ ಸಮಸ್ಯಾತ್ಮಕ ಮತ್ತು ರಹಸ್ಯಾತ್ಮಕ ದ್ವಂದ್ವಗಳನ್ನು ಬಿಡಿಸಲು ಮುಂದಾಗುವ ಕ್ರಮ ಹೊಸಗನ್ನಡ ಸಾಹಿತ್ಯ ಸಮುದ್ರಕ್ಕೆ ಹೊಸದಾಗಿ ಸೇರ್ಪಡೆಗೊಂಡ ಜೀವನದಿಯಾಗಿದೆ. ಕುವೆಂಪು, ಶಿವರಾಮಕಾರಂತ ಮುಂತಾದವರ ಸಂವೇದನೆಗಳು ಪ್ರಕೃತಿಗೆ ಮುಖಾಮುಖಿಗೊಂಡಿದ್ದರ ವಿರುದ್ಧ ನೆಲೆಗಳಲ್ಲಿ ರಹಸ್ಯ; ಪ್ರಕೃತಿ ಲೋಕದ ಜಟಿಲವಾದ ಸತ್ಯಾಂಶಗಳನ್ನು ಶೋಧಿಸುವ ಕ್ರಮದೊಳಗೆ ತೇಜಸ್ವಿಯವರ ಸಾಹಿತ್ಯದ ಬೃಹತ್ತು-ಮಹತ್ತುಗಳು ಗೋಚರವಾಗದಿರದು.[10] ದಾರ್ಶನಿಕ ತತ್ವದ ಹಿನ್ನೆಲೆಯಲ್ಲಿ ಲೋಕಾನುಭವದ ಅಭಿವ್ಯಕ್ತಿಯಲ್ಲಿ ಅಂಗೀಕರಣಕ್ಕೆ ಒಳಗಾಗುವ ಈ ಮಾತುಗಳು ತೇಜಸ್ವಿಯವರಿಗೆ ಅನ್ವಯಿಸುತ್ತದೆ.

ಪೂರ್ಣಚಂದ್ರತೇಜಸ್ವಿಯವರ ಸಾಹಿತ್ಯದಲ್ಲಿ ಅಡಗಿರುವ ಬೃಹತ್ ಪ್ರಮಾಣದ ಪ್ರಕೃತಿ ತನ್ನ ಸೂಕ್ಷ್ಮ ಸ್ತರದಿಂದ ನಾಗರಿಕ ಪ್ರಪಂಚಕ್ಕೆ ತೆರೆದುಕೊಂಡಾಗ ಹೊಸ ಹೊಸ ತಿರುವಿನೊಂದಿಗೆ ನಿಗೂಢತೆಯನ್ನು ಸೃಷ್ಟಿಸುತ್ತಾ ಹೊಸಹೊಸ ಅನ್ವೇಷಣೆಗಳಿಗೆ ಹಾದಿಯನ್ನು ನಿರ್ಮಿಸುತ್ತದೆ. ಅನ್ವೇಷಣೆಯ ಹಾದಿ ಸುಗಮವೆಂದು ಸಾಗಿದಂತೆಲ್ಲಾ ಇನ್ನೂ ಇನ್ನೂ ನಿಗೂಢವಾಗುತ್ತಾ ಜಟಿಲವಾದ ಸತ್ಯಾಂಶಗಳನ್ನು ಶೋಧಿಸುವುದಕ್ಕೆ ಅವಕಾಶ ಕಲ್ಪಿಸುತ್ತದೆ. ಆ ಅವಕಾಶಗಳೇನು ಸುಲಭಸಾಧ್ಯವಾದವುಗಳಲ್ಲ. ಏಕೆಂದರೆ ನಿಗೂಢವಾದ ಪ್ರಕೃತಿಯೊಂದಿಗೆ ಮನುಷ್ಯನ ಸಂಬಂಧ ಗಾಢವಾದಷ್ಟೂ ಅದರೊಂದಿಗೆ ನಡೆಸುವ ಅನುಸಂಧಾನವೂ ಅಷ್ಟೇ ಪ್ರಮುಖವಾಗುತ್ತದೆ. ಹಲವು ವೈಜ್ಞಾನಿಕ ಸತ್ಯಗಳ ಆಧಾರದ ಮೇಲೆ ಪ್ರಕೃತಿಯನ್ನು ಅರ್ಥೈಸಿಕೊಂಡಿರುವ ಮನುಷ್ಯ, ಅನುಭವದ ಅನೇಕ ಸ್ತರಗಳ ವಿವಿಧ ನೆಲೆಗಳನ್ನು ತಲುಪದ ಹೊರತು, ಎಷ್ಟೋ ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳಲಾಗುವುದಿಲ್ಲ. ಅದಕ್ಕಿಂತ ಹೆಚ್ಚಾಗಿ ಭ್ರಮಾತ್ಮಕ ಮತ್ತು ವಾಸ್ತವ ಬದುಕಿನ ತಾಕಲಾಟದ ಪರಿಕಲ್ಪನೆಗಳಿಗೆ ಅರ್ಥ ಹುಡುಕಲಾಗುವುದಿಲ್ಲ. ಇಂಥ ಸಂದರ್ಭಗಳಲ್ಲಿ ಯಾಂತ್ರಿಕವಾದ ಹಲವು ಸಿದ್ಧಾಂತಗಳನ್ನು ಹಿಂದಕ್ಕಿಕ್ಕಿ, ತನ್ನ ಪರಿಸರದಲ್ಲಿನ ಸೃಷ್ಟಿ ತತ್ವಕ್ಕೆ ಆದ್ಯತೆಯನ್ನು ಕೊಟ್ಟು ವರ್ತಮಾನದ ಅನೇಕ ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳಬೇಕಾದ ಪರಿಸ್ಥಿತಿ ನಿರ್ಮಾಣವಾಗುತ್ತದೆ. ಇಂತಹ ಪರಿಸ್ಥಿತಿಗಳು ಹಲವು ಸತ್ಯವನ್ನು ದರ್ಶಿಸುತ್ತವೆ. ಶೋಧನೆಯಲ್ಲಿ ತೊಡಗಿಕೊಂಡವರಿಗೆ ಮಾತ್ರ ಆ ಸತ್ಯ ದರ್ಶನವಾಗುತ್ತದೆ.

ಮಾಯಾಲೋಕ, ಕರ್ವಾಲೋ, ಚಿದಂಬರ ರಹಸ್ಯ, ಜುಗಾರಿ ಕ್ರಾಸ್, ಪರಿಸರಕತೆ, ಕಾಡು ಮತ್ತು ಕ್ರೌರ್ಯ, ಸಹಜಕೃಷಿ..... ಇನ್ನಿತರ ಕೃತಿಗಳು ಭಾರತೀಯ ಪರಿಸರದಲ್ಲಿನ ಜೈವಿಕ ವೈವಿಧ್ಯಕ್ಕೆ ಒದಗಿರುವ ಅಪಾಯವನ್ನು ಕುರಿತು ಚರ್ಚಿಸುತ್ತವೆ. ಸಮೃದ್ಧವಾಗಿದ್ದ ವನ್ಯಸಂಪತ್ತು ಕೇವಲ ಕೆಲವೇ ವರ್ಷಗಳ ಅಂತರದಲ್ಲಿ ನಶಿಸಿ ಹೋಗಿರುವುದನ್ನು ಅಳಿವಿನಂಚಿನಲ್ಲಿರುವ ಜೀವಪ್ರಭೇದಗಳು ಜೀವವೈವಿಧ್ಯ ಅನ್ವೇಷಕರಿಗೂ ಕಾಣಸಿಗದೇ ಹೋಗುತ್ತಿರುವುದು ಕೆಲವೊಂದು ಅರಣ್ಯಪ್ರದೇಶಗಳಿಗೆ ಮಾತ್ರ ಸೀಮಿತವಿರುವ ಸ್ಥಾನಿಕಪ್ರಭೇದಗಳ ಅಳಿವು; ಅವುಗಳ ಮೇಲೆ ಅವಲಂಬಿತವಾಗಿರುವ ಇನ್ನಿತರ ಜೀವವೈವಿಧ್ಯಗಳಿಗೆ ಒದಗಿರುವ ಅಪಾಯ; ಒಂದಕ್ಕೊಂದು ಸರಪಳಿಯಂತೆಯೇ ಚಾಚಿಕೊಂಡಿರುವಂತಹುದು, ಇವುಗಳ ಸರಪಳಿ ಒಂದೊಮ್ಮೆ ಕಡಿತಗೊಂಡರೆ ಮರುಜೋಡಣೆ ಕಷ್ಟ. ಪ್ರಾಣಿ-ಪಕ್ಷಿಗಳ ಅವಲಂಬನೆಯೇ ಅರಣ್ಯಪ್ರದೇಶ,

ಹಸಿರಿನಿಂದಾವೃತವಾಗಿರುವುದು; ಅದೇ ದಿನದಿನವೂ ಕ್ಷೀಣಿಸುತ್ತಿದ್ದರೆ ಅವುಗಳ ಆಶ್ರಯಸ್ಥಾನವಾದರೂ ಎಲ್ಲಿ!

ಒಂದು ಸಸ್ಯ ಅವನತಿ ಹಾದಿ ಹಿಡೀತೂ ಅನ್ನಿ. ಅದರಿಂದ ಬದುಕುತ್ತಿರುವ ಕೀಟಸ್ತೋಮ, ಅವುಗಳನ್ನೇ ಆಹಾರ ಮಾಡಿಕೊಂಡಿದ್ದ ಪಕ್ಷಿಗಳು, ಅವುಗಳಿಂದಲೇ ಬೀಜ ಪ್ರಸರಣವಾಗುತ್ತಿದ್ದ ವೃಕ್ಷಸಂಕುಲ, ಅದರ ಆಧಾರದ ಮೇಲೆ ಹೆಪ್ಪುಗಟ್ಟಿ ಮಳೆ ಸುರಿಸುವ ಮೋಡ ಮತ್ತು ಇವುಗಳೆಲ್ಲದರ ಆಧಾರದ ಮೇಲೆ ಬದುಕೋ ಮನುಷ್ಯ. ಇಡೀ ವಿಶ್ವ ಈ ತರ ಒಂದಕ್ಕೊಂದಂತೆ ಬಿಗಿದುಕೊಂಡು ಸಮತೋಲನದಲ್ಲಿ ನಿಂತಿರೋ ಬಲೆ.[೩೧]

ಈ ರೀತಿಯ ಗಾಢವಾದ ನಿಸರ್ಗ ಸಹಜ ಪ್ರಕ್ರಿಯೆಯಲ್ಲಿ ಜೀವ ಜಂತುಗಳ ಜೀವನ ವ್ಯಾಪಾರ ಚಟುವಟಿಕೆಯಿಂದಲೂ, ಚೈತನ್ಯದಿಂದಲೂ ಕೂಡಿರುತ್ತದೆ. ಯಾವುದಾದರೂ ಒಂದರ ತಂತು ತುಂಡರಿಸಿತೆಂದರೆ ಅನೇಕಾನೇಕ ಸಮಸ್ಯೆಗಳ ಗೋಜಲಿನಿಂದಾಗಿ ಬಡ ಜೀವಜಂತುಗಳು ತಮ್ಮ ಜೀವವನ್ನು ಬಲಿಕೊಡಬೇಕಾಗುತ್ತದೆ. ಅಂತಹುದರಲ್ಲಿ ಮಾನವರ ಹುಂಬತನ ಅಸಂಖ್ಯಾತ ಮುಗ್ಧಜೀವಿಗಳನ್ನು ಬಲಿತೆಗೆದುಕೊಳ್ಳುತ್ತದೆ. ಇದರ ಜೊತೆಗೆ ಕಾಡುಗಳ್ಳರ ಧನದಾಹಿ ವ್ಯಾಪಾರಸ್ಥರ ಲಾಭಕ್ಕಾಗಿ, ಕಾಡು ಸೂರೆಗೊಳ್ಳುತ್ತಿದೆ. ಅಂತೆಯೇ–ಉರುವಲು–ಜೀವನ ನಿರ್ವಹಣೆಯಂತಹ ದಿನನಿತ್ಯದ ಬಳಕೆಗೆಂದೂ ಕಾಡು ಸೊರಗುತ್ತಿದೆ. ಇದಕ್ಕಿಂತಲೂ ಹೆಚ್ಚಾಗಿ ಕಾಡನ್ನು ಕಡಿದು ನಾಡನ್ನಾಗಿಸುವ ಧಾವಂತದಲ್ಲಿ! ಅಭಿವೃದ್ಧಿಯ ನೆಪದಲ್ಲಿ ಕರಗುತ್ತಿದೆ. ಇದರಿಂದ ಮನುಷ್ಯ ಮಾತ್ರವಲ್ಲದೇ ಸರ್ವಚರಾಚರಗಳೂ ಎಂತಹ ಸ್ಥಿತಿಯತ್ತ ಜಾರುತ್ತಿವೆ ಎಂಬ ಅರಿವಿಲ್ಲದೆ ಮಾನವ ಜೀವಿ ಎಡವುತ್ತಿದ್ದಾನೆ. ಇದರ ಅಂತ್ಯ ಮಾತ್ರ ಭೀಕರವೆನಿಸುತ್ತದೆ. ಇವುಗಳಿಗೆ ಉದಾಹರಣೆಯಾಗಿ ಜುಗಾರಿಕ್ರಾಸ್, ಚಿದಂಬರ ರಹಸ್ಯ, ಕೃಷ್ಣೇಗೌಡನ ಆನೆ ಈ ಕಥೆಗಳಲ್ಲಿ ವರ್ಣಿತವಾಗಿರುವ ಸಹ್ಯಾದ್ರಿಯ ಕಾಡು ತನ್ನ ಮೂಲ ರೂಪವನ್ನು ಕಳೆದುಕೊಂಡು ಬರಡಾಗಿದೆ. ಜುಗಾರಿಕ್ರಾಸ್‌ನ ಈ ಕೆಳಗಿನ ವಿಚಾರಗಳು

ಕಾಡುಗಳು ಇವತ್ತು ಬಾಗಿಲು ತೆರೆದಿಟ್ಟ ಖಜಾನೆಗಳಾಗಿವೆ. ಈ ಕಾಡುಗಳ ಒಂದೊಂದೇ ಮರ ಎರಡು ಮೂರು ಲಕ್ಷ ಬೆಲೆ ಬಾಳುತ್ತದೆ. ಕಲ್ಲುಕಳ್ಳರಿಗೆ, ಮರಗಳ್ಳರಿಗೆ, ಗಂಧ ಚಕ್ಕೆ ಸಾಗಣೆ ಮಾಡುವ ಖದೀಮರಿಗೆ ಕಣ್ಣು ಹರಿಸಿದಲ್ಲೆಲ್ಲಾ ಹಣ ರಾಶಿ ಬಿದ್ದಿರುವಂತೆ ಕಾಣುತ್ತದೆ. ದುಡ್ಡು ಈ ರೀತಿ ಕೋಡಿ ಬಿದ್ದಿರುವಾಲೆಲ್ಲ ಏನೇನು ರೂಪುಗೊಳ್ಳುತ್ತದೋ ಅದೆಲ್ಲ ಸಹ್ಯಾದ್ರಿಯ ಕಾಡಿನೊಳಗೆ ಶುರುವಾಗಿದೆ.[೩೨]

ಕೆಸರೂರಿಗೆ ಬಳಸಿಕೊಂಡಂತೆ ಇದ್ದ ಮನ್ನಾ ಜಂಗ್ಲಿಯಲ್ಲಿ ಮರ ಕಡಿಯಕೂಡದೆಂದು ಸರ್ಕಾರದ ಆಜ್ಞೆ ಇದ್ದರೂ ರಾಜಕಾರಣ ಭ್ರಷ್ಟಾಚಾರ ಲಂಚ ಇವುಗಳ ದೆಸೆಯಿಂದಾಗಿ ಏಲಕ್ಕಿ ಕೃಷಿಗೆ ಅನುಕೂಲಕರವಾಗಲೆಂದು ರೆಂಬೆ ಕೊಂಬೆಗಳನ್ನು ಕಡಿಯುವುದಕ್ಕೆ ಸಿಕ್ಕ ಪರವಾನಗಿ ಮನ್ನಾ ಜಂಗ್ಲಿಯನ್ನು ಸಂಪೂರ್ಣ ಬದಲಾಯಿಸಿತು. ಇದು ಒಂದು ರೀತಿಯ ದರೋಡೆಯಾದರೆ ಹಾಡುಹಗಲೇ ಇಡೀ ಕಾಡು ಯೂಸಫ್ ಮತ್ತು ಆತನ ಕಡೆಯವರ ಅತಿಯಾಸೆಗೆ ಬಲಿಯಾಗುತ್ತದೆ.

ಸುಲೇಮಾನ್ ಯೂಸಫ್ ಬೇರಿ ಕೊಂಬೆ ಕಡಿಯ ಹೊರಟವನು ಕಾಂಡಗಳನ್ನೇ ಕಡಿದ. ನೂರಾರು ವರ್ಷಗಳ ದೇಗುಲದ ಕಂಬಗಳಂಥ ಹೆಮ್ಮರಗಳು ಚೀತ್ಕಾರದೊಂದಿಗೆ ನೆಲಕ್ಕುರುಳಿದವು. ಲೋಡುಗಟ್ಟಲೆ ಮರದ ದಿಮ್ಮಿಗಳು ಕೆಸರೂರಿನ ಹಾದಿಯಲ್ಲಿ ಮಂಗಳೂರಿನ ದಿಕ್ಕು ಹಿಡಿದುವು. ಕೆಸರೂರಿನ ಜನಕ್ಕೆ ವರ್ಷಾಂತರದವರೆಗೆ ಇದೊಂದು ಸುಪರಿಚಿತ ನೋಟ. ಆನಂತರ ಕಾಡಿನಡಿಯಲ್ಲಿ ಬೆಳೆದಿದ್ದ ಏಲಕ್ಕಿ ಗಿಡಗಳು ಎಲೆ ಬಾಡಿ ಬಿಸಿಲಿನ ಹೊಡೆತಕ್ಕೆ ಕ್ಷೀಣಿಸಿ ಬಹುಬೇಗ ನೆಲ ಹಿಡಿದವು. ಕಾಡು ನೆಲಸಮವಾದಲ್ಲಿ ಲಂಟಾನದ ಅಭೇದ್ಯ ಜಿಗ್ಗು ಕೋಟೆಗಟ್ಟಿ ಕೆಸರೂರನ್ನು ಸುತ್ತುವರೆಯಿತು.[೩೩]

ಚಾರ್ಮಡಿ ಹತ್ತಿರದ ದಟ್ಟ ಕಾಡನ್ನು ಸರ್ಕಾರ ವಿಮ್ಕೋ ಕಂಪೆನಿಗೆ ಬೆಂಕಿ ಕಡ್ಡಿ ಮರ ಕಡಿಯಲಿ ಗುತ್ತಿಗೆ ಕೊಟ್ಟಿತು.[೩೪]

ಭಾರತದ ಗ್ರಾಮೀಣ ಪ್ರದೇಶಗಳೆಲ್ಲ ನಗರಗಳಾಗಿ, ಕಾಂಕ್ರೀಟು ಕಾಡುಗಳಾಗಿ ಮಾರ್ಪಡುತ್ತಿರುವಾಗ ಸಾಮಾನ್ಯನೂ ಕೂಡ ಅದರೊಳಗಿನ ಅವಿಭಾಜ್ಯ ಅಂಗವಾಗಿ ಸಾಮಾಜಿಕ ಚಟುವಟಿಕೆಗಳೆಂದರೆ ಮೋಜು, ಮಸ್ತಿ, ಕೆಲಸ-ಕಾರ್ಯ, ಆರಾಮದಾಯಕ ವೃತ್ತಿಜೀವನ ಎಂದು ಜೀವಿತಾವಧಿಯನ್ನು ಕಳೆಯುತ್ತಿದ್ದಾನೆ ಮತ್ತು ಮನರಂಜನೆಗಾಗಿ ಗುಡ್ಡಗಾಡಿನ ಪ್ರದೇಶಗಳಲ್ಲಿ ಪ್ರವಾಸ-ಚಾರಣ ಹೀಗೆ ಅನೇಕ ಚಟುವಟಿಕೆಗಳಲ್ಲಿ ತೊಡಗಿಕೊಂಡು ತನ್ನ ಸಹಭಾಗಿತ್ವ ಮುಗಿಯಿತೆಂದು ಹಿನ್ನಡೆಯುತ್ತಾನೆ. ಈ ಹಂತದಲ್ಲಿ ಎದುರಾಗುವ ಸಾಮಾಜಿಕ-ಸಾಂಸ್ಕೃತಿಕ ಅವಗಡಗಳಿಗೆ ಕಾರಣ ಹುಡುಕ ಹೋಗುವುದಿಲ್ಲ. ಪರಿಸರ ಮಾಲಿನ್ಯ-ವಾಯು ಮಾಲಿನ್ಯ-ಜಲ ಮಾಲಿನ್ಯ ಈ ಎಲ್ಲಾ ಸಮಸ್ಯೆಗಳ ಮೂಲ ಮಾನವ.

ಸಮಾಜದಲ್ಲಿನ ಯಾವುದೇ ದುರಂತಕ್ಕೆ ತಾನೂ ಸಾಕ್ಷಿಯಾಗಿ ನಿಲ್ಲುತ್ತಾನೆಯೇ ಹೊರತು ಅದರ ಮೂಲವನ್ನು ಅರಿಯುವ ಗೋಜಿಗೆ ಹೋಗುವುದಿಲ್ಲ. ಅರಿತರೂ ತಮ್ಮ ಸುರಕ್ಷತೆಗೆ ಮುತುವರ್ಜಿ ವಹಿಸಲಾಗುತ್ತದೆಯೇ ವಿನಾ ಪರಿಸರದ ಬಗೆಗಿನ ಕಾಳಜಿಯಿಂದ ಅಲ್ಲ. ಇಂಥವರುಗಳ ಮಧ್ಯೆ ಪರಿಸರ ಚಳುವಳಿ-ಪರಿಸರವಾದಿ ಎಂದು ಒರಲುವವರಲ್ಲಿ ಪರಿಸರನಾಶದಿಂದ ಭವಿಷ್ಯ ಕಂಗೆಡುತ್ತಿರುವುದರ ಬಗ್ಗೆ ಶೋಕಾಚರಣೆ ಇದೆ ಅಷ್ಟೆ! ಇದಲ್ಲದೆ ಮನುಷ್ಯನ ಪ್ರಗತಿಗೆ ಬಾಧಕವಾಗಬಲ್ಲ ಪ್ರಕೃತಿಯ ಅಸಮತೋಲನದಿಂದ ತಮ್ಮ ಬಿಡುಗಡೆಗೆ ಹಾದಿ ನಿರ್ಮಿಸುವ ಹವಣಿಕೆಯನ್ನು ಕಾರ್ಯರೂಪಕ್ಕೆ ಇಳಿಸಲು ಮಾರ್ಗಾನ್ವೇಷಣೆಗೆ ಮುಂದಾಗುತ್ತಿದ್ದಾರೆಯೇ ಹೊರತು ಪರಿಸರ ಪ್ರೀತಿಯಿಂದಲ್ಲ. ಪರಿಸರಪ್ರಜ್ಞೆ ತನಗೆ ಅತೃಪ್ತಿಯನ್ನು ಉಂಟುಮಾಡುತ್ತಿರುವ ಕಳವಳಕಾರಿ ಸಂಗತಿಗಳತ್ತ ಕೇಂದ್ರೀಕೃತಗೊಳ್ಳುತ್ತದೆಯೇ ಹೊರತು ನೈಜತೆಯಿಂದಲ್ಲ.

ಹಾಗೆಂದು ಅಭಿವೃದ್ಧಿಪರ ಚಟುವಟಿಕೆಗಳನ್ನು ನಿಲ್ಲಿಸಲು ಸಾಧ್ಯವೇ? ಎಂದು ಜನರು ತಮ್ಮ ತಮ್ಮ ಆಲೋಚನೆಯ ದೃಷ್ಟಿಯನ್ನು ಹರಿಯಬಿಡುತ್ತಾರೆ. ಇದಕ್ಕಾಗಿ ಸಾಮಾನ್ಯ ಏನೂ ಮಾಡಲು ಅಸಹಾಯಕ, ಇದಕ್ಕೆ ಸಂಬಂಧಪಟ್ಟ ಆಡಳಿತ-ವ್ಯವಸ್ಥೆ-ಕಾನೂನುಗಳಿವೆ ಎಂದು ಸಲಹೆಯಿಡುತ್ತಾರೆ. ಹೌದು–ಇವರೆಲ್ಲ ಆಡಳಿತಸೂತ್ರಗಳನ್ವಯ ಪರಿಸರವಾದಿಗಳಾಗಿ ವನ್ಯಪರಿಸರವನ್ನು ಸಂರಕ್ಷಿಸುವ ಹಲವಾರು ಯೋಜನೆಗಳನ್ನು ಸಿದ್ಧಪಡಿಸಿದರೆ ಆಯಿತೇ? ಜೀವವೈವಿಧ್ಯದ ರಕ್ಷಣೆಯ ಹೊಣೆ ಹೊತ್ತ ಘನಸರ್ಕಾರ ಪರಿಸರ ಸಂರಕ್ಷಣೆಗಾಗಿ ಅಪಾರಧನರಾಶಿಯನ್ನು ವ್ಯಯ ಮಾಡಿದರೆ ಅಲ್ಲಿಗೆ ಮುಗಿಯಿತೇ? ಹೀಗೆ ಅನೇಕ ಪ್ರಶ್ನೆಗಳನ್ನು ಕೇಳಿಕೊಂಡರೂ ಇಂತಹ ವಿವರಣೆಯ ಅಂಕಿ ಅಂಶಗಳಿಂದ ವಿಭಿನ್ನವಾದ ಮಾರ್ಗಸೂಚಕದ ಅವಶ್ಯಕತೆಯಿದೆ. ಪರಿಸರದ ಉತ್ತರೋತ್ತರ ಅಭಿವೃದ್ಧಿಗೆ ಪ್ರತಿಸ್ಪಂದಿಸುವ, ನಂತರದ ಪೀಳಿಗೆಯ ವಿಸ್ತಾರವಾದ ಬಾಳ್ವೆಗೆ ಅನುವು ಮಾಡಿಕೊಡುವ ಸತ್ವಯುತ ಗ್ರಹಿಕೆ ನಮ್ಮದಾಗಬೇಕಿದೆ.

ತುತ್ತು ಅನ್ನಕ್ಕಾಗಿ, ಉಸಿರಾಡುವ ಗಾಳಿಗಾಗಿ, ಜೀವ ಉಳಿಸುವ ಜಲಕ್ಕಾಗಿ ಮನುಷ್ಯ ಪರದಾಡದೆ ಉಳಿಯಬೇಕಾದರೆ ಮನುಷ್ಯ ತಾನೇನು ಮಾಡಬೇಕು? ತನ್ನ ಕರ್ತವ್ಯಗಳೇನು? ಸಮಯೋಚಿತವಾದ ನಿರ್ಧಾರಗಳೇನು? ಅಳಿದುಳಿದ ಸಂಪತ್ತನ್ನು ಅಭಿವೃದ್ಧಿಪಡಿಸುವತ್ತ

ಸಾಮಾನ್ಯನ ಹೊಣೆ ಏನು? ಹೇಗೆ? ಎಂಬುದರತ್ತ ಪ್ರತಿಯೊಬ್ಬನೂ ಗಮನವಹಿಸಲೇಬೇಕು. ಇದಕ್ಕಾಗಿ ಸಾಮಾನ್ಯನ ಕರ್ತವ್ಯಗಳೇನು ಎಂಬುದನ್ನು ಅರಿತಿರಬೇಕಾಗಿದೆ. ಜೀವಸಂಕುಲಗಳ ಉಗಮ-ಅಂತ್ಯ-ವಿನಾಶ ಇವುಗಳ ಬಗ್ಗೆ ಸರಳ ನಿರೂಪಣೆಯಲ್ಲಿ ಸಾಮಾನ್ಯ ಓದುಗನಿಗೂ ಮನದಟ್ಟಾಗುವಂತೆ ಸೂಕ್ಷ್ಮವಾಗಿ ವೈಚಾರಿಕವಾಗಿ ಮೂಲಭೂತ ಅಂಶಗಳನ್ನು ತೇಜಸ್ವಿಯವರು ತರ್ಕಬದ್ಧವಾಗಿ ಮಂಡಿಸಿದ್ದಾರೆ.

ಜುಗಾರಿ ಕ್ರಾಸ್‌ನಲ್ಲಿ ಬಿದುರು, ಚಿದಂಬರ ರಹಸ್ಯದಲ್ಲಿ ಏಲಕ್ಕಿ ಹೈಬ್ರಿಡ್, ಪರಿಸರಕತೆಯಲ್ಲಿ ಬರುವ ನಾಟಿ ಔಷಧಿಯುಕ್ತ ಸಸ್ಯಗಳು, ಹಾವು ಇತ್ಯಾದಿ, ಕರ್ವಾಲೋ ಕಾದಂಬರಿಯ ಹಾರುವ ಓತಿ, ಕೊಕ್ಕಾನಕ್ಕಿ, ಜೇನು; ಸಹಜ ಕೃಷಿಯಲ್ಲಿ ಕ್ರಿಮಿನಾಶಕಗಳ ಬಳಕೆಯಿಂದಾಗುವ ಭೂನಷ್ಟ, ಮಾಯಾಲೋಕದಲ್ಲಿ ಹುಂಡುಕೋಳಿ, ನೀರಿನ ಸೆಲೆ ಇವು ತೇಜಸ್ವಿ ಕಥನಗಳಲ್ಲಿ ಮತ್ತೆ ಮತ್ತೆ ಚರ್ಚೆಗೆ ಒಳಗಾಗುವ ವಿಷಯಗಳು. ಇದೇ ರೀತಿಯಲ್ಲಿ ಪರಿಸರ ಕತೆಯಲ್ಲಿ ಬರುವ ಇನ್ನಷ್ಟು ವಿಚಾರಗಳು ಇದಕ್ಕೆ ಸಾಂಗತ್ಯ ನೀಡುತ್ತವೆ. ಇವುಗಳ ಮೂಲಕ ವಿಕೃತಗೊಳ್ಳುತ್ತಿರುವ ಸಮಾಜ ತನಗರಿವಿಲ್ಲದೆ ವಿನಾಶದ ಅಂಚಿಗೆ ಸರಿಯುತ್ತಿರುವುದರ ಬಗ್ಗೆ ಖೇದಗೊಳ್ಳುತ್ತಾ ನಿಸರ್ಗದೊಡನೆ ಮನುಷ್ಯ ಬದುಕನ್ನು ಮುಖಾಮುಖಿಯಾಗಿಸಿ ಎರಡರ ಅಸ್ತಿತ್ವ ಗುರುತಿಸಲು ಪ್ರಯತ್ನಿಸಿದ್ದಾರೆ.

> ಹಕ್ಕಿಪಿಕ್ಕೆಯವರು ಒಂದಷ್ಟು ಹುಂಡು ಕೋಳಿಗಳನ್ನು ಹಿಡಿದು ಹೊಂದಿರಬಹುದು, ಆದರೂ ಅವು ಮತ್ತೆ ಮೊಟ್ಟೆ ಇಟ್ಟು ಮರಿ ಮಾಡಿ ವೃದ್ಧಿಯಾಗುವುದರಿಂದ ಎಂದಿನಂತೆಯೇ ಜೌಗಿನಲ್ಲಿ ಅವನ್ನು ನೋಡಬಹುದು ಎಂದು ನಾನು ಎಣಿಸಿದ್ದೆ. ಆದರೆ ನನ್ನ ಊಹೆ ಸುಳ್ಳಾಯ್ತು. ಅವರು ಎಷ್ಟೊಂದು ಸರ್ವಸಮರ್ಥವಾಗಿ ಬೇಟೆಯಾಡಿದ್ದರೆಂದರೆ ಆ ಜೌಗಿನಲ್ಲಿ ಒಂದೇ ಒಂದು ಹುಂಡುಕೋಳಿಯ ಪಿಳ್ಳೆಯೂ ಉಳಿದಿರಲಿಲ್ಲ. ಒಂದಷ್ಟು ಗೀಜುಗಗಳು ಗೂಡು ಕಟ್ಟಲು ಆ ಜೌಗಿನಲ್ಲಿ ಬೆಳೆಯುವ ಜೊಂಡಿನ ನಾರನ್ನು ಸೀಳಿಕೊಂಡು ಒಯ್ಯುತ್ತಿದ್ದುದನ್ನು ಬಿಟ್ಟರೆ ಮತ್ತೆ ಯಾವುದೇ ಜೀವಿಯೂ ಅಲ್ಲಿರಲಿಲ್ಲ. ಕೊನೇ ಪಕ್ಷ ಬೇರೆಲ್ಲಿಂದಲಾದರೂ ಒಂದೆರಡು ಹುಂಡುಕೋಳಿಗಳು ಜೌಗಿನ ಆಕರ್ಷಣೆಗೆ ಇಲ್ಲಿಗೆ ವಲಸೆ ಬರಬಹುದು ಎಂದು ಯೋಚಿಸಿದ್ದೆ. ಅನೇಕ ದಿನಗಳು ಕಳೆದರೂ ಅಲ್ಲಿಗೆ ಯಾವೂ ಬರಲಿಲ್ಲ. ಆ ಪರಿಸರದಲ್ಲಿ ಅವು ನಿಜಕ್ಕೂ ನಿರ್ನಾಮವಾಗಿದ್ದುವು.[೩೫]

ಹೀಗೆ ಮಾನವ ತನ್ನ ಬದುಕಿಗಾಗಿ, ತನ್ನ ಆಸೆ, ಆಕಾಂಕ್ಷೆಗಳನ್ನು ಪೂರೈಸಿಕೊಳ್ಳಲು ಪರಿಸರವನ್ನು ಇತರ ಪ್ರಾಣಿಗಳನ್ನು ಶೋಷಿಸುತ್ತಾ ಮುನ್ನಡೆಯುತ್ತಿದ್ದಾನೆ. ಈತನಿಗೆ ತನ್ನ ಗುರಿಸಾಧನೆಯ ಮಾರ್ಗದಲ್ಲಿ ಇವ್ಯಾವುದೂ ಮುಖ್ಯವೆನಿಸುವುದಿಲ್ಲ. ಇದೇ ಅಂಶವನ್ನು 'ಮಾನೀಟರ್' ಕಥೆಯ 'ಮಾರ' ಪ್ರತಿಬಿಂಬಿಸುತ್ತಾನೆ. ಆತನ ದೃಷ್ಟಿಯಲ್ಲಿ ಉಡವನ್ನು, ನರಿ, ನಾಯಿಯನ್ನು ತಿನ್ನುವುದು ಅನ್ಯಾಯವೆನಿಸಿದರೂ ತಾನು ಅದನ್ನು ತಿನ್ನುವುದು ನ್ಯಾಯವೆನಿಸುತ್ತದೆ. ಬೆಟ್ಟದಲ್ಲಿದ್ದ ದೊಡ್ಡ ಉಡಗಳು ಬಹಳ ವರ್ಷಗಳ ಹಿಂದೆಯೆ ಮಣ್ಣಾದ ವಿಷಯ ಕೇಳಿ ಎಂಥ ಅನ್ಯಾಯವೆಂದುಕೊಳ್ಳುತ್ತಾನೆ. ಏಕೆಂದರೆ ಅವುಗಳು ತನಗೆ ಸಿಗಬೇಕಿತ್ತು ಎನ್ನುವುದು ಅವನ ಆಸೆ. ಇವನಂತೆಯೇ 'ಕಿವಿಯೊಡನೆ ಒಂದು ದಿನ' ಕಥೆಯ ನಿರೂಪಕ ಮತ್ತು ಅವರ ಗೆಳೆಯ ಶ್ರೀರಾಮ್, ಮಾಸ್ತಿ ಮತ್ತು ಬೈರ ಇವರೆಲ್ಲರೂ ತಮ್ಮ ನಾಲಗೆಯ ಚಪಲಕ್ಕಾಗಿ ಪ್ರಾಣಿಗಳನ್ನು ಕೊಂದು ತಿನ್ನುವ ವರ್ಗಕ್ಕೆ ಸೇರಿದವರಾಗಿದ್ದಾರೆ.

ಇಲ್ಲೆಲ್ಲಾ ಕೇವಲ ಓದುಗನಾಗಿ ಕೃತಿಯ ಒಳಗಿಳಿಯದೆ ಒಂದು ಇನ್ನೊಂದರ ರಕ್ಷಣೆಗಾಗಿ ಉಳಿಯಲೇಬೇಕಾದ-ಉಳಿಸಲೇಬೇಕಾದ ಅನಿವಾರ್ಯತೆಯನ್ನು ಮನದಟ್ಟು ಮಾಡಿಸುತ್ತಿದ್ದಾರೆ.

ಇದಕ್ಕಾಗಿ ಇಂದಿನ ನಾಗರಿಕ ಬದುಕಿನ ವಿನ್ಯಾಸಕ್ಕೆ ಪರ್ಯಾಯವಾಗಿ ಪ್ರಕೃತಿಯ ಒಡಲಿನ ಬದುಕಿನ ವಿನ್ಯಾಸವನ್ನು ಅಳವಡಿಸಿಕೊಳ್ಳುವಂತೆ ತೇಜಸ್ವಿಯವರು ಎಲ್ಲಿಯೂ ಸೂಚಿಸುವುದಿಲ್ಲ.

ಕಾಡುಗಳನ್ನು ಕಾಡುಪ್ರಾಣಿಗಳನ್ನು ಸಂರಕ್ಷಿಸಬೇಕೆಂದು ನಾನು ಹೇಳಿದರೆ ಅದು ನನ್ನ ತಿಳುವಳಿಕೆಯ ಕಾರಣಗಳಿಗಿಂತಲೂ ಹೆಚ್ಚಾಗಿ ಅವುಗಳೊಂದಿಗೆ ನಾವು ಹೊಂದಿರುವ ವ್ಯಕ್ತಿನಿಷ್ಠ ಸಂಬಂಧವೇ ಆಗಿದೆ. ಕಾಡುಗಳನ್ನು ನಾಶಮಾಡಿದಾಗ ಅಲ್ಲಿರುವ ಪ್ರಾಣಿಗಳನ್ನು, ಅವುಗಳ ಪರಿಸರವನ್ನು ಧ್ವಂಸ ಮಾಡಿದಾಗ ರಹಸ್ಯ, ಗೌಪ್ಯ, ಅದ್ಭುತಗಳ ನಿರಂತರ ನಿಧಿಯೊಂದನ್ನು ನಮ್ಮ ಕಿರಿಯ ಜನಾಂಗ ಕಳೆದುಕೊಂಡಂತಾಗಿ ಮನಸ್ಸು ಖಿನ್ನವಾಗುತ್ತದೆ. ಈ ದುರಂತದ ದುಃಖವನ್ನು ಅಂಕಿಸಂಖ್ಯೆಗಳ ಆಧಾರದ ಮೇಲೆ, ಸಿದ್ಧಾಂತಗಳ ಮುಖಾಂತರ ವಿಶ್ಲೇಷಿಸಿ, ಪರಿಸರ ಸಂರಕ್ಷಣೆಯ ಬಗ್ಗೆ ಜನಗಳಿಗೆ ಹೇಳಲು ಮನಸ್ಸೇ ಬರುವುದಿಲ್ಲ. ಏಕೆಂದರೆ ನಾನು ಕಂಡಂತೆ ಕಾಡನ್ನು ಕಂಡಿಲ್ಲದ ಅನುಭವಿಸಿಲ್ಲದ ಮನಸ್ಸುಗಳಿಗೆ ನನ್ನ ಮನಸ್ಸಿನ ದುಗುಡವನ್ನು ನಿರ್ಜೀವ ಅಂಕಿ-ಸಂಖ್ಯೆಗಳ ವಿಶ್ಲೇಷಣೆಯ ಮುಖಾಂತರ ಹೇಳಿ ಹೇಗೆ ತಾನೆ ಪ್ರತಿಸ್ಪಂದನ ಉಂಟುಮಾಡುವುದು ಕಷ್ಟಸಾಧ್ಯ.[೩೮] ಎನ್ನುವ ತೇಜಸ್ವಿಯವರ ಮಾತುಗಳು ಇಲ್ಲಿಗೆ ಪ್ರಸ್ತುತವೆನಿಸುತ್ತವೆ.

ವರ್ತಮಾನದಲ್ಲಿ ಸಾಮಾನ್ಯನೂ ಕೂಡ ಪರಿಸರದ ಅಥವಾ ವಿಶ್ವಸಮಾಜದ ಪರಿಚಯಕ್ಕೆ ಮುಂದಾಗಬೇಕಾದ ಅಗತ್ಯವಿದೆ. ಪ್ರಕೃತಿ-ಪರಿಸರ ಪ್ರಾಣಿಗಳ ಬಗ್ಗೆ ವಸ್ತುನಿಷ್ಠ ಪ್ರೀತಿಯಿದ್ದರೆ ವಿಶ್ವಸಮಾಜ ತನ್ನಿಂದತಾನಾಗೇ ಸೃಷ್ಟಿಯಾಗುತ್ತದೆ. ಇದು ಇಂದಿನ ಜೀವನಶೈಲಿಯ ಬದಲಾವಣೆಯಿಂದ ಸಾಧ್ಯ! ಅಂದರೆ ಪರಿಸರ ಕಾಳಜಿಯಂತಹ ಸಾಮಾಜಿಕ ಜವಾಬ್ದಾರಿಗಳು ಕ್ರಾಂತಿಕಾರಿತನದ ಮಟ್ಟಿಗೆ ಸೀಮಿತವಾಗುಳಿಯದೆ ಕಾರ್ಯರೂಪದಲ್ಲಿ ಅಳವಟ್ಟಾಗ, ಸಂತೋಷ, ನೆಮ್ಮದಿ, ತೃಪ್ತಿ ದೊರೆತು ಸಾಮಾಜಿಕತೆ ಜೀವನ್ಮುಖಿಯಾಗಿ ಬೆಳೆಯುತ್ತದೆ.

ಬರಗಾಲದ ಬಿಸಿಗೆ ಬಯಲುಸೀಮೆ ಹಳ್ಳಿಗಳೆಲ್ಲಾ ನಲುಗಿಹೋಗಿದ್ದುವು. ಯಾವ ಕೊಳವೆಬಾವಿಗಳಲ್ಲೂ ನೀರಿರಲಿಲ್ಲ. ಅಲ್ಪಸಲ್ಪ ನೀರಿದ್ದ ಕೊಳವೆ ಬಾವಿಗಳ ಬಳಿ ಕೊಡ ಇಟ್ಟುಕೊಂಡು ಕುಳಿತ ಹೆಂಗಸರು ನೀರಿಗಾಗಿ ಜುಟ್ಟು ಹಿಡಿದು ಜಗಳವಾಡುತ್ತಿರುವ ದೃಶ್ಯ ಬಸ್ಸಿನಲ್ಲಿ ಸಾಗುವ ಪ್ರಯಾಣಿಕರಿಗೆ ಸರ್ವೇಸಾಮಾನ್ಯವಾಗಿ ಕಾಣುತ್ತಿತ್ತು. ಬಯಲು ಸೀಮೆಯಲ್ಲಿದ್ದ ಅಡಕೆ ಮತ್ತು ತೆಂಗಿನ ತೋಟಗಳಲ್ಲಿ ಬಹಳಷ್ಟು ಒಣಗಿ, ತೋಟ ಖಾಲಿ ಕಂಬಗಳ ಸಮೂಹದಂತೆ ಕಾಣುತ್ತಿತ್ತು. ಸಂಶೋಧನ ಕೇಂದ್ರದ ಸೈಂಟಿಸ್ಟ್, ಪ್ರೊಫೆಸರ್ ಮೂರ್ತಿ 'ಅನೇಕ ಶತಮಾನಗಳಿಂದ ಶೇಖರವಾಗಿದ್ದ ಅಂತರ್ಜಲವನ್ನೆಲ್ಲಾ ಸಿಕ್ಕಾಪಟ್ಟೆ ಗುಂಡಿ ಕೊರೆದು ಯದ್ವಾತದ್ವಾ ಉಪಯೋಗಿಸುದ್ದೇವೆ. ಅಂತರ್ಜಲಕ್ಕೆ ಆಗಿರುವ ಹಾನಿ ಒಂದೆರಡು ಮಳೆಗಾಲದಿಂದ ರಿಪೇರಿಯಾಗುತ್ತದೆ ಎಂದು ಖಂಡಿತಾ ತಿಳಿಯಬೇಡಿ' ಎಂದು ರೈತರಿಗೆ ಕಟುವಾಗಿಯೇ ಎಚ್ಚರಿಸಿದ್ದರು. ಇನ್ನೂರಡಿ ಮುನ್ನೂರಡಿ ಗುಂಡಿ ತೆಗೆಸಿ ಕೊಳವೆ ಇಳಿಸಿದ್ದ ರೈತರು ಸಹ ನಾಲ್ಕು ಬೊಗಸೆ ನೀರು ಎತ್ತುವುದರೊಳಗೇ ಬಾವಿ ಖಾಲಿಯಾಗಿದ್ದನ್ನು ನೋಡಿ ಹೌಹಾರಿದ್ದರು. ಆದರೆ ಬರದ ಬಿಸಿ ಕೇವಲ ಬಯಲುಸೀಮೆಗೆ ಮಾತ್ರ ಪರಿಮಿತವಾಗಿರಲಿಲ್ಲ. ನಿಧಾನವಾಗಿ ಮಲೆನಾಡಿನಲ್ಲೂ ಗುಡ್ಡದ ಕಣಿವೆಗಳ ದಟ್ಟ ಕಾಡಿನಿಂದ ಹರಿದು ಬರುತ್ತಿದ್ದ ಝರಿ, ತೊರೆ, ಹಳ್ಳಗಳ ನೀರು ಕಡಿಮೆಯಾಗಲು ಶುರುವಾಯ್ತು. ಕರ್ನಾಟಕದ ಎಲ್ಲಾ ಜೀವನದಿಗಳೂ ಹುಟ್ಟುವ ಇಲ್ಲಿ ನೀರಿನ ಒರತೆಗಳೆಲ್ಲಾ ಬತ್ತಿ ಜಲದ ಸೆಲೆ ಅಂತರ್ಧಾನವಾಗುತ್ತದೆ ಎಂದು ಯಾರೂ ಊಹಿಸಿರಲಿಲ್ಲ.[೩೭]

ಸುತ್ತಲಿನ ಕಲುಷಿತ ವಾತಾವರಣಕ್ಕೆ ಬಲಿಯಾಗದೆ ಹೊಸದಾರಿಗಳನ್ನು ಕಂಡುಕೊಳ್ಳುತ್ತಾ ಪ್ರಕೃತಿಯೊಡನೆ ಚೈತನ್ಯದಿಂದ ಬೆರೆತು ಅದಮ್ಯ ಉತ್ಸಾಹದಿಂದ ಸಾಗಬೇಕಾಗಿದೆ. ಈ ಪಯಣಕ್ಕೆ ಮಾನವರು ತಮ್ಮ ಅಸಮರ್ಪಕವಾದ ಜೀವನ ವಿನ್ಯಾಸದಿಂದ ಹೊರಬರಬೇಕಾಗಿದೆ. ಅಲ್ಲದೆ ವೈಚಾರಿಕ ಚಿಂತನೆಗಳೊಂದಿಗೆ, ಅಧಃಪತನದತ್ತ ಸಾಗುತ್ತಿರುವ ಜೀವನಕ್ರಮವನ್ನು ಬದಲಾಯಿಸಿಕೊಂಡು ವೈಜ್ಞಾನಿಕವಾದ ದೃಷ್ಟಿಕೋನದಿಂದ ಇಲ್ಲವೆ ಸಹಜ ಮಾನವೀಯತೆಯ

ದೃಷ್ಟಿಯಿಂದ ಪ್ರಕೃತಿಯನ್ನೂ-ಪರಿಸರವನ್ನೂ ಸಂವೇದನಾತ್ಮಕವಾಗಿ ಗ್ರಹಿಸಿಕೊಳ್ಳಬೇಕಾಗಿದೆ ಮತ್ತು ಅವುಗಳ ರಕ್ಷಣೆಯೊಂದಿಗೆ ತಮ್ಮನ್ನು ರಕ್ಷಿಸಿಕೊಳ್ಳುತ್ತಾ ಜೊತೆಜೊತೆಯಾಗಿ ಹೆಜ್ಜೆ ಹಾಕಬೇಕಾಗಿದೆ.

ಇನ್ನೊಂದು ಪ್ರಮುಖ ವಿಷಯವೆಂದರೆ ಯಾವಕಾರಣಕ್ಕೆ ಜೀವವೈವಿಧ್ಯವನ್ನು ಉಳಿಸಬೇಕು? ಪರಿಸರ ನಾಶವನ್ನು ತಡೆಗಟ್ಟಬೇಕು? ಎನ್ನುವ ಅಂಶಗಳು ಎಲ್ಲರಿಗೂ ಮನವರಿಕೆಯಾಗಿ ಕಾರ್ಯರೂಪದಲ್ಲಿ ಅಳವಟ್ಟಾಗ ಮಾತ್ರ ಸಂರಕ್ಷಣೆಯ ಎಲ್ಲಾ ಪ್ರಯತ್ನಗಳು ಅರ್ಥಪೂರ್ಣವಾಗಲು ಸಾಧ್ಯ. ಸ್ವರೂಪ, ನಿಗೂಢ ಮನುಷ್ಯರು, ಕರ್ವಾಲೋ, ಪರಿಸರದ ಕಥೆ, ಚಿದಂಬರ ರಹಸ್ಯ, ಮಾಯಾಲೋಕ ಇವೆಲ್ಲವೂ ಮನುಷ್ಯ ಮತ್ತು ಪ್ರಕೃತಿಯೆರೆಡರ ಸಂಬಂಧಗಳನ್ನು ಅನ್ವೇಷಿಸುತ್ತಾ, ಸಮಾಜದ ಸಂಪರ್ಕಕೊಂಡಿಯಾಗಿ ಬೆಳೆದು ನಿಲ್ಲುತ್ತವೆ.

**ಮೂರನೆಯದು ಸದಾ ಬದಲಾಗುವ, ನಾಶವಾಗುವ, ಮತ್ತೆ ಮರುಹುಟ್ಟಿಗೆ ಕಾರಣವಾಗುವ ಪ್ರಕೃತಿ;** ವಿಶ್ವರಚನೆಯಲ್ಲಿ ಸೃಷ್ಟಿಯ ಪಾತ್ರ ಅಗಾಧ. ಅದರಲ್ಲಿ ಅಡಗಿರುವ ನಿಗೂಢಗಳ ಶೋಧ ಮಾನವನ ಅರಿವಿಗೆ ಮೀರಿದ್ದು. ಪ್ರಜ್ಞಾಪೂರ್ವಕವಾಗಿ ಅದರ ಹಿಂದೆ ಬಿದ್ದು ಸೃಷ್ಟಿಯ ಅನಂತ ಸತ್ಯಗಳನ್ನು ಅರಿಯುವೆನೆಂಬ ಸಾಹಸಕ್ಕೆ ತೊಡಗಿಕೊಂಡರೂ ಉತ್ತರ ಶೂನ್ಯ! ಅನ್ವೇಷಣೆ ಅಪೂರ್ಣ. ಯಾಕೆಂದರೆ ಲೋಕಸೃಷ್ಟಿಯನ್ನು ಸಂಪೂರ್ಣ ಅರಿಯಲು ಸಾಧ್ಯವಿಲ್ಲ ಅವಕ್ಕೂ ತಮ್ಮದೇ ಆದ ಮಿತಿಗಳಿವೆ. ಅದನ್ನೂ ದಾಟ ಮುಂದುವರೆದಾತನಿಗೆ ಅಂತಿಮವಾದ ಜಯ ಲಭಿಸೀತು ಎನ್ನುವ ಮಾತೇ ಇಲ್ಲ! ಪ್ರತಿಯೊಂದನ್ನೂ ತನ್ನ ವಿಚಕ್ಷಣತೆಯಿಂದಲೇ ಅರ್ಥೈಸಿಕೊಳ್ಳಬಲ್ಲೆ ಎಂಬ ಅಹಂಭಾವವನ್ನು ನಿಧಾನವಾಗಿ ಕರಗಿಸಿ ಬಿಡುವಂತಹುದು ಚಿರ ನಿಗೂಢತೆ. ಇದನ್ನೇ ತೇಜಸ್ವಿ ಮಾತುಗಳಲ್ಲಿ ಹೇಳುವುದಾದರೆ

> ಹಾಗೇ ಆದರೂ ನಮ್ಮ ಪಾಲಿಗೆ ಭೂಮಿ ಹಾಳಾಗುತ್ತದೆಯೇ ಹೊರತು ಅದರ ಪಾಲಿಗಲ್ಲ. ಈಗಾಗಲೇ ಪ್ರಕೃತಿ ಎಷ್ಟೊಂದು ಪ್ರಯೋಗ ಮಾಡಿದೆಯಯ್ಯಾ. ಎಷ್ಟೊಂದು ತರತರದ ಪ್ರಾಣಿಗಳೂ ಸಸ್ಯ ಸಮೂಹ ಈ ಭೂಮಂಡಲದ ಮೇಲೆ ಆಗಿಹೋದವು. ನಿನಗೇ ತಿಳಿದಂತೆ ಒಂದು ಕಾಲಕ್ಕೆ ಜಲಚರಗಳು, ಆಮೇಲೆ ಸರೀಸೃಪಗಳು, ಮಹೋರಗಗಳು, ಸಸ್ತನಿಗಳು, ಒಂದೆರಡೇ ಪ್ರಯೋಗವೇನಯ್ಯಾ? ನಾವು ಇಲ್ಲಿ ಬದಕೋದಕ್ಕೆ ನಾಲಾಯಖ್ ಅಂತನ್ನಿಸಿದರೆ ನಾವೂ ಇಲ್ಲಿಂದ ನಿರ್ಗಮಿಸುತ್ತೀವಿ. ನಾಮಾವಶೇಷ ಆಗ್ತೀವಿ. ಆದರೆ, ನಿಧಾನವಾಗಿ ಪ್ರಕೃತಿ ಇನ್ನೊಂದು ತರದ ಪ್ರಯೋಗಕ್ಕೆ ಕೈ ಹಾಕ್ತದೆ. ಮತ್ತೆ ಭೂಮಂಡಲದ ಸ್ಮಶಾನದಿಂದ್ಲೇ ಇನ್ನೇನೋ ಒಂದು ಚೈತನ್ಯ ಚಿಮ್ಮುತ್ತೇ ಅಷ್ಟೇ.[೩೮]

ಇನ್ನೊಂದು ಅರ್ಥದಲ್ಲಿ ವ್ಯವಸ್ಥೆಯೆಂದರೆ ಕೇವಲ ಮಾನವನಿರ್ಮಿತವೇ? ಬ್ರಹ್ಮಾಂಡದ ಸೃಷ್ಟಿಯೊಳಗೆ ಮನುಷ್ಯ, ಮಾನವ ಸೃಷ್ಟಿಯೊಂದನ್ನು ಹೊರತುಪಡಿಸಿದರೆ ಮತ್ತೊಂದು ಜೀವಿಯನ್ನು ಸ್ವತಃ ಸೃಷ್ಟಿಸಲಾಗದವನು. ಅಂತಹ ವ್ಯಕ್ತಿ ವ್ಯವಸ್ಥೆಯೊಂದು ತನಗೆ ಮಾತ್ರ ಮೀಸಲು ಎಂಬ ತೀರ್ಮಾನಕ್ಕೆ ಹೇಗೆ ಬರುತ್ತಾನೆ? ಮನುಷ್ಯನಂತೆಯೇ ಸಮಕಾಲೀನವಾಗಿ ಬದುಕುತ್ತಿರುವ ಇತರ ಜೀವಿಗಳ ಅಸ್ತಿತ್ವದ ಸ್ಥಾನಮಾನಗಳ ಅರಿವಿರದೆ ಪ್ರಕೃತಿಯಲ್ಲಿನ ಸಹಜ ಪ್ರವೃತ್ತಿಯ ಶಕ್ತಿಯನ್ನು ಕಡೆಗಣಿಸುತ್ತಿದ್ದಾನೆ. ಪ್ರತಿನಿತ್ಯವೂ ಮನುಷ್ಯ ಮತ್ತು ಪ್ರಕೃತಿ ಇವೆರಡರ ಸಂಘರ್ಷದಲ್ಲಿ ನಷ್ಟವನ್ನು ಅನುಭವಿಸುತ್ತಿರುವುದು ಮಾನವ ಸಂಕುಲವೇ ಹೊರತು ಜೀವಸಂಕುಲವಲ್ಲ. ಏಕೆಂದರೆ ವಿನಾಶದ ಅಂಚಿಗೆ ಸರಿಯುತ್ತಿರುವ ಜೀವವೈವಿಧ್ಯವು ಮನುಷ್ಯನ ನಾಗರಿಕ ಬದುಕಿನ ಹಂಗಿಲ್ಲದೆ, ಯಾವ ಸೋಂಕಿಲ್ಲದೆ ಸ್ವಯಂಪೂರ್ಣ ಜಗತ್ತನ್ನು ನಿರ್ಮಿಸಿಕೊಂಡು ಬಹುದೂರ ಉಳಿದಿವೆ.

ನಾನು ಕಾಡು ಕೊಂಡ ನಂತರದ ಎಷ್ಟೋ ಅನುಭವಗಳನ್ನು ಗೆಳೆಯರೊಡನೆ ಹರಟುತ್ತಾ ಕ್ವಚಿತ್ತಾಗಿ ಹೇಳಿದ್ದೇನೆ. ಆದರೆ ಅವುಗಳನ್ನೆಲ್ಲ ಬರೆಯಬೇಕೆಂದು ಈವರೆಗೂ ನನಗೆ ಅನಿಸಿರಲಿಲ್ಲ. ಏಕೆಂದರೆ, ಅವು ಯಾವುವೂ ಉಲ್ಲೇಖಾರ್ಹವಾದ ಅಸಾಧಾರಣ ಅನುಭವಗಳಾಗಿರಲಿಲ್ಲ. ಆದರೆ ಪರಿಸರದ ಬಗ್ಗೆ ಆಸ್ಥೆ, ಕುತೂಹಲಗಳು ಮೂಡಿದ, ನಾನೊಬ್ಬ ಪರಿಸರವಾದಿಯಾಗಿ ರೂಪುಗೊಂಡ ಹಾದಿ ಇದು. ಪರಿಸರ ಸಂರಕ್ಷಣೆಯ ಬಗ್ಗೆ ವೈಜ್ಞಾನಿಕ ಪಾಠಗಳಷ್ಟೇ ಈ ನಡೆದು ಬಂದ ದಾರಿಯನ್ನು ತಿಳಿಯುವುದು ಅಗತ್ಯವೆನಿಸುತ್ತದೆ. ನಾನು ಹೇಳಿರುವ ಈ ಚಿಕ್ಕ ಚಿಕ್ಕ ಘಟನೆಗಳಿಗೂ, ಪರಿಸರವಾದಕ್ಕೂ ಯಾವುದೇ ನೇರ ಸಂಬಂಧವನ್ನು ತೋರಿಸಲಾರೆ. ಆದರೆ ಇದು ನಾನು ನಡೆದ ದಾರಿ ಎಂದು ಮಾತ್ರ ಹೇಳಬಲ್ಲೆ.[೬೯] ಇದು ತೇಜಸ್ವಿ ವ್ಯಕ್ತಿತ್ವದ ಅನನ್ಯತೆಯ ಸೂಚಕವಾಗಿದೆ.

ಆಧುನಿಕ ಸಂದರ್ಭದಲ್ಲಿ ಪರಿಸರವನ್ನು ಬೇರೆ ಬೇರೆ ರೀತಿಯಲ್ಲಿ ಚರ್ಚೆಗೆ ಒಳಪಡಿಸುತ್ತಿರುವುದು ಸಾಮಾನ್ಯವಾದ ಸಂಗತಿಯಾಗಿ ಬಿಟ್ಟಿದೆ. ನಾಶವಾಗುತ್ತಿರುವ ಅರಣ್ಯ, ಸ್ವಾರ್ಥದ ಹೆಬ್ಬಯಕೆಗೆ ಕಣ್ಮರೆಯಾದ ಜೀವ ವೈವಿಧ್ಯದ ಮೂಲಗಳು........ಇವು ಮತ್ತೆ ಮತ್ತೆ ಸಂವಾದಕ್ಕೆ ಗುರಿಯಾಗಿರುವ ಅಂಶಗಳು. ಪರಿಸರದ ಬಗೆಗಿನ ಕಾಳಜಿ ಪ್ರತಿಭಟನೆಯ ಸ್ವರೂಪ ಪಡೆದುಕೊಂಡು, ಹತ್ತಾರು ದಶಕಗಳಿಂದ ಅದು ಹಲವು ತಿರುವುಗಳನ್ನು ಪಡೆಯುತ್ತಲೇ ಬಂದಿದೆ. ಪರಿಸರ ಸಂಬಂಧಿತ ಅರ್ಥ-ವ್ಯಾಖ್ಯೆ ಯಾವುದೇ ರೀತಿಯಲ್ಲೂ ಪರಿಸರವನ್ನು ಹಿಂದೆ ಇದ್ದ ಸ್ಥಿತಿಯಲ್ಲೇ ಉಳಿಸಿಕೊಳ್ಳಲು ಸಾಧ್ಯವಾಗದೆ ಸೋತಿರುವುದು ಖೇದದ ಸಂಗತಿ. ಸೋಲಿಗೆ ಕಾರಣಗಳೇನೆ ಇದ್ದರೂ ಅದನ್ನು ಹೊರತುಪಡಿಸಿ ಪರಿಸರದ ನೆಲೆ-ಬೆಲೆಗಳನ್ನು ಸೂಕ್ಷ್ಮ ಚಿಂತನೆಗೆ ಒಳಪಡಿಸಿದ್ದು ತೇಜಸ್ವಿ ಕೃತಿಗಳಲ್ಲಿ ಗಮನ ಗೋಚರವಾಗುತ್ತದೆ.

ನಾಗರಿಕತೆಗಳ ವಿಕಾಸ ಪಥದಲ್ಲಿ ವಸಾಹತುಶಾಹಿ, ಕೈಗಾರಿಕಾ ಕ್ರಾಂತಿ ಇತ್ಯಾದಿಗಳೆಲ್ಲ ಹೇಗೆ ನಾಗರಿಕತೆಗಳ ವಿಕಾಸದ ಅನಿವಾರ್ಯ ಹಂತಗಳಾಗಿ ಉದ್ಭವಿಸಿದುವೋ ಹಾಗೇ ಇವತ್ತು ಜಾಗತೀಕರಣ ಸಂಭವಿಸುತ್ತಾ ಇದೆ. ಇಪ್ಪತ್ತೊಂದನೇ ಶತಮಾನದಲ್ಲಿ ಜಾಗತೀಕರಣದತ್ತ ಒತ್ತಡ ಸೃಷ್ಟಿ ಮಾಡುತ್ತಿರುವ ಎರಡು ಶಕ್ತಿಗಳಲ್ಲಿ ಮೊದಲನೆಯದು ಇಕಾಲಜಿ. ನಾವು ರಾಜ್ಯ, ದೇಶ, ಖಂಡಗಳೆಂದು ನಿರ್ಮಿಸಿಕೊಂಡಿರುವ ಎಲ್ಲೆಕಟ್ಟುಗಳು ನಿಜಕ್ಕೂ ತೀರಾ ಕೃತಕವಾದುದೆಂದು ಇಕಾಲಜಿ ತೋರಿಸಿಕೊಡುತ್ತಿದೆ. ಪ್ಲೇಟೋ ಹೇಳಿದ 'ಸುಖೀರಾಜ್ಯ' (ವೆಲ್‌ಫೇರ್ ಸ್ಟೇಟ್) ಕಲ್ಪನೆಯೇ ಹುಸಿಯೆಂದು ಇಕಾಲಜಿ ತಿಳಿಸುತ್ತದೆ. ಮನುಷ್ಯನನ್ನು ಒಳಗೊಂಡಂತೆ ಪೃಥ್ವಿಯ ಮೇಲಿರುವ ಎಲ್ಲಾ ಜೀವಿಸಂಕುಲಗಳು ನಾವು ತಿಳಿದಿದ್ದಕ್ಕಿಂತ ಆಳವಾದ ಅರ್ಥದಲ್ಲಿ ಪರಸ್ಪರಾವಲಂಬಿಗಳಾಗಿರುವುದರಿಂದ ವೆಲ್‌ಫೇರ್ ವರ್ಲ್ಡ್ ಒಳಗೆ ಮಾತ್ರ 'ವೆಲ್‌ಫೇರ್ ಸ್ಟೇಟ್' ಇರಲು ಸಾಧ್ಯವೇ ಹೊರತು ಸ್ವತಂತ್ರವಾಗಿ ಪ್ರತ್ಯೇಕವಾಗಿ ಇರಲು ಸಾಧ್ಯವಿಲ್ಲ.[೭೦]

ಹೊಸವಿಚಾರಗಳಲ್ಲಿ ವ್ಯಕ್ತವಾಗಿರುವ ಈ ಅಭಿಪ್ರಾಯ ತೇಜಸ್ವಿ ಜೀವನಾನುಭವದ ಪ್ರಮುಖ ಅಂಶವಾಗಿದೆ.

**ನಾಲ್ಕನೆಯದು-ಕಾಲದ ಅನಂತತೆ ಶಾಶ್ವತತೆಯನ್ನು ಪ್ರತಿನಿಧಿಸುವ ಪ್ರಕೃತಿ;** ಪ್ರಕೃತಿ-ಮಾನವ ಸಂಘರ್ಷವು ಅನಂತಸೃಷ್ಟಿಯಲ್ಲಿ ಮಾನವ ಸೃಷ್ಟಿಯಾದಂದಿನಿಂದಲೇ ಆರಂಭಗೊಂಡಿತು. ನಗರೀಕರಣ, ಆಧುನೀಕರಣದ ಬೆನ್ನಹಿಡಿದು ಹೊರಟನಂತರವಂತೂ ಪ್ರಕೃತಿ-ಮಾನವರಿಗೂ; ಮಾನವರು-ಪ್ರಕೃತಿಗೂ ಸವಾಲನ್ನು ಒಡ್ಡುತ್ತಾ ಸಂಘರ್ಷವನ್ನು ನಿರಂತಗೊಳಿಸುತ್ತಲೇ ಇವೆ. ಪ್ರಕೃತಿ-ಮಾನವ ಸಂಘರ್ಷಕ್ಕೆ ಉದಾಹರಣೆಯಾಗಿ ಕಾಡು ಕ್ರೌರ್ಯದಲ್ಲಿನ ಧಡೂತಿ ಒಂಟಿಗ ಹಂದಿಯನ್ನು ಸ್ವೀಕರಿಸಬಹುದು. ಕಾಡನ್ನು ಕಡಿದು ನಾಶಮಾಡಿ ಮನುಷ್ಯರು ತಮ್ಮ ಹೊಟ್ಟೆಪಾಡಿಗಾಗಿ ಏನನ್ನೋ ಮಾಡಿಕೊಳ್ಳುತ್ತಾರೆ. ಅದರಲ್ಲಿ ಯಾರಿಗೂ, ತಪ್ಪೆನ್ನಿಸುವುದಿಲ್ಲ. ಆದರೆ ಕಾಡು ಪ್ರಾಣಿಗಳು ಮಾನವನಿರ್ಮಿತ ಪ್ರದೇಶಗಳಿಗೆ ತಮ್ಮ ಹೊಟ್ಟೆಪಾಡಿಗಾಗಿ ಬಂದರೆ ಆಗ ಅದು

ಮಾನವದೃಷ್ಟಿಯಲ್ಲಿ ತಪ್ಪು. ಇದು ಪ್ರಕೃತಿಯ ದೃಷ್ಟಿಯಲ್ಲಿ ತಪ್ಪಲ್ಲದಿರಬಹುದು. ಏಕೆಂದರೆ ಪ್ರಕೃತಿಯು ತನ್ನ ಸಮತೋಲನಕ್ಕೆಂದು ಇಂತಹ ಕ್ರಿಯೆಗಳನ್ನು ಜರುಗಿಸಬಹುದು. ಮುಯ್ಯಿಗೆ ಮುಯ್ಯಿಯೆಂಬಂತೆ. ಏಕೆಂದರೆ ಕಾಡು ಪ್ರಾಣಿಗಳ ತುತ್ತು ಕಸಿದುದ್ದಕ್ಕೆ ಪ್ರತಿಯಾಗಿ ಮಾನವರ ತುತ್ತನ್ನು ಕಾಡು ಪ್ರಾಣಿಗಳು ಕಸಿದುಕೊಳ್ಳುತ್ತವೆ ಎಂಬುದು ನೈಸರ್ಗಿಕ ಸತ್ಯ. ಇವು ಮಾಯಾಲೋಕ, ಪರಿಸರಕಥೆ ಕರ್ವಾಲೋಗಳಲ್ಲಿ ಉದಾಹೃತವಾಗಿವೆ. ಇಂತಹ ಸಂಘರ್ಷವು ಕೇವಲ ಮಾನಸಿಕ–ಭೌತಿಕ ಸಂಘರ್ಷವಷ್ಟೇ ಅಲ್ಲದೇ ಜೀವ–ಜೀವಗಳ; ಪ್ರಾಣ–ಪ್ರಾಣಗಳ ಸಂಘರ್ಷವೂ ಆಗಲು ಸಾಧ್ಯ. ಈ ಸಂಘರ್ಷದ ರೂಪವಾದ ಕಾಡು ಜೀವಸೆಲೆಯಾಗದೆ ಕ್ರೌರ್ಯವಾಗಿ ಕಾಣುವುದು. ಸೋಮು ಆ ಕಾಡಿನಲ್ಲಿ ಕ್ರೌರ್ಯ ಮಿಳಿತವಾಗಿದೆ ಎಂದು ಹೇಳುವುದು.

> ಜನನ ಮರಣ ಸುಖದುಃಖಗಳ ವೈಪರೀತ್ಯಮಯವಾದ ಮಾನವನಿಗೆ ಈ ಕಾನನದ ಚಿರ ಯವ್ವನವೇ ಕಠೋರವಾಗಿ ತೋರುತ್ತದೆ. ...........ಕಾಡು ಕ್ರೂರವಾದದ್ದು ಇವರ ಮೌಢ್ಯದಿಂದಲೇ ಇವರು ಕ್ರೂರವಾದುದು ಇವರ ಮೌಢ್ಯದಿಂದಲೇ........ ಮರದ ಮರ್ಮರ, ಬಿದಿರಿನ ಕರಕರ, ಗೂಬೆಯ ಗುಬ್ಬಳಿಸುವಿಕೆ ಎಲ್ಲ ಅರ್ಥವತ್ತಾಗಿ ಕಾಡಿನ ಅಶರೀರ ಕ್ರೌರ್ಯವಾಗಿ ಕಾಣುತ್ತಿತ್ತು. ಮನೆಯ ಗೋಡೆಯಲ್ಲೊಂದು ಹುತ್ತ ಬೆಳೆದರೆ...... ಆ ಒರಲೆ ಹುತ್ತವನ್ನು ಕಿತ್ತು ಬಿಸುಡುವಂತೆಯೂ ಇರಲಿಲ್ಲ. ನಿಶ್ಚಿಂತೆಯಿಂದ ಬದುಕುವಂತೆಯೂ ಇರಲಿಲ್ಲ. ಗಾಳಿ, ಮಳೆ, ಆ ಪಾರ್ಶ್ವವನ್ನೇ ಶಿಥಿಲಗೊಳಿಸಿ ತಾನಾಗೇ ಬೀಳಿಸುವವರೆಗೂ ಕಾಯಬೇಕಿತ್ತು. ಭೋರ್ಗರೆಯುವ ಮಳೆ, ಬೀಸುವ ಗಾಳಿ, ಉಬ್ಬಿ ಕೊಬ್ಬುವ ಹಳ್ಳ, ಕಾಡಿನಿಂದ ಇದ್ದಕ್ಕಿದ್ದಂತೆ ಬಂದು ದನಗಳನ್ನು ಕಬಳಿಸುವ ಹುಲಿ, ರಾತ್ರೋರಾತ್ರಿ ಗದ್ದೆಗೆ ನುಗ್ಗಿ ಬತ್ತವನ್ನು ಬುಡಮೇಲು ಮಾಡುವ ಹಂದಿ, ಒಂದೇ ಎರಡೇ ಕ್ರೌರ್ಯಕ್ಕೆ ಕ್ರೌರ್ಯವೇ ಕಾಡು, ಪರ್ವತಾದ್ರಿಗಳ ಕಬಂಧ ಹಸ್ತವನ್ನು ಚಾಚಿತ್ತು.[೪೧]

ಹೀಗೆ ಪ್ರಕೃತಿ ಮತ್ತು ಮಾನವರ ನಡುವೆ ನಿರಂತರ ಸಂಘರ್ಷ ನಡೆಯುತ್ತಲೇ ಇದೆ. ಕಾಡು ಮತ್ತು ಕ್ರೌರ್ಯ ಕಾದಂಬರಿಯ ಶೀರ್ಷಿಕೆಯೇ ಪ್ರಕೃತಿಯ ಅಗಾಧತೆಯನ್ನು ಸಾಮಾಜಿಕ ವ್ಯವಸ್ಥೆಯೊಳಗೇ ಗುಪ್ತಗಾಮಿನಿಯಾಗಿರುವ ಕ್ರೌರ್ಯದ ವಿವಿಧ ಗ್ರಹಿಕೆಗಳನ್ನು ಪ್ರಚುರಪಡಿಸುತ್ತದೆ.

> ಇಡೀ ಜೀವರಾಶಿ ಎಲ್ಲಾ ಸ್ಮಶಾನದಿಂದ್ಲೆ ಉದ್ಭವಿಸಿದ್ದು. ಕುದಿಯೋ ಭೂಗೋಲದ ಬೆಂಕಿ ಉಂಡೆಯಿಂದ. ಈಗ ಲಂಟಾನ ಬಂದಿದೆಯಲ್ಲಾ ಅದು ಮಣ್ಣು ತೊಳೆದು ಹೋಗದ ಹಾಗೆ ಅದರ ಕಸ ಕಡ್ಡಿಗಳು, ಮಣ್ಣಿನ ಜೈವಿಕ ವಸ್ತುಗಳು ಸೂರ್ಯನ ಬಿಸಿಲಿನಿಂದ ಸುಟ್ಟು ಹೋಗದ ಹಾಗೆ ನೋಡಿಕೊಳ್ತವೆ. ಅದರಡಿಯಿಂದಲೇ ಹೊನ್ನೆ ತೇಗ ನೇರಿಳೆ ಆಲ ಧೂಪ ಎಲ್ಲಾ ಮೊಳಕೆ ಒಡೆದು ಲಂಟಾನದ ಮುಳ್ಳಿನ ರಕ್ಷೆಯಲ್ಲಿ ಮೆಲ್ಲಗೆ ಅದರ ಮೇಲೆ ಪುಟಿಯುತ್ತವೆ. ಇವು ಮೇಲೆ ಬಂದು ಕೊಂಬೆಗಳಾಗಿ ಛತ್ರಿತರ ಬಿಚ್ಚಿಕೊಳ್ಳುತ್ತಲೂ ಕಾಡಿನ ನೆರಳು ಕೂಡಲಾರಂಭಿಸಿ ಲಂಟಾನ ನಶಿಸೋದಕ್ಕೆ ಆರಂಭವಾಗುತ್ತೆ. ಕೊನೆಕೊನೆಗೆ ಕಾಡಿಗೆ ಜಾಗ ಬಿಟ್ಟು ಲಂಟಾನ ವಿದಾಯ ಹೇಳುತ್ತೆ. ಆಮೇಲೆ ಆ ನೆರಳಲ್ಲಿ ಬರುವ ಗಿಡಗಳೇ ಬೇರೆ. ತರಗೆಲೆಗಳ ದಟ್ಟ ರಾಶಿಯಲ್ಲಿ ರಕ್ಷಣೆಗೆ ತವಕಪಡ್ತಿರೋ ಹಾಗೇನೇ ಅನೇಕ ಅದೃಶ್ಯ ಶಕ್ತಿಗಳೂ ತವಕದಿಂದ ಕೆಲಸ ಮಾಡ್ತಿವೆ.[೪೨]

ಪ್ರಕೃತಿ ಮನುಷ್ಯರ ಎಷ್ಟೋ ಹೊಡೆತಗಳನ್ನು ವಿನಾಶಕಾರಿ ಸಂಚನ್ನು ಸಹಿಸಿಕೊಂಡು ಪುನರ್ ಸ್ಥಾಪಿತವಾಗಿ ಸಮತೋಲನವನ್ನು ಕಾಯ್ದುಕೊಂಡುಬಿಡುತ್ತದೆ.

ಲಿಂಗಬಂದ, ಗುಡುಗು ಹೇಳಿದ್ದೇನು? ನಿಗೂಢಮನುಷ್ಯರು, ಕಿರುಗೂರಿನ ಗಯ್ಯಾಳಿಗಳು, ಅವನತಿ, ಕರ್ವಾಲೊ, ಪರಿಸರದ ಕಥೆ, ಜುಗಾರಿಕ್ರಾಸ್, ಮಾಯಾಲೋಕ, ಕಾಡು ಮತ್ತು ಕ್ರೌರ್ಯ ಇಲ್ಲೆಲ್ಲಾ ಮಾನವ ಬದುಕಿನ ಅವಿಭಾಜ್ಯ ಅಂಗವಾಗಿ ಬಿಟ್ಟಿರುವ ನಿಸರ್ಗ ಮನುಷ್ಯ ಪ್ರಕೃತಿಯಂತೇ ನಿಗೂಢವಾಗಿ ಕೌತುಕತೆಯಲ್ಲೇ ಕೊನೆಗೊಳ್ಳುತ್ತದೆ. ಕಿರುಗೂರಿನ ಗಯ್ಯಾಳಿಗಳು–ಮೂರುದಿನ

ನಿರಂತರವಾಗಿ ಬೀಸಿದ ಬಿರುಗಾಳಿ, ಮಳೆ, ಗುಡುಗು-ಸಿಡಿಲುಗಳಿಂದಾಗಿ ಬೃಹದಾಕಾರಾದ ಹಲಸಿನ ಮರ ಬಿದ್ದು ಸೀಗೇಗೌಡರ ಮನೆಯ ಒಂದು ಪಾರ್ಶ್ವವೇ ಬೀಳುವ ಹಂತಕ್ಕೆ ಹೋಗುತ್ತದೆ. ಲಿಂಗಬಂದ, ನಿಗೂಢಮನುಷ್ಯರು; ಅಪಾಯಕಾರಿಯಾಗಿ ನಿಂತ ಉಗ್ರ ಗಿರಿಯಿಂದ ಕಲ್ಲುಬಂಡೆ ಹಾಗೂ ನೆಲಪಾತವಾಗಿ ಮೂರುನಾಲ್ಕು ಮನೆಗಳು ನಿರ್ನಾಮವಾಗುವುದು. ದೂರ್ಜಪರ್ಭಗಳ ಮಗು ಮಣ್ಣಿನಡಿ ಸಿಕ್ಕಿಬೀಳುವುದು, ಆ ಪಾಳು ರಾಸಿಯೊಳಗೆ ಸಿಕ್ಕಿ ಸತ್ತವರಿಗೆ ಅದೇ ಸಮಾಧಿಯಂತೆ, ಎಣ್ಣೆ ಹರಿದು ಭೂಕಂಪ, ಮಳೆ-ಮೋಡ, ಜುಗಾರಿ ಕ್ರಾಸಿನಲ್ಲಿನ ದೋಣಿಹೊಳೆ, ಕರ್ವಾಲೋದ ಹಾರುವ ಓತಿ, ಚಿದಂಬರ ರಹಸ್ಯದ ಕಾಡ್ಗಿಚ್ಚು, ಮಾಯಾಲೋಕದ ಕತ್ತಲಗಿರಿ, ಜೌಗು, ಅತಿವೃಷ್ಟಿ, ಅನಾವೃಷ್ಟಿ ಈ ಅಂಶಗಳು ತೇಜಸ್ವಿ ಕಾದಂಬರಿಗಳಲ್ಲಿ ಮಹತ್ವದ ಪಾತ್ರವನ್ನು ನಿಭಾಯಿಸಿವೆ. ಇಂತಹ ಪ್ರಕೃತಿ ಕೋಪದ ಹಿನ್ನೆಲೆಯಲ್ಲಿ ವರ್ಣಿತವಾಗುವ ಕಥೆಗಳು ಮನುಷ್ಯ ಮತ್ತು ಪರಿಸರದ ನಡುವಿನ ಹೋರಾಟದ ಪ್ರತೀಕಗಳಾಗಿವೆ.

ಸ್ವರೂಪದ ಶ್ರೀನಿವಾಸ ಗ್ರಾಮಾಭಿಮುಖಿಯಾಗಿ ಹೊರಟು ಅಂಗಡಿ ಗ್ರಾಮದ ಗವಿಗುಡ್ಡಕ್ಕೆ ಬಂದು ಯಾವೆಲ್ಲ ಸಿದ್ಧಾಂತಗಳು, ಆದರ್ಶಗಳು, ಜ್ಞಾನ, ಸಮಾಜವಾದ ಎಂದೆಲ್ಲಾ ಹೇರಿಕೊಂಡು ಜೀವನದ ಎಲ್ಲಾ ಸಂಗತಿಗಳನ್ನು ಒಂದೇ ಕೇಂದ್ರಕ್ಕೆ ಬಂಧಿಸಿಬಿಡುತ್ತೇನೆಂಬ ನಿಲುವಿನಲ್ಲಿ ಉನ್ಮತ್ತನಾಗುತ್ತಾನೆ. ಅದೆಲ್ಲಾ ತಲೆಕೆಳಗಾಗಿ ತನ್ನ ಪ್ರಯತ್ನಗಳೆಲ್ಲಾ ವ್ಯರ್ಥವೆನಿಸಿದಾಗ ಆತನ ಸ್ವರೂಪವೇ ಬದಲಾಗಿಬಿಡುತ್ತದೆ.

ಪ್ರಕೃತಿಯ ಅವತಾರಗಳಿಗೆ ಸಿಕ್ಕಿ ನಲುಗುವ ಮನುಷ್ಯ ಚಿಂತಿಸುವ ಕಾರ್ಯವನ್ನು ಬಿಟ್ಟು ಪರಿಹಾರವನ್ನು ಕಂಡುಕೊಳ್ಳಲು ಸಾಧ್ಯವಾಗದೆ ಪ್ರಕೃತಿಯು ನಿರ್ಮಿಸಿದ ಚಕ್ರವ್ಯೂಹದಲ್ಲಿ ಸಿಲುಕಿಕೊಂಡು ಹೊರಬರಲಾರದೆ ಪರದಾಡುವ ಸ್ಥಿತಿ ನಿರಂತರವಾಗಿರುತ್ತದೆ. ನಿಗೂಢ ಮನುಷ್ಯರು-ಉಗ್ರಗಿರಿಯ ಕುಸಿತದಿಂದ ಆತಂಕ ಭಯ ತಲ್ಲಣಗಳಿಗೆ ಒಳಗಾಗುವ ಜಗನ್ನಾಥ, ಗೋಪಾಲಯ್ಯ, ರಂಗಪ್ಪ, ದೋಣಿಹೊಳೆಗುಂಟ ಸಾಗಿ ಮೀನುಶಿಕಾರಿಯಲ್ಲಿ ತೊಡಗುವ ಸುರೇಶ, ಮಾಯಾಲೋಕದ ಅಣ್ಣಪ್ಪಣ್ಣ ಈ ಎಲ್ಲಾ ಪಾತ್ರಗಳು ಪ್ರಕೃತಿ ವೈಚಿತ್ರ್ಯದ ಹಿನ್ನೆಲೆಯಲ್ಲಿ ತಮ್ಮನ್ನು ಕಂಡುಕೊಳ್ಳುವ ಕಾಯಕದಲ್ಲಿ ತೊಡಗುತ್ತವೆ. ಆದರೆ ಅದಕ್ಕಿಂತಲೂ ಹೆಚ್ಚಿನ ಅನುಭವಕ್ಕೆ ಈಡಾಗಿ ಯಾವುದೂ ಅರ್ಥವಾಗದ ಸ್ಥಿತಿ ಮತ್ತು ತಮ್ಮ ಅಸ್ತಿತ್ವದ ನಿಗೂಢತೆಯ ಜೊತೆಗೆ ಪ್ರಕೃತಿಯನ್ನು ಅರಿಯಲಾಗದ ಅಸಹಾಯಕತೆಯ ಮೂಸೆ ಇವುಗಳಲ್ಲಿ ಮನುಷ್ಯರ ಪ್ರಯತ್ನ ನಿರರ್ಥಕವಾಗಿ ಬಿಡುತ್ತದೆ. ತಮ್ಮನ್ನೇ ಅರ್ಥೈಸಿಕೊಳ್ಳಲಾಗದ ಮನುಷ್ಯರು, ಸಾಮಾಜಿಕ ಪರಿಸರವನ್ನಾಗಲಿ, ನೈಸರ್ಗಿಕ ಪರಿಸರವನ್ನಾಗಲೀ ಅರ್ಥೈಸಿಕೊಳ್ಳುವುದು ಸುಲಭ ಸಾಧ್ಯವೇ? ಅದು ಮರೀಚಿಕೆಯೇ ಸರಿ! ವ್ಯಕ್ತಿತ್ವದ ಸೋಲನ್ನು ಒಪ್ಪಿಕೊಂಡ ವ್ಯಕ್ತಿ ಸತ್ಯಾನ್ವೇಷಣೆಯ ಶೋಧಕನಾಗಬೇಕಾಗುತ್ತದೆ. ಸಾಮಾಜಿಕ ಜೀವನದ ಪಲ್ಲಟಕ್ಕೆ; ಜೀವನದ ಹಲವಾರು ರಹಸ್ಯಗಳಿಗೆ ಉತ್ತರವನ್ನು ಕಂಡುಕೊಳ್ಳುವ ನಿಟ್ಟಿನಲ್ಲಿ ಈ ಅಂಶಗಳು ಪ್ರಧಾನವಾಗಿವೆ. ಪ್ರಕೃತಿ ಮತ್ತೆ ಮತ್ತೆ ಅನುರಣನೆಗೊಳ್ಳುತ್ತಾ ಭಿನ್ನ ಭಿನ್ನ ಆಯಾಮಗಳತ್ತ ಚಲಿಸಿ ಶೋಧನೆಗೆ ಅನುವುಮಾಡಿಕೊಡುತ್ತದೆ. ಅಂತೆಯೇ ವ್ಯಕ್ತಿ ಮತ್ತು ಪರಿಸರದ ಮಧ್ಯದ ಅಮೂರ್ತವಾದ ಸಂಬಂಧ ಮುಂದುವರೆಯುತ್ತದೆ.

ಪೂರ್ಣಚಂದ್ರ ತೇಜಸ್ವಿ ಕಥನಗಳಲ್ಲಿನ ಕಳೆಗಟ್ಟಿದ ಪ್ರಕೃತಿ-ಪ್ರಾಕೃತಿಕ ಕಳಕಳಿ, ಸಕಲಚರಾಚರಗಳಂತೆ ಮನುಷ್ಯನ ಚೈತನ್ಯಕ್ಕೆ ನಿರಂತರ ಸವಾಲನ್ನು ಒಡ್ಡುತ್ತಾ, ಉತ್ಸಾಹ ಬತ್ತದಂತೆ ಹೊಸತನದಿಂದ ಕಂಗೊಳಿಸುವುದನ್ನು ಕಂಡು; ತನ್ನನ್ನು ಬದಲಿಸಿಕೊಳ್ಳುವ ಅವಶ್ಯಕತೆ ಇದೆ. ಇದೇ ಮಾನವನ ನಿಜವಾದ ಸ್ಥಿತ್ಯಂತರ. ಜಡತ್ವದಿಂದ-ಉತ್ಸಾಹಕ್ಕೆ, ಉತ್ಸಾಹದಿಂದ-ಚೈತನ್ಯಕ್ಕೆ, ಚೈತನ್ಯದಿಂದ-ಗೆಲುವಿಗೆ, ಗೆಲುವಿನಿಂದ_ಸಾಧನೆಗೆ, ಸಾಧನೆಯಿಂದ-ಮುಕ್ತಿಗೆ, ಮುಕ್ತಿಯಿಂದ-ಪುನರ್‌ಸೃಷ್ಟಿಗೆ............. ನಿತ್ಯನಿರಂತರ ಚಲನೆ.

## ೩.೨.೨.೨: ವಿಜ್ಞಾನ ಮತ್ತುಮೌಢ್ಯ ಸಂಘರ್ಷ

**ವಿಜ್ಞಾನ:** ಪ್ರಕ್ರಿಯೆಗಳನ್ನು ಅಭ್ಯಸಿಸಿ ಅರ್ಥಗಳನ್ನು ಕಂಡುಕೊಂಡು ವಿಶ್ಲೇಷಣೆಯ ಮೂಲಕ ಸತ್ಯಾನ್ವೇಷಣೆಯಲ್ಲಿ ತೊಡಗುವುದು. **ಸೈನ್ಸ್** ಎಂಬ ಇಂಗ್ಲಿಷ್ ಪದಕ್ಕೆ ಸಂವಾದಿಯಾಗಿ ಕನ್ನಡದಲ್ಲಿ ವಿಜ್ಞಾನ ಎಂಬ ಪದ ಬಳಕೆಯಾಗುತ್ತಿದ್ದರೂ, ತೇಜಸ್ವಿ ಕಥನಗಳಲ್ಲಿ ವಿಸ್ಮಯಗಳ ಆಗರವಾಗಿ ಮಾತ್ರವಲ್ಲದೆ ಇವೆಲ್ಲಾ ಮನುಷ್ಯ ಪ್ರಜ್ಞೆಯ ಭಾಗವಾಗಿ ತಿಳಿವಳಿಕೆಯತ್ತ ಸರಿಯುವುದಕ್ಕೆ ಬೇಕಾದ ಜ್ಞಾನಮೂಲದ ಅವಸ್ಥೆಗಳು ಎಂಬರ್ಥದಲ್ಲಿ ಮೈದಳೆದಿವೆ. ನಿಸರ್ಗದಂತೆ ವಿಜ್ಞಾನವು ನಿರ್ಭಾವುಕ ಮತ್ತು ನಿಷ್ಪಕ್ಷಪಾತಿ, ಅರಿವನ್ನು ಮೂಡಿಸುದರ ಮೂಲಕ ವಿವೇಕಯುತವಾಗಿ ನಡೆದುಕೊಳ್ಳುವುದಕ್ಕೆ ಕಲಿಸುತ್ತದೆ. ಪ್ರಕ್ರಿಯೆಗಳನ್ನು ಅಭ್ಯಸಿಸಿ ಅರ್ಥವನ್ನು ನಿರ್ಮಿಸುವುದು ವೈಜ್ಞಾನಿಕ ವಿಚಾರವಾಗಿದೆ. ಈ ವೈಚಾರಿಕತೆಯು ಅಸ್ಪಷ್ಟವಾದುದನ್ನು ಸ್ಪಷ್ಟಗೊಳಿಸುವ ಮೂಲಕ ಚಿಂತನೆಯನ್ನು ಹರಿತಗೊಳಿಸುತ್ತದೆ.

**ಮೌಢ್ಯ:** ಸೌಂದರ್ಯ–ಕುರೂಪ, ಒಳಿತು–ಕೆಡುಕು ಆದರ್ಶ–ಮೌಲ್ಯಗಳು ಎಂಬ ವಿವೇಚನೆ ಇಲ್ಲದೆ, ವೈಯಕ್ತಿಕ ಜ್ಞಾನದ ಮಿತಿಯಲ್ಲಿ ತೆರೆದುಕೊಳ್ಳುವ ಎಷ್ಟೋ ವಿಷಯಗಳು ವಿಚಾರ ವಿಮರ್ಶೆಯಿಲ್ಲದೆ, ಏಕಮುಖ ದೃಷ್ಟಿಕೋನ ಇಲ್ಲವೆ ಪೂರ್ವಾಗ್ರಹಪೀಡನೆಯಿಂದ ಸಂಕುಚಿತಾರ್ಥ ಪಡೆದುಕೊಂಡು ಒಂದೇ ಕೇಂದ್ರಕ್ಕೆ ಬದ್ಧವಾದ ಆಲೋಚನೆಗಳಿಂದ ಕೂಡಿರುತ್ತವೆ. ಇಂತಹ ಆಲೋಚನೆಗಳು ಅವೈಚಾರಿಕವಾಗಿ ಇತರರ ಅನುಕರಣೆಗೆ ಒಳಪಡುತ್ತವೆ. ಅನುಸರಣೆಯ ಹಿಂದಿನ ಉದ್ದೇಶಗಳು ಸಾಮೂಹಿಕವಾಗಿ ಒಮ್ಮತಗೊಂಡ ಅಭಿಪ್ರಾಯಗಳಿಗೆ ಮನ್ನಣೆ ಕೊಡುವುದು ಮತ್ತು ಪರಂಪರಾಗತ ನಂಬಿಕೆಗಳಿಗೆ ಸಲ್ಲುವ ಆದ್ಯತೆಯೂ ಆಗಿರುತ್ತದೆ.

ಪೂರ್ಣಚಂದ್ರತೇಜಸ್ವಿಯವರು ಸಮಾಜದ ಎಲ್ಲಾ ಕ್ಷೇತ್ರಗಳ ಸ್ಥಿತ್ಯಂತರಗಳನ್ನು ವಿಕಸನವಾದದ ಹಿನ್ನೆಲೆಯಲ್ಲಿ ಅವಲೋಕನ ಮಾಡುತ್ತಾರೆ. ಭೌತಿಕ ಜಗತ್ತಿನ ನಿಯಮಗಳನ್ನು, ನಿಗೂಢತೆಗಳನ್ನು ವೈಜ್ಞಾನಿಕವಾಗಿ ತಿಳಿದು ತತ್ವಜ್ಞಾನದ ಮೂಲಕ ಪರಿಹರಿಸುವಲ್ಲಿ ಮಗ್ನರಾಗುತ್ತಾರೆ. ಸಾಮಾಜಿಕ ಕಥಗಳ ವಿಶ್ಲೇಷಣೆಗೆ ಸಂಶ್ಲೇಷಣಾ[೪೩] ವಿಧಾನವನ್ನು ಬಳಸಿಕೊಂಡಿದ್ದಾರೆ. ಇದರಿಂದ ಓದುಗರ ಅರಿವಿನ ದಿಗಂತವು ವಿಸ್ತರಣಗೊಳ್ಳುತ್ತದೆ.

ತೇಜಸ್ವಿಯವರ ಕಥನಗಳಲ್ಲಿ ನಿರೂಪಿತವಾಗಿರುವ ಮೌಢ್ಯವನ್ನು ನಾಲ್ಕು ಬಗೆಯಾಗಿ ವಿಶ್ಲೇಷಿಸಬಹುದು. ಇದು ಮೌಢ್ಯವೆಂದು ಅರಿವಿಲ್ಲದೆಯೇ ಇತರರನ್ನು ಅನುಸರಿಸುತ್ತಾ ಅದರಲ್ಲಿಯೇ ಬಿದ್ದು ಒದ್ದಾಡುವುದು. ಮೌಢ್ಯವೆಂದು ಅರಿವಿದ್ದು ಗುರುತಿಸಿಯೂ ಸಾಮಾಜಿಕ ಸಂದರ್ಭಗಳೊಂದಿಗೆ ತಮ್ಮ ವೈಚಾರಿಕವಾದವನ್ನೂ–ವೈಜ್ಞಾನಿಕತೆಯನ್ನೂ ಸಂವಹನಗೊಳಿಸಲು ಸಾಧ್ಯವಾಗದ ಹಾಗೆ ಪರಿವರ್ತಿತವಾಗುವುದು. ಜನರ ಮುಗ್ಧತೆಯನ್ನು ಮೂಢನಂಬಿಕೆಗಳ ಹೆಸರಿನಲ್ಲಿ ವಂಚಿಸುತ್ತಾ ಆಸೆ–ಆಕಾಂಕ್ಷೆಗಳನ್ನು ಈಡೇರಿಸಿಕೊಳ್ಳುವುದು. ಕೊನೆಯದಾಗಿ ಮೌಢ್ಯಗಳ ವಿರುದ್ಧ ವೈಚಾರಿಕ ಆಶಯ

**ಅರಿವಿಲ್ಲದ ಮೌಢ್ಯ:** ಮೌಢ್ಯ ಮತ್ತು ಅಜ್ಞಾನ ಜೊತೆ ಜೊತೆಗೇ ಸಾಗುತ್ತದೆ. ಪೂರ್ವಾಗ್ರಹಕ್ಕೆ ಒಳಗಾದ ಮನಸ್ಸು ಒಳಿತು ಕೆಡುಕುಗಳನ್ನು ಆಲೋಚಿಸದೆ ಕುರುಡಾಗಿ ಇತರರನ್ನು ಅನುಕರಿಸುತ್ತದೆ. ತನ್ನ ಗೊಂದಲ ಗೋಜಲುಗಳಿಂದ ಮುಕ್ತಿ ಪಡೆಯಲು ಬಯಸುತ್ತದೆ.

ಉದಾಹರಣೆಗೆ ಮೈನೆರೆಯದ ಕನ್ಯೆಯನ್ನು ಸಂಭೋಗಿಸಿದರೆ ಮೇಹರೋಗ ವಾಸಿಯಾಗುತ್ತದೆ ಎಂಬ ನಂಬಿಕೆಯಿಂದಲೇ ಲೋರಿ ಇಯಾಲಳ ಮೇಲೆ ಅತ್ಯಾಚಾರವೆಸಗಿ ಕೊಲೆಗೈಯುತ್ತಾನೆ. ಆನಂತರದಲ್ಲಿ ಈ ವಿಷಯ ಬೆಳಕಿಗೆ ಬರುತ್ತದೆ. ಹತ್ಯೆಯ ಉದ್ದೇಶ ಆತನದಾಗಿರದೆ ಇದ್ದರೂ ಮೇಹರೋಗದಿಂದ ಹೊರಬರುವುದೇ ಪ್ರಮುಖವಾಗಿ ತನ್ನ ನಂಬಿಕೆಯನ್ನು ಈಡೇರಿಸಿಕೊಳ್ಳ ಹೊರಟು ಇಯಾಳಂತಹ ಪುಟ್ಟಸುಂದರಿಯ ಹತ್ಯೆಗೈಯುತ್ತಾನೆ, ಇಂತಹ ಹಾಳು ನಂಬಿಕೆ ಮುಗ್ಧಹುಡುಗಿಯನ್ನು ಬಲಿತೆಗೆದುಕೊಳ್ಳುತ್ತದೆ.

ಬಂಡೆ ಡೈನಾಮೇಟನಿಂದ ಸಿಡಿದು ಅನಾಹುತಗಳಾದಾಗ ಈ ಅಪಘಾತದ ಇತ್ಯೋಪರಿಗಳು ಸವಿವರವಾಗಿ ಪ್ರಚಾರವಾಗುತ್ತಿದ್ದಂತೆ ಜನರು ಕರುಣೆ, ಅನುಕಂಪಗಳ ಪ್ರಕಟನೆ ಕಡಿಮೆಯಾಗಿ ಆ ಸ್ಥಳದಲ್ಲಿದ್ದ ದೇವರು ಮತ್ತು ಬಂಡೆಯ ಮಹಿಮೆಯೇ ಅಗಾಧವಾಗಿ ಬಿಡುತ್ತದೆ. ರಸ್ತೆಯ ಮಧ್ಯೆ ನಿಂತಿರುವ ಧೂಪದ ಬಂಡೆಯನ್ನು ತೆಗೆಯವ ಕುಬಿಯ ಪ್ರಯತ್ನ ನಿಷ್ಪಲವಾಗುತ್ತದೆ. ಧೂಪದ ಬಂಡೆಯೇ ಭೈರಾಪುರದ ಜನತೆಯ ಅಜ್ಞಾನದ ಪ್ರತೀಕವಾಗಿದೆ. ಹಾಗಾಗಿ 'ಧೂಪದ ಮರದ ಕಲ್ಲು ಬಂಡೆ ಶಾಶ್ವತವಾಗುತ್ತದೆ. ಒಂದು ಕುರುಡು ನಂಬಿಕೆಯಿಂದ ಜನ ಇನ್ನೊಂದಕ್ಕೆ ಹಬ್ಬಿಕೊಳ್ಳುತ್ತಾರೆ. ಆ ಬಂಡೆ ಯಾತ್ರಾ ಸ್ಥಳವಾಗಿ ಜನ ಸುಪ್ತವಾಗಿ ಪ್ರಶಂಸಿಸಿದ್ದ ಅದು ಅಲ್ಲೆ ಶಾಶ್ವತವಾಗುತ್ತದೆ'[೪೪]

ಇಡೀ ಪರಿಸರ ಅಜ್ಞಾನದ ಕೂಪವಾಗಿ ಬದಲಾಗುವುದನ್ನು ವಿಷಾದದಿಂದ ಗಮನಿಸುವ ಕಥನಕಾರ ಜ್ಞಾನ ತನ್ನೊಡನೆ ಅಜ್ಞಾನವನ್ನೂ ಒಯ್ಯುವುದು ಅದರ ಅನುವಂಶಿಕ ಗುಣವೋ ಅಥವಾ ಇದೊಂದು ಚಾರಿತ್ರಿಕ ವ್ಯಂಗ್ಯವೋ ಯಾರು ಬಲ್ಲರು[೪೫] ಎಂಬ ಮಾತನ್ನು ಈ ಕಥೆಗೆ ಅನ್ವಯವಾಗಿ ಧ್ವನಿಗೂಡಿಸುತ್ತಾರೆ.

ಅವನತಿ ಕಥೆಯೇ ಅಜ್ಞಾನ, ಅಂಧಕಾರ ಮೌಢ್ಯಗಳನ್ನು ತುಂಬಿಕೊಂಡು ಬದುಕುತ್ತಿರುವ ಕರಾಳ ಪರಿಸರದಲ್ಲಿ ಆ ಪರಿಸರಕ್ಕೆ ತಕ್ಕಂತೆ, ಕುಸುರಿ ಕೆಲಸದ ಕಲ್ಲುಕೆತ್ತನೆಯ ಸೂರಾಚಾರಿ ಕುಲಕಸುಬಿನ ಜೊತೆ ಜೊತೆಯಲ್ಲಿ 'ಮಂತ್ರ, ತಂತ್ರ, ತಾಯಿತೆ ಕೊಡುವುದು, ಮದ್ದು ತೆಗೆಯುವುದು ಮುಂತಾದುವನ್ನು ಅಭ್ಯಸಿಸಿದ. ಏಕೆಂದರೆ ತನ್ನ ಕಲೆಗೆ ಬೇಕಾದ ಬೇಡಿಕೆಗಳನ್ನೂ ಗಿರಾಕಿಗಳನ್ನೂ ತಾನೇ ಸೃಷ್ಟಿಸಬೇಕಿತ್ತು. ಇದರೊಡನೆಯೇ ಇನ್ನೂ ನೂರಾರು ಅರ್ಥಹೀನವಾದ ಅಸಂಬದ್ಧವಾದ ಯಾವ ಯಾವುದೋ ಕಸಬುಗಳನ್ನು ಮಾಡತೊಡಗಿದನು.[೪೬] ಇಂತಹ ಸೂರಾಚಾರಿ ಎತ್ತಿನ ವ್ಯಾಪಾರದ ದಲ್ಲಾಳಿಯಾಗಿ ಇತ್ತಾವರದ ಸುಬ್ಬಯ್ಯನ ಬಳಿಗೆ ಬರುತ್ತಾನೆ.

ಮೂರು ಮಕ್ಕಳಾಗಿ ದಕ್ಕದೆ ಹೋಗದಕ್ಕೆ ತನ್ನನ್ನೇ ದೋಷಿಯನ್ನಾಗಿ ಮಾಡಿದರೆ ಎಂಬ ಕೀಳರಿಮೆಯಿಂದ ಮತ್ತು ಹಾಗೆನ್ನುವವರ ಮುಂದೆ ತನ್ನದಲ್ಲದ ತಪ್ಪಿಗೆ ತಾನು ದೋಷಿಯಾಗಲಾರೆನೆಂದು ನಿರೂಪಿಸಲೋಸುಗ ಸೂರಾಚಾರಿಯಲ್ಲಿ ಪ್ರಾಸಂಗಿಕವಾಗಿ ಮಕ್ಕಳ ಸಾವಿನ ವಿಷಯವನ್ನು ಪ್ರಸ್ತಾಪಿಸುತ್ತಾನೆ. ಇದಕ್ಕೆ ಪರಿಹಾರರೂಪವಾಗಿ ಸೂರಾಚಾರಿ 'ಹುಟ್ಟಿದ ಕೂಡಲೇ ಸಾಯ್ತಾವೋ' ನಾಲ್ಕು ದಿನ ಇದ್ದು ಸಾಯ್ತವೋ ಎಂದು ಪ್ರಶ್ನಿಸುತ್ತಾನೆ. ನಾಕುದಿನ ಇರ್ತವೆ, ವೈನಾಗಿರ್ತವೆ. ಹಾಲು ಕುಡಿದು ಅತ್ತು ನಕ್ಕು ಎಲ್ಲ ಒಂದು ತಿಂಗಳ ಮಟ್ಟಿಗೆ. ಕೊನೆಗೆ ಏನಾರೂ ಒಂದಾಗಿ ಸಾಯ್ತವೆ! ಎಂದು ಉತ್ತರವೀಯುವ ಭೂಪನಿಗೆ 'ಸೈ ಬಿಡು ಮಲೆದೋಸಾನೆ. ನೀ ಬೇರೆ ಯೋಚನೆ ಮಾಡೋದೆ ಬ್ಯಾಡ. ಮಲೇಲಿ ಮೇಲುಗಡೆ ಒಂದು ನೀಲಿ ನರ ಇರ್ತದೆ .

ಅದರೊಳಗಿರ್ತದೆ ನೋಡು ಹುಳ. ಅರಿಶಿನದ ಕೊಂಬಿನ ಕೆಂಡಾ ಮಾಡಿ ಅದನ್ನು ಸುಟ್ಟು ತಗೀಬೇಕು. ಇಲ್ಲದಿದ್ದರೆ ಒಂದಲ್ಲಾ ಮೂರಲ್ಲಾ ನೂರು ಮಕ್ಕಳಾದರೂ ಒಂದು ಉಳಿಯಲಿಕ್ಕಿಲ್ಲ" ಎಂದು ಸೂರಾಚಾರಿ ಘೋಷಿಸಿಬಿಡುತ್ತಾನೆ. ಇದಕ್ಕೆ ಸಂಪೂರ್ಣವಾಗಿ ಸಮ್ಮತಿಸುವ ಸುಬ್ಬಯ್ಯನಾಗಲಿ, ಎದುರಿಗೆ ಕುಳಿತು ಕೇಳಿಸಿಕೊಳ್ಳುತ್ತಿರುವ ಈರೇಗೌಡನಾಗಲಿ ಸೂರಾಚಾರಿಯ ಅವೈಜ್ಞಾನಿಕ ವೈದ್ಯ ಪಾಂಡಿತ್ಯದ ಬಗ್ಗೆ ಚರ್ಚಿಸುವುದೇ ಇಲ್ಲ. ಅದಷ್ಟು ನಂಬಿಕೆಯೇ ಸೂರಾಚಾರಿಯ ಚಿಕಿತ್ಸೆಯ ಬಗ್ಗೆ ಎನ್ನುವುದಕ್ಕಿಂತ ತನ್ನ 'ಒಳರೋಗ' ಕಾರಣ ಎಂದು ಸೂರಾಚಾರಿ ಹೇಳದೆ ಇದ್ದುದು ಸುಬ್ಬಯ್ಯನಿಗೆ ಹೆಮ್ಮೆಯ ವಿಷಯವಾಗುತ್ತದೆ ಮತ್ತು ಅಂತರ್ಗತ ಭಾವ ಹೊರಬಾರದೆ ಉಳಿದುದಕ್ಕೆ ಸಂತೋಷಿಸುತ್ತಾನೆ.

**ಪರಿಸರಕಥೆ**ಯಲ್ಲಿನ ಅನೇಕ ನಿದರ್ಶನಗಳು ಮೌಢ್ಯವೆಂಬ ಅರಿವಿಲ್ಲದೆ ನಡೆದುಕೊಳ್ಳುತ್ತಿರುವುದಕ್ಕೆ ಉದಾಹರಣೆಯನ್ನು ಒದಗಿಸುತ್ತವೆ. ಮಾರ ತೋಟವನ್ನು ಕಾಯಲು ತೋಟದ ಪಕ್ಕದಲ್ಲಿರುವ ಚೌಡಿಗೆ ದುಡ್ಡನ್ನು ಹಾಕುವುದು, ಕೋಳಿಗೆ ದೆವ್ವ ಹಿಡಿದಿದೆ ಅದಕ್ಕೆ ಅಸಹಜವಾಗಿ ವರ್ತಿಸುತ್ತಿದೆ ಎನ್ನುವ ಮಾರ, ನಾಗರಹಾವು ಬ್ರಾಹ್ಮಣ ಎಂದು ಮನೆಯೊಳಗೆ ತಿರುಗುತ್ತಿದ್ದ ಹಾವನ್ನು ಹೊಡೆಯದೇ ಬಿಟ್ಟು, ಅದು ಕಚ್ಚಿ ಸತ್ತ ಬೈರಪ್ಪ, ಮಂಗ ದೇವರೆನ್ನುವ ಗಾಡ್ಲಿ, ಬಳ್ಳಿಯನ್ನು ಮರಕ್ಕೆ ಕಟ್ಟುವ ಮಾರ, ಮುಸ್ಲಿಮರು ಇದ್ದಲ್ಲಿ ದೆವ್ವ ಇರುವುದಿಲ್ಲವೆಂದು ನಂಬುವ ಸೀನಪ್ಪ, ವಯಸ್ಸು ಇನ್ನೂರು ಆದರೂ ಆಗಿರಬಹುದೆನ್ನುವ ಮಾರ 'ನಾಳೆ ಬಾ' ಎಂದು ಬರೆಯುವುದು ಇವಲ್ಲದೆ ಇನ್ನಿತರ ಉದಾಹರಣೆಗಳು ಅನೇಕ ಮೌಢ್ಯಗಳ ಜೊತೆಜೊತೆಯಲ್ಲಿ ಇವು ಮೌಢ್ಯಗಳೆಂಬ ಅರಿವಿಲ್ಲದೆ ಬದುಕು ನಡೆಸಿತ್ತಿರುವುದನ್ನು ಉಲ್ಲೇಖಿಸುತ್ತವೆ.

ಕಲ್ಪನೆಯೆಂಬ ಮಲೆನಾಡಿನ ಕುಗ್ರಾಮವು ಮೌಢ್ಯವೇ ತಳೆದ ಅಪರ ಜನ್ಮದಂತಿತ್ತು. ಆಂಧ್ರ ಮೂಲದ ವೆಂಕುವು ಹೇಳಿದ್ದೇ ವಿಜ್ಞಾನವೆಂಬ ನಂಬುಗೆ ಆ ಜನರದ್ದು. ಆ ಮೌಢ್ಯವು ಎಲ್ಲಿಯವರೆಗೆ ಬೆಳೆದಿತ್ತೆಂದರೆ, ಗೋಡೆಯಲ್ಲಿ ಹುತ್ತ ಬೆಳೆದರೂ ಅದಕ್ಕೆ ನಾಗರ ಪೂಜೆ ಸಲ್ಲುವಷ್ಟು, ನಳಿನಿ ಹಾಗೂ ಸೋಮುವಿನ ಪ್ರೇಮ ಪಾಪವೆಂದ ವೆಂಕುವಿನ ವಾದವನ್ನು ಅಲ್ಲಗಳೆದ, ಆಧುನಿಕ ಜ್ಞಾನವಿದ್ದ ಸೋಮು ಶತ್ರುವಾಗಿ ಕಂಡುಬರುವುದು ಇದೇ ಕಾರಣದಿಂದ ಉಳಿದವರ ಮನಸ್ಸಿನಲ್ಲಿ ಮೌಢ್ಯವೆಂಬ ಹುಳು ಕೊರೆಯುವಂತೆ ಮಾಡಿದ. ಇದರಿಂದ ಕೇವಲ ಊರಜನರಷ್ಟೇ ಅಲ್ಲದೇ ವೆಂಕುವೂ ಕೂಡಾ ಸಂಘರ್ಷಕ್ಕೆ, ದ್ವಂದ್ವಕ್ಕೆ ಗುರಿಯಾದ. ತಾನು ಹೇಳಿದ್ದು ಸರಿಯೋ ತಪ್ಪೋ ಎಂದು ಅವನಿಗೇ ಗೊತ್ತಿರಲಿಲ್ಲ. ಆತ ತನ್ನ ಮಾತುಗಳಿಂದಲೇ ಸಂಘರ್ಷಕ್ಕೆ ಭಯಕ್ಕೂ ಒಳಗಾಗುವುದು. ಇನ್ನು ವೈಯಕ್ತಿಕವಾಗಿ ಆತನ ಮೌಢ್ಯ ಆತನನ್ನು ಸೋಮುವಿನೊಡನೆ ಸಂಘರ್ಷಕ್ಕೀಡು ಮಾಡಿತ್ತು. ಲಿಂಗನಂತವರು ಮೌಢ್ಯಾತಿಮೌಢ್ಯವಾದ ಆತನ ಮಾತನ್ನು ನಂಬುವುದೋ ಬಿಡುವುದೋ ಎಂಬ ತಳಮಳಕ್ಕೆ ತೊಳಲಾಟಕ್ಕೂ ಒಳಗಾದರೆ, ನಳಿನಿಯು ಆಧುನಿಕ ವಿಜ್ಞಾನವನ್ನು ಓದಿಕೊಂಡರೂ ಈ ಕಲ್ಪನೆಯ ಮೌಢ್ಯದಲ್ಲಿ ಅದನ್ನು ಆಚರಣೆಯಲ್ಲಿ ತರಲಾಗದೇ ಮಾನಸಿಕ ಸಂಘರ್ಷಕ್ಕೀಡಾಗುತ್ತಾಳೆ. ತಾನು ಮಾಡುತ್ತಿರುವುದೆಷ್ಟು ಸರಿ, ಎಷ್ಟು ತಪ್ಪೆಂಬ ನಿರ್ಧಾರಕ್ಕೂ ಆಕೆಗೆ ಬರುವುದು ಕಷ್ಟಸಾಧ್ಯವೇ ಆಗುತ್ತದೆ.

**ಪಟ್ಟಧಾರಣೆ:** ಸಾಮಾಜಿಕ ಅನ್ಯಾಯಕ್ಕೆ ಕಾರಣೀಕರ್ತರಾಗುವ ವ್ಯಕ್ತಿಗಳ ಬಗ್ಗೆ ಆಕ್ರೋಶವಿದ್ದರೂ, ಅದನ್ನು ಸರಿಪಡಿಸಲಾಗದ, ಸಮಸ್ಯೆಯ ಸೂಕ್ಷ್ಮಗಳನ್ನು ಅರಿತೂ ಅವುಗಳಿಂದ ಹೊರಬರಲಾಗದೆ, ಸಮಸ್ಯೆಯ ಸುಳಿಗೇ ಸಿಲುಕುವಂತಹುದನ್ನು ಕುಬಿ ಮತ್ತು ಇಯಾಲ ಕಥೆಯ ಡಾ. ಕುಬೇರ ಪ್ರತಿನಿಧಿಸುತ್ತಾನೆ.

'ಅವನ ವೈದ್ಯಕೀಯ ಚರಿತ್ರೆಯ ದಿನಚರಿಯಲ್ಲಿ ಯಾವುದೇ ಮನುಷ್ಯನೂ ಕಾರಣನಲ್ಲದ ಅನೇಕ ಸಾವನ್ನೂ ಕಂಡಿದ್ದ. ಭೀಕರ ರೋಗ-ರುಜಿನಗಳಿಗೆ ತುತ್ತಾಗಿ ಕುಬಿಯ ನಿತಾಂತ ಪ್ರಯತ್ನವನ್ನೂ ಮೀರಿ ಸಾವನ್ನಪ್ಪಬೇಕಾದವರನ್ನು ಕಂಡಿದ್ದ. ವಿಚಾರಣೆಯೇ ಇಲ್ಲದ, ಈ ಶಿಕ್ಷಾ ಕ್ರಮದೆದುರು ಯಾರೋ ಒಬ್ಬನನ್ನು ಕೊಂದ, ಯಾವನೋ ಒಬ್ಬನನ್ನು ಬೆನ್ನುಹತ್ತಿ, ಪತ್ತೆಮಾಡಿ ಗಲ್ಲಿಗೇರಿಸುವುದು ಒಂದು ಭಾರೀ ಶೌರ್ಯದಂತೆ ಕಂಡಿರಲಿಲ್ಲ ಕುಬೇರನಿಗೆ'.

ಕುಬಿ ತನ್ನ ಚಳಕವನ್ನು ಎಂದೂ ಅತಿಮಾನುಷವೆಂದಾಗಲೀ ಅಮಾನುಷವೆಂದಾಗಲೀ ನಂಬಿರಲಿಲ್ಲ. ಅವನು ನಂಬುವುದಿರಲಿ, ನಂಬಿದವರನ್ನು ಕಂಡರೆ ಆಗುತ್ತಲೂ ಇರಲಿಲ್ಲ. ಈ ಬಗೆಯ ಶ್ರದ್ಧೆ ನಂಬುಗೆಗಳಿಂದ ಆಗುವ ಭೀಕರ ಅನಾಹುತಗಳನ್ನು ವೈದ್ಯನಾಗಿ ದಿನವೂ ಅವನು ನೋಡುತ್ತಿದ್ದ. ಅಷ್ಟೇ ಅಲ್ಲದೆ ಕಾರ್ಯ ಕಾರಣ ಬದ್ಧವಲ್ಲದ ಆ ಮೂಢ ಪ್ರಪಂಚವು ಅವನಿಗೆ ನಿಜಕ್ಕೂ ನರಕಸದೃಶವಾಗಿತ್ತು. ರೋಗದ ವಿರುದ್ಧ ಹೋರಾಡುವುದು. ಎಂದರೆ ಅದಕ್ಕೆ ಕಾರಣವಾದ ಅಜ್ಞಾನ, ಹಿಂದುಳಿದಿರುವಿಕೆ, ಅದಕ್ಕೆ ಪೂರಕವಾದ ಅವರ ಮೂಢ ನಂಬುಗೆಗಳು, ಹಾಗೂ ಇವೆಲ್ಲಕ್ಕೂ ಕಾರಣವಾದ ಅವರ ಬಡತನ ಈ ಎಲ್ಲದರ ವಿರುದ್ದ ಹೋರಾಡುವುದು ಎಂದು ಕುಬಿಗೆ ನಿಧಾನವಾಗಿ ಅರಿವಾಗತೊಡಗಿತು'.[೪೭]

ಇಡೀ ಕಥೆಯ ಉದ್ದಕ್ಕೂ ಹಲವು ರೀತಿಯಲ್ಲಿ ಡಾ. ಕುಬೇರನಾಥ, ಭೈರಾಪುರದ ಜನತೆಯ ಕುರುಡು ನಂಬಿಕೆಯ ವಿರುದ್ಧ ಸೆಣಸಾಡುತ್ತಾನೆ. ತಾನು ವೈದ್ಯಕೀಯ ವೃತ್ತಿಯನ್ನು ನಿರ್ವಹಿಸುತ್ತಲೇ ಸಮಾಜದ ಇನ್ನಿತರ ರೋಗಗಳ ಬಗೆಗೆ ಹೋರಾಡ ಬಯಸುತ್ತಾನೆ. ಆತನ ಸುಧಾರಣಾವಾದಿ ವಿಚಾರಗಳು ಮೌಢ್ಯ ತುಂಬಿದ ಅಲ್ಲಿನ ಅವೈಜ್ಞಾನಿಕ ಸಮಾಜದ ಜೊತೆ ಪೈಪೋಟಿಗಿಳಿಯಬೇಕಾಗುತ್ತದೆ. ಭೈರಾಪುದ ಜನತೆಯಲ್ಲಿದ್ದ ಮೌಢ್ಯದ ಜೊತೆಗೆ ಕಾಂಪೌಂಡರ್ ರಾಮರಾಯನ ಪ್ರಚಾರದಿಂದ ತಾನು ಪಡೆದುಕೊಂಡಿದ್ದ ಸ್ಥಾನ ಕುಬಿಯನ್ನು ಕಂಗೆಡಿಸುತ್ತದೆ. ರಾಮರಾಯನ ದ್ವೇಷ ಯಾವ ರೀತಿ ತೊಂದರೆ ಕೊಡುತ್ತಿತ್ತೋ; ವಿಶ್ವಾಸ ನಿಷ್ಠೆಗಳೂ ಅದೇ ರೀತಿಯ ತೊಂದರೆಯನ್ನು ಕೊಡುತ್ತದೆ. ಭೈರಾಪುರದ ಜನತೆಯಲ್ಲಿ ಔಷಧಿಗಳ ಪರಿಣಾಮಕ್ಕಿಂತ ಅದನ್ನು ದಯಪಾಲಿಸುವವನ ಹಸ್ತಗುಣವೇ ಮುಖ್ಯ ಎಂಬ ನಂಬಿಕೆಯನ್ನು ರಾಮರಾಯನೇ ಹುಟ್ಟುಹಾಕಿದ್ದರಿಂದ ಅವೇ ಕುಬಿಯ ವೈಯಕ್ತಿಕ ಸಾಧನೆಯನ್ನು, ಆತನ ವೈದ್ಯಕೀಯ ಆಶಯವನ್ನು ಹಾನಿಗೊಳಿಸುತ್ತದೆ.

ಔಷಧಿಯನ್ನು ಅಪ್ಪ ಹಾಸನದಿಂದ ಡಾಕ್ಟರು ಕೊಟ್ಟ ಚೀಟಿಯ ಮೇರೆಗೆ ತಂದಿದ್ದಾರೆ ಅಂಥದರಲ್ಲಿ ಮತ್ತೊಮ್ಮೆ ಏಕೆ ಡಾಕ್ಟರಿಗೆ ತೋರಿಸಬೇಕು? ಎಂಬ ಇಯಾಲಾಳ ಪ್ರಶ್ನೆಗೆ ಬಾಯಮ್ಮ 'ಹುಚ್ಚುಮುಂಡೆ' ಕುಬಿ ಡಾಕ್ಟರ್ ಸಾಕ್ಷಾತ್ ದೇವರಂತ ಮನುಷ್ಯ. ಅವರು ಒಂದು ಸಾರಿ ನಿನ್ನನ್ನು ನೋಡಿ ಔಷಧಿ ಕೈಯಿಂದ ಕೊಟ್ಟರೆ ನಿನ್ನ ಎಲ್ಲಾ ರೋಗಾನು ಗುಣಾಗ್ತದೆ. ಯಾಕೆ ಹೀಗಾಡ್ತಿ ಎಂದು ಡಾಕ್ಟರ ಬಳಿ ಹೋಗಲು ಪ್ರೇರೇಪಿಸುತ್ತಾಳೆ. ನಾಚಿಕೆ ಸ್ವಭಾವದ ಇಯಾಲ ಡಾಕ್ಟರನ್ನು ಕಾಣಲು ಭೈರಾಪುರದ ಆಸ್ಪತ್ರೆಗೆ ಬಂದು ತನ್ನ ಸರದಿಗೆಂದು ಕಾದು ಕುಳಿತಾಗ ಡಾ. ಕುಬಿ ದೈನಂದಿನ ರೋಗ ಪರೀಕ್ಷೆಯ ಕ್ರಮದೊಳಗೆ ನಿರತನಾಗಿದ್ದ. ಆ ಸಂದರ್ಭದಲ್ಲಿ

ಕುಬಿಯ ಉಡುಗೆ ಸ್ಟೆತಾಸ್ಕೋಪ್‌ಹಾರ, ಕನ್ನಡಕದೊಳಗಿನ ಪ್ರಶಾಂತ ಕಣ್ಣುಗಳು, ಅವರು ಗಂಭೀರವಾಗಿ ಇತರರಿಗೆ ಕೊಡುತ್ತಿದ್ದ ಸಂದೇಶಗಳು ಇವೆಲ್ಲ ಇಯಾಲಳ ಕಣ್ಣುಗಳಿಗೆ ಅಸಾಮಾನ್ಯ ತೇಜಸ್ಸಿನಿಂದ ರಾರಾಜಿಸಿದುವು. ಹೆಚ್ಚೇನು, ಕುಬಿ ಡಾಕ್ಟರು ಅವಳ ಅಮ್ಮನ ಹೇಳಿಕೆಯಂತೆ ದೇವರಂಥ ಮನುಷ್ಯನಾಗಿ ಕಾಣದೆ ಸಾಕ್ಷಾತ್ ಏಸುಕ್ರಿಸ್ತನಂತೆಯೇ ಕಂಡ!' ೮೮

ಕುಬಿ ಇಂತಹವುಗಳನ್ನು ನಿವಾರಿಸಲು ಯತ್ನಿಸಲಿಲ್ಲವೆಂದಲ್ಲ; 'ಆತನ ನಿಃಸ್ವಾರ್ಥ ಪ್ರಯತ್ನದಿಂದ ಹೆಸರೂ ಆ ಹೆಸರಿನೊಂದಿಗೇ ನಂಬಿಕೆಯೂ, ನಂಬಿಕೆಯೊಂದಿಗೆ ಕುರುಡು ಬುದ್ಧಿಯೂ ಒಂದರೊಡನೊಂದು ಸಮ್ಮಿಳಿತವಾಗಿ ಉಲ್ಬಣಿಸುತ್ತಿದ್ದುವು.' ಇದಿಷ್ಟೇ ಆಗಿದ್ದರೆ ಪರವಾಗಿರಲಿಲ್ಲ; ಯಾವುದೊ ಮಾತ್ರೆ ನುಂಗಿ ಪ್ರಾಣಾಪಾಯಕ್ಕೆ ಸಿಲುಕಿ (ಸಾವಿನ ದವಡೆಯಿಂದ) ಕುಬೇರನ ವೈದ್ಯಕೀಯ ಆರೈಕೆಯಲ್ಲಿ ಹೊರಬಂದಿದ್ದ ರಾಮರಾಯ ಅತಿ ನಿಷ್ಠೆಯಿಂದ ಇದ್ದ ಕಾರಣ ಅವನು ಪ್ರಸಾರ ಮಾಡುತ್ತಿದ್ದ ಮೂಢ ವಾರ್ತೆಗಳು ಕೂಡ ಕುಬೇರನನ್ನು ಸಾಕ್ಷಾತ್ ಕೃಷ್ಣ ಪರಮಾತ್ಮನ ಪಟ್ಟಕ್ಕೇರಿಸಿದ್ದವು.

ಕುಬಿ ಬಯಸಿದಂತೆ ಭೈರಾಪುರದ ಜನತೆಯಿರಲಿ ಕಾಂಪೌಂಡರ್ ರಾಮರಾಯನೂ ಬದಲಾಗುವುದಿಲ್ಲ. ಅಂತೆಯೇ ಪ್ರಯತ್ನಪೂರ್ವಕವಾಗಿ ತನ್ನ ಬಗೆಗೆ ಇರುವ ನಿಷ್ಠೆ-ಶ್ರದ್ಧೆಯನ್ನು ವೈಚಾರಿಕವಾಗಿ ಬದಲಾಯಿಸ ಹೊರಟರೂ. ಕುಬಿಯ ಕೀರ್ತಿ ಗೌರವಗಳು ಬೆಳೆದಂತೆ ರೋಗ ರುಜಿನಗಳು ಕಡಿಮೆಯಾದುವಾದರೂ ಮೂಢನಂಬುಗೆಗಳು, ಕುರುಡು ಬುದ್ಧಿಯೂ ಗುಪ್ತವಾಗಿಯೂ, ಅಗೋಚರವಾಗಿಯೂ ಸಮಾನ ಸ್ಪರ್ಧೆಯಿಂದ ಬೆಳೆಯುತ್ತಿದ್ದವು; ನಿದರ್ಶನ ರೂಪಕವಾಗಿ ಪುಟ ೪೭ ನ್ನು ಗಮನಿಸಬಹುದು.

ಧೂಪದ ಬಂಡೆ ಸಿಡಿದು ಸುಟ್ಟ ಗಾಯಗಳಿಂದ ಸಾಯುವ ಹಂತದಲ್ಲಿದ್ದ ಲೋರಿಯನ್ನು ಉಳಿಸುವ ಪ್ರಯತ್ನದಲ್ಲಿದ್ದ ಡಾ ಕುಬೇರನಿಗೆ ಬಂಡೆಯ ಬಳಿಯಲ್ಲಿ ಕ್ರಿಶ್ಚಿಯನ್ ಹುಡುಗಿಯನ್ನು ಲೋರಿಯೇ ಕೊಂದದೆಂದು ತಿಳಿದು ಬಂದಾಗ, ಕೊಲೆಯ ವಿಷಯವಾಗಿ ತಲೆಕೆಡಿಸಿಕೊಂಡಿದ್ದಾತನಿಗೆ ಈ ವಿಷಯ ಒಂದು ಆಶಾಕಿರಣದಂತೆ ಕಂಡಿತ್ತು. ವಿಷಯ ಸ್ಪಷ್ಟನೆಗಾಗಿ ಆಸ್ಪತ್ರೆಗೆ ಬಂದಾಗ ಪ್ರಜ್ಞಾಶೂನ್ಯನಾಗಿ ಸಾಯುವ ಹಂತದಲ್ಲಿದಾತನನ್ನು ಒಂದೇ ಒಂದು ಕ್ಷಣ ಯಮಪಾಶದಿಂದ ಕಳಚಿ ಪ್ರಜ್ಞೆ ಬರಿಸಿ ವಿವರವನ್ನು ಕೇಳಲೇಬೇಕೆಂಬ ಧೃಡ ಮನಸ್ಸಿನಿಂದ ಕಾರ್ಯರಂಗಕ್ಕಿಳಿದಿದ್ದ. ಕುಬಿಗೆ ಇದು ವೈದ್ಯಕೀಯ ಸವಾಲಾಗಿತ್ತು. ಎಷ್ಟೋ ರೋಗಿಗಳನ್ನು ಮಾರಣಾಂತಿಕ ಸನ್ನಿವೇಶಗಳಲ್ಲಿ ತನ್ನ ವೈಜ್ಞಾನಿಕ-ವೈದ್ಯಕೀಯ ಶಕ್ತಿಯಿಂದಾಗಿ ಬದುಕುಳಿಸಿದ್ದಾತ. ತನ್ನ ಮುಂದಿನ ಈ ಸವಾಲನ್ನು ಒಮ್ಮನಸ್ಸಿನಿಂದ ಎದುರಿಸುವುದರಲ್ಲಿ ನಿರತನಾಗಿದ್ದ. 'ರಾಮರಾಯನಿಗೆ ಆ ರಾತ್ರಿಯಲ್ಲಿ ಕುಬಿಯ ಕೆಲಸವೆಲ್ಲಾ ವಾಮಾಚಾರದಂತೆ, ಶಾಕ್ತರು, ಕಾಪಾಲಿಗಳು ಸ್ಮಶಾನದಲ್ಲಿ ಹೆಣದೊಡನೆ ನಡೆಸುವ ಕರ್ಮಗಳಂತೆ ಕಂಡವು. ಕುಬಿ ಅಮಾನುಷ ವ್ಯಕ್ತಿಯೆಂಬ ಅವನ ಗುಮಾನಿ ಮತ್ತೂ ದೃಢವಾಗತೊಡಗಿತು.'೮೯

ಕುಬಿಗೆ ಭೈರಾಪುರದ ರಾಜಕಾರಣದ ಹೃದಯವಿದ್ರಾವಕ ಸ್ವರೂಪ ನಿಧಾನವಾಗಿ ಅನುಭವಗಮ್ಯವಾಗುತ್ತಿದ್ದಿತು. ಪ್ರತಿಯೊಂದು ಕೂಡ ಈ ಪುಢಾರಿ ರಾಜಕಾರಣದ ಪ್ರಭಾವವಲಯಕ್ಕೆ ಸಿಕ್ಕಿದೊಡನೆಯೇ ಅದರ ಸತ್ಯ, ನ್ಯಾಯ, ವಾಸ್ತವಗಳೆಲ್ಲಾ ತಲೆಕೆಳಗಾಗಿ ಹೋಗುತಿದ್ದವು. ಕೊಲೆ ಒಂದು ಕರುಣೆಯಾಗಿ, ಕಳ್ಳತನ ಒಂದು ಉತ್ತಮ ಕರ್ತವ್ಯವಾಗಿ ಅಸತ್ಯವೇ ಸತ್ಯವಾಗಿ ಹೋಗುತ್ತಿತ್ತು. ಒಕ್ಕಲಿಗರದೊಂದು ಲಿಂಗಾಯತರದೊಂದು ಗುಂಪು ಇತ್ತು. ಸೊಸೈಟಿಯಲ್ಲಿ ಸಹಕಾರಿ ಬ್ಯಾಂಕ್‌ಗಳಲ್ಲಿ ತಾಲೂಕು ಬೋರ್ಡಿನಲ್ಲಿ ಎಲ್ಲೆಂದಲ್ಲಿ ಇದರ ತಾಳಲಾರದ ಉಪಟಳ.

ಹಲವು ಜನ ಪ್ರತಿಷ್ಠಿತ ಮುಸಲ್ಮಾನರೂ ಹಾಗೂ ಬ್ರಾಹ್ಮಣರೂ ಕುಯುಕ್ತಿಯಿಂದ ಯಾವ ಯಾವ ಎತ್ತು ಗೆಲ್ಲುತ್ತದೆಯೋ ಅದರದರ ಬಾಲವನ್ನು ಹಿಡಿಯುತ್ತಾ ಕಾಲ ಕಳೆಯುತ್ತಿದ್ದರು.[೫೦] ಭೈರಾಪುರ ಎಂದರೆ ಸರ್ವರೋಗಗಳ ಸಂಗ್ರಹಾಲಯದಂತಿತ್ತು.

ಮಾನವೀಯ ಅನುಕಂಪವಿಲ್ಲದ ಭೈರಾಪುರದ ಜನತೆ ಇಯಾಲಳ ಸಾವನ್ನು ರಾಜಕೀಯ ದಾಳವಾಗಿಸಿ ಚದುರಂಗದಾಟದಲ್ಲಿ ತೊಡಗುವುದು ಕುಬಿಗೆ ನುಂಗಲಾರದ ತುತ್ತಾಗುತ್ತದೆ. ಕುಬಿಯ ಮನಸ್ಸಿನ ಭಾವನೆಗಳ ಹೊಯ್ದಾಟ ಮತ್ತು ಸಂಘರ್ಷದ ಚಿತ್ರಣ ಸಶಕ್ತವಾಗಿ ಅಭಿವ್ಯಕ್ತವಾಗಿದೆ. ಕುಬಿ ಎಷ್ಟೇ ಬೌದ್ಧಿಕವಾಗಿ ವೈಚಾರಿಕವಾಗಿ ವಿಚಾರಶೀಲನಾದರೂ ಮೌಢ್ಯ ತುಂಬಿದ ಸಮಾಜದ ಕೊಳಕು ವ್ಯವಸ್ಥೆಯ ಮುಂದೆ ದುರ್ಬಲ ವ್ಯಕ್ತಿಯಾಗಿ ನಿಲ್ಲುವ ಚಿತ್ರಣ ಮರುಕ ಹುಟ್ಟಿಸುತ್ತದೆ. ಕುಬಿಯ ಮಾನಸಿಕ ಮತ್ತು ಸೃಜನಾತ್ಮಕ ಜಗತ್ತಿನ ಮೇಲೆ ನಡೆಯುವ ಅನಾಗರೀಕ ಹಲ್ಲೆಯ ಕರಾಳ ಸ್ವರೂಪವನ್ನು ಈ ಕಥೆ ಅನಾವರಣಗೊಳಿಸುತ್ತದೆ.

**ಮೌಢ್ಯದ ಪಾರುಪತ್ಯ:** ಭಯ ಗೊಂದಲ ಅಸಹಾಯಕತೆ ಸೋತ ಮನಸ್ಸುಗಳನ್ನು ಮತ್ತಷ್ಟು ದುರ್ಬಲಗೊಳಿಸಿಬಿಡುತ್ತದೆ. ಅಂತಹ ಸಂದರ್ಭಗಳಲ್ಲಿ ಮಾನಸಿಕ ಸ್ಥೈರ್ಯವನ್ನು ಉದ್ದೀಪನಗೊಳಿಸುವ ಸಹಾಯಹಸ್ತದ ಹಂಬಲಿಕೆ ಹೆಚ್ಚಾಗಿ ಕಾಡುತ್ತದೆ. ದುರ್ಬಲ ಮನಸ್ಸುಗಳನ್ನು ತಮಗೆ ಬೇಕಾದ ಅವಶ್ಯಕತೆಗಳಿಗೆ ಅನುಗುಣವಾಗಿ ಬಳಸಿಕೊಳ್ಳುವ ಕಪಟಿಗಳು, ಮೋಸಗಾರರು ಜನ್ಮತಳೆಯುತ್ತಲೇ ಇರುತ್ತಾರೆ.

ಚಿದಂಬರ ರಹಸ್ಯ ಕಾದಂಬರಿಯಲ್ಲಿ ಬರುವ 'ಮಾಯಿ' ಧಾರ್ಮಿಕನಾಯಕ. ಹುಟ್ಟು ಸೋಮಾರಿಯಾಗಿದ್ದ ಮಾಯಿಗೆ ಪೋಲಿ ತಿರುಗುವುದೇ ಕೆಲಸ ಮನ್ನಾ ಜಂಗ್ಲಿಯಲ್ಲಿ ಜೇನು ಹುಡುಕಿಕೊಂಡು ಅಲೆಯುವಾಗ ಮುಳ್ಳು ಹಂದಿಯ ಗುದ್ದಿನ ಬಳಿ ಇದ್ದ ಬಿಲದ ಬಳಿ ತಾಯಿ ನರಿ ತನ್ನ ಮರಿಗಳಿಗಾಗಿ ಕೋಳಿಯನ್ನು ಆಹಾರವಾಗಿ ಕದ್ದು ತರುವುದನ್ನು ಕಂಡು ಅವಿತು ಕುಳಿತು ಉಪಾಯದಿಂದ ಕದ್ದು ತಂದ ಕೋಳಿಯನ್ನು ಲಪಟಾಯಿಸತೊಡಗಿದ. ಮಾಯಿಯ ಖದೀಮತನ ಮುಂದುವರೆದಂತೆ ಹರಿಜನ ಕೇರಿಯ ಕೋಳಿಗಳು ನಾಪತ್ತೆಯಾಗುತ್ತಿರುವುದಕ್ಕೂ ಮಾಯಿಯ ಗುಡಿಸಲ ಬಳಿ ಕೋಳಿ ಪುಕ್ಕದ ರಾಶಿ ಕಾಣುವುದಕ್ಕೂ ಹಲವು ಊಹಾಪೋಹಗಳಿಗೆ ಎಡೆಯಾಯಿತು. ತದನಂತರ ಮಾಯಿ ನರಿಯನ್ನು ವಶೀಕರಣ ಮಾಡಿಕೊಂಡು ಅದರ ಕೈಯಲ್ಲಿ ಕೋಳಿ ಕದಿಸುತ್ತಿದ್ದಾನೆಂದು 'ಅವನ ಅಜ್ಜನೋ ಮುತ್ತಜ್ಜನೋ ಈ ತರಹ ಮಂತ್ರ ವಿದ್ಯೆಯಲ್ಲಿ ಪ್ರವೀಣನಾಗಿದ್ದ ಎಂದು. ಕೆಲವರು ಮಾಯಿಯೇ ನರಿಯಾಗಿ ಬಂದು ಹೊರುತ್ತಿದ್ದಾನೆ ಎಂದು. ಕೆಲವರು ಮಾಯಿ ನರಿಯಾಗಿ ರೂಪಾಂತರಗೊಳ್ಳುವುದನ್ನು ನೋಡಿಯೇ ಇದ್ದೇವೆ ಎಂದು ಬಿಟ್ಟರು. ಹೀಗಾಗಿ ಅವರ ಸಮಾಲೋಚನೆ ಮುಗಿಯುವುದೊರಳಗಾಗಿ ಮಾಯಿಯೊಬ್ಬ ಅತಿಮಾನುಷ ಶಕ್ತಿಯ ಮಂತ್ರಗಾರನಾಗಿ ರೂಪುಗೊಂಡಿದ್ದ'[೫೧]

ಹರಿಜನಕೇರಿಯವರೆಲ್ಲ ಸೇರಿ ಮಾಯಿಯ ಬಳಿ ತಮಗೆ ತೊಂದರೆ ಕೊಡಬೇಡವೆಂದು ಮನವಿ ಮಾಡಿಕೊಳ್ಳುಲು ನಿರ್ಧರಿಸಿದಾಗ ಅಲ್ಲಿದ್ದ ತರುಣ ಆಕ್ಷೇಪಿಸಿಸುತ್ತಾನೆ. 'ಕೋಳಿ ಕಳ್ಳ ಸೂಳೆ ಮಗನಿಗೆ ಮುಕ್ಳಿ ಮೇಲೆ ಒತ್ತ ಒದಿಯೋದು ಬಿಟ್ಟು' ಎನ್ನುವ ಆತನ ಭಿನ್ನಾಭಿಪ್ರಾಯಕ್ಕೆ ಪ್ರತಿಯಾಗಿ ರೋಷದಿಂದ 'ಬೋಳಿಮಗನೆ ಇಂತಾದ್ರಗೆಲ್ಲಾ ಹುಡುಗಾಟ ಆಡ್ತೀಯಾ! ಇವತ್ತು ನರಿವೇಷದಾಗೆ

ಬಂದು ಕೋಳಿ ಹೊರ್ತಿದಾನೆ. ನಾಳೆ ಹುಲಿವೇಷದಾಗೆ ಬಂದು ಮನುಷ್ಯರ್ನೇ ಹೊರ್ತಾನೆ! ಸುಮ್ನೆ ಮುಕ್ಕಿ ಮುಚ್ಕಂಡಿರು' ಎಂದು ಮತ್ತೊಬ್ಬ ಆತನ ಬಾಯನ್ನು ಮುಚ್ಚಿಸಿಬಿಡುತ್ತಾನೆ.

ಕೇರಿಯವರೆಲ್ಲ ಗುಂಪುಗೂಡಿಕೊಂಡು ತನ್ನ ಗುಡಿಸಿಲ ಹಾದಿಯಾಗಿ ಬರುವುದನ್ನು ಕಂಡು ಕೋಳಿ ಕಳ್ಳತನಕ್ಕೆ ಸರಿಯಾದ ಶಿಕ್ಷೆ ಕೊಡಲು ಬರುವರೆಂದು ಹೆದರುತ್ತಿದ್ದ ಮಾಯಿಗೇ ಆಶ್ಚರ್ಯವಾಗುವಂತೆ 'ನಮ್ಮ ಕೇರಿ ಮೇಲೆ ಯಾಕೆ ನಿನಗೆ ಕ್ವಾಪ' ಎನ್ನುತ್ತಿದ್ದಂತೆ ಚಾಣಕ್ಷ ಮಾಯಿ ಅವರ ಇಂಗಿತವನ್ನು ಅರಿತು, ಅನಿರೀಕ್ಷಿತವಾಗಿ ಸಿಕ್ಕ ಮಂತ್ರವಾದಿ ಹುದ್ದೆಯನ್ನು ಕೃತಜ್ಞತೆಯಿಂದಲೇ ಸ್ವೀಕರಿಸಿ ತೊಂದರೆ ಕೊಡುವುದಿಲ್ಲವೆಂದು ಅಭಯ ವಚನ ನೀಡಿ ಕಳುಹಿಸುತ್ತಾನೆ. ಅವತ್ತಿನಿಂದಲೇ ಉದ್ದ ಕೂದಲು ಬಿಟ್ಟು ಒಂದು ಸೋರೆ ಕಾಯಿ ಬುರುಡೆಯ ಏಕನಾದ ಮಾಡಿಕೊಂಡು ರಾಗವಾಗಿ ಕಣಿ, ಶಕುನ ಹೇಳಲು ಕಲಿತು, ಜನರೇ ಆಗೀಗ ಕೋಳಿ ತಂದು ಕೊಟ್ಟು ಕಾಲಿಗೆರಗುವಂತೆ ಮಾಡಿಕೊಂಡಿದ್ದ. ಇವನಂತೆಯೇ ಕಾಡು ಮತ್ತು ಕ್ರೌರ್ಯದ ವೆಂಕ್ಟುಡು ವರ್ತನೆ

ವೆಂಕುಗೆ ಇದ್ದುದು ಕ್ರೋಧ. ತನ್ನ ಬದುಕುನ್ನು ವಿರೂಪಗೊಳಿಸಿದ ಸಮಾಜದ ಮೇಲೆ ಕ್ರೋಧ. ನಿಸರ್ಗ ಶಕ್ತಿಗಳ ಮೇಲೆ ಪ್ರಭುತ್ವ ನಡೆಸುವ ರಾಕ್ಷಸ ಪಿಪಾಸೆಯಾಗಲೀ ವಾಮಾಚಾರ ಇತ್ಯಾದಿಗಳ ನಿಷ್ಠುರ ಕರ್ಮಗಳ ಬಗ್ಗೆ ತೀವ್ರ ವೈಜ್ಞಾನಿಕ ಶ್ರದ್ಧೆಯಾಗಲೀ ಇರಲಿಲ್ಲ. ........... ಬರಿಯ ಪದ್ಧತಿಯಾದ ಅಂಥ ಮಡಿತನದಂಥ ಆತ್ಮಕ್ರೌರ್ಯ ಇನ್ನೊಂದಿಲ್ಲ. ಕಲ್ಮನೆಯ ಘಾಸಲೆಯಲ್ಲಿ ಅದು ಆತ್ಮಗತವಾಗಿ ಜೀವನ ಅಸಹನೀಯವಾಗುತ್ತ ಬಂದಿತ್ತು.............ಅದಕ್ಕೇ ವೆಂಕು ಬಂದಾಗ ಏನನ್ನೂ ಬೋಧಿಸಬೇಕಾಗಿ ಬರಲಿಲ್ಲ. ಏನನ್ನೂ ಸಾಧಿಸಬೇಕಾಗಿ ಬರಲಿಲ್ಲ. ಕಲ್ಮನೆಗೆ ವೆಂಕು, ವೆಂಕುಗೆ ಕಲ್ಮನೆ ಪರಸ್ಪರ ವರಪ್ರದಾನಗಳಾಗಿದ್ದರು. ಸುಮ್ಮನೆ ಕೇಳಿದವರಿಗೆ ವಿಭೂತಿ ಕೊಟ್ಟ, ಕ್ರೂರ ಕರ್ಮ ಮಾಡಿದವರಿಗೆ ತಪ್ಪುಗಾಣಿಕೆ ಹಾಕಿಸಿ ಪುನೀತರನ್ನಾಗಿ ಮಾಡಿದ. ಕೇಳಿದವರಿಗೆ ಕಣಿ ಹೇಳಿದ. ಎಲ್ಲದಕ್ಕೂ ಬರಿಯ ನಿಮಿತ್ತ ಅವನು. ಕ್ರೌರ್ಯ ಅವನ ಮೂಲಕ ಪ್ರವರ್ತಿಸಿ ವರ್ಧಿಸುತ್ತಿದ್ದುದನ್ನು ಅವನು ಗುರುತಿಸಲೇ ಇಲ್ಲ. ಅವನಿಗಿದ್ದುದು ಜೀವಿಗಳ ಮೇಲೆ, ಜೀವನದ ಮೇಲೆ ಸೇಡು ತೀರಿಸುವ ಛಲ. ಸುತ್ತು ಮನೆತನಗಳೇ ಕ್ಷಯಿಸುತ್ತಿದ್ದುದನ್ನು ನೋಡಿ ಹಿಗ್ಗಿದ. ........

ಒಂದು ಯುಗಮಾನವೇ ಬದಲಾಗಿ ಬಾಳಿನ ಬೇರೇ ಜೀವನ ವಿನ್ಯಾಸವೇ ಬದುಲುತ್ತಿರುವುದರ ಅರಿವು ಅವನಿಗೆ ಆಗಲಿಲ್ಲ. ಸೋಮು ಒಮ್ಮೆ ಕಲ್ಮನೆಯಲ್ಲಿ ಅವನನ್ನು ಲೋಕಾಭಿರಾಮವಾಗಿ ಅಲ್ಲಗಳೆದ ವಿಧಾನ ವೆಂಕುವನ್ನು ಚಕಿತನನ್ನಾಗಿಸಿತು. ಮೌಢ್ಯಕ್ಕೆ ಪ್ರತಿಯಾಗಿ ಮೌಢ್ಯ ಹೂಡಲೇ ಇಲ್ಲ.[೫೨]

ಸುಳ್ಳನ್ನು ನಾಲ್ಕು ಬಾರಿ ಸತ್ಯ ಎಂದು ಹೇಳಿ ನಂಬಿಸಿದ ನಂತರ ಆ ನಂಬಿಕೆ ಭಸ್ಮಾಸುರನಂತೆ ನಿಧಾನ ಹೇಳಿದವನ ಕಡೆಗೇ ತಿರುಗುತ್ತದೆ. ಐದನೆಯ ಬಾರಿ ಹೇಳುವಾಗ ಸುಳ್ಳು ಸತ್ಯಾಸತ್ಯಗಳ ನಡುವೆ ಓಲಾಡುತ್ತಿರುತ್ತದೆ. ಆರನೆಯ ಬಾರಿ ಇದುವರೆಗೂ ಹೇಳಿದ್ದೇ ಸತ್ಯ ಅನ್ನುವ ಭ್ರಮೆ ಬರುತ್ತದೆ. ಮತ್ತೊಬ್ಬರನ್ನು ಮೋಸಗೊಳಿಸುವವನು ತನ್ನನ್ನೂ ಮೋಸಗೊಳಿಸಿಕೊಳ್ಳುವನು ಅನ್ನುವುದು ಈ ಅರ್ಥದಲ್ಲಿಯೇ.[೫೩]

ಕಾಡು ಮತ್ತು ಕ್ರೌರ್ಯ ಕಾದಂಬರಿಯಲ್ಲಿ ಈಗಾಗಗಲೇ ಪ್ರಚಲಿತದಲ್ಲಿದ್ದ ವೆಂಕ್ಟುಡು ಜನರ ಮೌಢ್ಯವನ್ನು ತನಗೆ, ತನ್ನ ದ್ವೇಷ ಸಾಧನೆಗೆ ಬಳಸಿಕೊಳ್ಳುವವನಾಗಿದ್ದರೂ ಅದು ಸೋಮುವಿನ ಕಾರಣವಾಗಿ ಹಿಂದೆ ಸರಿದಿತ್ತು. ತನ್ನನ್ನು ನಂಬದ ಎಲ್ಲರ ಮೇಲೂ ದ್ವೇಷ ತೀರಿಸಿಕೊಳ್ಳುವುದಕ್ಕಾಗಿ ಹವಣಿಸುತ್ತಲೇ ಇರುತ್ತಾನೆ.

ಇದುವರೆಗಿನ ಚಿಂತನೆಗಳಲ್ಲಿ ವೇದ್ಯವಾದ ಸಂಗತಿಯೆಂದರೆ ಅವನತಿ, ಕುಬಿ ಮತ್ತು ಇಯಾಲ ಕಥೆಗಳಲ್ಲಿ ಮೌಢ್ಯ–ಅಂಧಶ್ರದ್ಧೆಯಾಗಿ, ಚಿದಂಬರ ರಹಸ್ಯದ ಮಾಯಿ ಮೌಢ್ಯ–ಪಾರುಪತ್ಯವಾಗಿ,

ಮೌಢ್ಯ-ಚಿದಂಬರ ರಹಸ್ಯದ ಪಾಟೀಲ, ಕುಬಿ ಮತ್ತು ಇಯಾಲದ ಡಾ.ಕುಬೇರಪ್ಪ ಪಟ್ಟಧಾರಣೆ ಮಾಡುವುದು ನಡೆಯುತ್ತಲೇ ಇರುತ್ತವೆ.

**ಸರಿದ ಅಜ್ಞಾನದ ತೆರೆ:** ಮೌಢ್ಯವೆಂದು ಅರಿವಿದ್ದು ಅವುಗಳನ್ನು ನಿವಾರಿಸುವ ಯತ್ನ, ವೈಚಾರಿಕತೆಯ ಹಿನ್ನೆಲೆಯಲ್ಲಿ ನಡೆಯುತ್ತಲೇ ಇರುತ್ತವೆ. ಕರ್ವಾಲೋ ಕಾದಂಬರಿಯ ನಿರೂಪಕ ಸ್ವಂತ ರೈತನಾಗಿದ್ದು ಕೃಷಿ ಜೀವನದ ಕಷ್ಟನಷ್ಟಗಳನ್ನು ಅನುಭವಿಸಿದವ. ವ್ಯವಸಾಯದ ಸಂದರ್ಭದಲ್ಲಿ ಮಲಗಿಬಿಡುತ್ತಿದ್ದ ಎತ್ತುಗಳನ್ನು ಕಟ್ಟಿಕೊಂಡು ಹೇಗೊ ಅಂತೂ ನಾಟಿ ಮಾಡಿ ಮುಗಿಸಿದ್ದ ಭತ್ತದ ಗದ್ದೆಗೆ ಯಾವುದೋ ಅದೃಶ್ಯ ಹುಳುಗಳ ಕಾಟ ಇದಿರಾಗುತ್ತದೆ. ಅದಕ್ಕೆ ಯಾವುದೇ ಔಷಧ ಸಿಂಪಡಿಸಿದರೂ ಪರಿಸ್ಥಿತಿ ಬದಲಾಗುವುದಿಲ್ಲ. ಹುಳುಗಳ ಪತ್ತೆಯೇ ಇಲ್ಲದಿದ್ದರೂ ಎಲೆಗಳು ಮಾತ್ರ ತಿಂದಂತಿರುತ್ತವೆ ಇದನ್ನು ಕಂಡು ಎಲ್ಲರೂ ದೆವ್ವದ ಕಾಟ ಎಂಬ ತೀರ್ಮಾನಕ್ಕೆ ಬಂದದ್ದರಿಂದ ನಿರೂಪಕ ಮೌಢ್ಯಕ್ಕೆ ಶರಣಾಗುವ ಮೊದಲು ಸಂಶೋಧನಾ ಕೇಂದ್ರದ ಅಧಿಕಾರಿಯಾದ ಕರ್ವಾಲೋರನ್ನೊಮ್ಮೆ ಕಂಡು ಭತ್ತದ ಗದ್ದೆಗೆ ಬಂದಿರುವ ತೊಂದರಗಳನ್ನೆಲ್ಲ ವಿವರಿಸಿದಾಗ ಸಾವಕಾಶವಾಗಿ ಕೇಳಿಕೊಂಡು 'ನಾನು ನೋಡಿ ಅನಂತರ ನಿರ್ಣಯ ಹೇಳುತ್ತೇನೆ' ಎಂದು ಹೇಳಿ ಅವರು ತಾತ್ಪೂರ್ತಿಕವಾಗಿ ಕೆಲವು ಪರಿಹಾರೋಪಾಯಗಳನ್ನು ಸೂಚಿಸುತ್ತಾರೆ. ಕರ್ವಾಲೋ ಹೇಳಿದಂತೆ ಮಾಡಿದಾಗ ಗದ್ದೆಯ ಪೈರನ್ನು ತಿಂದು ಹಾಳುಮಾಡಿದ್ದು 'ಆರ್ಮಿವರ್ಮ್' ಎಂಬ ಹುಳುಗಳು ಎಂದು ಪ್ರಮಾಣವಾಗುತ್ತದೆ. ಹಳ್ಳಿ ಜನರ ಮೌಢ್ಯದ ಮಾತಿಗೆ ಮರುಳಾಗದೆ ವಸ್ತುಸ್ಥಿತಿಯನ್ನು ಪರಿಶೀಲನೆಗೆ ಒಳಪಡಿಸಿದ್ದು ಕರ್ವಾಲೊ ಕಾದಂಬರಿಯಲ್ಲಿ ಮಂಡಿತವಾದ ಮೊದಲನೆಯ ವೈಜ್ಞಾನಿಕ ವಿಚಾರ. ಇದರಂತೆಯೇ ಕೊಕ್ಕಾನಕ್ಕಿಯ ಜೀವನ ವಿಧಾನದ ಬಗ್ಗೆ ಕರ್ವಾಲೊ ಕರಿಯಪ್ಪನಿಗೆ ತಿಳಿಸಿಕೊಡುತ್ತಾರೆ. ಪರಿಸರ ಕಥೆಯಲ್ಲಿನ ಕುಕ್ಕಟಪ್ರಸಂಗ, ಜುಟ್ಟಿನ ಕಾಳಿಂಗ, ಕೋಬ್ರಾ ಇಲ್ಲಿ ಕಥಿತಗೊಳ್ಳುವ ಸಂದರ್ಭಗಳು ಸಮಾಜದಲ್ಲಿ ಮನೆಮಾಡಿರುವ ಸಾಮಾನ್ಯ ಸಂಗತಿಗಳಾಗಿಬಿಟ್ಟಿವೆ. ಅವುಗಳ ಹಿಂದಿನ ಕಾರಣಗಳು ಅನಾವರಣಗೊಂಡಾಗ ಪೂರ್ಣಪ್ರಮಾಣದಲ್ಲಿ ಅಲ್ಲದೆ ಹೋದರೂ ಸ್ವಲ್ಪ ಮಟ್ಟಿಗಾದರೂ ಸುಧಾರಣೆಗಳಾಗುವ ಸಾಧ್ಯತೆಗಳಿವೆ.

ಜೇನುಹುಳುಗಳು ತಾವು ಉತ್ಪತ್ತಿ ಮಾಡಿದ ಜೇನುತುಪ್ಪವನ್ನು ಬೇರೆಯವರ ಸ್ವಾಮ್ಯಕ್ಕೆ ಕೊಡುವ ಅವಸ್ಥೆಯನ್ನು ವಿರೋಧಿಸುವುದು ಮತ್ತು ಅನ್ಯಾಕ್ರಮಣವನ್ನು ಪ್ರತಿಭಟಿಸುವ ರೀತಿ ಕರ್ವಾಲೋ ಕಾದಂಬರಿಯಲ್ಲಿ ಬರುತ್ತದೆ.

> 'ಜೇನಿನ ಬಗ್ಗೆಯಾಗಲೀ ಜೇನುಹುಳುಗಳ ಬಗ್ಗೆಯಾಗಲೀ ಆಗ ನನಗೆ ಅಷ್ಟೊಂದು ತಿಳುವಳಿಕೆ ಇರಲಿಲ್ಲ. ಸ್ಥೂಲವಾಗಿ ನಾನು ಊಹಿಸಿದ್ದು ಅದು ಮಾನವನ ಮೊದಲ ಶತ್ರು. ಹಾವಿನಂತೆಯೆ ಮಾನವನನ್ನು ಕಚ್ಚಲು ಕೊಲ್ಲಲು ಯತ್ನಿಸುವ ಕೀಟ ಎಂದಷ್ಟೆ'[೫೪]

ಜೇನು ಪ್ರಕೃತಿದತ್ತವಾದ ಕೆಲವು ಕಚ್ಚಾ ಸಾಮಗ್ರಿಗಳನ್ನು ಬಳಸಿಕೊಂಡು ತನ್ನ ಸೃಜನಶೀಲ ಪ್ರಕ್ರಿಯೆಯೊಂದನ್ನು ಸೃಷ್ಟಿಸುತ್ತದೆ. ನಿರೂಪಕ ಸೊಸೈಟಿಯಿಂದ ಜೇನುತುಪ್ಪ ತೆಗೆದುಕೊಂಡು ಹೋಗುವಾಗ, ಟಿನ್ನಿಗೆ ಮುತ್ತಿಗೆ ಹಾಕುವ ಜೇನುಹುಳುಗಳು, ತಾವು ಉತ್ಪತ್ತಿ ಮಾಡಿದ ಪದಾರ್ಥವನ್ನು ಪರರ ಅನುಭೋಗಕ್ಕೆ ಕೊಡುವ ಸ್ಥಿತಿಯನ್ನು ವಿರೋಧಿಸುತ್ತವೆ. ಮುಂದೆ, ಮಂದಣ್ಣನ ಸ್ಕೌಟಿನ ತಂಡಕ್ಕೆ ಕೆರಳಿದ ಜೇನು, ಯಾರನ್ನೂ ಭೇದ ಮಾಡದೆ ಅಟ್ಟಸಿಕೊಂಡು

ಹೋಗುವುದು ಕೂಡ, ತನ್ನ ನೆಲೆಯಲ್ಲಿ ಅನ್ಯಾಕ್ರಮಣವನ್ನು ವಿರೋಧಿಸುವುದೇ ಆಗಿದೆ. ನಿರೂಪಕ ಕಾಡಿನಲ್ಲಿ ಕಂಡ ಜೇನನ್ನು ಮನೆಯಲ್ಲಿ ಕೂರಿಸಲು ವ್ಯವಸ್ಥೆ ಮಾಡುವುದು ಮತ್ತು ಅವುಗಳ ಪ್ರತಿರೋಧ-ಜೇನು ತನ್ನ ನೆಲೆಯನ್ನು ತಾನೇ ಹುಡುಕಿಕೊಳ್ಳಬೇಕೆನ್ನುವ ಅದಮ್ಯ ಆಕಾಂಕ್ಷೆಯನ್ನು ಹೇಳುತ್ತದೆ. ಕೃತಿಯ ಪ್ರಧಾನ ಕಾಳಜಿಯಾದ ಹಾರುವ ಓತಿಯ ವಿಷಯ ಕೂಡ, ಆಯಾ ಜೀವಿಗಳ ಸಾಂಸ್ಕೃತಿಕ ಶೋಧ ಮತ್ತು ಮಾನವನ ತಿಳಿವಳಿಕೆಯ ಹಿನ್ನೆಲೆಯಲ್ಲಿ ಜನಿಸುವ ಸ್ವಾರ್ಥ ಬಯಕೆಗಳೇ ಕಾರಣಗಳಾಗಿವೆ. ಇಲ್ಲಿ ಸಾಂಸ್ಕೃತಿಕ ಶೋಧ ಯಾಕೆಂದರೆ, ಮಾನವ ಮತ್ತು ಅರಣ್ಯವಾಸಿಗಳ ಬದುಕಿನ ಸಹಜ ಗತಿಗಳನ್ನು ಅಧ್ಯಯನಕ್ಕೆ ಒಳಪಡಿಸುತ್ತ, ಕಾಲಗತಿಯಲ್ಲಿ ಅವು ಮಾರ್ಪಾಡು ಆದ ಬಗೆ ಹಾಗೂ ಓತಿಯಂಥ ಅಪರೂಪ ಜೀವಿಯ ತಳಿ ಅಭಿವೃದ್ಧಿ ಪಡಿಸುವ ಕ್ರಮಗಳನ್ನು ಅನ್ವೇಷಿಸುವುದು, ಇದು ಆ ಅರಣ್ಯವಾಸಿಗಳ ಅಸ್ತಿತ್ವಕ್ಕೇ ಪೂರ್ಣಮಟ್ಟದ ಗೌರವ ಸಲ್ಲಿಸುವುದರಿಂದ, ಈ ಅಧ್ಯಯನ ಕ್ರಮವನ್ನು ಮಾನವೀಯ ನೆಲೆಯಲ್ಲಿ ಸ್ವಾಗತಿಸಬಹುದು.[೫೫] ಎನ್ನುವ ಅಭಿಪ್ರಾಯವು ತೇಜಸ್ವಿಯರ ನಿಲುವನ್ನು ಸಮರ್ಥಿಸುತ್ತದೆ.

> ನಾನು ನನ್ನ ಮನೆ ಪಕ್ಕ ಹರಿಯುವ ಝರಿ ಬತ್ತಿದರೆ ಕುಡಿಯುವ ನೀರಿಗೆ ಏನು ಮಾಡುವುದಪ್ಪಾ ಎಂದು ಚಿಂತೆಯಲ್ಲಿದ್ದೆ. ಅದು ಹುಟ್ಟುವ ಜಾಗದಲ್ಲಿ ಮತ್ತು ಹರಿಯುವ ಪಾತ್ರದ ಅಕ್ಕಪಕ್ಕ ಒಂದೇ ಒಂದು ಮರವನ್ನಾಗಲಿ ಗಿಡವನ್ನಾಗಲಿ ಕಡಿಯದೆ ಕಾಡು ಹೇಗಿತ್ತೋ ಹಾಗೇ ಉಳಿಸಿದ್ದೆ. ಹಿಂದೊಮ್ಮೆ ನನ್ನ ಹಳೆ ತೋಟದಲ್ಲಿ ನೀರು ಹೆಚ್ಚು ಬರುವಹಾಗೆ ಮಾಡೋಣೆಂದು ಝರಿ ಹುಟ್ಟಿದಲ್ಲಿ ಬೆಳೆದಿದ್ದ ಸುರುಳಿ ಗಿಡಗಳ ಜಿಗ್ಗನ್ನೆಲ್ಲಾ ಸವರಿ ಕಾಲುವೆ ಹೊಡೆದಿದ್ದೆ. ನೀರು ಆ ಒಂದು ವರ್ಷ ಸಂಪೂರ್ಣ ಬತ್ತಿಹೋಗಿ ಸರಿಯಾಗಿ ಬುದ್ಧಿ ಕಲಿಸಿದ್ದರಿಂದ ಮತ್ತೆ ನಾನು ಹಳ್ಳದ ತಂಟೆಗೆ ಹೋಗಿರಲಿಲ್ಲ.[೫೬]

ಇದು ಪ್ರಕೃತಿಯನ್ನು ಮಾನವ ಬಳಸಿಕೊಳ್ಳುತ್ತಿರುವುದು ಅಜ್ಞಾನದಿಂದ ಎಂಬುದನ್ನು ಅರುಹುವುದಲ್ಲದೆ, ಪರಿಸರ, ಪ್ರಾಣಿ ಪಕ್ಷಿ, ಕೀಟ ಜಗತ್ತಿನೊಡನೆ ಮಾನವ ಸಹಜವಾಗಿ ತೊಡಗಿಸಿಕೊಳ್ಳುವುದಕ್ಕೆ ಆಗದ ಪರಿಸ್ಥಿತಿಯ ಅನಾವರಣವೂ ಆಗಿದೆ.

ಪರಂಪರಾಗತ ನಂಬಿಕೆಗಳೊಂದಿಗೆ ಸಾಂಪ್ರದಾಯಿಕತೆ, ಸಾಮಾಜಿಕ ಕಟ್ಟುಪಾಡುಗಳು ಬದುಕನ್ನು, ಕಟ್ಟಿಹಾಕಲು ಪ್ರಯತ್ನಿಸುತ್ತವೆ. ಇದರಿಂದ ಹೊರಬರುವ ಮಾರ್ಗವೂ ಸಂದರ್ಭಾನ್ವಯ ಮಾರ್ಪಡುತ್ತಿರುತ್ತದೆ. ವೈಯಕ್ತಿಕವಾಗಿ ಪಲ್ಲಟಗೊಳ್ಳುವ ವೈಚಾರಿಕ ಚಿಂತನೆಗಳು ಸಾಮಾಜಿಕವಾಗಿ ತೆರೆದುಕೊಳ್ಳುವುದಕ್ಕಾಗಿ ಹಾತೊರೆಯುತ್ತವೆ. ವೈಜ್ಞಾನಿಕವಾಗಿ ಚಿಂತಿಸುವ, ವೈಚಾರಿಕವಾಗಿ ಆಲೋಚಿಸುವ, ತಾತ್ವಿಕತೆಯ ಆಳವಾದ ವಿಶ್ಲೇಷಣೆಗೆ ಒಳಪಡುವ ವಿಚಾರಗಳು ಸಮಾಜವನ್ನು ಸಾಮಾಜಿಕ ಸಮಸ್ಯೆಗಳನ್ನು ಸಾಹಿತ್ಯಕ ನೆಲೆಯಲ್ಲಿ ಬಿಂಬಿಸಲು ಪ್ರಯತ್ನಿಸುತ್ತವೆ. ಇದರ ಹರಿವು ಸಂದರ್ಭಾನುಸಾರ ಸಮೂಹಕ್ಕೂ, ಹಲವು ವೈವಿಧ್ಯತೆಗಳನ್ನು ಒಳಗೊಂಡ ವ್ಯಕ್ತಿತ್ವಕ್ಕೂ ಬೆಲೆ ನೀಡುವ ಔದಾರ್ಯ, ಧರ್ಮ, ಜಾತಿ ಬಗೆಗಿನ ಲೇಖಕರ ಧೋರಣೆ ಎಲ್ಲವನ್ನೂ ಒಳಗೊಂಡು ಅವು ಸಂಪೂರ್ಣವಾದ ಚೌಕಟ್ಟಿನೊಳಗೆ ಬಂಧಿತವಾಗಿರುತ್ತದೆ. ಕಟ್ಟು ಬಿಚ್ಚಿದೊಡನೆಯೇ ವಿವಿಧ ದೃಷ್ಟಿಕೋನಗಳನ್ನು ಹಾಯ್ದು ಸಮಾಜದ ಹರವಿನೊಳಗೆ ಸೇರ್ಪಡೆಯಾಗಿ ಬಿಡುತ್ತದೆ. ಆದ್ದರಿಂದ ಸಾಮಾಜಿಕತೆಗೆ ಒಂದೇ ಭಾವಪಕ್ಷದ ಅಭಿಮತವನ್ನು ಸೂಚಿಸಲಾಗುವುದಿಲ್ಲ. ಏಕೆಂದರೆ ಸಮಾಜದಲ್ಲಿನ ಆಚಾರ ವಿಚಾರಗಳನ್ನು ಹೊಸ ದೃಷ್ಟಿಕೋನದಿಂದ ನೋಡುವ ಕ್ರಮದ ಜೊತೆಗೆ ಅನ್ಯ ಆಸಕ್ತಿಯ ಕ್ಷೇತ್ರಗಳನ್ನು ಆಯ್ದುಕೊಂಡಾಗ ಅದರಲ್ಲಿನ ವಿಶಿಷ್ಟತೆಗಳನ್ನು ಗುರುತಿಸುವುದು ಪ್ರಮುಖವಾಗಿರುತ್ತದೆ. ಇದರಿಂದ ನೋಡುವ

ನೋಟಕ್ರಮ ಆಧಾರಿತ ಗ್ರಹಿಕೆಗಳು ತನ್ನ ಸೀಮಿತ ಪರಧಿಯನ್ನು ಮೀರುವ, ಮತ್ತು ತನ್ನ ಪ್ರಜ್ಞೆಯ ಸಹಾಯದಿಂದ ಗೆಲ್ಲುವ ಶಕ್ತಿಯಾಗಿ ಮಾರ್ಪಡುತ್ತದೆ

ಪಾರಂಪರಿಕ ಸಮಾಜವನ್ನು ನೋಡುವ ದೃಷ್ಟಿಯು ತನ್ನ ಸಂಕುಚಿತತೆಯನ್ನು ಕಳಚಿಕೊಂಡು ಇರುವ ಕ್ರಮದೊಳಗೆ ಕಟ್ಟುವ ಸಾಧ್ಯತೆಗಳ ಅನ್ವೇಷಣೆಯು ತೇಜಸ್ವಿಯ ಕಾಲಘಟ್ಟದಲ್ಲಿ ನಡೆಯಿತು. ಕ್ರಮೇಣ ಇಂತಹ ಆರೋಗ್ಯಕಾರಿ ಬೆಳವಣಿಗೆಯನ್ನು ತನ್ನೊಳಗೆ ರೂಪಿಸಿಕೊಳ್ಳುತ್ತಾ, ತನ್ನಿಂದ, ತನ್ನ ಆಲೋಚನೆಗಳಿಂದ, ಇದುವರೆಗಿನ ಬದುಕಿನ ಮಾದರಿಗಳಿಂದ ಹೊರಬಂದ ಸಹನೆ, ತಾಳ್ಮೆಯ ದೃಷ್ಟಿ ಬೆಳೆಸಿಕೊಂಡದ್ದು ಗಮನಾರ್ಹ ಬೆಳವಣಿಗೆಯಾಯಿತು.[೫೭] ಪ್ರಾರಂಭದ ಕಥನಗಳಲ್ಲಿನ ವ್ಯಕ್ತಿನಿಷ್ಠತೆಯೂ ತನ್ನ ಅನುಭವದಿಂದಲೇ ಅಭಿವ್ಯಕ್ತಿ ಪಡೆಯುತ್ತಿದ್ದುದು ಕ್ರಮೇಣ ಬದಲಾಯಿತು. ಆನಂತರ ಕರ್ವಾಲೋದಲ್ಲಿ ಸಾಮಾಜಿಕ ಆಯಾಮದ ಹಲವು ಅನುಭವಗಳ ವಸ್ತುಸ್ಥಿತಿಯೂ ಪ್ರಮುಖ ಎಂಬ ಅರಿವಿನತ್ತ ಸರಿಯಿತು, ಅದೇ ಮಾಯಾಲೋಕ ಸಂಸ್ಕೃತಿಯ ಒಳಚಲನೆಗಳನ್ನು ಹುದಗಿಸಿಕೊಂಡಿರುವ ಕಾದಂಬರಿಯಾಗಿ ಮಾರ್ಪಟ್ಟಿತು. ಈ ಪ್ರಕ್ರಿಯೆಗಳು ಬದಲಾಗುತ್ತಿರುವ ಸಮಾಜದೊಂದಿಗೆ ಮನುಷ್ಯ ಸಂಬಂಧಗಳನ್ನು ಹೆಚ್ಚು ಆಳವಾಗಿ ನಿರೂಪಿಸಿವೆ.

## ೩.೨.೨.೩: ಉನ್ನತಿ ಮತ್ತು ಅವನತಿಯ ಸಂಘರ್ಷ

ಸಾಮಾಜಿಕ ಬದುಕಿನ ಚಿತ್ರಣ ಸಾಮಾನ್ಯವಾಗಿ ಎಲ್ಲಾ ಕಾದಂಬರಿಯ ವಸ್ತುವಿನೊಳಗೆ ಅವಿಭಾಜ್ಯ ಅಂಗವಾಗಿ ಬೆರೆತುಹೋಗಿರುತ್ತದೆ. ಸಾಮಾಜಿಕ ವಾಸ್ತವವನ್ನು ಪ್ರತಿಯೊಬ್ಬ ಲೇಖಕನು ತನ್ನ ಅನುಭವದೊಂದಿಗೆ ಕಟ್ಟಿಕೊಡುವುದು ಸಹಜ. ಈ ಸಹಜಾಭಿವ್ಯಕ್ತಿಯಲ್ಲಿಯೂ ಅನನ್ಯವಾಗಿ ಅಭಿವ್ಯಕ್ತಿಸುವವರು ತೇಜಸ್ವಿ ಎಂದೇ ಹೇಳಬೇಕು. ಏಕೆಂದರೆ ತೇಜಸ್ವಿಯವರಂತೆ ಸಾಮಾಜಿಕ ಬದುಕನ್ನು ತಮ್ಮ ಕಥನಗಳಲ್ಲಿ ಸೂಕ್ಷ್ಮವಾಗಿ ಅದರ ಎಲ್ಲ ಸಂಶ್ಲೇಷಣೆಗಳೊಂದಿಗೆ ಅಭಿವ್ಯಕ್ತಿಸಿರುವ ಲೇಖಕರು ತುಂಬಾ ಕಡಿಮೆ. ತೇಜಸ್ವಿ ಮಲೆನಾಡಿನ ಸುತ್ತಣ ಬದುಕಿಗೆ ಅನ್ವಯವಾಗುವಂತೆ ಕಟ್ಟಿಕೊಡುವ ಸಾಂಸ್ಕೃತಿಕ-ಭೌತಿಕ ವಾಸ್ತವದ ಚಿತ್ರಣ ಬದುಕಿನಲ್ಲಿ ಅಂತರ್ಗತವಾಗಿರುವ ಕಲಾತ್ಮಕತೆಯನ್ನು ಅನ್ವೇಷಿಸುತ್ತದೆ. ಈ ಅನ್ವೇಷಣೆಯ ಪ್ರತಿಫಲನವೇ ರಾಷ್ಟ್ರವ್ಯಾಪಿ ಅನ್ವಯದ ಚಾರಿತ್ರಿಕ ಉಲ್ಲೇಖವಾಗಿದೆ. ಹಾಗಾಗಿ ತೇಜಸ್ವಿ ಅಭಿವ್ಯಕ್ತಿಸಿರುವ ಸಾಮಾಜಿಕ ಅನನ್ಯತೆ ಯಾವುದೇ ಅರ್ಥವ್ಯಾಪ್ತಿಗೆ ನಿಲುಕದ್ದು ಎಂಬುದು ಸ್ಪಷ್ಟ. ಚಾರಿತ್ರಿಕ ಪ್ರಕ್ರಿಯೆಯಿಂದ ವಿಶ್ವಾತ್ಮಕ ಲೀಲೆಯವರೆಗೆ ತೇಜಸ್ವಿಯವರ ವಿಚಾರ ಧಾರೆಗಳು ವ್ಯಾಪಿಸಿಕೊಂಡಿವೆ. ಅವು ವಿಶ್ವ ಪರಿವರ್ತನೆಯ ಸಾಮಾಜಿಕ ಬೆಳವಣಿಗೆಯ ಸ್ವರೂಪವನ್ನು ಕುರಿತು ಚರ್ಚಿಸುತ್ತವೆ.

ಸಾಮಾಜಿಕ ಬದಲಾವಣೆಗಳು ಒಡೆದು ಕಾಣುವಷ್ಟು ತೀವ್ರವಾಗಿರಬಹುದು ಇಲ್ಲದೇ ಅನೇಕ ಸಲ ಆಗುವಂತೆ, ಕಾಣದಷ್ಟು ಮಂದವಾಗಿರಬಹುದು. ಅಂತಹವುಗಳನ್ನು ಸೂಕ್ಷ್ಮಗ್ರಾಹಿಯಾದ, ಸಂವೇದನಾಶೀಲಾ ಮನಸ್ಸುಗಳು ಬದಲಾವಣೆಗಳ ಒಳಸುಳಿಗಳನ್ನು, ದಿಕ್ಕನ್ನು, ಗುರುತಿಸಿ ಅವುಗಳ ಸಾಧಕ-ಬಾಧಕಗಳ ಬಗ್ಗೆ ಯೋಚಿಸುತ್ತವೆ. ಜಾಗೃತ, ಮನಸ್ಸು, ಗ್ರಹಿಸುವುದು ಒಂದಾದರೆ, ಸೃಜನಶೀಲ ಮನಸ್ಸು ತನಗೆ ಗೊತ್ತಿಲ್ಲದಂತೆಯೇ ಇನ್ನೊಂದನ್ನೂ ಗ್ರಹಿಸಿಕೊಂಡಿರುತ್ತದೆ. ಸಾಮಾಜಿಕ ಬದಲಾವಣೆಗಳು ಮೇಲ್ನೋಟಕ್ಕೆ ಔನ್ನತ್ಯದಂತೆ, ಪ್ರಗತಿ ಪಥದಂತೆ ಕಂಡುಬಂದರೂ ಆಳದಲ್ಲಿ ಈ ನೆಲೆಗಳಿಗಿಂತ ಭಿನ್ನವಾದ ರೀತಿಯಲ್ಲಿ ಕೆಲವೊಂದು ಪ್ರಕ್ರಿಯೆಗಳಲ್ಲಿ ದುರಂತದ ಬೆಳವಣಿಗೆಯೂ ಆಗಿರುವುದಕ್ಕೆ ಸಾಧ್ಯವಿರುತ್ತದೆ. ತೇಜಸ್ವಿ ಕಥನಗಳಲ್ಲಿನ ವ್ಯಕ್ತಿಯ ಬದುಕಿನ ಅತ್ಯಂತ ಸೂಕ್ಷ್ಮ ನೆಲೆಗಳನ್ನು ಗ್ರಹಣೆಗೆ ತಂದುಕೊಳ್ಳದೆ ಔಪಚಾರಿಕವಾಗಿ ಕೆಲವು ಪ್ರಮುಖ ಘಟನೆಗಳನ್ನು ಗಮನಿಸಿದಾಗ ಚಾರಿತ್ರಿಕ ಸನ್ನಿವೇಶದಲ್ಲಿ ನೋಡಿದಾಗ ಔನ್ನತ್ಯ ಜೊತೆ ಜೊತೆಗೆ ದುರಂತವನ್ನು ತಂದಿರುವುದು ಸ್ಪಷ್ಟವಾಗಿ ತಿಳಿದುಬರುತ್ತದೆ.

ಚಾರಿತ್ರಿಕ ನೆಲೆಗಳಲ್ಲಿ ತೆರೆದುಕೊಳ್ಳುವ ತೇಜಸ್ವಿಯವರ ಕಥನಗಳಲ್ಲಿ ಸಾಂಸ್ಕೃತಿಕವಾಗಿ ಗುರುತಿಸುವುದಾದರೆ ಇಂದ್ರಿಯ ಪಾತಳಿಯ ಬದುಕು ಮತ್ತು ಕ್ರಿಯೆಗಳು ಮನುಷ್ಯರ ಅಧಃಪತನಕ್ಕೆ ಕಾರಣವೆನ್ನುವುದು. ಈ ಅಧಃಪತನವು ಮನುಷ್ಯನ ಒಟ್ಟು ಸಾಮರ್ಥ್ಯವನ್ನು ವ್ಯಕ್ತಿತ್ವದ ಹಲವು ನೆಲೆಗಳ ಗ್ರಹಿಕೆಯನ್ನು ಮಾಡುವುದಿಲ್ಲ. ಆದ್ದರಿಂದಲೇ ಉನ್ನತಿ ಮತ್ತು ಅವನತಿಯ ನಡುವಿನ ಸಂಘರ್ಷ ಹೆಚ್ಚು ದುರಂತದೆಡೆಗೆ ವ್ಯಾಪಿಸಿಕೊಂಡಿರುವುದು. ಒಂದರ ಅವಸಾನ ಮತ್ತೊಂದರ ಹುಟ್ಟಿಗೆ ಕಾರಣವಾಗುತ್ತದೆ ನಿಜ. ಅವಸಾನದ ಬೇರು ಸಂಪೂರ್ಣ ನಾಶವಾದರೆ ಚಿಗುರುವಿಕೆ ಎಲ್ಲಿಂದ ಸಾಧ್ಯವಾದೀತು.

ಬದಲಾವಣೆ ಎನ್ನುವುದು ವ್ಯಕ್ತಿಗತವಾದ ಸಂದರ್ಭಗಳಿಗೆ ಮಾತ್ರ ಅನ್ವಯಿಸದೆ ಹಲವು ರೀತಿಯಲ್ಲಿ ಸಾಮಾನ್ಯ ಜನಜೀವನವನ್ನು ಪ್ರವೇಶಿಸಿದಾಗ ಅವರು ಎದುರುಗೊಳ್ಳುವ ಸಮಾಜದ ಪ್ರತಿಕ್ರಿಯೆ ಹೇಗಿರಬಹುದು ಎಂಬುವುದಕ್ಕೆ ನಿದರ್ಶನ ರೂಪಕವಾಗಿ ಗುರುಗಳ್ಳಿ, ಮೇದರಹಳ್ಳಿ, ಅಬಚೂರು ಈ ಹಳ್ಳಿಗಳಲ್ಲಾದ ಸ್ಥಿತ್ಯಂತರಗಳನ್ನು ಗಮನಿಸಬಹುದು.

ಸರಳವಾಗಿ ನಿರಾತಂಕವಾಗಿ ಇದ್ದಂತಹ ಊರುಗಳು ಆಧುನಿಕತೆಯ ಪ್ರಭಾವಕ್ಕೆ ಸಿಲುಕಿ ನಾನಾಕಾರಣಗಳಿಂದ ತಮ್ಮ ನಿಜಸ್ವರೂಪವನ್ನು ಕಳೆದುಕೊಂಡು ಉನ್ನತಿಯ ಹೆಸರಿನಲ್ಲಿ ಪರ್ಯವಸಾನ ಹೊಂದುವ ರೀತಿಯನ್ನು 'ಜುಗಾರಿಕ್ರಾಸ್'ನಲ್ಲಿ ಪ್ಲಾಸ್ಟಿಕ್ ಬಳಕೆಯೇ ಮೇದರಹಳ್ಳಿಯ ಅವನತಿಗೆ, 'ತುಕ್ಕೋಜಿ'ಯಲ್ಲಿ ರೈಲುನಿಲ್ದಾಣದ ಆಗಮನದಿಂದ ತುಕ್ಕೋಜಿಯ ಅಧಃಪತನ, 'ಅವನತಿ'ಯಲ್ಲಿ ಶಿಲ್ಪನೈಪುಣ್ಯವನ್ನು ಹೊಂದಿದ್ದ ಸೂರಾಚಾರಿಯ ಕಲಾಪ್ರಜ್ಞೆಯ ಅಳಿವು, 'ಅಬಚೂರಿನ ಪೋಸ್ಟಾಫೀಸಿ'ನಲ್ಲಿ ಅಂಚೆಕಛೇರಿಯ ಆಗಮನದಿಂದ ಬೋಬಣ್ಣನ ಸಂಸಾರದಲ್ಲಾಗುವ ತಲ್ಲಣ ಹೀಗೆ ನಾನಾ ರೀತಿಯಲ್ಲಿ ವಿಶ್ಲೇಷಿಸಿಬಹುದು.

**ಅಂಚೆಕಛೇರಿಯ ಆಗಮನದಿಂದ ಬೋಬಣ್ಣನ ಸಂಸಾರದಲ್ಲಾಗುವ ತಲ್ಲಣ:** ವಸಾಹತುಶಾಹಿ ಸಂದರ್ಭದಲ್ಲಿ ಭಾರತಲ್ಲಿ ಸಮೂಹಸಂಪರ್ಕ ಮಾಧ್ಯಮಗಳಲ್ಲೊಂದಾಗಿ ಹುಟ್ಟಿಕೊಂಡ ಅಂಚೆ ವ್ಯವಸ್ಥೆ ಇಲ್ಲಿ ವಿಶಿಷ್ಟವಾದ ಪಾತ್ರವಹಿಸಿದೆ. ವಸಾಹತುಶಾಹಿಯ ಆಕ್ರಮಣದಿಂದ ಭಾರತೀಯ ಪರಿಸರದಲ್ಲಿ ಉಂಟಾದ ತೊಡಕುಗಳನ್ನು ಅಬಚೂರು ಎಂಬ ಹಳ್ಳಿಯನ್ನು ಕೇಂದ್ರವಾಗಿಟ್ಟುಕೊಂಡು, ಆ ಊರಿನ ಹಂಗಾಮಿ ಪೋಸ್ಟ್‌ಮಾಸ್ತರನಾದ ಬೋಬಣ್ಣನ ಸಂಸಾರದ ಮೂಲಕ ಚಿತ್ರಿಸಲಾಗಿರುವುದೇ ಈ ಕಥೆಯ ವಸ್ತು. ಆಧುನಿಕತೆಯ ಸ್ವರೂಪ ನಿಧಾನವಾಗಿ ತೆಕ್ಕೆಗೆ ತೆಗೆದುಕೊಳ್ಳುವ ಪರಿ ಮತ್ತು ಅದ್ಯಾವುದರ ಅರಿವಿಲ್ಲದ ಅಬಚೂರಿನ ಜನತೆಯ ಗೊಂದಲಮಯ ಜಗತ್ತಿನ ಅವಾಂತರಗಳು, ಆ ಸಂದರ್ಭದಲ್ಲಿನ ಸಾಮೂಹಿಕ ವರ್ತನೆಗಳ ಪರಿಚಯವನ್ನು ಕಥೆ ವ್ಯಾಖ್ಯಾನ ಮಾಡುತ್ತದೆ.

ಅಲ್ಲೀಜಾನ್ ಸಾಬರ ಮಗನಾದ ಅಜೀಜನಿಗೆ ಬಂದಿದ್ದ ಲಕೋಟೆಯೊಳಗಿದ್ದ ಅರೆನಗ್ನ ಹೆಣ್ಣಿನ ಚಿತ್ರ ಬೋಬಣ್ಣನಲ್ಲಿ ಸುಪ್ತವಾಗಿದ್ದ ಕಾಮನೆಗಳನ್ನು ಕೆರಳಿಸುವುದಲ್ಲದೆ ಆ ಚಿತ್ರ ಹೆಣ್ಣಿನ ಬಗ್ಗೆ ಬೇರೆ ರೀತಿಯಲ್ಲಿ ಆಲೋಚಿಸುವುದಕ್ಕೆ ಪ್ರೇರೇಪಿಸುತ್ತದೆ. ರೈಟರ್‌ರಾಗಿದ್ದು ತನ್ನ ಕೈಕೆಳಗೆ ಕೆಲಸ ನಿರ್ವಹಿಸುತ್ತಿದ್ದ ಹೆಣ್ಣಾಳುಗಳು ಅನೇಕರಿದ್ದರೂ ಯಾವುದೇ ಹೆಣ್ಣಿನ ಅನಗತ್ಯ ಸಹವಾಸಕ್ಕೆ ಒಳಗಾಗದ ಬೋಬಣ್ಣ ಹೆಂಡತಿಯಾದ ಕಾವೇರಿಯಲ್ಲೇ ಅತ್ಯಾಸಕ್ತನಾಗಿ ಕಾಮ ಚೇಷ್ಟೆಗಳಲ್ಲಿ ತೊಡಗುತ್ತಾನೆ. ಆತನ ಬದಲಾದ ನಡವಳಿಕೆಗಳಿಗೆ ಸರಿಯಾದ ಕಾರಣವನ್ನು ತಿಳಿಯದೆ ಚಡಪಡಿಸುವ ಮಾಚಮ್ಮ-ಕಾವೇರಿಯರಿಗೆ ತಮ್ಮ ಮನೆಯ ಅಂಚೆಕಛೇರಿ ಹರಟೆ ಕೇಂದ್ರವಾಗಿ ಪರಿವರ್ತಿತವಾಗುತ್ತಿರುವುದು ಬೇಸರವನ್ನುಂಟು ಮಾಡುತ್ತದೆ. ಇದನ್ನು ಮಾಚಮ್ಮ ಖಂಡಿಸುತ್ತಾಳೆ. ಅವರಿವರ ಸಲಹೆಗಳಂತೆ ನಡೆದುಕೊಂಡ ಬೋಬಣ್ಣನ ಮೇಲೆ ವೇಲಾಯುಧ ಪರಿವಾರ ಸಮೇತನಾಗಿ ಬಂದು ಗುಂಪಿನೊಡಗೂಡಿ; ಮಗಳು ಪದ್ಮಿಯ ಚಾರಿತ್ರ್ಯವಧೆಗೆ ಸಂಬಂಧಿಸಿದ ಪತ್ರ ಬರೆದದ್ದು ಬೋಬಣ್ಣನೇ ಎಂದು ದೂರುತ್ತಾ, ಕೂಗಾಡುವ ಸಂದರ್ಭದಲ್ಲಿ ಯಾವ ರೀತಿಯಲ್ಲೂ

ಸಹಕರಿಸದ ಅಬಚೂರಿನ ಜನರ ಮನಸ್ಥಿತಿ ಬದಲಾವಣೆಗೆ ತೆರೆದುಕೊಂಡ ಅನಂತ ಸಾಧ್ಯತೆಗಳನ್ನು ಮನದಟ್ಟು ಮಾಡಿಸುತ್ತದೆ.

ಮಾಧ್ಯಮಗಳು ಒಳ್ಳೆಯ ರೀತಿಯಲ್ಲಿ ಬಳಸಲ್ಪಟ್ಟರೆ ಅವುಗಳು ಗಣನೀಯವಾದ ಸೇವೆಯನ್ನು ಒದಗಿಸುವುದಲ್ಲದೆ ನಿಚ್ಚಳವಾದ ಅಭಿವೃದ್ಧಿಯನ್ನು ಕಾಣುವ ಸಾಧ್ಯತೆ ಸಾರ್ವಜನಿಕರಿಗಿರುತ್ತದೆ. ಅದೇ ಮಾಧ್ಯಮಗಳು ಕುತೂಹಲ ಮೂಡಿಸುವುದರ ಜೊತೆಗೆ ಮೈಮನಗಳನ್ನು ಕಲುಷಿತಗೊಳಿಸಿ ವೈಪರೀತ್ಯಕ್ಕೆ ಎಡೆ ಮಾಡುತ್ತವೆ. ಹೊಸ ಸಂಪರ್ಕ ಮಾಧ್ಯಮದ ಸೇತುವೆಯಾಗಬೇಕಾಗಿದ್ದ ಪೋಸ್ಟಾಫೀಸು ಬೋಬಣ್ಣನ ಮಾನಸಿಕ ಅಶಾಂತಿಗೆ ಕಾರಣವಾಗಿ ಎಲ್ಲ ಮನುಷ್ಯ ಸಂಬಂಧಗಳನ್ನು ಕಡಿದು ಹಾಕುವ ಕೇಂದ್ರವಾಗುತ್ತದೆ.

**ಜುಗಾರಿಕ್ರಾಸ್‌ನಲ್ಲಿ ಪ್ಲಾಸ್ಟಿಕ್ ಬಳಕೆಯಿಂದ ಮೇದರಹಳ್ಳಿಯ ಅವನತಿ:** ಅವನತಿಗೆ ಕಾರಣವನ್ನು ಸೂಚಿಸುವ ತೇಜಸ್ವಿಯವರು 'ಮೇದರಳ್ಳಿಯಲ್ಲಿ ಮೊಳಕೆಯೊಡೆದು ಚಿಗುರಿದ್ದಕ್ಕೆ ಕಾರಣ ಅದರ ಆಸುಪಾಸಿನಲ್ಲಿ ಸಾವಿರಾರು ಚದರ ಮೈಲಿ ಅಕ್ಷಯವಾಗಿ ಬೆಳೆದಿದ್ದ ಹೆಬ್ಬಿದಿರು, ವಾಟೆ ಬಿದಿರು, ಕಿರುಬಿದಿರು ಇತ್ಯಾದಿಗಳು. ಅಲ್ಲಿನ ಬಿದಿರು ಎಷ್ಟು ಒಳ್ಳೆಯದೆಂದರೆ ತಲೆಯಿಂದ ಬುಡದವರೆಗೆ ತೆಳ್ಳಗೆ ದಾರದಂತೆ ಸೀಳಬಹುದಿತ್ತು. ಸಿಂಗಾಪುರದ ಬೆತ್ತದ ಹಾಗೆ ಬೆಳ್ಳಗೆ ಹೊಳೆಯುವ ಈ ಬಿದಿರು ಬೇಕಾದ ಆಕಾರಕ್ಕೆ ಬಗ್ಗಿಸಿದರೂ ಮುರಿಯದೆ ಸಿಬಿರೇಳದೆ ಹೇಳಿದ ಹಾಗೆ ಕೇಳುತ್ತಿತ್ತು. ಮೇದರಳ್ಳಿಯಲ್ಲಿ ಮಾಡಿದ ಬೆತ್ತದ ತಡಿಕೆಗಳೂ, ಬುಟ್ಟಿ, ಮರ, ಕುಣಿಗಳೂ ಕರ್ನಾಟಕದಾದ್ಯಂತ ಹೆಸರುವಾಸಿಯಾಗಿದ್ದವು. ಆದರೆ ಹಳ್ಳಿ ನಿಜಕ್ಕೂ ಪ್ರವರ್ಧಮಾನಕ್ಕೆ ಬಂದಿದ್ದು ಯೂರೋಪಿಯನ್ನರ ಕಾಲದಲ್ಲಿ. ಕಾಫಿ ತೋಟದ ದೊರೆಗಳಿಗೆ ಕಾಫಿ ಸಸಿಗಳನ್ನು ಬೆಳೆಸಲು ಬೇಕಾಗಿದ್ದ ಬಿದಿರಿನ ಚಿಕ್ಕ ಚಿಕ್ಕ ಕುಕ್ಕೆಗಳು ಮೇದರಳ್ಳಿಯಿಂದಲೇ ಸರಬರಾಜಾಗುತ್ತಿದ್ದುದು. ದೊಡ್ಡ ದೊಡ್ಡ ಯೂರೋಪಿಯನ್ ದೊರೆಗಳೆಲ್ಲ ಮೇದರಳ್ಳಿಗೆ ಬೇಟಿಕೊಟ್ಟು ಮುಂಗಡ ಹಣಕೊಟ್ಟು ಲಕ್ಷಾಂತರ ಕಾಫಿ ಕುಕ್ಕೆಗಳಿಗೆ ಆರ್ಡರ್ ಬುಕ್ ಮಾಡುತ್ತಿದ್ದರು. ಕಾಫಿ ತೋಟಗಳು ವಿಸ್ತರಿಸುತ್ತಾ ಹೋದಂತೆ ಮೇದರಳ್ಳಿಯ ವ್ಯವಹಾರಗಳೂ ವಿಸ್ತರಿಸುತ್ತಾ ಹೋದವು. ಸ್ವಾತಂತ್ರ್ಯಾನಂತರ ಬ್ರಿಟಿಷ್‌ರೆಲ್ಲ ಭಾರತದಿಂದ ನಿರ್ಗಮಿಸಿದ ಮೇಲೂ ಮೇದರಳ್ಳಿಯ ವಹಿವಾಟೇನೂ ಕಡಿಮೆಯಾಗಲಿಲ್ಲ. ಮೇದರಳ್ಳಿಯ ಮೇದರಿಗೆಲ್ಲಾ ಕಾಫಿ ತೋಟಗಳಿರುವೆಡೆಗಳಲ್ಲಿ ಬಹುವಚನದ ಮರ್ಯಾದೆಯೂ ಸಿಗುತ್ತಿತ್ತು. ಹಾಗಾದರೆ ಏಕೆ ಈ ಹಳ್ಳಿ ಹಾಳೂರಾಯ್ತು.

ಮೇದರಳ್ಳಿಯ ಮಟ್ಟಿಗಾದರೂ ಇತಿಹಾಸದ ರಹಸ್ಯವನ್ನು ತಿಳಿಯಲು ಸಾಧ್ಯವೇ? ನಾಗರಿಕತೆಯೊಳಗೆ ಪ್ಲಾಸ್ಟಿಕ್ ಕಾಲಿಟ್ಟಾಗ ಈ ತೆಳ್ಳಗೆ ಪಾರದರ್ಶಕವಾಗಿ ಮಿಂಚುವ ಮೋಹಿನಿಯ ವಿಶ್ವರೂಪ ಯಾರಿಗೂ ಗೊತ್ತಿರಲಿಲ್ಲ. ಅನೇಕಹಳ್ಳಿ, ಮನೆತನ ಬುಡಕಟ್ಟುಗಳ ನಿರ್ನಾಮಕ್ಕೆ ಇದು ಕಾರಣವಾದೀತೆಂದು ಯಾರೂ ಕನಸು ಮನಸ್ಸಿನಲ್ಲಿಯೂ ಊಹಿಸಿರಲಿಲ್ಲ. ಖಾಲಿ ಜಾಗಗಳ ಸಂದುಗೊಂದುಗಳೊಳಗೆಲ್ಲಾ ಹಬ್ಬಿ ಆಕ್ರಮಿಸುವ ಪಾರ್ಥೇನಿಯಮ್, ಯುಪೆಟೋರಿಯಮ್ ಕಳೆಗಳಂತೆ ಪ್ಲಾಸ್ಟಿಕ್, ಪಾಲಿಯುರಿಥೇನ್, ಪಾಲಿಎಥಿಲೀನ್, ಪಾಲಿ ಫೈಬರ್, ಪಾಲಿಮಾರ್ ಹೀಗೆ ನಾನಾ ಅವತಾರಗಳನ್ನೆತ್ತಿ ಮಾರುಕಟ್ಟೆಯ ಎಲ್ಲ ಕ್ಷೇತ್ರಗಳಿಗೆ ಎಲ್ಲ ಅವಕಾಶಗಳಿಗೂ ಮುತ್ತಿಗೆ ಹಾಕಿತು. ನಿಧಾನವಾಗಿ ಕಾಫಿ ಮೊಳಕೆಗಳನ್ನು ನೆಡುವ ಬಿದುರಿನ ಕುಕ್ಕೆಗಳಿಗೆ ಬದಲಾಗಿ ಪ್ಲಾಸ್ಟಿಕ್ ಚೀಲಗಳು ಬಂದವು. ಮೊದಲು ಮೇದರಳ್ಳಿಗೆ ಜನ ಬಂದು ದುಂಬಾಲು ಬಿದ್ದು ಗೋಗರೆದು ಕುಕ್ಕೆ ತೆಗೆದುಕೊಂಡು ಹೋಗುವುದು ತಪ್ಪಿತು. ಆಮೇಲೆ ಬಿದಿರಿಗೂ ನೆರೆ ಬಂತು. ಬಿದಿರಿಗೆ ತಟ್ಟೆ ಬರುತ್ತಿದ್ದಂತೆಯೇ ಮೇದರಹಳ್ಳಿಯ ಉತ್ಪನ್ನಗಳು ಪೇಟೆಗೆ ಬರುವುದು ನಿಂತುಹೋಯಿತು. ಮೇದರಳ್ಳಿಯ ಅವನತಿಯೂ ಅಷ್ಟೇ ವೇಗವಾಗಿ ಕ್ಷಿಪ್ರವಾಗಿ ಸಂಭವಿಸಿತು. ಅವರಿದ್ದ ಕಗ್ಗಾಡಿನಲ್ಲಿ ಬೇರಾವುದೇ ಹೊಟ್ಟೆಪಾಡಿನ ಉದ್ಯೋಗಾವಕಾಶಗಳೂ ಇಲ್ಲದೆ ಅಲ್ಲಿದ್ದವರೆಲ್ಲಾ ಹೇಳಹೆಸರಿಲ್ಲದೆ ಊರುಬಿಟ್ಟು ಚೆಲ್ಲಾಪಿಲ್ಲಿಯಾದರು. ಅನಂತರ ಇಡೀ ಪ್ರಾಂತ್ಯ ಅನೇಕಾನೇಕ ಕಾಳ ದಂಧೆಗಳ ತವರು ಮನೆಯಾಯಿತು. ಗಂಧದ ಕಳ್ಳ ಸಾಗಾಣಿಕೆ, ಕಳ್ಳಭಟ್ಟಿ ಇಳಿಸುವುದು, ಮಾದಕ ವಸ್ತು ಸಾಗಾಣಿಕೆ, ಗಾಂಜಾ ಉತ್ಪಾದಿಸಿ ರವಾನಿಸುವುದು ಹೀಗೆ ಇವುಗಳಲ್ಲೆಲ್ಲಾ ಜನ

> ತೊಡಗಿಕೊಂಡು ಜುಗಾರಿಕ್ರಾಸ್‌ನ್ನು ವಿಶ್ವಸಂಸ್ಥೆಯ ಮಾದಕ ವಸ್ತು ಜಾಲದ ಮ್ಯಾಪಿನಲ್ಲಿ ಗುರುತಿಸುವಂತೆ ಮಾಡಿದ್ದು ಈ ಜಾಗತೀಕರಣ. ಈ ಜಾಗತೀಕರಣ ಈ ಊರನ್ನೂ, ಈ ಊರಿನ ಜನರನ್ನೂ, ಈ ಊರಿನ ಕಸುಬನ್ನೂ ಬಲಿತೆಗೆದುಕೊಂಡಿತು.[೫೮]

ಚಿದಂಬರ ರಹಸ್ಯದ ಲಂಟಾನ, ಮಾಯಾಲೋಕದ ಯುಪಟೋರಿಯಮ್, ಕಾಡು ಮತ್ತು ಕ್ರೌರ್ಯದ ಕಳ್ಳಭಟ್ಟಿ ಸಾರಾಯಿ ಇವು ಪ್ರಾಕೃತಿಕವಾಗಿ, ಸಾಮಾಜಿಕವಾಗಿ ಉಂಟುಮಾಡಿರುವ ಪರಿಣಾಮಗಳನ್ನು ಕೆಳಗಿನ ದಾಖಲೆಗಳು ಸಾದರಪಡಿಸುತ್ತವೆ.

> ಒಣಗಿ ನಿಂತ ಹುಲ್ಲು ಹಳು ಮೊದಲಾದವಕ್ಕೆಲ್ಲಾ ಬೆಂಕಿ ಕೊಟ್ಟು ಸುಟ್ಟರೆ ಬೇಗ ಹೊಸ ಚಿಗುರು ಬಂದು ದನಗಳಿಗೆ ಮೇವು ದೊರೆಯುತ್ತದೆ ಎಂದು ಜನಗಳೇ ಬೆಂಕಿ ಕೊಟ್ಟು ಕಾಳ್ಗಿಚ್ಚು ಏಳಿಸುತ್ತಿದ್ದರು. ರಾತ್ರಿಯಾದರೆ ದೂರದ ಗುಡ್ಡಗಳಲ್ಲಿ ಕಾಳ್ಗಿಚ್ಚು ಕೆಂಪು ಸೀಮೆಸುಣ್ಣದಲ್ಲಿ ಎಳೆದ ಗೀರಿನಂತೆ ಸಾಲಾಗಿ ಉರಿಯುವುದು ಕಾಣುತ್ತಿತ್ತು. ಇದು ಜನಗಳು ಹಿಂದಿನಿಂದ ಅನುಸರಿಸಿ ಕೊಂಡು ಬಂದ ಪದ್ಧತಿಯಾದರೂ ಸಹ್ಯಾದ್ರಿ ಕಾಡುಗಳಿಗೆ ಯುಪಟೋರಿಯಂ ಕಳೆ ಕಾಲಿಟ್ಟಮೇಲೆ ಕಾಳ್ಗಿಚ್ಚಿನಿಂದಾಗುವ ಅನಾಹುತದ ಪ್ರಮಾಣ ಹೆಚ್ಚುತ್ತಾ ಬಂದುದ್ದು ಯಾರ ಗಮನಕ್ಕೂ ಬಂದಿರಲಿಲ್ಲ. ಯುಪಟೋರಿಯಂ ಕಳೆ ಮರಕ್ಕೆ ಸುತ್ತಿಕೊಂಡು ಬಳ್ಳಿಯಂತೆ ಎತ್ತರಕ್ಕೆ ಬೆಳೆಯುತ್ತದೆ. ಹಿಂದೆಲ್ಲಾ ಕಾಡಿಗೆ ಬೆಂಕಿ ಬಿದ್ದಾಗ ಕೇವಲ ನೆಲಮಟ್ಟದಲ್ಲಿದ್ದ ಹುಲ್ಲು ಸುಡುತ್ತಿದ್ದುದರಿಂದ ದೊಡ್ಡದೊಡ್ಡ ಎತ್ತರದ ಮರಗಳಿಗೆ ಹೆಚ್ಚು ಘಾಸಿಯಾಗುತ್ತಿರಲಿಲ್ಲ. ಆದರೆ ಈಗ ಮರ ತಬ್ಬಿ ಹಿಡಿದಿರುವ ಯುಪಟೋರಿಯಂ ಜ್ವಾಲೆ ಕಾರುತ್ತಾ ಉರಿದರೆ ದೊಡ್ಡ ಮರಗಳ ತೊಗಟೆ ಬಹಳ ಎತ್ತರದವರೆಗೂ ಸುಟ್ಟು ಸಾಯುತ್ತಿದ್ದುವು, ಕಾಡು ಪ್ರಾಣಿಗಳಿಗಂತೂ ಕಾಳ್ಗಿಚ್ಚು ಬಿದ್ದರೆ ಯುಪಟೋರಿಯಂ ಯಮಪಾಶವೇ ಸರಿ. ಯುಪಟೋರಿಯಂ ಬೆಳೆದಿದ್ದ ಕಾಡಿಗೆ ಬೆಂಕಿ ಬಿದ್ದರೆ ಕಾಳ್ಗಿಚ್ಚು ಅಕ್ಷರಶಃ ನಾಗರಹಾವಿನಂತೆ ಭುಸುಗುಡುತ್ತಾ ವೇಗವಾಗಿ ವ್ಯಾಪಿಸುವುದನ್ನು ನೋಡಿದ್ದೇನೆ. ಯುಪಟೋರಿಯಂ ಜಿಗ್ಗಿನಲ್ಲಿ ತೊಡಕಿಕೊಂಡ ಜಿಂಕೆ. ಕಾಡುಕೋಣ ಇತ್ಯಾದಿ ಮಿಂಚಿನ ಓಟಗಾರರೂ ಸಹ ಬೆಂಕಿಗಿಂತ ವೇಗವಾಗಿ ಓಡಿ ತಪ್ಪಿಸಿಕೊಳ್ಳಲಾರದೆ ಸುಟ್ಟು ಸತ್ತಿರುವ ಬೇಕಾದಷ್ಟು ಘಟನೆಗಳಿವೆ.[೫೯]

> ಜೂಲ್ಯ ಹಳ್ಳಿ ವಿಜ್ಞಾನಿ. ಹಕ್ಕಿ ಹಿಡಿಯಲು ಮಡಕೆ ತಂತ್ರ ರೂಪಿಸಿದವನೂ ಅವನೇ. ಸರಾಯಿಯನ್ನು ಕದ್ದು ತಯಾರಿಸಲು ಕಲಿಸಿದವನೂ ಅವನೇ. ಮೊದಲು ಬೇರೊಂದು ಕಡೆ ಕಾನೆಹಳ್ಳದ ಬದಿಯಲ್ಲೇ ಕಳ್ಳಭಟ್ಟಿ ಕೇಂದ್ರ ಸ್ಥಾಪಿಸಿದ್ದರು. ಭೈರೂ, ನೊದಿಯ ಪೋಲೀಸ್ ಸ್ಟೇಷನ್ ಕಂಡ ನಂತರ ಮಿಕ್ಕವರೆಲ್ಲ ತೆಪ್ಪಗಾಗಿದ್ದರು. ಆದರೆ ಮಾರ್ರ್ಯ ಜಗ್ಗದೆ ಹಿಂಜರಿಯದೆ ತನ್ನ ಕಾರ್ಖಾನೆಯನ್ನು ಇನ್ನೂ ದಟ್ಟ ಕಾಡಿಗೆ ಒಯ್ದಿದ್ದ. ಸುರಕ್ಷಿತನಾದೆನೆಂದು ಹಿಗ್ಗಿದ್ದ.[೬೦]

ಇದರಿಂದ ಜ್ಯೂಲನಿಗಾಗಲಿ, ಮಾರ್ರ್ಯನಿಗಾಗಲಿ ಕಾನೆಹಳ್ಳದ ಜೊತೆಗೆ ಅಲ್ಲಿನ ಕಾಡಿಗೆ ಒದಗಿದ ದುರಂತದ ಅರಿವಿಲ್ಲ.

**ರೈಲು ನಿಲ್ದಾಣದ ಆಗಮನದಿಂದ ತುಕ್ಕೋಜಿಯ ಅಧಃಪತನ:** ಆಧುನಿಕತೆ ಕೊಡಮಾಡಿದ, ಪ್ರಗತಿ ಸೂಚಕವಾದ ಸಾಧನಗಳು ಉಂಟುಮಾಡಲಿರುವ ಆತಂಕಗಳ ಮುನ್ಸೂಚನೆ ಇದಾಗಿದೆ.

> ಗುರುಗಳ್ಳಿ ಒಂದು ಕಾಲಕ್ಕೆ ಹಳ್ಳಿಯಾಗಿದ್ದಿತ್ತಾದರು ಇಡೀ ಅಖಂಡ ಭಾರತದ ವಿಕಾಸದೊಂದಿಗೇ ನಿಧಾನವಾಗಿ ಬೆಳೆದು ಬೆಳೆದು ಸಣ್ಣ ಪೇಟೆಯಾಯ್ತು. ಆಸ್ಪತ್ರೆ, ಬಸ್ ನಿಲ್ದಾಣ, ಪೋಲೀಸ್ ಸ್ಟೇಷನ್ನು, ಪೋಸ್ಟಾಫೀಸು, ಒಂದು ಗುಡಾರದ ಸಿನಿಮಾ ಇತ್ಯಾದಿಗಳೆಲ್ಲಾ ಆದ ಮೇಲಂತೂ ಅದೊಂದು ಪೇಟೆ ಎನಿಸಕೊಳ್ಳಲು ಅನುರೂಪವಾದ ಜಾಗವಾಗಿ ಹೋಯ್ತು. ಈ ಧೂಳು ಗುಜು ಗುಜು ಗಲಾಟೆಗಳ ನಡುವೆಯೇ ಇನ್ನೂ ಒಂದು ಚರಿತ್ರಾರ್ಹ ಘಟನೆ ನಡೆಯಿತು. ಹಾಸನ ಮಂಗಳೂರಿನ ರೈಲು ಮಾರ್ಗ ಗುರುಗಳ್ಳಿ ಮುಖಾಂತರವೇ ಹೋಗುವುದೆಂದು ನಿರ್ಣಯವಾಯ್ತು..... ಈ ಮುಖ್ಯವಾದವುಗಳ ನಡುವೆ ಈ ನಾಗರಿಕತೆಯ ವಿಕಾಸಕ್ಕೆ ಶ್ರಮಿಸುವ ಅನೇಕರೂ ಇದ್ದರು. ವಿದ್ಯಾರ್ಥಿ ಭವನದ ಹೋಟೆಲು ತಿಮ್ಮಪ್ಪಯ್ಯ....., ಸ್ಟೂಡೆಂಟ್ ಹೇರ್ಕಟಿಂಗ್ ಸೆಲೂನಿನ ಭಂಡಾರಿ ಕೃಷ್ಣ

..... ಆದರೆ ಇವರಿಗೆಲ್ಲರಿಗಿಂತ ಮಿಗಿಲಾದ ಜವಾಬ್ದಾರಿ ಟೈಲರ್ ತುಕ್ಕೋಜಿಯದ್ದಾಗಿತ್ತೆಂಬುದನ್ನು ಯಾರೂ ನಿರ್ವಿವಾದವಾಗಿ ಒಪ್ಪಬೇಕಾದುದೆ. ಸಂತೆಯಲ್ಲಿ ವರುಷಕ್ಕೊಂದಾವರ್ತಿ ಚೀಟಬಟ್ಟೆಯ ರೆಡಿಮೇಡು ಉಡುಪುಗಳನ್ನು ಕಂಡು ಹಾಕಿಕೊಂಡು ಹೋಗುತ್ತಿದ್ದ ಹಳ್ಳಿಗರು ಉತ್ತಮವಾದ ಕಚ್ಚಾಬಟ್ಟೆಗಳನ್ನು ಅಂಗಡಿಗಳಲ್ಲಿ ಕೊಂಡು ಅದನ್ನು ತಮ್ಮ ಅಳತೆ ಅಭಿರುಚಿಗಳಿಗೆ ತಕ್ಕಂತೆ ಹೊಲಿಸಿಕೊಂಡು ಓಡಾಡುವ ಅಭಿರುಚಿಯನ್ನೂ ಶಿಸ್ತನ್ನೂ ಕಲಿಸಬೇಕಾದರೆ ಅದೇನೂ ಸಾಮಾನ್ಯವಾದ ಕೆಲಸವಲ್ಲ. ಅವನಿಗೆ ಈ ಗುರುತರ ಕಾರ್ಯದಲ್ಲಿ ಈಚೆಗೆ ಆರಂಭವಾದ ಜೂನಿಯರ್ ಕಾಲೇಜು ಸಿನಿಮಾ ಇತ್ಯಾದಿಗಳೆಲ್ಲ ಸಹಾಯ ಮಾಡಿದವು ಎನ್ನುವುದೇನೋ ನಿಜ!'.........ಈ ನಡುವೆ ಗುರುಗಳ್ಳಿ ನಿಧಾನವಾಗಿ ಇನ್ನೂ ಬೆಳೆಯಿತು. ಕತ್ತಲಾದ ಮೇಲೆ ಜನ ಒಂದು ಕಾಲದಲ್ಲಿ ಓಡಾಡಲೂ ಹೆದರುತ್ತಿದ್ದ ಕಡೆಗಳೆಲ್ಲೆಲ್ಲಾ ಈಗ ಮನೆಗಳು ಏಳತೊಡಗಿದವು. ತುಕ್ಕೋಜಿಗೆ ಒಂದು ಮಗುವಾದಾಗ ಗುರುಗಳ್ಳಿಯ ಜನಸಂಖ್ಯೆ ಅವನ ಮಗ ಕೃಷ್ಣೋಜಿಯನ್ನೂ ಸೇರಿಸಿಕೊಂಡು ಸಾವಿರದ ಮೇರೆ ಮೀರಿತು'.[೬೧]

'ಕಾನೂರು ಹೆಗ್ಗಡತಿ' ಕಾದಂಬರಿಯಲ್ಲಿ ನೂರು ವರ್ಷಗಳ ಹಿಂದಿನ ಮಲೆನಾಡಿನ ಪರಿಸರಕ್ಕೆ ನಾಗರಿಕತೆಯು ಸೈಕಲ್ ಸವಾರನ ರೂಪದಲ್ಲಿ ಪ್ರವೇಶಿಸುವ ಒಂದು ಸನ್ನಿವೇಶವಿದೆ. ಕೊಪ್ಪ-ತೀರ್ಥಹಳ್ಳಿ ರಸ್ತೆಯಲ್ಲಿ ಹೂವಯ್ಯ ಒಬ್ಬ ಸೈಕಲ್ ಸವಾರನನ್ನು ಭೇಟಿಯಾಗುತ್ತಾನೆ. ಅವಸರ, ಗಡಿಬಿಡಿ, ಉದ್ವೇಗಗಳಲ್ಲಿದ್ದ ಆ ಸೈಕಲ್ ಸವಾರ ಏರುತಗ್ಗಿನ ರಸ್ತೆಯಲ್ಲಿ ವೇಗವಾಗಿ ಹೋಗುವಾಗ ಮುಗ್ಗರಿಸಿ ಬಿದ್ದು, ಕಲ್ಲು ಮಣ್ಣಿನ ರಸ್ತೆಯಲ್ಲಿ ಮೈ, ಕೈ ತರಚಿಸಿಕೊಂಡು ಗಡಿಬಿಡಿಯಲ್ಲಿ ಮತ್ತೆ ಸೈಕಲ್ಲೇರಿ ಹೊರಟುಹೋಗುತ್ತಾನೆ. ಬಿದ್ದಲ್ಲಿಯೇ ತನ್ನ ಪೆನ್ನನ್ನು ಮರೆತು ಹೋಗುತ್ತಾನೆ. ಇಲ್ಲಿ ಹೂವಯ್ಯನಿಗೆ ತಾನು ಮೈಸೂರಿನಲ್ಲಿ ಬಿಟ್ಟು ಬಂದಿದ್ದು, ಆಧುನಿಕ ನಗರ ಜೀವನ, ಯಂತ್ರ ನಾಗರಿಕತೆ, ಸೈಕಲ್ಲೇ ಸವಾರನ ರೂಪದಲ್ಲಿ ಕ್ವಚಿತ್ತಾಗಿ ಕಾಣಿಸಿಕೊಂಡಿದೆ. ಈ ಶತಮಾನದ ಆದಿಭಾಗದಲ್ಲಿ ಸೈಕಲ್‌ನಂತಹ ಆಧುನಿಕ ವಸ್ತುಗಳಿಗೆ ಸ್ವಾಗತವಿತ್ತು. ಅದು ಪ್ರಗತಿಯ ಸೂಚಕವಾಗಿದ್ದರೆ ಶತಮಾನದ ಅಂತ್ಯದಲ್ಲಿ ಮಲೆನಾಡಿನ ದಟ್ಟಡವಿಗಳನ್ನು ನಾಶಮಾಡಿ ಗುಡ್ಡಗಳನ್ನು ಕೊರೆದು ಮಾಡಿರುವ ರೈಲು ಒಂದು ಸಂಸ್ಕೃತಿಯ ವಿನಾಶಕ್ಕೆ ಕಾರಣವಾಗಿರುವುದನ್ನು ಜುಗಾರಿ ಕ್ರಾಸ್ ಕಾದಂಬರಿ ಚಿತ್ರಿಸುತ್ತದೆ.[೬೨] ತಲೆಮಾರುಗಳ ಅಂತರದಲ್ಲಿ ಆದ ಸಾಮಾಜಿಕ ಸ್ಥಿತ್ಯಂತರದ ಸ್ವರೂಪವನ್ನು ಇದು ಮತ್ತೊಮ್ಮೆ ನೆನಪಿಸುತ್ತದೆ.

**ಶಿಲ್ಪ ನೈಪುಣ್ಯವನ್ನು ಹೊಂದಿದ್ದ ಸೂರಾಚಾರಿಯ ಕಲಾಪ್ರಜ್ಞೆಯ ಅಳಿವು:** ಆಧುನಿಕ ಬದುಕು ಹೇಗೆ ಮೆಲ್ಲ ಮೆಲ್ಲನೆ ಮನುಷ್ಯನ ಅಸ್ತಿತ್ವವನ್ನು ಕಳಚಿ ಅದರ ಬದಲಿಗೆ ಮುಖವಾಡ ಹೊತ್ತು ಜಗತ್ತಿಗೆ ತಕ್ಕಂತೆ ಬದಲಾಗುವ ಪ್ರವೃತ್ತಿಯ ವ್ಯಕ್ತಿಯನ್ನಾಗಿ ರೂಪಿಸಿಬಿಡುತ್ತದೆ ಎಂಬುದನ್ನು ಈ ಕಥೆಯೂ ಧ್ವನಿಸುತ್ತದೆ. **ಅವನತಿಯ** ಸೂರಾಚಾರಿ ಆಧುನಿಕ ಅವಸ್ಥಾಂತರಗಳಲ್ಲಿ ಹಾದು ಪ್ರತಿಭೆಯನ್ನು ಕೊಂದುಕೊಂಡು ಹೊಟ್ಟೆಪಾಡಿಗಾಗಿ ತನ್ನ ವೃತ್ತಿಯಲ್ಲಿ ಬದಲಾವಣೆಯನ್ನು ತಂದುಕೊಂಡವನು. ಪಲ್ಲಟಗಳು ಮನುಷ್ಯನ ಮೂಲಭೂತ ಸ್ವಭಾವನ್ನೇ ಬದಲಾಯಿಸಿ ಬಿಡುವಂತಹುದು. ಲೌಕಿಕವಾಗಿ ಮೇಲ್ಮಟ್ಟಕ್ಕೆ ಕೊಂಡೊಯ್ದಂತಿದ್ದರೂ, ಅಂತರಿಕವಾಗಿ ಮನುಷ್ಯ ಅಧೋಗತಿಯನ್ನು ಪಡೆಯುತ್ತಾ ಹೋಗುತ್ತಾನೆ. ಇದರ ಅರಿವು ಆತನಿಗೆ ಇರುವುದಿಲ್ಲ. ಈ ಕಥೆಯ ಸೂರಾಚಾರಿ ಎದುರಿಸುವ ಆರ್ಥಿಕ, ಸಾಮಾಜಿಕ ಸಮಸ್ಯೆಗಳು ಮತ್ತು ಅನೇಕ ವ್ಯವಹಾರಗಳಿಂದ ಕೂಡಿದ ಆತನ ಬದುಕಿನ ಅನುಭವ; ಸಮಾಜದಲ್ಲಿನ ಪ್ರತಿಯೊಬ್ಬನ ಅನುಭವಾಗುತ್ತದೆ. **ಅವನತಿ** ವೈಯಕ್ತಿಕ ಬದುಕಿನ ಕಥನ ಮಾತ್ರವಲ್ಲ ಅದನ್ನು ಮೀರಿದ ಸಾಮಾಜಿಕ ಜಿಜ್ಞಾಸೆ; ಹಾಗಾಗಿ ಇದು ಕೇವಲ ಸೂರಾಚಾರಿಯ ಬದುಕಿನ ಅವನತಿ ಮಾತ್ರವಾಗಿರದೆ ಇಸ್ಲಾಪುರದ ಅವನತಿಯನ್ನು ಸೂಚಿಸುತ್ತದೆ.

ಹುಲಿಯೂರಿನ ಸರಹದ್ದು "ಹುಲಿಯೂರಿನಲ್ಲಿ ನನ್ನ ಇಚ್ಛೆಯ ಸರಹದ್ದನ್ನು ಮೀರುವವನಾರು? ಎನ್ನುವ ತಂದೆ "ನೀವು, ನಿಮ್ಮ ಕೋಳಿಮರಿ, ಮನೆ ಮಠ ಎಲ್ಲ ನಿರ್ನಾಮ ನಿಗರುಬಡ್ಡೆ ಕಂಡರೂ ನನಗೇನೂ ಇಲ್ಲ. ನನಗೆ ಈ ಊರೇ ಬೇಡ. ಇಷ್ಟು ಓದಿದವನಿಗೆ ಕೆಲಸ ಎಲ್ಲಾದರೂ ಸಿಕ್ಕೀತು. ನೀವು ಅಮ್ಮ ಎಲ್ಲ ಉಂಡುಟ್ಟು ನಿರಂಬಳ ಇರಿ"[೬೩] ಎನ್ನುವ ಮಗ ಹೀಗೆ ತಂದೆ-ಮಗ ಇಬ್ಬರೂ ತಮ್ಮದೇ ನಿರ್ಧಾರಗಳನ್ನು ಖಂಡಾಖಂಡಿತವಾಗಿ ಪ್ರಕಟಿಸಿಬಿಡುತ್ತಾರೆ. ಎರಡೂ ವೈರುಧ್ಯಗಳ ನಡುವಿನ ಸಂಘರ್ಷ ತಂದೆಯ ಅಧಿಕಾರ ವಾಣಿ ಮತ್ತು ಮಗನ ಸ್ವಾತಂತ್ರ್ಯದ ಬಯಕೆಯ ನಡುವೆ ಘಟಿಸುವುದಾದರೂ ಇಬ್ಬರ ನಿಲುವುಗಳು ಸೀಮಿತವಾದ ಜ್ಞಾನದೊಳಗೆ ಬಂಧಿಯಾಗಿದೆ. ತಮ್ಮ ಅಭಿಪ್ರಾಯ, ನಿರ್ಧಾರಗಳೇ ಸರಿ ಎಂದು ತರ್ಕಿಸುವವರ ನಿಲುವಿನ ಆಚೆಗೂ ಹಲವು ವೈಪರೀತ್ಯಗಳಿಂದ ಕೂಡಿದ ವಾಸ್ತವತೆ ಪ್ರಕಟಗೊಳ್ಳುತ್ತಲೇ ಇರುತ್ತದೆ.

ಪ್ರಕೃತಿಯ ಜೀವ ವೈವಿಧ್ಯದೊಂದಿಗೆ ಬದುಕುವ ಮಾನವೇತರ ಬದುಕಿನ ಸಂದರ್ಭಗಳಾದ ಗಿಡುಗ ಮತ್ತು ಕೋಳಿಯ ಚಿತ್ರಣದೊಂದಿಗೆ ತೆರುದುಕೊಳ್ಳುವ ವಾಸ್ತವ ಸ್ಥಿತಿಯೂ ಮತ್ತೊಂದು ಆಯಾಮವನ್ನು ಗಣನೆಗೆ ತೆಗೆದುಕೊಳ್ಳುತ್ತದೆ. ಕಥೆಯ ಆಶಯ ಸರಹದ್ದನ್ನು ಮೀರಿ ಬೆಳೆಯುವುದೇ ಆಗಿದ್ದರೂ ತಮ್ಮ ಸರಹದ್ದನ್ನು ಮೀರುವ ಹಂತದಲ್ಲಿ ಸ್ವಲ್ಪ ಎಚ್ಚರತಪ್ಪಿದರೂ ದುರಂತ ಅನಿವಾರ್ಯ. ಪ್ರತಿಯೊಂದು ಜೀವಿಯ ಅಸ್ತಿತ್ವವನ್ನೂ-ಸಮಾನಧರ್ಮದ ಮನಸ್ಥಿತಿಯಲ್ಲಿ ಸ್ವೀಕರಿಸಿದ್ದ ಸೋಮು ಮಹತ್ವದ ನಿರ್ಣಾಯಕ ಗಳಿಗೆಯಲ್ಲಿ ತಾನು ಯಾವುದಕ್ಕೆ ವಿರೋಧವಾಗಿದ್ದನೋ ಅದಕ್ಕೆ ಬಲಿಯಾಗುವುದು ಪರಿಸ್ಥಿತಿಯ ವ್ಯಂಗ್ಯವಾಗಿದೆ.

ಚಿದಂಬರ ರಹಸ್ಯ ಕಾದಂಬರಿಯ ಕ್ರಿಯೆ ನಡೆಯುವುದು ಚಿಕ್ಕಮಗಳೂರು ಜಿಲ್ಲೆಯ ಕೆಸರೂರಿನಲ್ಲಿ ಈ ಗ್ರಾಮದ ಸೃಷ್ಟಿ ಸೌಂದರ್ಯಗಳೂ ಮತ್ತು ಏಲಕ್ಕಿಯ ತಳಿ ಪ್ರಸಿದ್ಧವಾಗಿದ್ದವು ಅದರ ಸಮೃದ್ಧ ಅರಣ್ಯಗಳು, ಆಸೆಬುರುಕ ಕಾಂತ್ರಾಟುದಾರರಿಗೆ ಬಲಿಯಾಗಿ ಅವುಗಳ ಸ್ಥಳದಲ್ಲಿ ಈಗ ಕಾಣುವುದು ಲಂಟಾನ ಮಾತ್ರ. ಏಲಕ್ಕಿ ಬೆಳೆಗೆ ತಗುಲಿದ ರೋಗದಿಂದ ಅದು ತನ್ನ ಸತ್ವವನ್ನೇ ಕಳೆದುಕೊಂಡಿದೆ. ಆದರೆ ಸಾಂಕೇತಿಕವಾಗಿ ಲೇಖಕ ಏಲಕ್ಕಿ ಬೆಳೆಗೆ ತಗುಲಿದ ರೋಗವನ್ನು ಕೆಸರೂರಿಗೆ ತಗುಲಿದ ರೋಗದ ಹಿನ್ನೆಲೆಯಲ್ಲಿ ಗ್ರಹಿಸುತ್ತಾರೆ. ಯಾಕೆಂದರೆ ಆರಂಭದಲ್ಲಿ ಕೊಡುವ ಕೆಸರೂರಿನ ಚಿತ್ರಣಕ್ಕೂ ಕಾದಂಬರಿಯ ಮುಕ್ತಾಯದಲ್ಲಿ ಕೊಡುವ ಕೆಸರೂರಿನ ಚಿತ್ರಣಕ್ಕೂ ಮಧ್ಯ ಅನೇಕ ಸಂಬಂಧಗಳು, ಸಂಘರ್ಷಗಳು ಜರುಗಿ ಹೋಗಿರುತ್ತವೆ. ಸಂಪನ್ಮೂಲಗಳ ದುರಾಸೆಯಿಂದ ಆರಂಭವಾಗುವ ಈ ಸಂಘರ್ಷ ಕೆಸರೂರಿನ ದುರಂತದಲ್ಲಿ ಮುಕ್ತಾಯಗೊಳ್ಳುತ್ತದೆ.[೬೪] ಪ್ರತಿಯೊಂದೂ ಸಾಂಸ್ಕೃತಿಕ ಅವನತಿಗಾಗಿ ಕಾಯುವುದು ಸಾಮಾಜಿಕ ದುರಂತವಾಗಿದೆ.

ಕೆಸರೂರಿನಲ್ಲಿ ನಡೆಯುತ್ತಿರುವ ಶೋಷಣೆ-ದೌರ್ಜನ್ಯಗಳಿಗೂ, ಏಲಕ್ಕಿ ಸಂಶೋಧನಾ ಕೇಂದ್ರಕ್ಕೂ, ಪರಿಸರ ನಾಶಕ್ಕೂ, ಊರಿನ ರಾಜಕಾರಣಕ್ಕೂ ಪರಸ್ಪರ ಸಂಬಂಧವಿದ್ದು ಒಂದೊಂದಾಗಿ ಘಟಿಸಿದ ಘಟನೆಗಳಿಗೆ ಕೆಸರೂರು ಮೂಕಸಾಕ್ಷಿಯಾಗಿ ನಿಲ್ಲುತ್ತದೆ. ಕೆಸರೂರು, ಹೆಸರೇ ಸೂಚಿಸುವಂತೆ ಕೆಸರಿನಿಂದ ಆವೃತವಾದ ಊರು. ಮನುಷ್ಯನ ಆತ್ಮ, ಸಂಸ್ಕೃತಿ, ಪರಿಸರ, ಸಮಾಜ ಎಲ್ಲವೂ ಕಲುಷಿತಗೊಂಡು ವಿನಾಶದೆಡೆಗೆ ಸರಿಯುತ್ತಿರುವುದಕ್ಕೆ ಮೂಕ ಸಾಕ್ಷಿಯಾಗಿ ನಿಲ್ಲುತ್ತದೆ. ಸ್ಥಳೀಯವಾದ ಸಂಸ್ಕೃತಿಯನ್ನು ಹಿಂದೆ ಇದ್ದ ಅದೇ ಗುಣದಲ್ಲಿ ಉಳಿಸಿಕೊಳ್ಳಲಾಗದೆ ನಾಶಹೊಂದುತ್ತದೆ.

ತನ್ನ ಅವನತಿಯ ಬಗ್ಗೆ ನಿರ್ಲಿಪ್ತವಾಗಿರುವ ಒಂದು ಜನ ಸಮುದಾಯದ ಸಾಂಸ್ಕೃತಿಕ ಅವನತಿ ಈ ಬಗೆಯಾದದರೆ, ಗೋಸಾಯಿಗಳೆಂಬ ಸಮುದಾಯಕ್ಕೆ ತನ್ನ ಅವನತಿಯ ಅರಿವೇ ಇಲ್ಲ. ಕೆಸರೂರಿನ ಜನರೆಲ್ಲ ಪ್ರಜ್ಞಾಪೂರ್ವಕವಾಗಿಯೇ ಪ್ರಕೃತಿಯೊಡನೆ, ಪರಿಸರದೊಡನೆ, ವ್ಯಕ್ತಿ-ವ್ಯಕ್ತಿಗಳೊಡನೆ ಸ್ವಾರ್ಥಪೂರಿತ ಸಂಘರ್ಷಕ್ಕೆ ಇಳಿದಿದ್ದರೆ; ಗೋಸಾಯಿಗಳು ಅಪ್ರಜ್ಞಾಪೂರ್ವಕವಾಗಿ ಪ್ರಕೃತಿಯೊಡನೆ ಹಕ್ಕಿಪಕ್ಕಿಗಳನ್ನೆಲ್ಲ ಹಿಡಿಯುವುದರೊಂದಿಗೆ ವ್ಯಭಿಚಾರವನ್ನೆ ಸಾಮಾನ್ಯಗೊಳಿಸುವ ಮೂಲಕ ಸಮಾಜದೊಡನೆ ಅಧಃಪತನಕ್ಕೆ ದಾರಿಯಾಗುವ ಸಂಬಂಧ ಇಟ್ಟುಕೊಂಡಿದ್ದಾರೆ. ಮೆಜಿಸಿಯನ್ ಮುತ್ತು ಇಡುವ ಬಾಂಬಿನಿಂದ ಪಾಟೀಲರು ಸಾಯುವುದನ್ನು ಗಮನಿಸಿದಾಗ ಈ ವೈಪರೀತ್ಯಕಾರಿ ಸಂಬಂಧದ ಅನಾಹುತ ಪರಿಚಯವಾಗುತ್ತದೆ. ಈ ಗೋಸಾಯಿಗಳು ಕೆಸರೂರಿನ ಸಮಾಜದ್ದೇ ಭವಿಷ್ಯದ ಚಿತ್ರಗಳಂತೆ ಕಾಣುತ್ತಾರೆ. ಕಾದಂಬರಿಯ ಅರ್ಧದ ನಂತರ ಅಧಃಪತನ ಅಸ್ಫೋಟನೆಯ ರೂಪ ತಾಳುತ್ತದೆ. ಹೀಗೆ ಅವನತಿಯ ವಿವಿಧ ಸ್ಥಿತಿಗಳನ್ನು ವರ್ತಮಾನ ಮತ್ತು ಭವಿಷ್ಯದ ಚಿತ್ರಗಳೆರಡನ್ನೂ ಕೊಡುವ ಮೂಲಕ ಸಮಗ್ರವಾಗಿ ಅಭಿವ್ಯಕ್ತಿಸಲಾಗಿದೆ.’ ಎನ್ನುವ ಈ ಮಾತುಗಳು ಕೆಸರೂರಿನ ಅವನತಿಯನ್ನು ಸಾಕ್ಷಾತ್ಕರಿಸುತ್ತದೆ.

‘ಮನುಷ್ಯನ ಧಾರ್ಮಿಕ ಮತಾಂಧತೆ, ಹಣದ ಬಗೆಗಿನ ವ್ಯಾಮೋಹಗಳು ಸಮಷ್ಟಿ ಬದುಕನ್ನೇ ಲಾಂಟಾನಾ ರಾಕ್ಷಸನ ಬಾಯಿಗೆ, ಬೆಂಕಿಗೆ ಆಹುತಿ ಮಾಡುವ ದುರಂತವನ್ನು ಈ ಕೃತಿಗಳು ತಮ್ಮ ಒಡಲಲ್ಲಿರಿಸಿಕೊಂಡಿವೆ. ಕಾಳ ದಂಧೆಗಳಿಗೆ ಸರ್ಕಾರ, ಕಾನೂನು ಮತ್ತು ನ್ಯಾಯಾಲಯಗಳ ಸಮ್ಮತಿ ಮತ್ತು ಪರವಾನಗಿಗಳನ್ನು ಗಿಟ್ಟಿಸಿಕೊಂಡು ನಡೆಸುತ್ತಿರುವ ಹಗಲು ದರೋಡೆಗಳಿಂದ ಇಡೀ ಸಂಸ್ಕೃತಿಯನ್ನು ಒಂದಲ್ಲಾ ಒಂದು ದಿನ ದುರಂತಕ್ಕೆ ಒಡ್ಡುವ ಭೀಕರ ಚಿತ್ರಗಳನ್ನು ಈ ಕಾದಂಬರಿಗಳು ಉದ್ದಕ್ಕೂ ಬಿಚ್ಚಿಡುತ್ತವೆ. ರಾಜಕಾರಣ ಹಾಗೂ ಅರಣ್ಯ ಇಲಾಖೆಯ ದುರಾಸೆಗಳು ಒಮ್ಮೆ ಮಾಡಿದ ಅಪರಾಧ ಪ್ರಪಂಚ ಪ್ರಸಿದ್ಧ ಏಲಕ್ಕಿಯನ್ನು ಸರ್ವನಾಶ ಮಾಡುವುದರೊಂದಿಗೆ ಒಂದು ಸಂಸ್ಕೃತಿಯ ಅವಸಾನಕ್ಕೂ ಗುರಿಯಾಗುವ ಬಗೆಗಳನ್ನು ಈ ಮೇಲಿನ ಸಾಲುಗಳು ಸ್ಪಷ್ಟಪಡಿಸುತ್ತವೆ.’ ಎನ್ನುವ ಅಭಿಪ್ರಾಯವೂ ಸಹ ಕೆಸರೂರಿನ ಅವನತಿಯ ಸ್ವರೂಪದ ವಿಶ್ಲೇಷಣೆಯನ್ನು ಮಾಡುತ್ತದೆ.

**ಕೃಷ್ಣೇಗೌಡನ ಆನೆ** ಕಥೆಯಲ್ಲಿ ಅಧಿಕಾರಶಾಹಿಯು ಸೃಷ್ಟಿಮಾಡುವ ಎಲ್ಲ ರೀತಿಯ ಅಸಹಜವಾದ ಕಪಟತನದ ವರ್ತನೆಗಳು ಮತ್ತು ಸಂಬಂಧಗಳು ಸಾಮಾಜಿಕ ಬದುಕಿನ ಮೇಲೆ ತೀವ್ರವಾದ ಪರಿಣಾಮವನ್ನು ಉಂಟುಮಾಡುತ್ತವೆ. ಸರ್ಕಾರಿ ಕೆಲಸದ ಹಿನ್ನೆಲೆಯಲ್ಲಿ ವೈಯಕ್ತಿಕವಾದ ದ್ವೇಷ, ಅಸೂಯೆ ಪರಸ್ಪರ ದೋಷಾರೋಪಣೆಯ ರೂಪದಲ್ಲಿ ಪ್ರಕಟಗೊಳ್ಳುವುದು ಇಲ್ಲವೆ ಅಧಿಕಾರದ ದುರಪಯೋಗ, ಸರ್ಕಾರಿ ಕೆಲಸದಲ್ಲಿರುವ ವ್ಯಕ್ತಿಗಳ ಅಪ್ರಮಾಣಿಕತೆ, ಆಲಸ್ಯ, ಸೋಗು ಸಣ್ಣ ಸಮಸ್ಯೆಯನ್ನು ದೊಡ್ಡದಾಗಿಸುವ ಕುಯುಕ್ತಿ, ಅಮಾನವೀಯ ಪರಿಸರವನ್ನು ಸೃಷ್ಟಿಮಾಡಿದೆ. ಲೈನ್‌ಮ್ಯಾನ್ ದುರ್ಗಪ್ಪನ ಕೊಡಲಿ ಪ್ರಕರಣ ಮತ್ತು ನಾಗರಾಜನ ತಿಳಿಗೇಡಿತನ; ಪೋಸ್ಟ್‌ಮ್ಯಾನ್ ಜಬ್ಬಾರನ ಬಡತನ ಮತ್ತು ಪುರಸಭೆಯ ದೌರ್ಬಲ್ಯ ಕುರಿತ ನಿಂದನೆ; ಪುರಸಭೆಯ ಖಾನ್‌ಸಾಹೇಬರ ಮತ್ತು ವೈದ್ಯಕೀಯ ಸೇವೆಗಳಿಗೆ ಒದಗಿರುವ ಅಸೌಲಭ್ಯ ಇವೆಲ್ಲವೂ ಒಂದರೊಳಗೊಂದು ಸೇರಿ ಹೋಗಿ ಗೋಜಲು-ಗೊಂದಲಗಳ ಚಕ್ರವ್ಯೂಹವನ್ನು ನಿರ್ಮಾಣ ಮಾಡಿವೆ.

ಮೂಡಿಗೆರೆಯ ಎಲ್ಲಾ ಅವಾಂತರಗಳಿಗೂ ಕೃಷ್ಣೇಗೌಡನ ಆನೆಯೇ ಕಾರಣವೆಂದು ಆರೋಪಿಸುವ ಮೂಡಿಗೆರೆಯ ಜನ, ವಾಸ್ತವವನ್ನು ಸುಲಭವಾಗಿ ಗುರುತಿಸುವುದು, ಸಾಧ್ಯವಿದ್ದರೂ ಆ ನಿಟ್ಟಿನಲ್ಲಿ ಆಲೋಚಿಸದೆ ಸಂಬಂಧವಿಲ್ಲದ ಮತ್ತೊಂದು ವಸ್ತುವನ್ನು ಆಪಾದಿತವನ್ನಾಗಿಸುವ ಹುನ್ನಾರ ಸಾಮಾಜಿಕ ಜವಾಬ್ದಾರಿಯಿಂದ ನುಣುಚಿಕೊಂಡು ಸಭ್ಯಸ್ಥರಂತೆ ಮುಖವಾಡ ಹಾಕುವುದು ಸಾಂಸ್ಕೃತಿಕ ಹಿನ್ನೆಡೆಗೆ ಕನ್ನಡಿ ಹಿಡಿಯುವಂತೆ ಕಾಣುತ್ತದೆ. ಕೃಷ್ಣೇಗೌಡನ ಆನೆಯ ಅಸ್ತಿತ್ವ ಮತ್ತು ಮೂಡಿಗೆರೆಯ ಬದುಕಿನ ನಡುವಣ ಸಾಮಾಜಿಕ ಸಂಬಂಧ ಶೋಧಿಸುತ್ತಾ ತನ್ನದಲ್ಲದ ಅವಾಂತರಗಳಿಗೆ ಹೊಣೆ ಹೊರುವ ಆನೆಗಾದರೂ ಅದರ ಅರಿವಿದೆಯೇ? ಹೀಗೆ ನಿರೂಪಕನ ಯೋಚನಾಕ್ರಮದಲ್ಲಿ ಸುತ್ತಲಿನವರ ಪ್ರತಿಕ್ರಿಯೆಯಲ್ಲಿ ಜಟಿಲಗೊಳ್ಳುವ ಸಮಸ್ಯೆ ಕೊನೆಗೆ ಆನೆಯನ್ನು ಗುಂಡಿಟ್ಟು ಕೊಲ್ಲುವತ್ತ ಸರಿಯುತ್ತದೆ. ಇದು ಸಾಮಾಜಿಕ ಬದುಕಿನ ಮತ್ತೊಂದು ದುರಂತ.

ಈ ಕಥೆ ಓದುಗರ ಸಾಮಾಜಿಕ ಪ್ರಜ್ಞೆ ತಾನಾಗಿ ಬೆಳೆಯಲು ಬಿಡದೆ ಆಲೋಚನೆಗೆ ಹಚ್ಚುತ್ತದೆ. ಮೂಡಿಗೆರೆಯ ಸಾಮಾಜಿಕ ಅಸ್ತವ್ಯಸ್ಥತೆಗೆ ಯಾರು ಹೊಣೆ ಎಂದು ಹುಡುಕುತ್ತಾ ಹೊರಟಾಗ ಸಮಾಜದ ಜೊತೆಗೆ ಎಲ್ಲವೂ ಒಂದಿಲ್ಲೊಂದು ರೀತಿಯಲ್ಲಿ ಜವಾಬ್ದಾರವೆನಿಸುತ್ತದೆ. ಭ್ರಷ್ಟಮಯವಾದ ಸಮಾಜ ತನ್ನೆಲ್ಲ ಬೇಜವಾಬ್ದಾರಿಗಳಿಗೆ ಆನೆಯನ್ನು ಇಲ್ಲವೆ ವ್ಯವಸ್ಥೆಯನ್ನು ದೂರುವುದು ನೈತಿಕ ಅಧಃಪತನಕ್ಕೆ ಸೂಚಕವಾಗಿದೆ. ಇವೆಲ್ಲವೂ ಒಂದಲ್ಲ ಒಂದು ರೀತಿಯಲ್ಲಿ ಬೆಳವಣಿಗೆಯ ರೂಪದ ಔನ್ನತ್ಯವಾದರೂ 'ಅಭಿವೃದ್ಧಿ' ಎಂಬ ಅರ್ಥದಲ್ಲಿ ಪುನರ್ವಿಮರ್ಶೆಗೆ ಒಳಪಡಬೇಕಾದ ಅನಿವಾರ್ಯತೆಯನ್ನು ಓದುಗನಲ್ಲಿ ಹುಟ್ಟುಹಾಕುತ್ತದೆ.

ಸಮಾಜದ ಸಂಕೀರ್ಣ ಮನಸ್ಥಿತಿಗಳ ನಡುವೆ; ಚಲನಶೀಲ ಬದುಕಿನ ಅವ್ಯಯಗಳೊಂದಿಗೆ ಮನುಷ್ಯನ ಮನಸ್ಸು ಸ್ಪಂದಿಸುವಾಗ ತೀವ್ರತರವಾದ ಸಂಘರ್ಷಕ್ಕೆ ಒಳಗಾಗುತ್ತದೆ ಮತ್ತು ಆಧುನಿಕ ಸಮಾಜದ ಜಡಗೊಂಡ ವ್ಯಕ್ತಿತ್ವವನ್ನು ಪುನಶ್ಚೇತನಗೊಳಿಸುವುದಕ್ಕೆ ಮಾನವ ಪ್ರಜ್ಞೆ/ಮನಸ್ಸು ಸಾಂದರ್ಭಿಕವಾಗಿ ಪ್ರತಿಭಟಿಸುವುದು ಮುಖ್ಯವಾಗಿರುತ್ತದೆ. ಇದಕ್ಕೆ ಉದಾಹರಣೆಯಾಗಿ **ಕುಬಿ ಮತ್ತು ಇಯಾಲ** ಕಥೆಯ ಕುಬಿ ಮತ್ತು ಭೈರಾಪುರ, **ತಬರನ ಕಥೆ**ಯ ತಬರ ಮತ್ತು ಆತನ ಸಮಾಜ, ಕಿರುಗೂರಿನ ಗಯ್ಯಾಳಿಗಳು ಕಥೆಯ ದಾನಮ್ಮ ಮತ್ತು ಕಿರುಗೂರು, ಚಿದಂಬರ ರಹಸ್ಯದ ಕೆಸರೂರು ಈ ಕಥನಗಳಲ್ಲಿ ಘಟಿಸಿರುವ ಸಂದರ್ಭಗಳನ್ನು ಉಲ್ಲೇಖಿಸುತ್ತೇನೆ.

'ಅವನ ವೈದ್ಯಕೀಯ ಚರಿತ್ರೆಯ ದಿನಚರಿಯಲ್ಲಿ ಯಾವುದೇ ಮನುಷ್ಯನೂ ಕಾರಣನಲ್ಲದ ಅನೇಕ ಸಾವನ್ನೂ ಕಂಡಿದ್ದ. ಭೀಕರ ರೋಗ-ರುಜಿನಗಳಿಗೆ ತುತ್ತಾಗಿ ಕುಬಿಯ ನಿತಾಂತ ಪ್ರಯತ್ನವನ್ನೂ ಮೀರಿ ಸಾವನ್ನಪ್ಪಬೇಕಾದವರನ್ನು ಕಂಡಿದ್ದ. ವಿಚಾರಣೆಯೇ ಇಲ್ಲದ, ಈ ಶಿಕ್ಷಾ ಕ್ರಮದೆದುರು ಯಾರೋ ಒಬ್ಬನನ್ನು ಕೊಂದ, ಯಾವನೋ ಒಬ್ಬನನ್ನು ಬೆನ್ನುಹತ್ತಿ, ಪತ್ತೆಮಾಡಿ ಗಲ್ಲಿಗೇರಿಸುವುದು ಒಂದು ಭಾರೀ ಶೌರ್ಯದಂತೆ ಕಂಡಿರಲಿಲ್ಲ ಕುಬೇರನಿಗೆ'.[೬೬]

ಕುಬಿ ಮತ್ತು ಇಯಾಲ ಕತೆಯ ಇಯಾಲಳ ಮೇಲೆ ನಡೆದ ಅತ್ಯಾಚಾರ ಮತ್ತು ಕೊಲೆ ಮೌಢ್ಯದ ಪರಮಾವಧಿಯಿಂದಾದ ಅವಗಡ. ಆದರೆ ಸತ್ತ ಇಯಾಲಾಳ ಸಾವನ್ನು ರಾಜಕೀಯ ದಾಳವನ್ನಾಗಿಸುವ ತಂತ್ರಕ್ಕೆ ಬಳಸಲ್ಪಡುವುದು, ಭ್ರಷ್ಟಾಚಾರದಲ್ಲಿ ಪಾಲ್ಗೊಳ್ಳುವ ವ್ಯವಸ್ಥೆಯ ಅಧಿಕಾರಿಗಳು ನಡೆಸುವ ಶೋಷಣೆ ದೌರ್ಜನ್ಯ. ಈ ಹಿನ್ನೆಲೆಯಲ್ಲಿ ಭೈರಾಪುರದ ಜನವರ್ಗ-

ರಾಜಕೀಯ ಪ್ರಭುತ್ವ-ವ್ಯವಸ್ಥೆ ಮತ್ತು ಸಾಮಾಜಿಕ ಪ್ರತಿಕ್ರಿಯೆ ಹಲವು ವಸ್ತುಸ್ಥಿತಿಗಳನ್ನು ಮುನ್ನೆಲೆಗೆ ತಂದು ಮನುಷ್ಯ ಪ್ರಜ್ಞೆಯ ಮೇಲೆ ಮಾಡುವ ಸವಾರಿಯನ್ನು ಮುಖ್ಯವಾಹಿನಿಗೆ ಒಡ್ಡುತ್ತದೆ. ಕುಬೇರಪ್ಪ ಈಗಾಗಲೇ ಚಾಲ್ತಿಯಲ್ಲಿದ್ದ ಅಜ್ಞಾನದ ಕಾರಣಗಳಿಂದ ತತ್ತರಿಸಿಹೋದವನು. ಹಲವು ವೈಪರೀತ್ಯಗಳಿಂದಾಗಿ ರೋಗದ ಗೂಡಾಗಿರುವ ಊರನ್ನು ಗುಣಪಡಿಸಲಾಗದ ರೀತಿಯಿಂದ ಯಾಂತ್ರಿಕವಾದ ಸಂಘರ್ಷಕ್ಕೆ ಆತ ಒಳಗಾಗಿದ್ದಾನೆ ಅನಿಸುತ್ತದೆ. ಯಾಕೆಂದರೆ ಸಂಘರ್ಷವನ್ನು ಹುಟ್ಟುಹಾಕಬಹುದಾಗಿದ್ದ ಸಂಗತಿಗಳು ತಾಳಮೇಳವಿಲ್ಲದೆ ಘಟಿಸುತ್ತಿರುವುವು. ಅವುಗಳಿಂದಾಗಿ ಆತನ ನಿಶ್ಚಿತ ಉದ್ದೇಶ ನಾಶ ಹೊಂದುತ್ತಿರುವುದು ಈ ಕಥೆಯಲ್ಲಿ ಪ್ರಾಮುಖ್ಯ ಪಡೆದುಕೊಳ್ಳುತ್ತದೆ.

ಇಯಾಲಾಳ ಕೊಲೆಯ ಹಿನ್ನೆಲೆಗೆ ಬೇರೆಯೇ ಕಾರಣವಿದ್ದರೂ ರಸ್ತೆಗೆ ಅಡ್ಡವಾಗಿದ ಬಂಡೆಯನ್ನು ಡೈನಾಮೇಟ್‌ನಿಂದ ಸಿಡಿಸುವ ಕಾಯಕವೂ ಅರ್ಧದಲ್ಲೇ ನಿಂತು ಕುಬೇರನ ಇದುವರೆಗಿನ ಶ್ರಮವನ್ನು ವಿಫಲಗೊಳಿಸುತ್ತದೆ. ಒಂದೆರಡು ವಿರೋಧಗಳಿದ್ದರೆ ಅವುಗಳನ್ನು ಸಾವಕಾಶವಾಗಿ ಎದುರಿಸಬಹುದು ಆದರೆ ಕುಬೇರನ ಎಲ್ಲ ಪರಿಶ್ರಮವನ್ನು ತಮಗೆ ಅನುಗುಣವಾಗಿ ಪರಿವರ್ತಿಸಿಕೊಳ್ಳುವವರೇ; ಬೇಕಾಬಿಟ್ಟಿ ನಡೆದುಕೊಳ್ಳುವ ಜನತೆಯಿಂದಾಗಿ ಕುಬೇರಪ್ಪನೂ ದಿಙ್ಮೂಢನಾಗಿ ಹಿಂದೆ ಸರಿಯುವಂತಾಗುತ್ತದೆ.

ತಬರನ ಕಥೆಯಲ್ಲಿ ಬರುವ ತಾಲ್ಲೂಕು ಕಛೇರಿ, ಆಡಳಿತ ವ್ಯವಸ್ಥೆ:

> ತಬರನಿಗೆ ಮಾನವರನ್ನು ಪೋಲಿಸು, ಆಫೀಸು, ಶಾನುಭೋಗ ಪಟೇಲ, ಜವಾನ ಮುಂತಾಗಿ ಪರಿವರ್ತಿಸುತ್ತ, ಎಂಥಂಥದೊ ಗೀಚಿದ ಫೈಲುಗಳನ್ನು ಅಂತರಾತ್ಮನಂತೆ ಸಂರಕ್ಷಿಸುತ್ತ ಇರುವ ಒಂದು ನಿರ್ದಯ, ಅರ್ಥಹೀನ ವ್ಯೂಹದ ಅರಿವು ನಿಧಾನವಾಗಿ ಅಗತೊಡಗಿತು. ಮಾನವನನ್ನೂ ಕರಕರ ಜಗಿದು, ಅಗಿದು ಉಗಿಯುತ್ತಾ ಇರುವ ಒಂದು ಸೈತಾನ ವ್ಯೂಹ ಕಂಡಿತು. ಮನುಷ್ಯನನ್ನು ಕೊಂದು ಒಣಮೀನಿನಂತೆ ಒಣಗಿಸಿ, ಫೈಲಿನೊಳಗೆ ಮಡಿಚಿಡುವ ದೆವ್ವವಾದ ತಾಹಿಶೀಲ್ದಾರ. ಫೈಲು ತೆಗೆದುಕೊಂಡು ಎಂಥಂಥದೊ ಸಂಜ್ಞೆಗಳನ್ನು ಮಾಡುತಿದ್ದ ಆತ. ನುಗ್ಗುನುರಿಯಾದ ಜೀವಾತ್ಮಗಳು ಡೆಸ್ಕಿನಿಂದ ಡೆಸ್ಕಿಗೆ ಬಿಗಿದು ಕಟ್ಟಿದ ಫೈಲಿನೊಳಗೆ ಸಾಗುತ್ತಿದ್ದವು. ಈ ರೌರವ ನಕರದ ಕಾರ್ಖಾನೆಯನ್ನು ನೋಡಿ ತಬರನ ಕಣ್ಣಿನಿಂದ ತಟ ತಟ ನೀರು ಉರುಳತೊಡಗಿತು. ತನಗಾಗಿ, ತನ್ನ ಹೆಂಡತಿಗಾಗಿ, ತನ್ನಂಥದೇ ಜೀವವಾದ ತಹಶೀಲ್ದಾರನಿಗಾಗಿ, ಜವಾನ ಜವರಾಯನಿಗಾಗಿ ದುಃಖ ಉಮ್ಮಳಿಸಿ ಬಂದಿತು.[೬೭]

ವ್ಯವಸ್ಥೆಯ ಕರಾಳತೆಗೆ ಭೌತಿಕವಾಗಿ ಅವನತವಾಗುವ ತಬರನ ಜೀವನ ಮತ್ತೆ ಸರಿಯಾಗಲಾರದ ಹಂತಕ್ಕೆ ಸರಿಯುತ್ತದೆ.

ಕಿರುಗೂರಿನ ಗಯ್ಯಾಳಿಗಳು ಕಥೆಯಲ್ಲಿ ಕಿರುಗೂರಿನ ನಾಲ್ವರು ಗಂಡಸರು ಗ್ರಾಮಸೇವಕ ಶಂಕ್ರಪ್ಪನ ಅವಾಂತರಗಳಿಂದ ಲಾಕ್‌ಅಪ್‌ನಲ್ಲಿ ಅನುಭವಿಸಿದ ಚಿತ್ರಹಿಂಸೆ, ಸ್ವರೂಪದ ಶ್ರೀನಿವಾಸ ಅಂಗಾಡಿ ಆಸ್ತಿ ಇಂತಹವು ಶ್ರೀಸಾಮಾನ್ಯನ ಜೀವನದಲ್ಲಿ ಅಥವಾ ಯಾವುದೇ ಎಡರು ತೊಡರುಗಳಿಲ್ಲದೆ ಸಲೀಸಾಗಿ ಸಾಗುತ್ತಿದ್ದ ಜೀವನದಲ್ಲಿ ಕಾರ್ಯಾಕಾರಣ ಸಂಬಂಧವಿಲ್ಲದ ವಿಚಾರಗಳಾಗಿ ಘಟಿಸಿಬಿಡಬಹುದು ಮೇಲ್ನೋಟಕ್ಕೆ ಓದುಗನಿಗೆ ಇವು ಅಸಂಗತ ವಿಚಾರಗಳಾಗಿಯೋ ಕಥಾ ಓಘದೊಳಗೆ ಒಂದಾದ ಹಾಸ್ಯಮಯ ಚಿತ್ರಣಗಳಾಗಿಯೋ ಕಂಡು ಬಂದರೂ ಅದರ ಹಿಂದೆ ಅಡಗಿರುವ ಹೊಯ್ದಾಟಗಳು ಇಂದಿಗೂ ಪ್ರಸ್ತುತವಾಗಬಲ್ಲವು. ಏಕೆಂದರೆ ಇಡೀ ಸೃಷ್ಟಿಯ ಅಸಂಗತ, ಅಸಂಬದ್ಧ ವಿನ್ಯಾಸದ ಒಳಗೆ ಮಾನವ ನಿರ್ಮಿತ ಆಡಳಿತ

ವ್ಯವಸ್ಥೆಯ ಭೀಕರ ಭೀಭತ್ಸ ದೃಶ್ಯಗಳು ವ್ಯವಸ್ಥೆಯ ದುರಂತವನ್ನು ಧ್ವನಿಸುವುದಲ್ಲದೆ ದಿನನಿತ್ಯದ ಬದುಕಿಗಾಗಿ ಹೋರಾಡುವ ಹಂತದಲ್ಲಿ ಬೆನ್ನೆಲುಬಾಗಿ ನಿಲ್ಲುವ ಹಕ್ಕುಗಾರಿಕೆ ಎಷ್ಟರಮಟ್ಟಿಗೆ ಯಶಸ್ವಿಯಾಗುತ್ತದೆ ಎಂಬುದು ಸ್ಪಷ್ಟಗೊಳ್ಳುತ್ತದೆ.

ಕುಬಿ, ತಬರ, ಸೂರಚಾರಿ ಇವರುಗಳ ಪ್ರತಿಭಟನೆಯ ಸ್ವರೂಪ ವೈಯಕ್ತಿಕವಾಗಿ ಮತ್ತು ಸಾಮಾಜಿಕವಾಗಿ ಯಾವುದೇ ರೀತಿಯ ಪರಿಣಾಮವನ್ನು ಬೀರಲು ಸಾಧ್ಯವಾಗದೆ, ಇದ್ದ ಸ್ಥಿತಿಯನ್ನೇ ಒಪ್ಪಿಕೊಂಡಂತಹವು. ಆದರೆ 'ಕಿರುಗೂರಿನ ಗಯ್ಯಾಳಿಗಳು' ಕಥೆ ಸಾಮಾಜಿಕ ನೆಲೆಯಲ್ಲಿ ತೆರೆದುಕೊಂಡದ್ದು ಸ್ತ್ರೀ ಪುರುಷ ಅಸಮಾನತೆಯ ಬಗ್ಗೆ ಮೂಲಭೂತ ಪ್ರಶ್ನೆಗಳನ್ನು ಎತ್ತುವುದರ ಜೊತೆಗೆ, ಸಾಮಾಜಿಕ ಸಾಂಸ್ಕೃತಿಕ ಬದುಕನ್ನು ಆವರಿಸಿಕೊಂಡಿರುವ ಗಂಭೀರ ಸಮಸ್ಯೆಗಳನ್ನು ವಾಸ್ತವವಾದಿ ನೆಲೆಯಲ್ಲಿ ಮನದಟ್ಟು ಮಾಡಿಸುವ ರೀತಿ ಅನನ್ಯವಾಗಿದೆ. ಕಥೆಯು ಲಿಂಗತಾರತಮ್ಯದ ಸಂಘರ್ಷವನ್ನು ಪ್ರಾತಿನಿಧಿಕವಾಗಿ ನಿರೂಪಿಸುತ್ತಿದ್ದರೂ ಸಂಪೂರ್ಣ ವ್ಯವಸ್ಥೆಯೊಂದು ಇಂತಹ ಸಂಘರ್ಷಕ್ಕೆ ಒಳಗಾಗಿ ಮಾರ್ಪಡುವುದು ಸಮುದಾಯದ ವಿಭಿನ್ನ ಪ್ರಾತಿನಿಧ್ಯತೆಗೆ ಸಂದ ನ್ಯಾಯವಾಗಿದೆ. ಸಾಂದರ್ಭಿಕವಾಗಿ ತನ್ನೂರು ಮತ್ತು ಸುತ್ತಮುತ್ತಲಿನ ಪರಿಸರವು ಪರಿವರ್ತನೆಗೆ ಒಳಗಾಗುವುದನ್ನೂ ಕಿರುಗೂರಿನ ಪ್ರತಿಭಟನೆ ಸಾಬೀತುಪಡಿಸುತ್ತದೆ.

## ೩.೩ ಪರಂಪರೆ ಮತ್ತು ಆಧುನಿಕತೆ: ಇಂದು ನೆನ್ನೆಗಳ ನಡುವೆ

ಆಧುನಿಕತೆಯಿಂದ ಅನೇಕ ಸಮಸ್ಯೆಗಳು ಜನ್ಮ ತಾಳಿದವು. ವಸಾಹತುಶಾಹಿ ಆಡಳಿತ, ಹೊಸ ಶಿಕ್ಷಣ ವ್ಯವಸ್ಥೆ, ಭಾರತೀಯ ಸಮಾಜದಲ್ಲಿ ತ್ವರಿತಗತಿಯಲ್ಲಿ ಸಂಚಲನವನ್ನು ತಂದಿತು. ಹಳತು ಹೊಸತುಗಳ ಮುಖಾಮುಖಿ, ವಾಸ್ತವ ಮತ್ತು ಸಾಮಾಜಿಕತೆಗಳ ನಡುವಿನ ಘರ್ಷಣೆ, ಪರಿಸರ ಮತ್ತು ಪ್ರಜ್ಞೆಗಳ ನಡುವಿನ ಸಂವಾದ ಇವೆಲ್ಲವುಗಳಿಂದಾಗಿ ಜೀವನ ಕ್ರಮವು ಬದಲಾವಣೆಗೊಂಡಿತು. ಹೊಸತನಕ್ಕೆ ತೆರೆದುಕೊಂಡ ಸಮಾಜ ಅಲ್ಲಿ ಪಡೆದ ಅನುಭವಗಳನ್ನು, ಅವುಗಳಿಂದಾದ ಪರಿಣಾಮಗಳನ್ನು ಬರವಣಿಗೆಯಲ್ಲಿ ದಾಖಲಿಸುವುದು ಮತ್ತು ವಿಮರ್ಶಿಸಿ ವ್ಯಾಖ್ಯಾನಿಸುವುದು ನಡೆಯಿತು. ಸ್ವಾತಂತ್ರ್ಯಕ್ಕಾಗಿ ಕಾದು ನಿಂತಿದ್ದ ದೇಶ ಸ್ವಾತಂತ್ರ್ಯವನ್ನು ಸ್ವಚ್ಛಂದವಾಗಿ ಆಹ್ಲಾದಿಸುವುದರಲ್ಲಿ ತಲ್ಲೀನವಾದಾಗ ವ್ಯಕ್ತಿ ಕೇಂದ್ರಿತ ನೆಲೆಯಲ್ಲಿ ಹೊಸ ಅರಿವು ಮತ್ತು ಹೊಸ ರಚನೆಯ ವ್ಯವಸ್ಥೆಗಳು ರೂಪುಗೊಂಡು ಆಧುನೀಕರಣ ಪ್ರಕ್ರಿಯೆಯನ್ನು ಸಂಭ್ರಮದಿಂದ ಸ್ವಾಗತಿಸಿತು.

ಇಂದು 'ಆಧುನಿಕತೆ' (ಮೊರ್ಡೆನಿಟಿ) ಪದವು ವಿಶಿಷ್ಟ ಪಾರಿಭಾಷಿಕ ಅರ್ಥದಲ್ಲಿ ಬಳಕೆಯಾಗುತ್ತಿದೆ. ಪಶ್ಚಿಮದ ಆಧುನಿಕತೆಯ ಇತಿಹಾಸದಲ್ಲಿ ಆಧುನಿಕತೆಯ ಎರಡು ಮುಖ್ಯ ಹಂತಗಳನ್ನು ಗುರುತಿಸುತ್ತಾರೆ. ಮೊದಲನೆಯದು ೧೫ ನೇ ಶತಮಾನದಲ್ಲಿ ಮಧ್ಯಯುಗದ ಯುರೋಪಿನಲ್ಲಿ ಪ್ರಾರಂಭವಾದ ಪುನರುಜ್ಜೀವನ ಕಾಲ. ಯುರೋಪು ಗ್ರೀಕ್ ಮತ್ತು ರೋಮನ್ ಸಂಸ್ಕೃತಿಗಳ ಸಂಪರ್ಕದಿಂದಾಗಿ ತನ್ನ ದೇಶದ ಸಾಂಪ್ರಾದಾಯಿಕ ಜಡತೆಯನ್ನು ಕೊಡವಿಕೊಂಡು ಹೊಸ ನಾಗರಿಕತೆಯತ್ತ ತೆರೆದುಕೊಂಡು ಶಿಕ್ಷಣ, ಕಲೆ, ಸಾಹಿತ್ಯ, ಸಂಸ್ಕೃತಿಗಳಲ್ಲಿ ಕ್ರಾಂತಿಕಾರಕ ಬದಲಾವಣೆಯನ್ನು ತಂದದ್ದು. ಇವೆಲ್ಲವುಗಳ ಒಟ್ಟು ಪರಿಣಾಮವೆಂದರೆ ಬದಲಾದ ಜೀವನದೃಷ್ಟಿಯಿಂದಾದ ವೈಜ್ಞಾನಿಕ ಸಂಶೋಧನೆಗಳು. ಈ ಸಂಶೋಧನೆಗಳು ಜಗತ್ತಿನೆಲ್ಲೆಡೆ ಕ್ರಾಂತಿಯನ್ನುಂಟು ಮಾಡಿದವು. ಆಧುನಿಕತೆಯ ಎರಡನೆಯ ಹಂತ ೧೮ ನೇ ಶತಮಾನದ ದ್ವಿತೀಯಾರ್ಧ ಮತ್ತು ೧೯ ನೇ ಶತಮಾನದ ಆರಂಭದಲ್ಲಿ ಇದು ಪಶ್ಚಿಮ ದೇಶಗಳ ಆರ್ಥಿಕ, ರಾಜಕೀಯ, ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ ಜೀವನ ವ್ಯವಸ್ಥೆಯನ್ನೆಲ್ಲಾ ಪ್ರಭಾವಿಸಿತು.[೬೮] ಇದು ಆಧುನಿಕತೆ ಪದದ ವಸ್ತುನಿಷ್ಠ ಅಭಿಪ್ರಾಯವಾಗಿದ್ದರೂ ಸಾಮಾನ್ಯ ಅರ್ಥದಲ್ಲಿ ಹೊಸ ಜೀವನ ವಿಧಾನ, ಶಿಕ್ಷಣ ಕ್ರಮದಲ್ಲಿ-ವೈಚಾರಿಕತೆಯಲ್ಲಿ-ಆಲೋಚನಾ ಕ್ರಮದಲ್ಲಿ ಆಗುತ್ತಿರುವ ಬದಲಾವಣೆಗಳು. ಪರಂಪರೆಯೆಂದಾಗ ಹಿಂದಿನ ನಂಬಿಕೆಗಳು, ಆಚರಣೆಗಳು, ಹಳೆಯ ಒಡಂಬಡಿಕೆಗಳು, ಸಂಪ್ರದಾಯ ಬದ್ಧ ರೀತಿನೀತಿಗಳು ಕಾಲ, ಸಮಾಜ, ಪ್ರದೇಶ ಪರಿಸರಕ್ಕೆ ಅನುಗುಣವಾಗಿ ವ್ಯತ್ಯಾಸಗಳನ್ನು ಹೊಂದಿರುತ್ತದೆ.

ಆಧುನೀಕರಣದ ಪ್ರಕ್ರಿಯೆ ಸರಳವಲ್ಲ ಅದನ್ನು ಕೇವಲ ಸರಳ ನೈತಿಕ ತೀರ್ಮಾನಗಳಲ್ಲಿ ಗುರುತಿಸಲು ಸಾಧ್ಯವಿಲ್ಲ. ಹತ್ತು ಹಲವು ಸಂಗತಿಗಳು ಒಟ್ಟಿಗೇ ಮುಖಾಮುಖಿಯಾದಾಗ ಏರ್ಪಡುವ ಸಂಕೀರ್ಣ ಪ್ರಕ್ರಿಯೆಯನ್ನು ಸಮಗ್ರವಾಗಿ ದಾಖಲಿಸಲು ಶ್ರೇಷ್ಠತಮವಾದ ಸೂಕ್ಷ್ಮ ಮನಸ್ಸು ಇರಬೇಕು. ಸೂಕ್ಷ್ಮತಮವಾದ ಅನುಭವಗಳನ್ನು ಸಾಮುದಾಯಿಕ ಸ್ವರೂಪವನ್ನು ಸಾಹಿತ್ಯರೂಪಕ್ಕೆ ಅಳವಡಿಸುವುದು ಕಷ್ಟಕರವೆ. ಸಾಂಪ್ರದಾಯಿಕ ವಾತಾವರಣದಲ್ಲಿದ್ದ ಪರಂಪರಾಗತ ಮೌಲ್ಯಗಳನ್ನು ಪಲ್ಲಟಗೊಳಿಸಿ ಸಾಹಿತ್ಯಕ ಚೌಕಟ್ಟಿಗೆ ಅದರಲ್ಲೂ ಹೊಸ ಸಾಕ್ಷರತೆ ಮತ್ತು ಹೊಸ

ಆರ್ಥಿಕ ವ್ಯವಸೆಯಿಂದುಂಟಾಗಿದ್ದ ತಲ್ಲಣಗಳನ್ನು ಸಾಂಸ್ಕೃತಿಕ ವಕ್ತಾರರಾಗಿ ಶೋಧಿಸುವುದು ಗುರುತರ ಜವಾಬ್ದಾರಿಯಾಗಿರುತ್ತದೆ.

ಪರಂಪರೆ ಆಧುನಿಕತೆಯೆಂದಾಗ ಪರಂಪರೆಯನ್ನು ಧಿಕ್ಕರಿಸುವುದೇ ಆಧುನಿಕತೆಯೆಂದಲ್ಲ. ಸೃಜನಶೀಲ ಮನಸ್ಸುಗಳು ಕಟ್ಟಿಕೊಟ್ಟ ಆಧುನಿಕತೆ ಮತ್ತು ಪರಂಪರೆ ಒಂದರ್ಥದಲ್ಲಿ ಮೇಲುನೋಟಕ್ಕೆ ಸಂಘರ್ಷಕ್ಕೆ ಒಳಗಾದಂತೆ ಕಂಡುಬಂದರೂ ಆಧುನಿಕ ಮನಸ್ಸಿನೊಳಗಣ ಪರಂಪರಾಗತ ನಂಬಿಕೆಗಳನ್ನು ಸಂಘರ್ಷದ ಹಂತದಲ್ಲಿ ತಿರಸ್ಕರಿಸಲಾಗುವುದಿಲ್ಲ. ಆಧುನೀಕರಣದ ಮುಖವಾಡವನ್ನು ಧರಿಸಿಯೇ ಸುತ್ತಣ ಪರಿಸರದ ಸಾಂಪ್ರದಾಯಿಕ ವಾತಾವರಣದಲ್ಲಿ ವಿವಿಧ ಪಾತ್ರಗಳನ್ನು ಆರೋಪಿಸಿಕೊಂಡು ವಿಜೃಂಭಿಸುವುದು ಸಾಮಾನ್ಯವಾಗಿ ಕಂಡುಬರುತ್ತದೆ. ಪರಂಪರೆಯಲ್ಲಿರುವುದೆಲ್ಲ ಬಂಧನವೆಂದಾಗಲೀ ಅದರಿಂದ ಬಿಡುಗಡೆಯೇ ಇಲ್ಲವೆಂದಾಗಲೀ ಅಲ್ಲ. ಪರಂಪರಾಗತವಾದ ರೀತಿ-ನೀತಿಗಳು ಸಂಪ್ರದಾಯದ ಹೆಸರಿನಲ್ಲಿ ತನ್ನ ಸಾಮಾಜಿಕ ಪರಿಸರಕ್ಕೆ ಒಳಪಡುವ ವ್ಯಕ್ತಿಗಳನ್ನು ನಿಯಂತ್ರಣದಲ್ಲಿಟ್ಟುಕೊಳ್ಳುವ ಪ್ರಯತ್ನ ನಡೆಸುತ್ತಲೇ ಇರುತ್ತದೆ. ತೇಜಸ್ವಿ ವ್ಯಕ್ತಿ ವಿಶಿಷ್ಟ ಸಿದ್ಧಾಂತದ ಮುಖೇನ ೧೯೬೪ ರಲ್ಲೇ ಪರಂಪರೆಯಲ್ಲಿನ ವಿಶಿಷ್ಟತೆಯ ಬಗೆಗೆ ಬಿಚ್ಚುಮನಸ್ಸಿನಿಂದ ವಿಶ್ಲೇಷಣೆಗೆ ತೊಡಗಿದವರು

> ಕಲಾನಿರ್ಮಿತಿ ಎಂದರೆ ಬರಹಗಾರನಿಗೆ ತನ್ನ ಭಾಷೆಯ ಕಾಲ ದೇಶದ (ಚಾರಿತ್ರಿಕ ಮತ್ತು ಭೌಗೋಳಿಕ) ಸಾಧ್ಯತೆಗಳನ್ನು ಅರಿಯುವ ಮತ್ತು ಮೀರುವ ಕ್ರಿಯೆ. ಎಂದರೆ ಬರಹಗಾರ ಸೃಷ್ಟಿಶೀಲನಾಗುತ್ತಿದ್ದಂತೆಯೆ ಒಂದು ಬಗೆಯ ಪರಂಪರೆಯ ಪ್ರಜ್ಞೆ ಅಪ್ರಜ್ಞಾಪೂರ್ವಕವಾಗಿ ತನ್ನ ಮಾಧ್ಯಮದ ಭಾಷೆಯ ಮುಖಾಂತರ ಫಲಿಸುತ್ತದೆ. ಪ್ರತಿಬರಹಗಾರನೂ ತನ್ನ ಮತ್ತು ವ್ಯಕ್ತಿಯ ವ್ಯಕ್ತಿತ್ವಕ್ಕೆ ತಕ್ಕಂತೆ ತನ್ನ ಸೃಷ್ಟಿಯ ಮುಖಾಂತರ ಆ ಭಾಷೆಯನ್ನಾಡುವ ಜನಾಂಗದ ಪರಂಪರೆಯ ಬಗ್ಗೆ ತನ್ನದೇ ಆದೊಂದು ಧೋರಣೆಯನ್ನೂ ತಿಳಿವಳಿಕೆಯನ್ನೂ ಹೊಮ್ಮಿಸುತ್ತಾನೆ. ಇದು ಆ ಬರಹಗಾರ ತನ್ನ ಜನಾಂಗದ ಚರಿತ್ರೆಯ ಮತ್ತು ಪರಂಪರೆಯ ಬಗ್ಗೆ ಎಷ್ಟೇ ನಿರ್ಲಕ್ಷ್ಯ ಮತ್ತು ಉದಾಸೀನನಿದ್ದರೂ ಅವುಗಳನೆಲ್ಲಾ ಮೀರಿ ಅಪ್ರಜ್ಞಾಪೂರ್ವಕವಾಗಿ ನಡೆಯುವ ಕ್ರಿಯೆ. ೬

ಎಂದು ಪರಂಪರೆಯನ್ನು ಕುರಿತು ತೇಜಸ್ವಿಯವರು ವ್ಯಾಖ್ಯಾನಿಸುತ್ತಾರೆ. ಈ ನಿಟ್ಟಿನಲ್ಲಿ ಪರಂಪರೆ ಎನ್ನುವಂತಹ ನಿರಂತರವಾಹಿನಿಯನ್ನು, ಅದಕ್ಕೆ ಗುಪ್ತಗಾಮಿನಿಯಾಗಿ ಚೈತನ್ಯ ನೀಡಿರುವ ಶಕ್ತಿಗಳನ್ನು ಕಂಡುಕೊಳ್ಳುವ ಹಲವಾರು ಪ್ರಯತ್ನಗಳಾಗಿವೆ. ಆ ಪ್ರಯತ್ನದ ಮುಂದುವರಿಕೆ ತೇಜಸ್ವಿ ಕಥನಗಳಲ್ಲಿ ವೇದ್ಯವಾಗುತ್ತದೆ. ಲಿಂಗಬಂದ ಕಥೆಯಿಂದ ಆರಂಭವಾದ ಸಾಹಿತ್ಯಿಕ ಜೀವನ ಇನ್ನಿತರ ಕಲಾಕೃತಿಗಳೊಂದಿಗೆ ಸಮ್ಮಿಳಿತಗೊಂಡು ದೇದೀಪ್ಯಮಾನವಾಗಿ ಬೆಳಗಿದೆ.

ಆಧುನಿಕತೆಯ ಸಂಕೇತಗಳಾಗಿ ಬರುವ ಅನೇಕ ವಸ್ತುಗಳು ಗ್ರಾಮೀಣ ಬದುಕಿನಲ್ಲಿ ಭಯ, ಸಂಕೋಚ, ತಲ್ಲಣ, ಸಂತೋಷ ವಿರಸ ಭಾವನೆಗಳನ್ನು ಸಾಂಕ್ರಾಮಿಕವಾಗಿ ಹರಡಿದವು. ಆಧುನಿಕತೆಯಿಂದಾಗಿ ಪೂರ್ವಸ್ವರೂಪ ಅಳಿಯುತ್ತಾ ಬಂದಂತೆಲ್ಲ ಮಾನವನ ಭೌತಿಕ ವಿಕಾಸವಾಗುತ್ತದೆಯೇ ಹೊರತು ಬೌದ್ಧಿಕತೆಯ ವಿಕಸನವಾಗಿವುದಿಲ್ಲ ಎಂಬರ್ಥದಲ್ಲಿ 'ಅವನತಿ' 'ತುಕ್ಕೋಜಿ' ಅಬಚೂರಿನ ಪೋಸ್ಟಾಫೀಸು, ಕುಬಿ ಮತ್ತು ಇಯಾಲ, ...... ಇನ್ನಿತರ ಕಥೆಗಳಲ್ಲಿ ಸ್ಫುಟಗೊಂಡರೆ ಸ್ವರೂಪ, ನಿಗೂಢಮನುಷ್ಯರು, ಹುಲಿಯೂರಿನ ಸರಹದ್ದು, ಕರ್ವಾಲೋ ...... ಕಥನಗಳಲ್ಲಿನ ಹಳತು-ಹೊಸತುಗಳ ಸಂಘರ್ಷವಾಗಲಿ, ಗ್ರಾಮ-ನಗರಗಳ ನಡುವಿನ ಸಂಘರ್ಷವಾಗಲಿ, ಪರಂಪರೆ ಆಧುನಿಕತೆಯ ಸಂಘರ್ಷವಾಗಲಿ ಗ್ರಾಮೀಣ ಸಮಾಜದೊಳಗೆ ಹುಟ್ಟಿಕೊಂಡ ಭೌತಿಕ-ಅಭೌತಿಕ ಸ್ವರೂಪದವು.

ಸ್ವಾತಂತ್ರ್ಯಾನಂತರದ ಕಾಲಾವಧಿಯ ಬರವಣಿಗೆಗಿಂತ ವಿಭಿನ್ನವಾದ ಶೈಲಿಯ ಬರವಣಿಗೆ ಕಂಡುಬಂದದ್ದು ಎಪ್ಪತ್ತರ ದಶಕದ ನಂತರದಲ್ಲಿ. ಸ್ವಾತಂತ್ರ್ಯೋತ್ತರ ಭಾರತದ ಸಮಾಜ ಎದುರಿಸಿದ ಸವಾಲುಗಳನ್ನು ವೈಚಾರಿಕತೆಯ ಹಿನ್ನೆಲೆಯಲ್ಲಿ ಚರ್ಚೆಗೆ ಒಳಗುಮಾಡಿದಾಗ ದೊರೆತ ಉತ್ತರವೇ ಮನುಷ್ಯನ ಇರುವಿಕೆಯ ನೆಲೆಯನ್ನು ಕುರಿತು. ಇದು ಯಾವ ಹಂತದ್ದು ಈ ನೆಲೆ ಯಾವುದರ ವಿರುದ್ಧ ಸ್ಥಾಪಿತವಾಗಬೇಕಾಗಿದೆ ಎಂಬುದನ್ನು ಕುರಿತ ಚರ್ಚೆ ಹಲವರನ್ನು ನಿದ್ದೆಗೆಡಿಸಿತು. ಇದು ಆಧುನಿಕ ವಿದ್ಯಾಭ್ಯಾಸದ ತಿಳಿವಿನಿಂದ ಮೂಡಿದ ಪ್ರಜ್ಞೆಯಾದರೂ ಇದರ ಕೇಂದ್ರ ಪ್ರಜ್ಞೆಯೇ ಮನುಷ್ಯನ ಅಸ್ತಿತ್ವದ ಹುಡುಕಾಟ ಈ ಹುಡುಕಾಟದ ತೀವ್ರತೆಯಲ್ಲಿ ವಿದ್ಯಾವಂತ ಯುವಕನ ಮನಸ್ಸು ತನ್ನಲ್ಲಿ ಬಿತ್ತರಗೊಂಡಿದ್ದ ಶೈಕ್ಷಣಿಕದ ಮಾದರಿಗಳಿಗೂ ತಾನು ಎದುರುಗೊಳ್ಳುತ್ತಿರುವ ಸಮಾಜಕ್ಕೂ ನಡುವಿದ್ದ ಅಂತರವನ್ನು ಗುರುತಿಸಿದ್ದು. ಇದರ ಸ್ಪಷ್ಟತೆಯನ್ನು ಶ್ರೀನಿವಾಸನ ಆತ್ಮಾವಲೋಕನದಲ್ಲಿ ಗುರುತಿಸಬಹುದು.

ಶ್ರೀನಿವಾಸ ಭೂತ ಕಾಲದ ಘಟನೆಗಳೊಂದಿಗೆ ಹಲವು ವೈರುಧ್ಯಗಳನ್ನು ವಾಸ್ತವತೆಯ ಹಿನ್ನೆಲೆಯಲ್ಲಿ ಚರ್ಚಿಸುತ್ತಾನೆ. ಇದು ಶಿಕ್ಷಣಕ್ರಮ ಬಿತ್ತಿದ ಹೊಸ ಅರಿವು ಇದರ ಫಲವಾಗಿ ತನ್ನ ಸ್ವಂತ ವ್ಯಕ್ತಿತ್ವವನ್ನು, ದೇಶೀ ಚಿಂತನಕ್ರಮಗಳನ್ನು ಹಾಗೂ ತನ್ನ ಅನುಭವವನ್ನು ನೋಡುವ ಆಧುನಿಕ ಜೀವನಕ್ರಮ ಹುಟ್ಟು ಹಾಕಿದ್ದ ಅನಾಥಪ್ರಜ್ಞೆ; ಬದುಕಿನ ಆಯ್ಕೆ ತನ್ನದೇ ಆಗಿ ಅನುಭವಗಳ ಮೂಲಕ ಹುಡುಕ ಹೊರಟ ತಾತ್ವಿಕ ಗ್ರಹಿಕೆ ನಿಗೂಢವಾಗೇ ಉಳಿದುಬಿಟ್ಟಾಗ ಹೊಸ ದಿಗಂತದೆಡೆಗೆ ಸರಿಯುವ ನೋಟಕ್ರಮ ಸಹಜವಾಗಿದ್ದ ಪ್ರಾಕೃತಿಕ ಸತ್ಯಗಳ ಅರಿವಿನಲ್ಲಿ ಸ್ವಾತಂತ್ರ್ಯ ಸಮಾನತೆ ಹಾಗೂ ಸೌಂದರ್ಯಗಳ ನಿಖರ ಅರ್ಥವನ್ನು ಪಡೆದುಕೊಳ್ಳಲು ಉಪಕ್ರಮಿಸುತ್ತದೆ.

ಆಧುನಿಕತೆ ಸಾಧನಸಾಮಗ್ರಿಗಳ ಮೂಲಕವಾಗಿ ಮಾತ್ರವಲ್ಲ ಸಂವೇದನೆಯ ರೂಪದಲ್ಲೂ ಜನಮನವನ್ನು ತಲುಪಿತು. ದೈಹಿಕ ಶ್ರಮದ, ಕುಶಲಕೆಲಸದ ವೈಖರಿಗಳೂ ಹೇಗೆ ಹೀನವಾಗುತ್ತಾ ಬಂದವು ಎಂಬುದಕ್ಕೆ ಮೇದರಹಳ್ಳಿ ಗುಡಿಕೈಗಾರಿಕೆಯ ನಾಶ, ಸೂರಾಚಾರಿಯ ಕೆತ್ತನೆ ಕೆಲಸದ ಅಪ್ರಸ್ತುತಿ. ಎಂಗ್ಟ, ಕಾಳಪ್ಪ ಇವರುಗಳ ವೃತ್ತಿ ಬದುಕು ಹೀನಾಯವಾಗಿ ಕುಸಿದಿರುವುದು ಉದಾಹರಣೆಗಳಾಗಿವೆ. ಆರ್ಥಿಕ ಸುಭದ್ರತೆಯ ಬೆನ್ನು ಹತ್ತಿ ಹೊರಟಿರುವ ಆಧುನಿಕ ಸಮಾಜ ಬಹು ವಿಕೃತಿಯೊಡಗೆ ಸರಿದುಹೋಗುತ್ತಿರುವುದರ ಬಗೆಗೆ ತೇಜಸ್ವಿಯವರು ವಿಷಾದ ವ್ಯಕ್ತಪಡಿಸಿದರೂ ತಾವೇ ಕಟ್ಟಿಕೊಂಡ ಸಮಾಜದೊಳಗೆ ಇರುವ ನೆಮ್ಮದಿಯ ಬದುಕಿನ ಸಾಧ್ಯತೆಗಳನ್ನು ಸೂಕ್ಷ್ಮಸ್ತರದ ಹುಡುಕಾಟದೊಂದಿಗೆ ಕಟ್ಟಿಕೊಡುವ ಪ್ರಯತ್ನ ಮಾಡಿದ್ದಾರೆ.

'ಅಬಚೂರಿನ ಪೋಸ್ಟಾಫೀಸು' ಕಥಾಸಂಕಲನ ಸಾಮಾಜಿಕ ಬದುಕಿನ ವಿವಿಧ ಮುಖಗಳನ್ನು ಅದರ ಆಂತರ್ಯವನ್ನು ಅರ್ಥಮಾಡಿಕೊಳ್ಳಲು ಹೊರಟ ವಿಶೇಷ ಪ್ರಯತ್ನ. ಅವನತಿ ಅಬಚೂರಿನ ಪೋಸ್ಟಾಫೀಸು, ಕುಬಿ ಮತ್ತು ಇಯಾಲ, ತುಕ್ಕೋಜಿ–ಆನಂತರದ ಕೃತಿಗಳಾದ ಕಿರುಗೂರಿನಗಯ್ಯಾಳಿಗಳು ಇವುಗಳಲ್ಲಿನ ವೈಯಕ್ತಿಕ, ಸಾಮಾಜಿಕ ಸಂಘರ್ಷದ ಧಾತುಗಳು ಆಧುನಿಕ ಸಂವೇದನೆಯಿಂದ ರೂಪುಗೊಂಡಂತಹವು. ಅಬಚೂರಿನ ಬೋಬಣ್ಣನಿಗೆ ಅಲ್ಲಿಜಾನ್ ಸಾಬರಲ್ಲಿನ ರೈಟರ್ ಕೆಲಸಕ್ಕಿಂತ ತಾನು ದಿಲ್ಲಿಯೊಡನೆ ಸಂಪರ್ಕ ಹೊಂದಿರುವ ಭಾರತ ಪ್ರಜೆ ಎಂಬ ಹೆಮ್ಮೆಯ ಜೊತೆಗೆ ಪೋಸ್ಟ್ ಮಾಸ್ತರೇ ಎಂದು ಗೌರವಿಸುವ ಹುದ್ದೆಯ ಮೇಲೆ ಪ್ರೀತಿ ಇದ್ದದ್ದು ಸಹಜವಾಗಿತ್ತು ಇವನಂತೆಯೇ ಕರ್ವಾಲೋದ ಮಂದಣ್ಣ–ಆತನ ಮಾವ

ಬೌದ್ಧಿಕ, ದೈಹಿಕ ಶ್ರಮಕ್ಕಿಂತ ವೃತ್ತಿ ಬದುಕೇ ಶ್ರೇಷ್ಠ ಎನ್ನುವ ಆಲೋಚನೆಯೂ ಆಧುನಿಕತೆಯು ರೂಪಿಸಿದ ತಾರತಮ್ಯ ಭಾವನೆಯಿಂದಲೇ ಬಂದದ್ದು ಎಂಬುದು ಸ್ಪಷ್ಟ. 'ಕಾಳಪ್ಪನ ಕೋಬ್ರಾ' ಕಥೆಯ ಕಾಳಪ್ಪ ಆಧುನೀಕತೆಯ ಪ್ರತಿಕದಂತಿದ್ದಾನೆ. ಹಾಗೆಯೇ ಸೀನಪ್ಪ ಮತ್ತು ಮಾರ ಸಂತಾನಹರಣ ಚಿಕಿತ್ಸೆಯ ಬಗ್ಗೆ ಚರ್ಚಿಸುವುದು ಆಧುನೀಕತೆಯ ಸಂಕೇತಗಳಾಗಿವೆ.

ರಾಜದೆಲ್ಲೆಡೆ ಮಳೆಯ ಅಭಾವದಿಂದ ಆವರಿಸಿದ್ದ ಬರಗಾಲದ ಸ್ಥಿತಿಯಿಂದ ಉಂಟಾದ ಸಂಕಷ್ಟಗಳು, ಕೃಷಿಯಾಧಾರಿತ ಬೆಳೆಗಳ ಮೇಲೆ ಬರದ ತೀವ್ರ ಪರಿಣಾಮ, ಅದರಲ್ಲೂ ಏಲಕ್ಕಿ, ಕಾಫಿ ಬೆಳೆಗಳಿಗೆ ಬರಗಾಲದ ಕಾರಣದಿಂದ ಒದಗಿದ ದಾರುಣ ಸ್ಥಿತಿ ಮಾಯಾಲೋಕ ಕಾದಂಬರಿಯಲ್ಲಿ ವಿವರವಾಗಿ ಚಿತ್ರಿತವಾಗಿವೆ. ಆ ದಾರುಣತೆಯನ್ನು ತೇಜಸ್ವಿ ಹೀಗೆ ಚಿತ್ರಿಸುತ್ತಾರೆ.

> ಸಾಧಾರಣವಾಗಿ ಏಪ್ರಿಲ್‌ನಲ್ಲಿ ಬರುವ ಕಾಫಿ ಹೂವಿನ ಮಳೆ ಬರಲೇ ಇಲ್ಲ. ರೇವತಿ, ರೋಹಿಣಿ, ಭರಣಿ, ಯಾವ ಮಳೆಯೂ ಇಲ್ಲ. ಕಾಫಿ ಬೆಳೆಯುವವರಿಗೆ ಇದೊಂದು ಬಹು ದೊಡ್ಡ ಕಂಟಕ. ಪ್ರತಿವರ್ಷ ಏಪ್ರಿಲ್ ತಿಂಗಳಲ್ಲಿ ಅವರ ತಲೆಯ ಮೇಲೆ ಈ ತೂಗುವ ಕತ್ತಿ ನೇತಾಡುತ್ತಲೇ ಇರುತ್ತದೆ. ಸಾಕಷ್ಟು ನೀರಿದ್ದ ದೊಡ್ಡತೋಟಗಳವರು ನೀರು ಸಿಂಪರಣೆ ಮಾಡಿ ಸ್ವಲ್ಪವಾದರೂ ಫಸಲನ್ನು ದಕ್ಕಿಸಿಕೊಳ್ಳುತ್ತಾರೆ. ಸಣ್ಣಪುಟ್ಟವರು ಮಾತ್ರ ಹೂವಿನ ಮಳೆ ಸರಿಯಾಗಿ ಬರದಿದ್ದರೆ ಆ ವರ್ಷ ಅವರ ಬಾಯಿಗೆ ಮಣ್ಣೇ. ಆದರೆ ಈ ವರ್ಷ ಹಾಗಲ್ಲ. ಮೂರು ವರ್ಷದ ಬರಗಾಲ ಸಣ್ಣವರು, ಪುಟ್ಟವರು, ದೊಡ್ಡವರು, ಕಂಪೆನಿಯವರು ಎಲ್ಲರಿಗೂ ಸೇರಿಸಿ ಒಟ್ಟಿಗೇ ಬಾಯಿಗೆ ಮಣ್ಣು ಹಾಕಿತ್ತು. ಸಿಂಪರಿಸುವುದಕ್ಕೂ ಎಲ್ಲೂ ನೀರಿಲ್ಲದೆ, ನೀರಿಗಾಗಿ ಪ್ರತಿದಿನ ಅಹೋರಾತ್ರಿ ಕುರುಕ್ಷೇತ್ರ ಶುರುವಾಗಿತ್ತು. ನನ್ನ ತೋಟದಲ್ಲಿ ಕಾಫಿ ಮೊಗ್ಗುಗಳು ಮಳೆಗಾಗಿ ಕಾಯ್ದು ಕಾಯ್ದು ಕೊನೆಗೆ ದಟ್ಟ ಮಂಜಿನ ಪ್ರಭಾವದಿಂದಲೋ ಏನೋ ಸ್ವಲ್ಪ ಮುಂದೆ ಬಂದರೂ ಅರಳದೆ ನಿಧಾನವಾಗಿ ಕೆಂಚಾಗಿ ಉದುರಿಹೋಗಲು ಶುರುವಾಯ್ತು. ಕಾಫಿ ಗಿಡದ ಕಾಂಡವನ್ನು ಮೆಲ್ಲಗೆ ತಟ್ಟಿದರೆ ಬತ್ತ ಉದುರಿದ ಹಾಗೆ ಪುರುಪುರು ಒಣಗಿದ ಮೊಗ್ಗುಗಳು ತೊಟ್ಟು ಕಳಚಿ ಮಳೆ ಹನಿಗಳಂತೆ ಉದುರುತ್ತಿದ್ದುವು. ನನಗಂತೂ ಕಾಫಿ ಫಸಲಿಗೆ ತಿಲಾಂಜಲಿ ಕೊಟ್ಟು ವೆಚ್ಚ ಆದಷ್ಟು ಕಡಿಮೆ ಮಾಡಿಕೊಳ್ಳುವುದು ಅನಿವಾರ್ಯವಾಗಿತ್ತು. ಕಾಫಿಯದು ಈ ಕತೆಯಾದರೆ ಏಲಕ್ಕಿಯದು ಇನ್ನೂ ದೊಡ್ಡ ದುರಂತ. ಕಾಫಿಯಲ್ಲಿ ಫಸಲಿಲ್ಲವೆಂಬ ಕೊರತೆಯಾದರೆ ಏಲಕ್ಕಿಯಲ್ಲಿ ಗಿಡವೇ ಇಲ್ಲ! ಏಲಕ್ಕಿ ಕಾಂಡ, ತಾಯಿಬೇರು, ಕಾಂಡ, ಕೊಂಬೆಗಳಿಲ್ಲದ ಬಾಳೆ ಜಾತಿಯ ಗಿಡ, ನೀರಿಲ್ಲದೆ ಗಿಡ ಬಾಡಿದರೆ ಬರೀ ಎಲೆಗಳು ಬಾಡುವುದಿಲ್ಲ. ಇಡೀ ಗಿಡವೇ ನೆಲಕ್ಕೆ ಬೀಳುತ್ತದೆ. ಗಿಡಗಳು ಈ ಹಂತ ತಲುಪಿದ ಮೇಲೆ ಅವುಗಳನ್ನು ಕಿತ್ತೆಸೆದು ಬೇರೆ ಸಸಿಗಳನ್ನು ನೆಟ್ಟು ಮತ್ತೆ ಮೂರು ವರ್ಷ ಕಾಯುವುದಲ್ಲದೆ ಇನ್ನೂ ಯಾವ ಮಾರ್ಗವೂ ಇರುವುದಿಲ್ಲ. ಮೂರು ವರ್ಷದ ಬರದಿಂದ ಪ್ರತಿವರ್ಷವೂ ಸತ್ತಗಿಡಗಳನ್ನು ಕಿತ್ತು ನೆಟ್ಟು ಎಲ್ಲರೂ ಸುಸ್ತಾಗಿ ಎಲ್ಲರೂ ನನಗಿಂತ ಮೊದಲೇ ಏಲಕ್ಕಿಗೆ ವಿದಾಯ ಹೇಳಿದ್ದರು.[೭೦]

ಸಾಮಾನ್ಯ ರೈತನೊಬ್ಬ ಜೀವನ ನಿರ್ವಹಣೆಗಾಗಿ ಪಡುವ ಬವಣೆಗಳು ಬದುಕಿನ ಬಗ್ಗೆ ಆಸಕ್ತಿಯನ್ನು ಕುಂದಿಸುತ್ತವೆ. ಹಾಗಾಗಿ ರೈತಾಪಿ ಜೀವನ ತಮ್ಮ ಆಸೆ-ಆಕಾಂಕ್ಷೆಗಳನ್ನು ಪೂರೈಸಲಾರದೆಂದು ಕೃಷಿಕರು ನಗರದತ್ತ ಗುಳೆಹೋಗಲು ಆಶಿಸುತ್ತಾರೆ. ಆರ್ಥಿಕವಾಗಿ ಹೆಚ್ಚು ಲಾಭಕಾಯಕವಾಗಿರುವ ಬದುಕು ನೀಡುವ ಸುಖ-ಸಂತೋಷವನ್ನು ಶ್ರಮಭರಿತ ಬೆವರು ನೀಡಲಾರದು. ಪ್ರಕೃತಿಯನ್ನು ಅವಲಂಬಿಸಿ ಹೊಟ್ಟೆಹೊರೆಯುವ ಕಾಯಕ ಜೀವನಾವಶ್ಯಕಗಳನ್ನು ತುಂಬಿಕೊಡಲಾರದೆಂದೇ ಸಣ್ಣಸಣ್ಣ ಹಿಡುವಳಿದಾರರೂ ಜಮೀನನ್ನೂ, ಮನೆಯನ್ನೂ ಮಾರಿ ನಗರದ ಬದುಕಿಗೆ ಶರಣಾಗಲು ಇಚ್ಛೆಪಡುತ್ತಾರೆ. ಆಧುನಿಕತೆ ಕೊಡಮಾಡಿದ ಬೌದ್ಧಿಕ ಗ್ರಹಿಕೆಗಳಿಂದಾಗಿ ನಾಗರಿಕ ಬದುಕು ಕೊಡ ಮಾಡುವ ಸವಲತ್ತುಗಳು ಆಧಿಕ್ಯವನ್ನು ಪಡೆದುಕೊಳ್ಳುತ್ತಿವೆ ಮತ್ತು ಅವೇ ವರ್ತಮಾನವನ್ನು ರೂಪಿಸುತ್ತಿವೆ. ಗ್ರಾಮೀಣ ಪ್ರದೇಶಗಳು ಜಾಗತೀಕರಣದ ಅಳವಿಗೆ ಸಿಕ್ಕು ಸಾಮಾಜಿಕ ಆರ್ಥಿಕ ಸಾಂಸ್ಕೃತಿಕ ಪಲ್ಲಟಗಳಿಗೆ

ಸ್ಪಂದಿಸುತ್ತಿರುವುದು ಮತ್ತು ಗ್ರಾಮ ಜೀವನದ ಜೊತೆ ತಳುಕುಹಾಕಿಕೊಂಡಿರುವ ವಿನ್ಯಾಸಗಳನ್ನು ಬದಲಿಸುತ್ತ, ಸ್ಥಳೀಯ ಸೌಂದರ್ಯಾನುಭವದ ನೆಲೆಗಳನ್ನೇ ಅಸ್ತವ್ಯಸ್ತಗೊಳಿಸುತ್ತಿರುವುದು ಹೊಸ ಆಲೋಚನೆಗಳ ಬಿತ್ತನೆಯಿಂದಾಗಿ ಎಂಬುದು ಸ್ಪಷ್ಟವಾಗಿ ಗೋಚರವಾಗುತ್ತದೆ.

> ಮುಂದುವರಿದ ರಾಷ್ಟ್ರವಾಗಬೇಕೆಂಬ ನಾಗಾಲೋಟದ ಸ್ಪರ್ಧೆಗಿಳಿದಿರುವ ಭಾರತದಲ್ಲಿ ಹಳ್ಳಿಗಳು ನೋಡಲು ತಣ್ಣಗೆ ನಿದ್ರೆಸುತ್ತಿರುವಂತೆ ಕಂಡರೂ ಒಳಹೊಕ್ಕು, ನೋಡಿದರೆ ಭಯಂಕರ ಅಲ್ಲೋಲಕಲ್ಲೋಲದ ಹೆದ್ದೆರೆಗಳ ಮೇಲೆ ತುಯ್ದಾಡುತ್ತಿರುವುದು ಕಾಣುತ್ತದೆ. ಮಂದುವರಿಯುವುದಕ್ಕೂ ಹಳ್ಳಿಗಳ ದಿನನಿತ್ಯದ ಘಟನಾವಳಿಗಳ ಮಹಾಪೂರಕ್ಕೂ ನೇರ ಸಂಬಂಧ ಕಾಣದಿದ್ದರೂ ಈ ಬಗೆಯ ಅಗಾಧ ಚಟುವಟಿಕೆ, ಚಡಪಡಿಕೆಗಳಿಗೆ ಪರಂಪರಾಗತ ಜೀವನ ಶೈಲಿಯಿಂದ ವೇಗವಾಗಿ ಬದಲಾಗಲು ಹವಣಿಸುತ್ತಿರುವ ದೇಶವೇ ಪರೋಕ್ಷವಾಗಿ ಮತ್ತು ಅಂತರ್ಗಾಮಿಯಾಗಿ ಪ್ರೇರಣೆ ಎನ್ನಿಸುತ್ತದೆ. ಇಲ್ಲದಿದ್ದರೆ ನಿಮ್ಮೊಂದು ವಾರದ ದಿನಚರಿಯಲ್ಲಿ ಒಂದು ಬೃಹತ್ ಕಾದಂಬರಿಗಾಗುವಷ್ಟು ಘಟನಾವಳಿಗಳೂ ಗೊಂದಲಗಳು ಕಿಕ್ಕಿರಿದಿರುವುದಕ್ಕೆ ನೀವು ಇನ್ನೇನು ತಾನೇ ವಿವರಣೆ ನೀಡಬಲ್ಲಿರಿ![೨೧]

ಎಂದು ಬದಲಾವಣೆಯ ಗಾಳಿ ತೀವ್ರತರವಾದ ಸಂಘರ್ಷಕ್ಕೆ ಒಳಗಾಗಿರುವುದನ್ನು ಮಾಯಲೋಕದಲ್ಲಿ ಉಲ್ಲೇಖಿಸುತ್ತಾರೆ. ಆಧುನಿಕ ಶಿಕ್ಷಣ ಕ್ರಮ ಬಿತ್ತಿರುವ ಹೈಟೆಕ್ ವಿಧಾನಗಳಿಂದ ಗ್ರಾಮ್ಯಗಳಲ್ಲಿ ಅಸ್ತಿತ್ವದಲ್ಲಿದ್ದ ಉತ್ಪಾದನಾ ವಿಧಾನಗಳು ಹಿಂದೆ ಸರಿದು ಮಲ್ಟಿನ್ಯಾಷನಲ್ ಕಂಪೆನಿಗಳ ಗುಲಾಮತನವನ್ನು ಸ್ವೀಕರಿಸಿಯಾಗಿವೆ. ಬಂಡವಾಳ ಶಾಹಿಯ ಉಗಮದಿಂದ; ಅನ್ಯ ಸಂಸ್ಕೃತಿಯು ನೇರಾನೇರವಾಗಿ ಭಾರತೀಯ ಸಂಸ್ಕೃತಿಯನ್ನು ರೂಪಾಂತರಿಸುವ ಯತ್ನ ಅಂದಿನಿಂದ ಇಂದಿನವರೆಗೂ ನಡೆಯುತ್ತಲೇ ಇದೆ. ತೇಜಸ್ವಿ ಕಥನಗಳಲ್ಲಿ ಈ ವಿಚಾರಧಾರೆಗಳಿಗೆ ಪೂರಕವಾದ; ಗ್ರಾಮೀಣ ಮತ್ತು ನಾಗರಿಕ, ಹೊಸತು-ಹಳತುಗಳ ಮುಖಾಮುಖಿಗಳಿಂದ ಪಲ್ಲಟಗೊಂಡ ಜೀವನ ಕ್ರಮಗಳನ್ನು ಹಲವು ಆಯಾಮಗಳೊಡನೆ ನಿರ್ವಹಿಸಿರುವುದು ಭವಿಷ್ಯದ ಬಗೆಗಿನ ಕಾಳಜಿಗಳನ್ನು ವ್ಯಕ್ತಪಡಿಸುತ್ತದೆ.

ಲೇಖಕನಾದವನು ತನ್ನ ಕೃತಿಗಳಲ್ಲಿ ಆಧುನಿಕತೆಯ ಸ್ವರೂಪವನ್ನು ಯಾವ ರೀತಿಯಲ್ಲಿ ಪ್ರಸ್ತುತಪಡಿಸಿದ್ದಾನೆ ಎಂಬುದು ಕೂಡ ಪ್ರಮುಖವಾಗುತ್ತದೆ. ಸಾಮಾಜಿಕ-ಸಾಹಿತ್ಯಿಕ ಸಂದರ್ಭಗಳಲ್ಲಿ ಆಧುನಿಕತೆ-ರಾಷ್ಟ್ರೀಯ ಆದರ್ಶಗಳು ಎಂದರೇನು? ಎಂಬುದರಿಂದ ಹಿಡಿದು ಸಾಮಾಜಿಕ ಜವಾಬ್ದಾರಿಗಳು ಎಂದರೆ ಏನು? ಎಂಬುದರವರೆಗೆ ಪ್ರತಿಯೊಬ್ಬನೂ ತಿಳಿದಿರಬೇಕಾದ ಅವಶ್ಯಕತೆ ಇದೆ. ಈ ಅವಶ್ಯಕತೆಯನ್ನು ನಿಭಾಯಿಸುವಲ್ಲಿ, ನಿವಾರಿಸುವಲ್ಲಿ ಸಾಧ್ಯತೆಗಳ ಅರಿವು ಮುಖ್ಯವಾಗುತ್ತದೆ. ಇದನ್ನು ನಮ್ಮ ವಿದ್ಯಾಭ್ಯಾಸ ಕ್ರಮವಾಗಲೀ, ಪರಂಪರಾಗತ ತಿಳುವಳಿಕೆಗಳಾಗಲಿ ಯಾವುದೂ ನೀಡಲಾಗದೆ ಸೋತಿವೆ. ಇದರಿಂದಾಗಿಯೇ ಸಾಹಿತ್ಯಕಾರನ ಜವಾಬ್ದಾರಿಯ ಹೊರೆ ಅಥವಾ ಸಾಮಾಜಿಕ ಕಾರ್ಯಕರ್ತರ ಹೊಣೆ ದುಪ್ಪಟ್ಟಾಗಿದೆ. ಸಾಮಾನ್ಯೀಕರಣವಾಗಿ ಹೇಳುವುದಾದರೆ ಶೈಕ್ಷಣಿಕ ವಲಯದಲ್ಲಿ ಸ್ಥಾಪಿಸಲ್ಪಟ್ಟಿರುವ ಶೈಕ್ಷಣಿಕ ರೀತಿ-ನೀತಿಗಳು ಕೊಡ ಮಾಡುವ ಸಾಕ್ಷರತೆಯು ಯಾವ ರೀತಿಯದೆಂಬ ನಿಷ್ಕರ್ಷೆ ಸಂಪೂರ್ಣವಾದ ಪರಿಷ್ಕರಣದ ಹಂತ ಇಂದಿಗೂ ತಲುಪಿಲ್ಲ.

ಶಿಕ್ಷಣವೆಂದರೆ ಕೇವಲ ಸಾಕ್ಷರತೆ ಅಥವಾ ಶಾಲಾಕಾಲೇಜು- ಅಕಾಡೆಮಿಕ್ ವಲಯದಲ್ಲಿ ಪಡೆದುಕೊಳ್ಳುವ ಶೈಕ್ಷಣಿಕ ಅಭ್ಯಾಸವಲ್ಲ. ಡಿಗ್ರಿ-ಸರ್ಟಿಫಿಕೇಟ್‌ಗಳು ತಯಾರು ಮಾಡಲು ಸಾಧ್ಯವಿಲ್ಲದ ಪ್ರತಿಯೊಬ್ಬ ಜನಸಾಮಾನ್ಯನೂ ಪಡೆದುಕೊಳ್ಳಬೇಕಾದ ಶಿಕ್ಷಣ. ಸ್ವಾತಂತ್ರ್ಯೋತ್ತರ

ನಂತರದ ಶಿಕ್ಷಣಕ್ರಮ ನಿರ್ಮಾಣಮಾಡಿದ ಅವಿಚಾರ-ಅಸಂಬದ್ಧತೆಗಳನ್ನು ಹಲವು ಪಾತಳಿಗಳಲ್ಲಿ ಇಟ್ಟು ಪರಿವೀಕ್ಷಿಸಿದರೂ ಸರಿಪಡಿಸಲಾರದ ಸ್ಥಿತಿಯಲ್ಲಿರುವುದು, ಇದರ ದುರಸ್ತಿ ಸಾಧ್ಯವಿಲ್ಲದೆ ಹೋಗಿರುವುದು ಖೇದವೆನಿಸಿದರೂ, ಅಖಂಡತ್ವವನ್ನು ಸ್ಥಾಪಿಸಲಾಗದೆ ಸೋತಿರುವುದು ಆಧುನಿಕ ವಸ್ತುಸ್ಥಿತಿಗೆ ನಿದರ್ಶನವಾಗಿದೆ. ಆಧುನಿಕ ಶಿಕ್ಷಣಕ್ರಮ ಸಾಮಾಜಿಕ ಪರಿಸರ ಸಂಬಂಧಿ ತಿಳುವಳಿಕೆಯನ್ನು ನೀಡುವುದಿಲ್ಲ. ಆದು ನೀಡುವ ಪುಸ್ತಕ ಆಧಾರಿತ ತಿಳಿವು ಯಾವುದೇ ರೀತಿಯ ಅರ್ಥಪೂರ್ಣ ಸಂಬಂಧ ಹೊಂದಿರದ ಶಿಕ್ಷಣವಾಗಿ ಭಾರತದಂತಹ ರಾಷ್ಟ್ರಗಳಲ್ಲಿ ನಗರ ಮತ್ತು ಗ್ರಾಮಗಳ ನಡುವಿನ ವೈರುಧ್ಯವನ್ನು ಹೆಚ್ಚಿಸುತ್ತದೆ. ನಗರದ ಆಕರ್ಷಣೆಯಿಂದ ಗ್ರಾಮೀಣ ಪ್ರದೇಶಗಳು ತಮ್ಮ ಸಾಮರ್ಥ್ಯಗಳನ್ನೆಲ್ಲಾ ಕಳೆದುಕೊಂಡು ಆರ್ಥಿಕ-ಸಾಮಾಜಿಕ-ಸಾಂಸ್ಕೃತಿಕ ದಾಸ್ಯವನ್ನು ಅನುಭವಿಸುತ್ತಿದೆ.

ಗುರುಗಳ್ಳಿ, ಮೇದರಹಳ್ಳಿ, ಅಬಚೂರು, ಕಿರುಗೂರು, ಕೆಸರೂರು, ಗೊಂದಲಗೇರಿ ಹೀಗೆ ಗ್ರಾಮೀಣ ಪರಿಸರದೊಳಗೆ ಜಾಗತೀಕರಣದಿಂದ ಉಂಟಾದ ತಲ್ಲಣಗಳು ವಿಶ್ವರೂಪ ತಾಳಿ ಇಡೀ ವ್ಯವಸ್ಥೆಯನ್ನು ಕಬಂಧ ಬಾಹುವಿನೊಳಗೆ ಅಡಗಿಸಿಕೊಂಡದ್ದರಿಂದ ಸಮಾಜದ ಮೇಲೆ ಆದ ದುಷ್ಪರಿಣಾಮಗಳನ್ನು ತಮ್ಮ ಕಥನಗಳಲ್ಲಿ ಗುರುತಿಸಿದ್ದಾರೆ. ಆ ಸಂದರ್ಭದಲ್ಲಿ ಪರಂಪರೆಯು ಒಡ್ಡುವ ನಿಕಷಗಳನ್ನು ಒಳಿತು ಕೆಡುಕಿನ ಸಾಂಸ್ಕೃತಿಕ ಘಟಕಗಳಲ್ಲಿ ವಿಭಜಿಸಿಕೊಂಡು, ಒಳಿತಿನ ಆಶಯಗಳಿಗೆ ಮುಖಾಮುಖಿಯಾಗಿಸಿ, ಅವೆರಡರ ಸಂಘರ್ಷದಲ್ಲಿ ಆಧುನಿಕತೆಯನ್ನು ಸ್ವೀಕರಿಸುತ್ತಾರೆ. ಆದರೆ ಪರಂಪರೆಯ ಕೆಡುಕನ್ನು ವಿರೋಧಿಸಲು ಹೋದ, ಆಧುನಿಕತೆಯ ಕೆಡುಕಿಗೆ ತೆಕ್ಕೆ ಬೀಳುವ ಪ್ರಕ್ರಿಯೆಯನ್ನು ತೇಜಸ್ವಿ ಇಲ್ಲಿ ತಿರಸ್ಕರಿಸಿದ್ದಾರೆ. ಇಂಥದೊಂದು ಪ್ರಕ್ರಿಯೆಯಿಂದ ವ್ಯಕ್ತಿಯನ್ನು ಪೂರ್ಣವಾಗಿ ಎತ್ತುವ ಪ್ರತಿಆಶಯದ ಸ್ಥಿತ್ಯಂತರವನ್ನು ತೇಜಸ್ವಿ ಎದುರಿಸಿರುವುದು ಸ್ಪಷ್ಟವಾಗುತ್ತದೆ. ಈ ಆಶಯಗಳು ಸಾಮಾಜಿಕ ಬದುಕಿಗೆ ನೀಡುವ ಮೌಲ್ಯಯುತವಾದ ಆಶ್ವಾಸನೆಗಳಾಗಿವೆ.

ಈ ಅಧ್ಯಯನದ ಹಿನ್ನೆಲೆಯಲ್ಲಿ ತೇಜಸ್ವಿ ಕೃತಿಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಸಂಘರ್ಷದ ಧಾತುಗಳು ಸಾಹಿತ್ಯದುದ್ದಕ್ಕೂ ಒಂದಲ್ಲ ಒಂದು ರೀತಿಯಲ್ಲಿ ಹಾಸುಹೊಕ್ಕಾಗಿರುವುದು ಎದ್ದು ಕಾಣುತ್ತದೆ. ತೇಜಸ್ವಿ ಆಧುನಿಕ ಸಂಸ್ಕೃತಿಯ ಸ್ವರೂಪವನ್ನು ಆ ನೆಲೆಯಲ್ಲಿ ಗ್ರಹಿಸಿರುವುದು ಇದಕ್ಕೆ ಕಾರಣವಿರಬಹುದು. ಸಂಘರ್ಷದ ಸಂದರ್ಭಗಳಲೆಲ್ಲಾ ಸೃಜನಶೀಲ ಲೇಖಕನ ಸಾರ್ವತ್ರಿಕ ಧೋರಣೆಗಳು ಮೈದಾಳಿ ತಮ್ಮ ಸ್ವರೂಪವನ್ನು ವ್ಯಕ್ತಪಡಿಸುತ್ತವೆ. ಸಾಮಾಜಿಕವಾಗಿ ತೆರೆದುಕೊಳ್ಳುವ ವ್ಯಕ್ತಿಗೆ ಬದುಕು ಸವಾಲಾಗೇ ಇರುತ್ತದೆ. ಎಲ್ಲಿಯವರೆಗೂ ಇದ್ದದ್ದನ್ನು ಇದ್ದಂತೆ ಸ್ವೀಕರಿಸುತ್ತಾನೋ ಅಲ್ಲಿಯವರೆಗೂ ಆತನ ಬದುಕು ಸರಾಗವಾಗಿರುತ್ತದೆ. ಸಿದ್ಧಾಂತಗಳನ್ನು ಮೀರಿ ಪರಂಪರಾಗತ ನಂಬಿಕೆಗಳನ್ನು ಪ್ರಶ್ನಿಸ ಹೊರಟಾಗ ಎದುರಾಗುವ ಪ್ರಶ್ನೆಗಳಿಗೆ ಉತ್ತರಿಸಲಾರದ ಸ್ಥಿತಿ ತಲುಪುತ್ತಾನೆ. ಆಧುನಿಕ ಸಂವೇದನೆಯ ಪಡಿನೆರಳಾಗಿ ಬದಲಾಗುವ ವ್ಯಕ್ತಿಯ ಸೌಷ್ಠವ ಹಲವು ಹಂತಗಳಲ್ಲಿ ಸೋಲನ್ನು ಅನುಭವಿಸುವುದು ತಾತ್ಕಾಲಿಕದ್ದಾಗಿರುತ್ತದೆ. ವಿಫಲತೆಯ ಬೆನ್ನಹಿಂದೆ ಅಡಗಿರುವ ಸತ್ಯ-ಮೌಲ್ಯಯುತವಾಗಿದ್ದು ಅದರ ಅನ್ವೇಷಣೆಗೆ ಸದಾ ಸಿದ್ಧನಿರಬೇಕು ಇಲ್ಲವೆ ಆ ಸತ್ಯವನ್ನು ಕಾಣುವ ಮನಸ್ಥಿತಿಯವನಾಗಬೇಕು. ಆಧುನಿಕ ಸಂವೇದನೆಯು ವ್ಯಕ್ತಿಯ ವೈಚಾರಿಕ ನಿಲುವುಗಳಲ್ಲಿ ಬದಲಾವಣೆಯನ್ನುಂಟು ಮಾಡಿ ಜಡಗೊಂಡ-ಜಡಗೊಳ್ಳುತ್ತಿರುವ ಸಮಾಜವನ್ನು ಪುನಶ್ಚೇತನಗೊಳಿಸುವುದಾಗಿದೆ.

## ೩.೩.೧: ಗ್ರಾಮ–ನಗರ: ಅನೇಕ ಪೂರ್ವಾಗ್ರಹಗಳ ನಡುವೆಯೂ ಸ್ವಪ್ರಜ್ಞೆ

ಗ್ರಾಮ ಮತ್ತು ನಗರ ಇವುಗಳ ನಡುವಣ ಸಂಘರ್ಷಕ್ಕೆ ಈಡಾದವರು ಹಳ್ಳಿಗ ಮತ್ತು ನಾಗರಿಕ. ಯಾವುದೇ ಒಂದು ಸ್ಥಿತಿಗೂ ಸೀಮಿತಗೊಳ್ಳದೆ ಇಬ್ಬರೂ ಅತಂತ್ರಕ್ಕೆ ಒಳಗಾದವರೇ! ಗ್ರಾಮೀಣ ಪ್ರದೇಶದಿಂದ ನಗರಕ್ಕೆ ಗುಳೆಹೋಗಲು ಹತ್ತು ಹಲವಾರು ಕಾರಣಗಳನ್ನು ಹುಡುಕಿಕೊಂಡಂತೆ; ನಗರಗಳಿಂದ ಹಳ್ಳಿಗಳಿಗೆ ಹಿಂತಿರುಗುವುದಕ್ಕೂ ಕಾರಣಗಳು ಹುಟ್ಟಿಕೊಂಡವು. ಗ್ರಾಮೀಣ ಪರಿಸರದಲ್ಲಿ ಅಲಭ್ಯವಾಗಿದ್ದ ಸೌಲಭ್ಯ–ಸವಲತ್ತುಗಳು ನಗರಗಳಲ್ಲಿ ಹೊಸ–ಹೊಸ ರೂಪಗಳಲ್ಲಿ ತೆರೆದುಕೊಂಡಾಗ ಅದಕ್ಕೆ ಹಾತೊರೆದವರೇ ಹೆಚ್ಚು. ಅದಕ್ಕಿಂತಲೂ ಮುಖ್ಯವಾದ ಆಕರ್ಷಣೆಯೆಂದರೆ ವಿದ್ಯಾಭ್ಯಾಸ ಮತ್ತು ಉದ್ಯೋಗ. ವಿದ್ಯಾಭ್ಯಾಸದ ನಿಮಿತ್ತವಾಗಿ ನಗರಗಳಿಗೆ ಪಯಣ ಬೆಳೆಸಿದ ಹಳ್ಳಿಯ ಯುವಕರು (ಚರ್ವಿತಚರ್ವಣ) ನಿರಂತರತೆಯ ಬದುಕಿನಿಂದ ಬಿಡುಗಡೆ ಪಡೆಯುವ ಆಶಯದಿಂದ ವಲಸೆ ಹೊರಟವರು. ಮಹಾನಗರಗಳಲ್ಲಿ ಸ್ಥಾಪಿಸಿಗೊಂಡಿದ್ದ ಹೊಸ ರೀತಿ–ನೀತಿಗಳು, ಮಾದರಿಗಳು, ಹೊಸ ಸಂಸ್ಥೆಗಳು ಹಳ್ಳಿಗರಲ್ಲಿ ನಗರದವರಂತಾಗುವ ಹಂಬಲವನ್ನು ಹುಟ್ಟುಹಾಕಿದವು. ಇದು ಅನುಕರಣ ಸ್ವರೂಪದ್ದಾಗಿದ್ದರಿಂದ ಅದನ್ನು ಸ್ವೀಕರಿಸುವ ಹಂತದಲ್ಲಿ ಸಮಸ್ಯೆ ಎದುರಾಯಿತು.

ಬೇಸರಿಕೆಯ ನಾಗರಿಕ ಜಗತ್ತಿನಿಂದ ಬಹುದೂರ ಉಳಿದು ಹಳ್ಳಿಗಾಡಿಗೆ ಬಂದು ನೆಲೆಸಿ ನೆಮ್ಮದಿಯನ್ನು ಶಾಂತಿಯುತ ಜೀವನವನ್ನು ಅರಸುವಂತಹ ಸ್ಥಿತಿ, ನಗರದಲ್ಲಿ ಯಾವುದಾದರೂ ಒಂದು ಕೆಲಸ ದೊರಕಿಸಿಕೊಂಡು ಹೊಟ್ಟೆಹೊರೆದರೆ ಸಾಕು ಎನ್ನುವ ಸ್ಥಿತಿ ಎರಡು ಪರಸ್ಪರ ವಿರೋಧಾತ್ಮಕ ಸ್ಥಿತಿಗಳೇ. ಹಳ್ಳಿಯವರು ನಗರದಲ್ಲಿ ಬದುಕಲಾಗದಕ್ಕೆ ಪರಿತಪಿಸಿದರೆ; ಯಾವ ಜಗತ್ತಿನಿಂದ ದೂರ ಉಳಿದು ಅಸ್ತಿತ್ವಕಂಡುಕೊಳ್ಳಹೊರಟರೂ ತನ್ನನ್ನು ಒಂದು ಕೇಂದ್ರಕ್ಕೆ ಪ್ರತಿಷ್ಠಾಪಿಸಲಾಗದ ಅಸಹಾಯಕತೆಯೇ ದೌರ್ಬಲ್ಯವಾಗಿ ನಾಗರಿಕರನ್ನು ಕಾಡುತ್ತದೆ. ಸಾಮಾಜಿಕವಾಗಿ ತಮ್ಮದೇ ಸರಿ ಎಂದು ವಾದಿಸುವ ಇಬ್ಬರ ನಿಲುವುಗಳು ಇರುವುದನ್ನು ಒಪ್ಪಿಕೊಳ್ಳಲು ಸಾಧ್ಯವಾಗದ ಸ್ಥಿತಿಯನ್ನು ನಿರ್ಮಾಣ ಮಾಡಿವೆ. ಜೀವನ ಹೋರಾಟದಲ್ಲಿನ ಹಲವು ವೈರುಧ್ಯಗಳನ್ನು ಸಾಕ್ಷೀಭೂತವಾಗಿ ಗಮನಿಸುತ್ತಾ ಪರಿಸರದ ಅವಿಭಾಜ್ಯ ಅಂಗವಾಗಿ ಮಾರ್ಪಡುವ ಅನಿವಾರ್ಯತೆ ಇವರಿಬ್ಬರಿಗೂ ಎದುರಾಗಿದೆ. ಇದನ್ನು ಎದುರಿಸುವ ಸಂದರ್ಭದಲ್ಲಿ ಇಬ್ಬರ ಮನಸ್ಸೂ ತಿಕ್ಕಾಟಕ್ಕೆ ಒಳಗಾಗುತ್ತದೆ. ತನ್ನದನ್ನು ಬಿಟ್ಟುಕೊಡುವ ಬೇರೆಯದನ್ನು ಒಪ್ಪಿಕೊಳ್ಳುವ ಸಂದರ್ಭದಲ್ಲಿ ಭಿನ್ನತೆಯಿಂದ ಕೂಡಿದ ದೃಷ್ಟಿಕೋನ ಬದುಕಿನ ಕ್ರಮದೊಳಗೆ ಅಡಗಿರುವ ಧೋರಣೆಗಳನ್ನು ಬೇರೆ ಬೇರೆಯಾಗಿ ಪ್ರಕೃತಗೊಳಿಸುತ್ತಿರುತ್ತದೆ. ಸಾಮಾಜಿಕ ಜೀವನದೊಂದಿಗೆ, ಹೊಸ ಜೀವನಶೈಲಿಯನ್ನು ಅರ್ಥೈಸಿಕೊಳ್ಳಲು, ಅಳವಡಿಸಿಕೊಳ್ಳಲು ಬೇಕಾದ ತಾಳ್ಮೆ, ಸಂಯಮ, ಮುಂದಾಲೋಚನೆಯ ಕೊರತೆಯಿಂದಾಗಿ ಇಂಥ ಧೋರಣೆಗಳು ಜನ್ಮತಳೆದು ತಾವಿದ್ದ ಸ್ಥಳಗಳಲ್ಲೇ ಇರುವ ಜೀವಂತಿಕೆ, ವೈಶಿಷ್ಟ್ಯತೆ, ಚೈತನ್ಯಗಳನ್ನು ಗುರುತಿಸಲಾರದ ಸಂಕುಚಿತ ಮನೋಭಾವದ ಹಂತಕ್ಕೆ ಅವು ಬೆಳೆಯುತ್ತವೆ.

ಗ್ರಾಮೀಣ ಜನ ಜೀವನವನ್ನು ಪ್ರವೇಶಿಸಿರುವ ತಂತ್ರಜ್ಞಾನ, ಸಂಸ್ಕೃತಿ, ಮನುಷ್ಯ ಮನುಷ್ಯರ ನಡುವೆ ಅಪರಿಮಿತವಾದ ಆಶ್ಚರ್ಯಕ್ಕೆ ಕಾರಣವಾಗುತ್ತಿರುವಂತೆಯೇ; ಅದನ್ನು ಒಪ್ಪಿಕೊಂಡು ಸ್ವೀಕರಿಸುವ ಹಂತದಲ್ಲಿ ಮಾನಸಿಕವಾಗಿ ಯಾತನೆಯನ್ನು ಅನುಭವಿಸುವುದನ್ನು

ಪ್ರತಿಬಿಂಬಿಸುತ್ತದೆ. ಹೊಸ ವಸ್ತುವಿನ ಪ್ರವೇಶವೆಂದರೆ ಅದೊಂದು ಹೊಸ ಮನಸ್ಥಿತಿಯ ಹೇರುವಿಕೆ ಎಂಬುದು ಸೂಚಿತವಾಗುತ್ತದೆ. ಇದನ್ನು ತೇಜಸ್ವಿಯವರ ಅಬಚೂರಿನ ಪೋಸ್ಟಾಫೀಸು ಕಥಾಸಂಕಲನ ಮತ್ತು ಅದರ ಹಿಂದಿನ ಕಥನಗಳಲ್ಲಿ ಗುರುತಿಸಲು ಸಾಧ್ಯವಿದೆ. ಬೋಬಣ್ಣ, ತುಕ್ಕೋಜಿ. ತಬರ, ಕುಬಿ, ಸೂರಾಚಾರಿ ವೈಯಕ್ತಿಕವಾದ ಅಸಹನೆಗೆ ಒಳಗಾಗಿ ತಾವು ಬದುಕುತ್ತಿದ್ದ ಪರಿಸರವನ್ನೂ ಅರ್ಥಮಾಡಿಕೊಳ್ಳಲಾಗದೆ ಗೊಂದಲಕ್ಕೆ ಬೀಳುತ್ತಾರೆ. ಮನುಷ್ಯನ ಮೂಲಭೂತ ಸಂವೇದನೆಯನ್ನು ಆತಂಕಗೊಳಿಸುವ ಹಂತಕ್ಕೆ ಕೊಂಡೊಯ್ದು ಇದರಿಂದ ಸ್ವತಃ ಹೊರಬರುವುದಕ್ಕೆ ತಮ್ಮದೇ ರೀತಿಯಲ್ಲಿ ಸ್ಪಂದಿಸುವುದಕ್ಕೆ ಆಸ್ಪದ ಮಾಡಿಕೊಡುತ್ತಾರೆ. ಮೇಲ್ನೋಟಕ್ಕೆ ಇವು ಪ್ರಗತಿಯಂತೆ ತೋರಿಬಂದರೂ ಅಂತಸ್ಥವಾಗಿದ್ದ ಗ್ರಾಮೀಣ ಜೀವನ ಕ್ರಮನ್ನೇ ಮೂಲಭೂತವಾಗಿ ಪಲ್ಲಟಗೊಳಿಸಿರುವುದನ್ನು ಇಂಥ ವಿವರಗಳ ಅಧ್ಯಯನದಿಂದ ತಿಳಿಯಬಹುದಾಗಿದೆ.

ಚಿಕ್ಕಪ್ಪನ ಆಸ್ತಿಗೆ ವಾರಸುದಾರನಾಗಿ ಮಲೆನಾಡಿನ ಅಂಗಡಿ ಗ್ರಾಮಕ್ಕೆ ಬಂದು ಕೃಷಿ ಮಾಡುತ್ತಿರುವ ಶ್ರೀನಿವಾಸ, ಇವನಂತೆಯೇ ನಗರದಲ್ಲಿ ಉಪನ್ಯಾಸಕನಾಗಿದ್ದವನು ಜಗನ್ನಾಥ, ಮಲೆನಾಡಿನಲ್ಲಿ ಜಮೀನನ್ನು ಕೊಂಡು ವ್ಯವಸಾಯ ಮಾಡಬೇಕೆಂಬ ಆಸೆಯಿಂದ ಉಗ್ರಗಿರಿಯ ಸಮೀಪದ ಜಮೀನು ಕೊಳ್ಳಲು ನುಗುಬೀಡಿಗೆ ರಂಗಪ್ಪನೊಡನೆ ಪ್ರಯಾಣ ಬೆಳೆಸುತ್ತಾನೆ. ಇದಕ್ಕೆ ವಿರುದ್ಧವಾಗಿ ನಿಗೂಢಮನುಷ್ಯರು ಕಾದಂಬರಿಯ ಗೋಪಾಲಯ್ಯನಂತೆ ತೋಟ ಮಾರುವ ಹವಣಿಕೆಯಲ್ಲಿರುವ ಕರ್ವಾಲೋದ ನಿರೂಪಕ;

ನಾನು ನನ್ನ ತೋಟವನ್ನು ಮಾರಿ ಬೇರೇನಾದರೂ ಮಾಡಬೇಕೆಂದು ನಿರ್ಧರಿಸಿದ್ದೆ. ಮೊದಲನೆಯದಾಗಿ ವ್ಯವಸಾಯದಿಂದ ಲಾಭಬರುವುದೆಂಬ ನಂಬಿಕೆ ನನ್ನೊಳಗೆ ನಶಿಸತೊಡಗಿತು. ಲಾಭ ಮಾಡುವುದು ಇರಲಿ ಬ್ಯಾಂಕಿನಲ್ಲಿ ಮಾಡಿಕೊಂಡ ಸಾಲದ ಬಡ್ಡಿ ಕಟ್ಟುತ್ತಾ ಹೆಚ್ಚು ಕಡಿಮೆ ಅಧಿಕಾರಶಾಹಿಯ ಜೀತದಾಳಾಗಿ ನಾನೂ ನನ್ನಂಥ ಅನೇಕ ರೈತರೂ ಪರಿವರ್ತಿತರಾಗಿದ್ದರು. ಹಾಕಿದ ಲೆಕ್ಕಾಚಾರ ಒಂದೂ ಗುರಿ ತಲುಪುತ್ತಿರಲಿಲ್ಲ. ಅಕಸ್ಮಾತ್ ಕೊಂಚ ಕರಾರುವಾಕ್ಕಾಗಿ ಬೆಳೆ ಬಂದರೂ ಆ ವೇಳೆಗಾಗಲೇ ಹಣದುಬ್ಬರ, ಏರಿದ ಸಾಮಾನಿನ ಬೆಲೆಗಳು, ವಿಷದಂತೆ ಏರುತ್ತಿದ್ದ ಬ್ಯಾಂಕ್ ಬಡ್ಡಿದರ ಅದನ್ನು ಕಬಳಿಸಿ ಬಿಡುತ್ತಿದ್ದವು. ಹೀಗಾಗಿ ಸದಾ ಮುಂದೆ ಸಿಕ್ಕುವ ಲಾಭದ ಮರೀಚಿಕೆಯ ಹಿಂದೆ ಆರ್ಥಿಕ ಬಿಕ್ಕಟ್ಟಿನ ಮರಳುಗಾಡಿನಲ್ಲಿ ಸಾಗುತ್ತಿದ್ದೆ[೨೦]

ಎಂದು ತೋಟ ಮಾರಲು ಉದ್ಯುಕ್ತರಾದ ಸಂದರ್ಭವನ್ನು ಹೇಳುತ್ತಾರೆ. ಇವು ವ್ಯಕ್ತಿಗತವಾದ ಆಲೋಚನೆಗಳಿಂದ ಮೂಡಿವೆಯಾದರೂ ಸಂದರ್ಭವಶದಿಂದ ಇಂತಹ ಅಭಿಪ್ರಾಯಕ್ಕೆ ಬಂದಿರುವುದು ಸ್ಪಷ್ಟವಾಗಿದೆ.

ಇದರೊಡನೆಯೇ ಕಾಡಿನ ಮೌನ ಏಕಾಂತ; ಗ್ರಾಮ ಜೀವನದ ಕಾರ್ಪಣ್ಯಗಳು, ಪೇಟೆಯ ಗಲೀಜು, ಹೊಗೆ, ಜನಜಂಗುಳಿಯಂತೆಯೇ ಏಕತಾನವಾಗಿ ಬೇಸರ ತರತೊಡಗಿದ್ದವು. ಕಾಡು ಮೊದಲಿನಂತೆ ಗೋಪ್ಯ, ಕುತೂಹಲ, ರಹಸ್ಯಗಳನ್ನು ಕೆರಳಿಸಲು ಜಡವಸ್ತುವಿನಂತೆ ಕಾಣತೊಡಗಿತು. ನನ್ನೊಳಗೇ ನಾನು ಮುಳುಗಿ ಹೋದೆ. ಅಂತರ್ಮುಖಿಯಾಗತೊಡಗಿದೆ. ಎಂದರೆ ತತ್ವ ಚಿಂತನೆ ಮಾಡುತ್ತಿದ್ದೆ ಎಂದೇನೂ ಅರ್ಥವಲ್ಲ. ಸದಾ ಲೆಕ್ಕಾಚಾರ ಗುಣಾಕಾರ ಭಾಗಾಕಾರ ಇವುಗಳನ್ನೇ ಹಾಕುತ್ತಾ ಬಡ್ಡಿ ಸಾಲ ಇತ್ಯಾದಿಗಳನ್ನು ಮೆಲುಕು ಹಾಕುತ್ತಾ ನನಗೆ ಆರ್ಥಿಕ ಸ್ವಾತಂತ್ರ್ಯ ಬರುವ ಹೊತ್ತಿಗೆ ಎಷ್ಟು ಮುದಿಯಾಗಿರುತ್ತೇನೆ. ಡಯಾಬಿಟೀಸ್, ರಕ್ತದ ಒತ್ತಡ ಇತ್ಯಾದಿ ಯಾವ ಯಾವ ಕಾಯಿಲೆಗಳು ಆರಂಭವಾಗಿರುತ್ತವೇ? ಎಂದು ಯೋಚಿಸುತ್ತಾ ಕೊರಗುತ್ತಿದ್ದೆ. ಆದ್ದರಿಂದ ಈ ತೋಟವನ್ನು (ಏಲಕ್ಕಿ ತೋಟ) ಒಮ್ಮೆ ಮಾರಿದರೆ ಈ ನಿರುತ್ಸಾಹದ ಶರಧಿಯನ್ನು ದಾಟಿದಂತೆಯೇ ಎಂದು ನಿರ್ಧಾರಕ್ಕೆ ಬಂದಿದ್ದೆ.[೨೧]

ಆರ್ಥಿಕತೆಯ ಅಸಮತೋಲನಕ್ಕೆ, ದುಸ್ಥಿತಿಗೆ ಒಡ್ಡುವ ಕೃಷಿಯಾಧಾರಿತ ಬದುಕಿನ ಬವಣೆಗಳ ಚಿತ್ರಣದೊಂದಿಗೆ ಅದರಿಂದ ಹೊರಬರುವ ಸಂದರ್ಭವನ್ನೂ ಕಾದಂಬರಿಯಲ್ಲಿಯೇ ಕಟ್ಟಿಕೊಡುತ್ತಾರೆ.

ಪರಿಸರ ಕಥೆಯಲ್ಲಿ ಹ್ಯಾಟು, ಜರ್ಕಿನ್ ಕೋಟು, ಜೀನ್ಸ್ ಪ್ಯಾಂಟು, ಬಿಸಿಲು ಕನ್ನಡಕ ಇವೆಲ್ಲದನ್ನು ಧರಿಸಿ ಬಂದಿದ್ದ ಕಾಳಪ್ಪ ನಾಗರಿಕ ವ್ಯಕ್ತಿತ್ವದ ಪ್ರತಿನಿಧಿಯೆನಿಸುತ್ತಾನೆ. ಈತನ ದೆಸೆಯಿಂದ ನಾಗರಹಾವಿಗೆ ಕೋಬ್ರಾ ಎನ್ನಲು ಶುರು ಮಾಡಿದ್ದರ ಪರಿಣಾಮವಾಗಿ ನಾಗರಕಲ್ಲು ಕೋಬ್ರಕಲ್ಲು ಎಂದೂ ನಾಗರಪೂಜೆ ಕೋಬ್ರಾ ಪೂಜೆ ಎಂದು ಬದಲಾಗುತ್ತದೆ. 'ಬೊಂಬಾಯಿಯಲ್ಲಿ ಬೀಡಾ ಮಾಡೋವನ ಹರಿವಾಣದಲ್ಲಿ ಬರುವ ಹಣ ನಮ್ಮಪ್ಪನ ನಾಲ್ಕು ಎಕರೆ ಗದ್ದೆಯಲ್ಲಿ ಬರುವುದಿಲ್ಲ' ಎನ್ನುವ ಕಾಳಪ್ಪನ ಮಾತು ನಗರ ಜೀವನದ ಸೌಲಭ್ಯತೆಯನ್ನು ಸೂಚಿಸುತ್ತದೆ.

ಸಮಾಜದ ನಾಗರಿಕ ಲೋಕ ಮತ್ತು ಗ್ರಾಮೀಣ ಲೋಕ ಈ ವೈರುಧ್ಯಗಳಲ್ಲಿ ಲೆಕ್ಕಾಚಾರದ ಬದುಕನ್ನು ಸಾಗಿಸುವ ಬುದ್ಧಿವಂತ ಮತ್ತು ಯಾವುದಕ್ಕೂ ತಲೆಕೆಡಿಸಿಕೊಳ್ಳದೆ ಬದುಕನ್ನು ಎದುರುಗೊಳ್ಳುವ ಹಳ್ಳಿಯ ಗಮಾರ ಇವರುಗಳಲ್ಲಿ ಸಮಾನ ಶ್ರದ್ಧೆ, ಸಮಾನ ಅಭಿರುಚಿ, ಸಮಾನ ಅಭಿಪ್ರಾಯಗಳು ಇರುವುದಿಲ್ಲವಾದರೂ ಇಂಥ ಕಡೆ ಮತ್ತೆ ತಿಕ್ಕಾಟವನ್ನು ಅನುಭವಿಸುವವರು ಬುದ್ಧಿವಂತರೇ! ಏಕೆಂದರೆ ಅವರ ಲೆಕ್ಕಾಚಾರದ ಬದುಕು ಸದಾಕಾಲ ಮುಗ್ಗರಿಸುತ್ತದೆ. ಇಲ್ಲವಾದಲ್ಲಿ ಅವರ ಪ್ರಜ್ಞೆಯ ಮಹತ್ವದ ಭಾಗವಾದ ಸಂವೇದನೆ, ಬದುಕಿನ ಅನೇಕ ಸ್ಥರಗಳಲ್ಲಿ ವ್ಯಕ್ತಗೊಳ್ಳುವಾಗ ತರ್ಕಬದ್ಧವಾಗಿರುತ್ತದೆ. ಇಲ್ಲವೆ ಪೂರ್ವಾಗ್ರಹಪೀಡಿತವಾಗಿರುತ್ತದೆ. ಇದಕ್ಕೆ ತೇಜಸ್ವಿ ಕಥನಗಳಲ್ಲಿ ಅನೇಕ ಉದಾಹರಣೆಗಳು ದೊರೆಯುತ್ತವೆ. ಕಥೆಗಳಲ್ಲಿನ ಅನೇಕ ಪಾತ್ರಗಳಲ್ಲಿ ಮಂದಣ್ಣ, ಚೀಂಕ್ರ ಮೇಸ್ತ್ರಿ, ಕರಿಯಪ್ಪ, ಎಂಗ್ಟ, ಮಾರ ಇವರುಗಳನ್ನು ನೋಡುತ್ತಿದ್ದ ಬಗೆಯೇ ಬೇರೆ.

> ಎಂಗ್ಟ ಮೊದಲ ಬಾರಿಗೆ ನನ್ನ ತೋಟಕ್ಕೆ ಪುಂಗಿ ಊದಿ ಹಾವು ಹಿಡಿಯುತ್ತೇನೆಂದು ಬಂದಾಗ ಅವನನ್ನು ತೀವ್ರ ಗುಮಾನಿಯಿಂದ ನೋಡಿದೆ. ಹಾವಾಡಿಸುವುದನ್ನು ನಾನು ನೋಡಿದ್ದೇನಾದರೂ ಪುಂಗಿ ಊದಿ ಹಾವು ಕರೆದು ಹಿಡಿಯುವುದನ್ನು ನಾನು ನೋಡಿರಲು ಇಲ್ಲ ನಂಬಿರಲೂ ಇಲ್ಲ. ಪುಂಗಿ ಊದಿ ಹಾವು ಕರೆದು ಹಿಡಿಯುತ್ತೇನೆಂದು ಅವನು ಹೇಳಿದಾಗ ಮೊದಲು ಇಲ್ಲಿಂದ ತೊಲಗು ಎಂದು ಜೋರುಮಾಡಿದೆ. ಕಿವಿಯೇ ಇಲ್ಲದ ಹಾವುಗಳು ಇವನ ಪುಂಗಿಯ ಸಂಗೀತಕ್ಕೆ ಬರುತ್ತವೆನ್ನುವುದು ಪಕ್ಕಾ ಡೋಂಗಿ ಎಂದು ನನ್ನ ತರ್ಕ'.[೭೪]

ಮಂದಣ್ಣಕಾಡಿನಲ್ಲಿ ಅಲೆದಾಡಿ ಹುಳು ಹುಪ್ಪಟೆಗಳನ್ನು ಹಿಡಿಯುತ್ತಾ ಪಶು ಪಕ್ಷಿಗಳನ್ನು ನೋಡುತ್ತಾ ಸಾಮಾನ್ಯ ಅಪಪೋಲಿಯಂತೆ ಅಲೆಯುವವನು. ಸುತ್ತಣ ಜನತೆಯ ದೃಷ್ಟಿಯಲ್ಲಿ ಸೋಮಾರಿತನದ, ಬೇಜವಾಬ್ದಾರಿಯ ಉಡಾಫೆಯ ಮನುಷ್ಯ. ಲಕ್ಷ್ಮಣ ಮೂಡಿಗೆರೆಯ ಜೇನು ಮಾರಾಟ ಸಹಕಾರಿ ಮಳಿಗೆಯ ಗುಮಾಸ್ತ ಅಂತೆಯೇ ಕರಿಯಪ್ಪ-ಯಂಗ್ಟ-ಪ್ರಭಾಕರ ಪ್ಯಾರ ಬೈರ ಇವರನ್ನು ಹೊರತುಪಡಿಸಿ ಸಾಮಾಜಿಕ ಸ್ಥಾನಮಾನ ಪಡೆದ ವ್ಯಕ್ತಿಗಳ ಕರ್ವಾಲೋ ಮೂಡಿಗೆರೆಯ ಭತ್ತದ ಸಂಶೋಧನಾ ಕೇಂದ್ರದ ವಿಜ್ಞಾನಿ. ಡಾ. ಕುಬೇರಪ್ಪ, ಜೋಗಿಹಾಳ ಪಾಟೀಲ-ಇವರುಗಳ ಬಗೆಗಿರುವ ಧೋರಣೆಯೇ ಬೇರೆ ಏಕೆಂದರೆ ವ್ಯಕ್ತಿಗಳ ನಡುವಳಿಕೆಗಳಲ್ಲಿ ಅವರ ಸಾಮಾಜಿಕ ಸ್ಥಾನಮಾನಗಳು, ಅಸ್ತಿತ್ವ ಗೋಚರವಾಗುತ್ತವೆ. ಇನ್ನು ಕೆಲವೊಮ್ಮೆ ಅಳೆಯುವ ಮಾನದಂಡವಾಗಳಲ್ಲಾಗಲಿ, ಅವುಗಳಿಂದ ಹೊರಡುವ ಫಲಿತಗಳಲ್ಲಾಗಲಿ ಏಕರೂಪತೆ

ಇರುವುದಿಲ್ಲ. ವ್ಯಕ್ತಿಯಿಂದ ವ್ಯಕ್ತಿಗೆ, ಕಾಲದಿಂದ ಕಾಲಕ್ಕೆ, ಪರಿಸರದಿಂದ ಪರಿಸರಕ್ಕೆ ಅವು ಬದಲಾಗುತ್ತಾ ಹೋಗುತ್ತವೆ. ಯಾವ ವ್ಯಕ್ತಿಯನ್ನು ಪ್ರತಿಷ್ಠಿತ-ಗೌರವಾನ್ವಿತ ಎಂದು ಸಮಾಜ ಮಾನ್ಯಮಾಡುತ್ತದೋ ಅದೇ ಸಮಾಜ ಅವರನ್ನು ತಮ್ಮದೇ ಮಟ್ಟಕ್ಕೆ ಇಳಿಸಿಕೊಳ್ಳುವ ಇಲ್ಲವೆ ಅವರ ಅಸ್ತಿತ್ವವನ್ನು ಹಾಸ್ಯಾಸ್ಪದ ಮಾಡಿಬಿಲ್ಲದು ಎಂಬುದಕ್ಕೆ ಕುಬೇರ, ಸೂರಾಚಾರಿ, ಡಾ ಪಾಟೀಲರು ಕುಬಿ ಇವರುಗಳು ಸಾಕ್ಷಿಯಾಗುತ್ತಾರೆ.

ಇವೆಲ್ಲವೂ ಸುತ್ತಣ ಪ್ರಪಂಚದ ವ್ಯಕ್ತಿಯ ವ್ಯಕ್ತಿತ್ವವನ್ನು ಅಳೆಯುವ ಮಾಪನ ದೃಷ್ಟಿ ಮತ್ತು ಸಾಮಾಜಿಕ ಅಂತಸ್ತುಗಳ ಸ್ತರವಿನ್ಯಾಸವನ್ನು ನಿಷ್ಕರ್ಷಿಸುವ ಮಾನದಂಡಕ್ಕೆ ಉದಾಹರಣೆಗಳು. ನಿಷ್ಕರ್ಷೆಯ ಮಾನದಂಡಗಳು ಹೆಚ್ಚಾಗಿ ಪೂರ್ವಾಗ್ರಹಪೀಡಿತವಾಗಿರುತ್ತವೆ ಮತ್ತು ಏಕಮುಖ ದೃಷ್ಟಿಕೋನವನ್ನು ಹೊಂದಿರುತ್ತವೆ. ಆಧುನಿಕತೆಯ ಅವೈಚಾರಿಕ ಮಾದರಿಗಳಿಂದ ಸ್ವೀಕೃತಗೊಂಡಿದ್ದ 'ನೋಡುವನೋಟ' ಸತ್ವಯುತವಾದ ಗುಣವನ್ನು ಗುರುತಿಸುವಲ್ಲಿ ವಿಫಲವಾಗಿರುವುದು ಇಲ್ಲವೆ ಪ್ರಜ್ಞಾವಂತ ಮನಸ್ಸುಗಳು ಸ್ವಾರ್ಥದಿಂದ ಅಸಹಾಯಕ ವ್ಯಕ್ತಿಗಳನ್ನು ಶೋಷಣೆಗೆ ಗುರಿ ಮಾಡುವುದು ಸಮಾಜದ ದುರಂತವಾಗಿದೆ. ನೋಟದ ಕ್ರಮವೇ ಹಲವು ವೈಪರೀತ್ಯಗಳ-ಅನ್ವರ್ಥಕಗುಣಗಳನ್ನು ಆರೋಪಿಸಿಕೊಂಡು ವೀಕ್ಷಣೆ ಮಾಡುತ್ತಿರುತ್ತದೆ. ಈ ವೀಕ್ಷಕತಂತ್ರ ಸುತ್ತಣ ಪರಿಸರದ ಜನಜೀವನವನ್ನು ತನ್ನದೇ ಮಾನದಂಡದಲ್ಲಿ ಅಳೆಯುತ್ತಿರುತ್ತದೆ ಮತ್ತು ಸಾಮಾಜಿಕ ಧೋರಣೆಗಳ ಪುರಾತನ ಪ್ರತಿನಿಧಿಯಂತೆ ಕಾರ್ಯ ನಿರ್ವಹಿಸುತ್ತಿರುತ್ತದೆ. ಈ ಧೋರಣೆಗಳು ಬದಲಾಗುವುದು ಯಾವಾಗ ಎಂದರೆ ಸಾಂಸ್ಕೃತಿಕ ಹಿನ್ನೆಲೆಯನ್ನು ಕರ್ವಾಲೋರಂತೆ ಮಾನವೀಯ, ವೈಜ್ಞಾನಿಕ, ವೈಚಾರಿಕ ದೃಷ್ಟಿಕೋನದಿಂದ ಅರ್ಥಮಾಡಿಕೊಂಡಾಗ ವ್ಯಕ್ತಿಯ ನಿಜವಾದ ಸತ್ವವನ್ನು ಗುರುತಿಸಲು ಸಾಧ್ಯವಾಗುತ್ತದೆ. ಹೊಸದಿಗಂತದೆಡೆಗೆ ಈ ಮುನ್ನುಡಿಯಲ್ಲಿ ಪ್ರಸ್ತಾಪಿಸಲಾಗಿರುವ ಹೊಸಮಾರ್ಗದ ಆಯ್ಕೆಯ ಜೊತೆಗೆ ಹಿಂದಿನ ಧೋರಣೆಗಳು ಕಾಲಾನುಕ್ರಮದಲ್ಲಿ ಪುನರ್‌ರಚನೆಗೊಳ್ಳುತ್ತಾ ಸಾಗುತ್ತದೆ. ಅದೇ ಕಾರಣವಾಗಿ ಗ್ರಾಮೀಣ ಬದುಕು ಮತ್ತು ಅಲ್ಲಿನ ಪರಿಸರವನ್ನು 'ಮೂಢನಂಬಿಕೆಗಳ ಕೂಪ' ಎಂದು ಉದ್ಗರಿಸುವ 'ನಾಗರಿಕ ಜಗತ್ತು', ಗ್ರಾಮೀಣ ಪರಿಸರದ ಅಥವಾ ಹಳ್ಳಿಗರ ಬದುಕಿನ ತಾದಾತ್ಮ್ಯಕ ಜಗತ್ತಿನ ಹಿಂದೆ ಅಡಗಿರುವ ಅಂತಃಸತ್ವವನ್ನು ಅರಿತಾಗ ಅದುವರೆಗೂ ತಳೆದಿದ್ದ ಧೋರಣೆಯು ಬದಲಾಗುವುದಕ್ಕೆ ಸಾಧ್ಯ.

ಹೊಸಮಾರ್ಗದ ಅನ್ವೇಷಣೆಯನ್ನು ಗ್ರಹೀತ ತತ್ವವಾಗೇ ಹೇರಿಕೊಂಡಿದ್ದರೂ ಪೂರ್ವದ ಮಾದರಿಗಳ ಭ್ರಮಾತ್ಮಕತೆಯಿಂದ ಬಿಡಿಸಿಕೊಳ್ಳಲಾಗದ ಹಳವಳಿಕೆ ಕೆಲವು ಕಾಲದವರೆಗೂ ಮುಂದುವರೆದಿದೆ. ೧೯೮೦ರ ಕರ್ವಾಲೋದಲ್ಲಿನ ನಿರೂಪಣೆಯಲ್ಲಿ ಹಿಂದಿನ ಮಾರ್ಗವನ್ನು ತೊರೆದು ಇಡೀ ಬದುಕನ್ನು ತಾತ್ವಿಕವಾಗಿ-ಸಾಮಾಜಿಕವಾಗಿ ಗ್ರಹಿಸಿ ಹೊಸ ಅರಿವಿನತ್ತ ತೆರೆದುಕೊಂಡದ್ದರ ಸೂಚನೆಯಿದೆ. ಗ್ರಾಮೀಣ ಪರಿಸರದ ವಿಭಿನ್ನ ವ್ಯಕ್ತಿತ್ವದ ಹಲವು ಪ್ರವೃತ್ತಿಗಳು ಮೊದಲು ಗೋಚರವಾದದ್ದಕ್ಕೂ ಆನಂತರ ಗ್ರಾಮೀಣ ಸಂಸ್ಕೃತಿಯೊಳಗೆ ವಿಲೀನವಾಗಿ ಗ್ರಹಿಸಿದ್ದಕ್ಕೂ ಇರುವ ಅಂತರವನ್ನು ತೇಜಸ್ವಿ ಏರೋಪ್ಲೇನ್ ಮತ್ತು ಚಿಟ್ಟೆ ಕಥೆ-ಚೀಂಕ್ರ ಮೇಸ್ತ್ರಿಯನ್ನು ಅರಿಸ್ಟಾಟಲ್‌ನೊಂದಿಗೆ ಸಮೀಕರಿಸಿ ಅವನ ಜ್ಞಾನದ ಬಗ್ಗೆ ನಿರೂಪಿಸಿದ್ದರೂ ಅದರ ಸ್ಪಷ್ಟ ಅರಿವಿನ ಸೂಚನೆ ಕರ್ವಾಲೋ ಕಾದಂಬರಿಯಲ್ಲಿದೆ.

ಆಧುನಿಕ ಸುಧಾರಣಾವಾದಿ ಪ್ರಜ್ಞೆ ಮತ್ತು ಮೂಢನಂಬಿಕೆಯ ಜಗತ್ತು ಅವುಗಳ ಮುಖಾಮುಖಿ ವೈಯಕ್ತಿಕ ಕಥನಗಳನ್ನು ಮೀರಿದ ವ್ಯಾಪಕವಾದ ಜಿಜ್ಞಾಸೆಗಳಾಗಿ ಬಿಡುತ್ತದೆ. ಕಾಂಪೌಂಡರ್ ರಾಮರಾಯ ಡಾ॥ ಕುಬೇರಪ್ಪ, ಅಬಚೂರಿನ ಬೋಬಣ್ಣ, ತಬರ, ಕರ್ವಾಲೊ-ಮಂದಣ್ಣ, ಕರಿಯಪ್ಪ, ಕಾಳಪ್ಪ, ಪುಂಗಿಯಂಗ್ಪ, ಚೀಂಕ್ರ ಮೇಸ್ತ್ರಿ, ಮಾರ ಪರಿಸರ ಕಥೆಯ ಪಾತ್ರಗಳು ಅನೇಕರ ಮೂಲಕ ವಿಶ್ವಾತ್ಮಕ ವ್ಯವಸ್ಥೆಯ ಸ್ವರೂಪದ ಮೂಲಕ ಅಪರಿಚಿತವೂ, ಅಸ್ವಸ್ಥವೂ, ಅಸಂಬದ್ಧವೂ ಆದ ಮನುಷ್ಯನ ಅವಸ್ಥೆಯನ್ನು ವಿಶ್ಲೇಷಿಸುವುದರ ಜೊತೆಗೆ ಸುತ್ತಲ ಸಮಾಜವನ್ನು ಗ್ರಹಿಸುವ, ಸಾಮಾಜಿಕ ಸಮಸ್ಯೆಗಳ ಹಲವು ಆಯಾಮಗಳನ್ನು ತೆರೆದಿಡುವುದರ ಮೂಲಕ ನಿರ್ದಿಷ್ಟ ಸಾಮಾಜಿಕ ಸತ್ಯವನ್ನು ಅನಾವರಣಗೊಳಿಸುತ್ತಾರೆ. ಇವೆಲ್ಲಾ ಕೇವಲ ಭೌತಿಕ ಪಾತ್ರಗಳಷ್ಟೇ! ಆದರೆ ಆ ಪಾತ್ರಗಳು ಸಜೀವತೆಯಿಂದ ಕೂಡಿದ್ದು ಆಧುನಿಕ ಮನಸ್ಥಿತಿಗೆ ಕನ್ನಡಿ ಹಿಡಿಯುತ್ತವೆ. ಏಕೆಂದರೆ ಆಧುನಿಕ ಶಿಕ್ಷಣ ಪದ್ಧತಿಗೆ ಮಾರುಹೋಗಿರುವ ಸಮಾಜ ಆಧುನಿಕ ಜ್ಞಾನಕ್ಕೆ ಕೊಡುವ ಮನ್ನಣೆಯನ್ನು ದೇಸಿಯ ಜ್ಞಾನಕ್ಕೆ ಕೊಡಮಾಡುವುದಿಲ್ಲ. ಇನ್ನೊಂದು ಅರ್ಥದಲ್ಲಿ ದೇಸಿಯ ಜ್ಞಾನ ಆಧುನಿಕತೆಯ ಪೈಪೋಟಿಯುಕ್ತ ಸ್ಪರ್ಧೆಯಲ್ಲಿ ಹಿಂದೆ ಸರಿದಿದೆ.

ಆಧುನಿಕತೆ ಸಾಧನಸಾಮಾಗ್ರಿಗಳ ರೂಪದಲ್ಲಿ, ಸೂಕ್ಷ್ಮಸ್ತರದ ಭಾವನೆಗಳಲ್ಲಿ, ವಿಚಾರವಾದದ ರೂಪದಲ್ಲಿ, ಶಿಕ್ಷಣಕ್ರಮ, ಸೂಕ್ಷ್ಮತೆ, ಸಾಮಾಜಿಕ ಬದಲಾವಣೆ ಹೀಗೆ ಹತ್ತು ಹಲವಾರು ರೂಪದಲ್ಲಿ ಗ್ರಾಮೀಣಪ್ರದೇಶಗಳನ್ನು ಸುತ್ತುವರೆದರೂ ಇಡೀ ತೃತೀಯ ಜಗತ್ತನ್ನು ಸಂಪೂರ್ಣವಾಗಿ ತನ್ನ ತೆಕ್ಕೆಗೆ ತೆಗೆದುಕೊಂಡರೂ ಇನ್ನೂ ಆದಿಮಾನವರಂತೆಯೇ ಯಾವುದೇ ಮಾರ್ಪಾಡಿಗೂ ಒಳಗಾಗದವರೂ ಇದ್ದಾರೆ. ನಿಗೂಢಮನುಷ್ಯರು ಕಥೆಯ ಮರಸರ, ಕಳುಪ,. ಪರಿಸರ ಕಥೆಯ ಕಾಳ, ಮಾಸ್ತಿ, ಭೈರ, ಮಾರ, ಚೀಂಕ್ರಮೇಸ್ತ್ರಿ ನಾಗರಿಕ ದೃಷ್ಟಿ/ ನೋಟದಲ್ಲಿ ಮೌಢ್ಯತೆಯ ಪ್ರತೀಕದಂತಿರುವ ಇವರುಗಳದು ವಿಚಿತ್ರ ಜೀವನ ಶೈಲಿಯೇ ಆದರೂ ಪರಿಸರವನ್ನು ಕುರಿತಂತೆ ತಮ್ಮ ಜೀವನ ದರ್ಶನದಲ್ಲಿರುವ ಅಪೂರ್ವ ಕಾಣ್ಕೆಯ ಅರಿವು ಅಥವಾ ಸ್ಪಷ್ಟ ಜ್ಞಾನ ಅವರಿಗಿಲ್ಲದೇ ಇರುವುದು. (ನಾಗರಿಕ ಸಂಸ್ಕೃತಿಯ ಶಿಕ್ಷಣ ಸಂಸ್ಥೆ ಕೊಡ ಮಾಡುವ ಜ್ಞಾನಕ್ಕೂ-ಬದುಕಿನ ಪಾಠಗಳಿಂದ ನೇರವಾಗಿ ಪಡೆದ ಜ್ಞಾನಕ್ಕೂ ಇರುವ ವ್ಯತ್ಯಾಸ ಇವರಿಂದ ಸ್ಪಷ್ಟಗೊಳ್ಳುತ್ತದೆ.) ಕರ್ವಾಲೋರಂತಹ ವಿಜ್ಞಾನಿಗಳು ದೇಸಿಯ ಜ್ಞಾನಕ್ಕೆ ಕೊಡುವ ಮಹತ್ವ ಉನ್ನತವಾದುದು. ಗ್ರಾಮೀಣ ಪ್ರತಿಭೆಗಳನ್ನು ಗುರುತಿಸಿ ಅವರುಗಳಲ್ಲಿ ಜೀವ ಚೈತನ್ಯವನ್ನು ಹುಟ್ಟುಹಾಕಿ ಅವರ ಕೌಶಲ್ಯ ಮತ್ತು ಜಾಣ್ಮೆಯನ್ನು ಬಳಸಿಕೊಳ್ಳುವ, ಉಳಿಸಿಕೊಳ್ಳುವ ಮಾರ್ಗವನ್ನು ಇತರರಲ್ಲೂ ಬಿತ್ತಿದವರು.

ಇದರಿಂದಲೇ ಪ್ರತಿಷ್ಠಿತ ಸಮಾಜ ತುಚ್ಛವೆಂದು ಪರಿಗಣಿಸುವ ಕರ್ವಾಲೋ ಕಾದಂಬರಿಯ ಮಂದಣ್ಣ, ಪರಿಸರ ಕಥೆಯಲ್ಲಿನ ಮಾರ, ಪುಂಗಿ ಎಂಗ್ಪ, ಚೀಂಕ್ರ ಮೇಸ್ತ್ರಿ, ಬಿರಿಯಾನಿ ಕರಿಯಪ್ಪ ಮಾಯಾಲೋಕದ ಅಣ್ಣಪ್ಪಣ್ಣ, ಕಾಡು ಮತ್ತು ಕ್ರೌರ್ಯದ ಮಾರ್‍ಯ...... ಇವರೆಲ್ಲರೂ ಮೇಲುನೋಟಕ್ಕೆ ಅನಾಗರಿಕ ಹಳ್ಳಿಗಮಾರರು, ಅನಕ್ಷರಸ್ಥರಾದರೂ ಇವರೆಲ್ಲರನ್ನೂ ಕಾಲಾತೀತ, ದೇಶಾತೀತ ನೆಲೆಗಳಲ್ಲಿ ಇಟ್ಟು ಪರಿವೀಕ್ಷಿಸಿದಾಗ ಸ್ಥಳೀಯ ವಿಶಿಷ್ಟತೆಯ-ಜೊತೆಗೆ ಅವರಲ್ಲಿ ಅಡಗಿರುವ ಅಸಾಧಾರಣ ಶಕ್ತಿ, ಜಾಣ್ಮೆಯ ಪರಿಚಯವಾಗುತ್ತದೆ. ಮತ್ತು ಇಂತಹವರು ಸಮಾಜದ/ಅಕ್ಷರಸ್ಥರ ಅವಗಣನೆಗೆ ಉಪೇಕ್ಷೆಗೆ ಒಳಗಾಗಿದ್ದರೂ ಸೂಕ್ಷ್ಮವಾಗಿ ಅವಲೋಕಿಸಿದಾಗ ದೇಸಿ ಸಾಂಸ್ಕೃತಿಕ ಚೌಕಟ್ಟುಗಳ ಸಂಬಂಧದ ಹಿನ್ನೆಲೆಯಲ್ಲಿ ಇವರೆಲ್ಲರೂ ಹೊಸ ತಿಳುವಳಿಕೆಗೆ

ಅವಕಾಶ ಒದಗಿಸುತ್ತಾರೆ. ಗ್ರಾಮೀಣ ಮನಸ್ಸುಗಳ ಹಿಂದೆ ಅಡಗಿರುವ ಹೃದಯ ವೈಶಾಲ್ಯತೆ, ಕ್ರಿಯಾತ್ಮಕ ಚಟುವಟಿಕೆಗಳು, ನೈಸರ್ಗಿಕ ಪ್ರತಿಭೆ ಪರಿಸರವನ್ನೂ ಆ ಮೂಲಕ ನಮ್ಮನ್ನೂ ಅರಿತುಕೊಳ್ಳುವಲ್ಲಿ ಸಹಕರಿಸುತ್ತವೆ.

ನಿಗೂಢ ಸೆಲೆಗಳನ್ನು ಪರಿಚಯಿಸುವ ಮಂದಣ್ಣ, ಕರಿಯಪ್ಪ, ಯಂಗ್ಟ, ಕಾಳ ಬೈರ, ಮಾಸ್ತಿ ಕರಿಯಪ್ಪ ಇವರುಗಳಲ್ಲಿರುವ ಅಸಮಾನ್ಯತೆಯನ್ನು ಗುರುತಿಸುವಲ್ಲಿ ನೋಡುವ ನೋಟದ ಅವಶ್ಯಕತೆ ಇರುವುದನ್ನು ತೇಜಸ್ವಿ ಮೊದಲೇ ಸ್ಪಷ್ಟಗೊಳಿಸಿದ್ದಾರೆ. ಮಂದಣ್ಣನನ್ನು ತನ್ನದೇ ಮಾನದಂಡದಲ್ಲಿ ತೂಗಿದ್ದ ನಿರೂಪಕ ಆತನಲ್ಲಡಗಿದ್ದ ದೇಸಿಜ್ಞಾನದ ಇಂಗಿತದಿಂದಾಗಿ ಅವನ ಮೇರೇಜಿಗಾಗಿ ಮಧ್ಯಸ್ಥಿಕೆ ವಹಿಸುವುದರಲ್ಲಿ ಮತ್ತು ಕಳ್ಳಭಟ್ಟಿ ಶರಾಬಿನ ಪ್ರಕರಣದಲ್ಲಿ ಆಸಕ್ತಿ ವಹಿಸಿ ಆತನ್ನನ್ನು ಸ್ಟೇಷನ್ನಿನಿಂದ ಹೊರತರುವುದಕ್ಕೆ ಕೈಜೋಡಿಸುವುದು ಆತನ ಜ್ಞಾನ ವಿಶಿಷ್ಟತೆಗಾಗಿ ಹೊರತು ಸಾಮಾಜಿಕ ಕಳಕಳಿಯಿಂದಲ್ಲ. ಇದರ ಜೊತೆಗೆ ಈಗಾಗಲೇ ಮಂದಣ್ಣನ ಬಗ್ಗೆ ತಳೆದಿದ್ದ ಅಭಿಪ್ರಾಯ ಬದಲಾಗುವುದಕ್ಕೆ ಕಾರಣವೇ ವಿಜ್ಞಾನಿ ಕರ್ವಾಲೊ ಈ ವಿಷಯದಲ್ಲಿ ಮಂದಣ್ಣನನ್ನು ಮೀರಿಸುವವರು ಯಾರು ಇಲ್ಲ. ಅಷ್ಟೊಂದು ಚೆನ್ನಾಗಿ ಗ್ರಹಿಸುತ್ತಾನೆ. ಅದ್ಭುತ ಕೀಟಶಾಸ್ತ್ರಜ್ಞ–ಎಂದು ಶ್ಲಾಘಿಸುವ ಕರ್ವಾಲೊ ಮಂದಣ್ಣನ ಸುಪ್ತಪ್ರತಿಭೆಯನ್ನು ನಿರೂಪಕನ ಮುಂದಿಟ್ಟರೂ ಶಿಷ್ಟ ಮತ್ತು ಅಶಿಷ್ಟ ಎಂಬ ಗೊಂದಲದಲ್ಲೇ ಇದ್ದ ನಿರೂಪಕನಿಗೆ ಅದರ ಸಪ್ರಮಾಣ ಹಾರುವ ಓತಿಯ ಹುಡುಕಾಟದಲ್ಲಾಗುತ್ತದೆ. ಇದರಂತೆಯೇ ಮತ್ತೊಮ್ಮೆ ಕರ್ವಾಲೋ

> ನಾನು ಪ್ರೊಫೆಸರು, ಮಂದಣ್ಣ ಹಳ್ಳಿ ಗಮಾರ, ಇದೆಲ್ಲಾ ಹೆಬ್ಬುಬ್ಬಿ ನೀನು ನಿಜಾಂತ ತಿಳಿದರೆ ಏನಪ್ಪಾ ಕಲಿತಂತೆ ಆಯ್ತು? ಇದರಲ್ಲೇ ನಿನ್ನ ಆಯಸ್ಸು ಮುಗಿದು ಹೋಗುತ್ತೆ. ಸತ್ಯದ ಕಿಂಚಿತ್ ದರ್ಶನಾನೂ ಆಗೋಲ್ಲ ನಿನಗೆ. ಈ ಮಾಯೇನೆಲ್ಲಾ ಮೀರಬೇಕು ನಾವು, ಆಗಲೇ ನಿಮಗೆ ಬೇರೆ ಜಗತ್ತು ಪ್ರಪಂಚ ಕಾಣ್ತದೆ[೭೫]

ಎಂದು ಪ್ರಭಾಕರನಿಗೆ ತಿಳಿಹೇಳುವುದು ಕಂಡುಬರುತ್ತದೆ. ಸಾಮಾಜಿಕ ಅಸಮಾನತೆ, ಆರ್ಥಿಕ ಸ್ಥಾನಮಾನ, ಅಂತಸ್ತುಗಳೆಂಬ ಪಾರಂಪರಿಕ ಜಾಡ್ಯದಿಂದ ಹೊರಬಂದು ವೀಕ್ಷಿಸಿದಾಗ ಮಂದಣ್ಣನಂತೆಯೇ ಉಪೇಕ್ಷಿಸಲ್ಪಟ್ಟ ಹಲವಾರು ವ್ಯಕ್ತಿಗಳ ಸಾಮಾನ್ಯತೆಯ ಹಿಂದೆ ಅಡಗಿರುವ ಅಸಮಾನ್ಯತೆ ಗೋಚರವಾಗುವುದಕ್ಕೆ ಸಾಧ್ಯ ಎಂಬುದನ್ನು ವಿಜ್ಞಾನಿ ಮನವರಿಕೆ ಮಾಡಿಸುತ್ತಾರೆ. ಹಾವುಗೊಲ್ಲರ ಎಂಗ್ಟ ಹಾವನ್ನು ಹಿಡಿದು ವಿಷ ತೆಗೆಯುವ, ಚರ್ಮ ಸುಲಿಯುವ ಅವನ ವಿದ್ಯೆ ಕಾಡು ಪ್ರಾಣಿಗಳ ಚರ್ಮ ತೆಗೆದು ಮಾರಿ ಬದುಕುವ ಅವನ ಜೀವನ ಶೈಲಿ, ಕೈಯಲ್ಲಿಬಲವಾದ ಜೀವಂತ ಮಂಡಲಹಾವಿನ ತಲೆ ಹಿಡಿದುಕೊಂಡು ಉಳಿದವರೆದುರೇ ಅದರ ತಲೆಯ ಬಳಿ ಉಂಗುರದಂತೆ ಸುತ್ತ ಚರ್ಮ ಕುಯ್ದು ಬಾಲದವರೆಗೂ ತೊಗಲನ್ನು ಎಳೆದು ತೆಗೆಯುವ ಅವನ ಕೌಶಲ. ಇವನಂತೆಯೇ ಕರಿಯಪ್ಪನ ಮರ ಹತ್ತುವ ಜಾಣ್ಮೆ,

> ಕರಿಯಪ್ಪ ಮರವನ್ನು ಜಾರಿ ಇಳಿದವನೇ ಮಂದಣ್ಣನನ್ನು ಎಲ್ಲಿ ಎಂದು ಕೇಳಿ ಅವನ ತೋರಿಸಿದ ಮರವನ್ನು ಚಕಚಕ ಹತ್ತತೊಡಗಿದ. ಆಗಲೇ ಮೊದಲ ಬಾರಿಗೆ ಕರಿಯಪ್ಪ ಮರಹತ್ತುವ ಚಳಕವನ್ನು ನಾನು ನೋಡಿದ್ದು. ಅವನು ಹತ್ತುವ ವೇಗವನ್ನು ನೋಡಿದರೆ ಮನುಷ್ಯ ಮನಸ್ಸು ಮಾಡಿದರೆ ಏನೂ ಸಾಧ್ಯ ಎಂದೆನ್ನಿಸಿತು. ಕರಿಯಪ್ಪ ಇದ್ದಕ್ಕಿದಂತೆ ನೂರಾರು ಮಿಲಿಯ ವರುಷ ಹಿಂದಕ್ಕೆ ಹೋಗಿ ತನ್ನ ಪೂರ್ವಜರ ಸ್ಥಿತಿಯನ್ನು ತಲುಪಿದ್ದಾನೆಂದೆನ್ನಿಸಿತು. ನಾವು ನೆಲದ ಮೇಲೆ ಓಡಿದಷ್ಟು ವೇಗವಾಗಿ ಅವನು ಮರ ಹತ್ತುತ್ತಿದ್ದ.[೭೬]

ಹಾವು ಗೊಲ್ಲರ ಯಂಗ್ಟನ ಉರಗಜ್ಞಾನ, ಮಾರನ ಅವೈದ್ಯಕೀಯ ಪಾಂಡಿತ್ಯ, ಇನ್ನಷ್ಟು ನಿದರ್ಶನಗಳು ಪರಿಸರ ಕಥೆಯಲ್ಲಿ ದೊರೆತ್ತವೆ.

ನನಗೆ ಬಲಗಾಲು ಹಿಮ್ಮಡಿ ಅನೇಕ ದಿನಗಳಿಂದ ನೋಯುತ್ತಿತ್ತು. ಹೆಚ್ಚಿಗೆ ದೂರ ನಡೆದರೆ ಸಾಕು, ಕುಂಟಿಕೊಂಡೆ ನಡೆಯಬೇಕಿತ್ತು. ಇದರೊಡನೆ ಈಚೆಗೆ ಹಿಮ್ಮಡಿ ಎಲುಬಿನ ಪಕ್ಕ ಒಂದು ದಪ್ಪ ಗಡ್ಡೆ ಎದ್ದಿತ್ತು. ಡಾಕ್ಟರ್ ಅದನ್ನು ಶಸ್ತ್ರ ಚಿಕಿತ್ಸೆ ಮಾಡಿ ತೆಗೆಯಬೇಕೆಂದು ಹೇಳಿದ್ದರು. ಕೃಷ್ಣನ ಹತ್ತಿರ ಆ ಗಡ್ಡೆ ಚೂರು ತಗೊಂಡು ತಿಂದ ಮೇಲೆ ಎರಡು ದಿನಕ್ಕೆ ನೋಡುತೇನೆ, ಆ ಗಡ್ಡೆ ಎಲ್ಲಿತ್ತೆಂದೇ ಪತ್ತೆ ಮಾಡಲಾಗದಂತೆ ಮಂಗ ಮಾಯವಾಗಿತ್ತು.

ಇದು ಮೂಲಿಕೆ ಬಳ್ಳಿಯ ಪ್ರಭಾವ ಎಂದು ಹೇಗೆ ಖಚಿತವಾಗಿ ಹೇಳಲಿ? ಕೇವಲ ಆಕಸ್ಮಿಕ ಇದ್ದರೂ ಇರಬಹುದು. ಅಥವಾ ಮೂಲಿಕೆ ಬೀಳಿನದೇ ಪ್ರಭಾವ ಎಂದಾದರೂ ಮನುಷ್ಯದೇಹದಲ್ಲಿ ಉಂಟಾಗುವ ಗಡ್ಡೆಗಳಲ್ಲಿ ಅನೇಕ ತರದವು ಇವೆ. ಇವುಗಳಲ್ಲಿ ಕೆಲವು ಗಡ್ಡೆಗಳ ಮೇಲೆ ಮಾತ್ರ ಮೂಲಿಕೆ ಬಳ್ಳಿ ಪ್ರಭಾವ ಬೀರಬಹುದು. ಇವುಗಳೆನ್ನೆಲ್ಲಾ ಯಾರು ಸಂಶೋಧಿಸುವವರು? ಮಾರನಂಥವರಿಗೆ ಸಂಶೋಧಿಸಿ ಆಗಬೇಕಾದ್ದು ಏನೂ ಇಲ್ಲ. ಮಲಯಾಳಿ ಸನ್ಯಾಸಿ ಸಹ ವೃದ್ಧಾಪ್ಯದ ನಿತ್ರಾಣದಿಂದ. ಕೃಷ್ಣನಿಗೆ ಬಳ್ಳಿ ವಿವರಿಸಿ ಹೇಳಿ ಅದರ ಗಡ್ಡೆ ಅಗೆದು ತೆಗೆದುಕೋ ಎಂದು ಹೇಳಿದನೇ ಹೊರತು ಇಲ್ಲದಿದ್ದರೆ ಅವನೇ ಹೋಗಿ ಗೋಪ್ಯವಾಗಿ ಗಡ್ಡೆ ಅಗೆದು ತಂದು ಕೊಡುತ್ತಿದ್ದ.

ಈ ನಾಟಿ ವೈದ್ಯರ ಬಲವಾದ ಒಂದು ನಂಬಿಕೆ ಎಂದರೆ ಔಷಧಿ ಯಾವುದೆಂದು ಹೇಳಿಬಿಟ್ಟರೆ ಔಷಧ ಗುಣ ನಷ್ಟವಾಗಿ ಬಿಡುತ್ತೆ ಎನ್ನುವುದು. ಈ ನಂಬುಗೆಯ ದೆಸೆಯಿಂದ ಇಂದು ಭಾರತದ ನಾಟಿ ವೈದ್ಯ ಪದ್ಧತಿಯೇ ನಷ್ಟವಾಗುವುದರಲ್ಲಿದೆ.'

ಮಾರನ ಮಾತುಗಳೆಲ್ಲ ಕಟ್ಟುಕತೆಗಳೆಂದು ತಳ್ಳಿಹಾಕೋಣವೆಂದರೆ ಹಾಗೂ ಅಸಾಧ್ಯ. ಕೊನೆಗೂ ಏನೋ ಒಂದು ಚೂರು ನಮ್ಮ ಅಂತಃಕರಣವನ್ನು ಕಾಡಲು ಉಳಿಯುತ್ತದೆ. ಸುಳ್ಳು ಹೇಳಲಾಗಲೀ, ನಿಜ ಹೇಳಲಾಗಲೀ, ನಮ್ಮನ್ನು ನಂಬಿಸಲಾಗಲೀ, ನಮ್ಮ ತರ್ಕಬುದ್ಧಿಯನ್ನು ತೃಪ್ತಿಪಡಿಸಲಾಗಲೀ ಮಾರನಿಗಿದ್ದ ನಿರಾಸಕ್ತಿಯೇ ನಮ್ಮನ್ನು ಕಾಡಿಸುತ್ತದೆ.

ಮಾರ ಒಬ್ಬ ಹಳ್ಳಿ ಮುಕ್ಕ. ದಡ್ಡ ಶಿಖಾಮಣಿ ಎಂದು ಮೊದಲು ತಿಳಿದಿದ್ದೆ. ಆದರೆ ಅವನಲ್ಲಿ ಅಸಾಧಾರಣ ತಿಳುವಳಿಕೆಯೊಂದು ಮೂರ್ಖತನದ ಮುಸುಕಿನೊಳಗೆ ಕೆಲಸ ಮಾಡುತ್ತಿತ್ತು. ಇದನ್ನು ಸೂಪರ್ ಇಂಟಲಿಜೆನ್ಸ್ ಎನ್ನಬಹುದು.

ಮಾಸ್ತಿ, ಬೈರ, ಅಪ್ಪಣ್ಣ, ಮಾರ ಮುಂತಾದವರೊಡನೆಲ್ಲ ಕಾಡು ತಿರುಗಿ ನಾನು ತಿಳಿದುಕೊಂಡ ಅನೇಕ ವಿಷಯಗಳಲ್ಲಿ ಗಿಡಮೂಲಿಕೆಗಳ ವಿಷಯಗಳೂ ಹಲವು. ಇವತ್ತು ಈ ಕಾಡು ನಾಶವಾಗುತ್ತಿವೆ. ಇದರ ವಿಷಯ ತಿಳಿದವರೂ ನಿರ್ಗಮಿಸುತ್ತಿದ್ದಾರೆ. ಇವೆರಡರಲ್ಲಿ ಯಾರೊಬ್ಬರು ಇಲ್ಲವಾದರೂ ಇನ್ನೊಂದು ನಿರುಪಯುಕ್ತವಾಗುತ್ತೆ. ಈ ವಿಷಯಗಳನ್ನೆಲ್ಲ ಯಾರಿಗಾದರೂ ತಿಳಿಸುವುದು ಒಳ್ಳೆಯದೆಂದು ನನಗೆ ತವಕ. ಆದರೆ ಈ ಮೂಲಿಕೆಗಳ ಅಸಾಧಾರಣ ಗುಣಗಳ ಬಗ್ಗೆ ನನ್ನ ವೈದ್ಯ ಮಿತ್ರರೊಂದಿಗೆ ಪ್ರಸ್ತಾಪಿಸಿದಾಗಲೆಲ್ಲ ಅವರು ಕೋಪಿಸಿಕೊಂಡು ನನ್ನನ್ನು ಅಜ್ಞಾನಿ ಎಂದು ಜರಿದು ಜಗಳವನ್ನೇ ಆಡುತ್ತಾರೆ. ನಾಟಿ ವೈದ್ಯರೂ ಸಹ ಈ ವಿಜ್ಞಾನಿ ವೈದ್ಯರುಗಳ ಬಗ್ಗೆ ಅಷ್ಟೇ ತಿರಸ್ಕಾರದಿಂದ ಮಾತನಾಡುತ್ತಾರೆ. ಈ ನಾಟಿ ವೈದ್ಯ ಬಲ್ಲವರು ಮಾರನಂತೆ ತಮ್ಮ ವೈದ್ಯಕ್ಕೆ ಅನೇಕ ಕುರುಡು ನಂಬಿಕೆಗಳನ್ನೂ, ಧಾರ್ಮಿಕತೆಯನ್ನೂ ತಳುಕು ಹಾಕಿರುವುದರಿಂದ ವಿಜ್ಞಾನಿಗಳಿಗೆ ಇವರನ್ನು ಹಿಯ್ಯಾಳಿಸುವುದೂ, ಅಲ್ಲಗಳೆಯುವುದೂ ಸುಲಭವಾಗಿದೆ. ಇದರೊಡನೆ ನಾಟಿ ಮದ್ದು ತಿಳಿದ ಮಾರನಂಥವರಿಗೆ ತಮ್ಮ ಮಾತನ್ನು ಇತರರು ಗಂಭೀರವಾಗಿ ಪರಿಗಣಿಸಿ ಆಗಬೇಕಾದ್ದು ಏನೂ ಇಲ್ಲ. ತಮ್ಮ ತಿಳುವಳಿಕೆಯನ್ನು ತಮ್ಮೊಂದಿಗೇ ಗೋರಿಗೆ ತೆಗೆದುಕೊಂಡು ಹೋಗಲು ಅವರು ಎಂದೋ ತಯ್ಯಾರಾಗಿದ್ದಾರೆ. ಅನೇಕರು, ಅದ್ಭುತ ಔಷಧಿಗಳು ಗೊತ್ತಿದ್ದೂ ಬೇಕೆಂದೇ ಯಾರಿಗೂ ಹೇಳದೆ ಸತ್ತೇ ಹೋಗಿದ್ದಾರೆ. ಈವತ್ತಿಗೂ ಮನುಕುಲವನ್ನು ಕಾಡಿಸುತ್ತಿರುವ ಅನೇಕ ಮಾರಣಾಂತಿಕ ರೋಗಗಳಿಗೆ ಇದ್ದ ಔಷಧಿಗಳು ಹೀಗೆ ಕಣ್ಮರೆಯಾಗಿ ಅಪಾರ ನಷ್ಟವಾಗಿದೆಯೆಂದು ನಾನು ದೃಢವಾಗಿ ನಂಬಿದ್ದೇನೆ. ಮನುಷ್ಯ ಚಂದ್ರಮಂಡಲಕ್ಕೆ ಹೋಗಿಬಂದರೂ ಕ್ಷುದ್ರ ಬುದ್ಧಿ ಅಂಧಶ್ರದ್ಧೆಗಳನ್ನು ಮೀರಲು ಸಾಧ್ಯವಾಗಿಲ್ಲ.''

ಕನ್ನಡಿ ಹಾವು, ಕೊಳಕುಮಂಡಲ, ಕಟ್ಟುಹಾವು, ಉರಿ ಮಂಡಲ ಇತ್ಯಾದಿ ಘೋರ ವಿಷದ ಹಾವುಗಳಾದರ ಅವು ಸತ್ತಮೇಲೂ ಅದರ ಹಲ್ಲು ತಾಗಿದರೆ ಸಾಕು ಕಾಲು ಕೊಳೆಯಲು ಶುರುವಾಗುತ್ತದೆ ಎಂದು ಅಣ್ಣಪ್ಪಣ್ಣ ನಾನು ಹಾವು ಹೊಡೆದಾಗಲೆಲ್ಲ 'ಹೇಳಿ ಹೆದರಿಸುತ್ತಿದ್ದ. ಅವನ ಪ್ರಕಾರ ಹಾವು ಮಣ್ಣಾಗಿ ಎಷ್ಟೋ ವರ್ಷವಾದ ಮೇಲೂ ಅದರ ಹಲ್ಲು ತಾಗಿದರೆ ನಂಜಾಗುತ್ತದೆ! ಅಷ್ಟೇನು, ಹಾವಿನ ರಕ್ತ ಹೀರಿದ ಜಿಗಣೆ ಉಣ್ಣೆ ಮೊದಲಾದ ಕೀಟಗಳು ನಮಗೆ ಕಡಿದರೂ ಸಹ ನಂಜಾಗುತ್ತದೆ ಎಂದು, ಹಾಗೆ ಸತ್ತವರ ಉದಾಹರಣೆಗಳನ್ನೂ ಕೊಡುತ್ತಿದ್ದ. ಉಣ್ಣೆ, ಜಿಗಣೆ ಮೊದಲಾದವು ನಮಗೆ ಕಚ್ಚುವುದಕ್ಕೆ ಮೊದಲು ಹಾವಿಗೆ ಕಚ್ಚಿ, ರಕ್ತ ಕುಡಿದಿದ್ದು ಯಾರಿಗಾದರೂ ಹೇಗೆ ಗೊತ್ತಾಗಲು ಸಾಧ್ಯ? ಇದಂತೂ ಅಣ್ಣಪ್ಪಣ್ಣನ ಥೋಂಗಿಗಳಲ್ಲಿ ಒಂದೆಂದು ನಿರ್ವಿವಾದವಾಗಿ ಹೇಳಬಹುದು. ಇದಕ್ಕೆಲ್ಲಾ ಕೊಂಚವಾದರೂ ವೈಜ್ಞಾನಿಕ ಆಧಾರ ಇದೆಯೆ ಎಂದು ಕೇಳಿದರೆ

'ಹಂಗೆಲ್ಲಾ ವಿಷದ ಹಾವುಗಳ ಬಗ್ಗೆ ಹುಡುಗಾಟ ಆಡಬೇಡಿ! ಅದು ಸುಳ್ಳಾದರೂ ಆಗಲಿ, ನಿಜವಾದರೂ ಆಗಲಿ, ನಮ್ಮ ಎಚ್ಚರಿಕೆಯಲ್ಲಿ ನಾವು ಇದ್ದುಬಿಡೋಣ! ಇದೆಲ್ಲಾ ಸುಳ್ಳಾ ನಿಜವ ಅಂತ ಪರೀಕ್ಷೆ ಮಾಡಕ್ಕೆ ಸರ್ಕಾರದೋರೇನು ನಮಗೆ ಸಂಬ್ಳಾ ಕೊಟ್ಟು ಇಟ್ಟದಾರ?' ಎಂದು ಎಚ್ಚರಿಕೆ ಹೇಳಿ ಸುತ್ತ ಇದ್ದವರನ್ನೆಲ್ಲಾ ದಿಗಿಲಿಕ್ಕಿಸುತ್ತಿದ್ದ. ಇಂಥ ಅಪಾಯಕಾರಿ ವಿಷಪ್ರಾಣಿಗಳ ಬಗ್ಗೆ ಅವನ ವಾದ ಒಮ್ಮೊಮ್ಮೆ ನನಗೆ ಸರಿ ಎನ್ನಿಸುತ್ತಿತ್ತು.[೭೮]

ಇಂತವುಗಳನ್ನು ಅವಲೋಕಿಸಿದಾಗ ಗ್ರಾಮೀಣ ಜಗತ್ತಿನ ಭಿನ್ನ ಭಿನ್ನ ಪ್ರವೃತ್ತಿಯ ವ್ಯಕ್ತಿಗಳ-ಪರಿಸರದ ಸೂಕ್ಷ್ಮಾವಲೋಕನ ಮೂಲಭೂತವಾದ ಅನೇಕ ಪ್ರಶ್ನೆಗಳಿಗೆ ಉತ್ತರವೀಯುತ್ತದೆ.

ನಾಗರಿಕ-ಅನಾಗರಿಕ ಈ ದ್ವಂದ್ವ ಕೃತಿಯಿಂದ ಕೃತಿಗೆ ಹೆಚ್ಚು ಸ್ಪಷ್ಟಗೊಳ್ಳುತ್ತದೆ. ಅಂದರೆ ಕೃತಿಗಳಲ್ಲಿ ಹಾಸುಹೊಕ್ಕಾಗಿ ಬರುವ ಇಂತಹ ಜಿಜ್ಞಾಸೆಯುಕ್ತ ಪಾತ್ರಗಳನ್ನು ಓದುಗ ಯಾವ ರೀತಿಯಲ್ಲಿ ಸ್ವೀಕರಿಸುತ್ತಾನೆ ಎಂಬುದನ್ನು ನಿರ್ಧರಿಸುವವರು ಯಾರು? ಪಾತ್ರದ ಸೃಷ್ಟಿಕರ್ತನೋ? ಓದುಗನೋ/ ಎಂಬ ಪ್ರಶ್ನೆಗಳು ಎದ್ದಾಗ ಪಾತ್ರಗಳು ಯಾವ ರೀತಿಯಲ್ಲಿ ನಿರೂಪಿಸಲ್ಪಟ್ಟಿರುತ್ತದೆಯೋ ಓದುಗ ಅದೇ ರೀತಿಯಲ್ಲಿ ಸ್ವೀಕರಿಸುತ್ತಾನೆ ಎಂದಾದರೆ ಕ್ಷುದ್ರಪಾತ್ರಗಳೆಲ್ಲ ಬದಿಗೆ ಸರಿದುಬಿಡಬೇಕಾಗುತ್ತದೆ. ಸೃಜನಶೀಲ ಬರಹಗಾರ ತನ್ನ ಸಿದ್ಧಾಂತಗಳಿಂದ ಹೊರಬಂದ ಸಾಹಿತ್ಯಕಾರನ ಇತಿಮಿತಿಗಳನ್ನು ಅರಿತು ವಾಸ್ತವವನ್ನು ಅನಾವರಣಗೊಳಿಸಬೇಕಾಗುತ್ತದೆ. ಅನೇಕ ವೇಳೆ ಪಾತ್ರಗಳಿಗೆ ನ್ಯಾಯ ಸಲ್ಲಿಸುವ ಸಂದರ್ಭದಲ್ಲಿ ಪ್ರತಿಯೊಂದು ಪಾತ್ರಗಳನ್ನು ಬೇರೆ ಬೇರೆ ದೃಷ್ಟಿಕೋನಗಳಲ್ಲಿ ಇಟ್ಟು ಹಲವು ಮಜಲುಗಳಲ್ಲಿ ಅಳೆದು ತೂಗಲಾಗುತ್ತದೆ. ಹಾಗಾಗಿ ನಾಗರಿಕ-ಅನಾಗರಿಕ, ಎಂಬ ಜಿಜ್ಞಾಸೆಯ ವಿಚಾರಗಳು ಓದುಗನ ನಿಲುವಿಗೆ ಅರ್ಥಪೂರ್ಣವಾಗಿ ದಕ್ಕುತ್ತವೆ.

ಪರಿಸರದೊಂದಿಗೆ ಮನುಷ್ಯ ಸಂಬಂಧದ ಸ್ವರೂಪವನ್ನು ಪ್ರಶ್ನಿಸುವುದರ ಮುಖೇನ ಕಂಡುಕೊಂಡ ಉತ್ತರವೇ ನೋಡುವ ನೋಟದ ಹಿಂದಿನ ಕ್ರಮವನ್ನು ಪರಿಷ್ಕೃತಗೊಳಿಸುತ್ತದೆ ಮತ್ತು ಮನುಷ್ಯ ಸಂಬಂಧ ಅನಂತ ಸಾಧ್ಯತೆಗಳನ್ನು ಆವಿಷ್ಕರಣಗೊಳಿಸುತ್ತದೆ. ಈ ಹಿನ್ನೆಲೆಯಲ್ಲಿ ಸಾಹಿತ್ಯಾನ್ವೇಷಣೆಯ ದಿಕ್ಕು ವ್ಯಕ್ತಿನಿಷ್ಠವಾದದಿಂದ ಸಾಮಾಜಿಕತೆಯೆಡೆಗೆ ತಿರುಗಿದೆ ಎನ್ನಬಹುದು. ಇದರಿಂದ ಪ್ರತಿಭಟನೆ, ಬದುಕಿನ ವಿಚಾರ, ಕ್ರಿಯೆಗಳನ್ನು ಏಕಸೂತ್ರಕ್ಕೆ ಬಂಧಿಸುವ ಭೌತಿಕ-ಬೌದ್ಧಿಕ ಆಯಾಮಗಳನ್ನೆಲ್ಲ ಒಟ್ಟುಗೂಡಿಸುವ ಆಶಯ ಸಫಲವಾಗುತ್ತದೆ. ಇದೇ ಸಾಮಾಜಿಕ ನೆಲೆಯ ಹಲವು ಆಯಾಮಗಳನ್ನು ರೂಢಿಸಿಕೊಳ್ಳುವತ್ತ ಮುಂದಡಿಯಿಡುತ್ತದೆ.

ತಮ್ಮನ್ನು ಮಾತ್ರ ವಿವಿಧ ಸಂದರ್ಭದೊಳಗಿಟ್ಟು ನೋಡಿಕೊಳ್ಳುವ ಪೂರ್ವಾಗ್ರಹ ಪೀಡಿತಮನಸ್ಸುಗಳು ನಿಶ್ಚಿತವಾದ ಸಿದ್ಧಾಂತಕ್ಕೆ ತೆಕ್ಕೆ ಬೀಳದೆ ತಾತ್ವಿಕವಾಗಿ ಚಿಂತಿಸಿದಾಗ ಸಾಂದರ್ಭಿಕವಾದ ಮೌಲ್ಯನಿಷ್ಕರ್ಷೆಗೆ ತಲುಪುವುದು ಸಾಧ್ಯ. ಇದು ನಿಗೂಢಮನುಷ್ಯರು ಮತ್ತು ಸ್ವರೂಪದಲ್ಲಿ ಆರಂಭಗೊಂಡದ್ದು ಕ್ರಮೇಣ ಆಬಚೂರಿನ ಪೋಸ್ಟಾಫೀಸು ಕಥಾಸಂಕಲನದಿಂದ ಹೊಸದಿಗಂತದೆಡೆಗೆ ಹೊರಳಿ ಕರ್ವಾಲೋ ಮತ್ತು ನಂತರದ ಕೃತಿಗಳಲ್ಲಿ ಹೆಚ್ಚು ಸ್ಪಷ್ಟಗೊಳ್ಳುತ್ತದೆ. ಹಳ್ಳಿ ಮತ್ತು ನಗರ ಎರಡರ ನಡುವಿನ ವೈರುಧ್ಯ ಮಾದರಿಗಳು 'ಮಾಯಾಲೋಕ'ದಲ್ಲಿ ಬೇರೆಯದೆ ನೋಟದಲ್ಲಿ ಕಾಣಿಸಿಗುತ್ತದೆ. ತಮ್ಮ ಸರಳಗ್ರಹಿಕೆಗೆ ಹೇಗೆ ನೋಡಲು ದಕ್ಕುತ್ತದೆಯೋ ಅದೇ ರೀತಿಯಲ್ಲಿ ಅಭಿವ್ಯಕ್ತಗೊಂಡು ಸಾಮಾಜಿಕವಾಗಿ ಆಗುತ್ತಿರುವ ಬದಲಾವಣೆಗಳನ್ನು ಈ ಕಾದಂಬರಿ ದ್ವನಿಸುತ್ತದೆ. ಒಟ್ಟಾರೆಯಾಗಿ ಏಕಕಾಲದಲ್ಲಿ ಒಂದು ಘಟನೆ ಹಲವು ನೆಲೆಯೊಳಗೆ ಪ್ರವೇಶ ಪಡೆಯುವುದನ್ನು ತೇಜಸ್ವಿ ಕೃತಿಗಳಲ್ಲಿ ಗುರುತಿಸಬಹುದು. ಯಾವುದೇ ಘಟನೆ ಸಮಸ್ಯೆಯ ರೂಪ ತಳೆಯುದಕ್ಕೆ ಕಾರಣವಾಗುವ ಸಂದರ್ಭಗಳನ್ನು ವಿವಿಧ ನೆಲೆಗಳಿಂದ ತೆರೆದು ತೋರುತ್ತಾರೆ. ಇದರಿಂದಾಗಿಯೇ ತೇಜಸ್ವಿ ಸಮಕಾಲೀನ ಲೇಖಕರಿಗಿಂತ ಭಿನ್ನರಾಗಿ ಕಂಡುಬರುತ್ತಾರೆ.

## ಕೊನೆ ಟಿಪ್ಪಣಿಗಳು

೧ ಡಾ.ರವಿ ಚಲವಾದಿ: ಪ್ರಾಚೀನ ಕನ್ನಡ ಸಾಹಿತ್ಯ ಸಂಘರ್ಷ: ದೇಸಿ ಪುಸ್ತಕ ವಿಜಯನಗರ ಬೆಂಗಳೂರು: ೨೦೦೯

೨ ಶಿಕ್ಷಣ ಶಾಸ್ತ್ರದ ಪಾರಿಭಾಷಿಕ ನಿಘಂಟು **ವೀರಪ್ಪ ಎನ್ ಎಸ್** ೧೯೮೧, ಪು ಸಂ ೨೫೧

೩ ಅದೇ ವೀರಪ್ಪ ಎನ್ ಎಸ್ ೧೯೮೧ ಪು ಸಂ ೨೫೧ (ಮನಃಶಾಸ್ತ್ರದಲ್ಲಿ)

೪ ಮೈಸೂರು ವಿಶ್ವವಿದ್ಯಾಲಯದ ಇಂಗ್ಲಿಷ್-ಕನ್ನಡ ನಿಘಂಟು (೧೯೮೯: ಪು ಸಂ.೧೦೬೬)

೫ ಹುಲಿಯೂರಿನ ಸರಹದ್ದು ಆರನೆಯ ಮುದ್ರಣ ೨೦೦೭ ನಿಗೂಢ ಮನುಷ್ಯರು ಪೂ.ಚಂ.ತೇ ಪು.ಸಂ ೧೨೫

೬ ಅದೇ ಪು.ಸಂ ೧೨೦

೭ ಅದೇ ಪು.ಸಂ ೧೨೧

೮ ಹುಲಿಯೂರಿನ ಸರಹದ್ದು ಆರನೆಯ ಮುದ್ರಣ ೨೦೦೭, ಸ್ವರೂಪ, ಪೂ.ಚಂ.ತೇ ಪು.ಸಂ ೫೫-೫೬

೯ ತೇಜಸ್ವಿ ಸಾಹಿತ್ಯ ಸಂಕಥನ ಡಾ.ಎನ್ ಎಸ್ ಶಂಕರಗೌಡ ಪು.ಸಂ.೯೦

೧೦ ಅಬಚೂರಿನ ಪೋಸ್ಟಾಫೀಸು ಎಂಟನೆಯ ಮುದ್ರಣ ೨೦೦೯, ತಬರನ ಕಥೆ ಪೂ.ಚಂ.ತೇ ಪು.ಸಂ ೧೦೫

೧೧ ಕಾಡು ಮತ್ತು ಕ್ರೌರ್ಯ ಎರಡನೆಯ ಮುದ್ರಣ ೨೦೧೩ ಪೂ.ಚಂ.ತೇ ಪು.ಸಂ ೪೩

೧೨ ಚಿದಂಬರ ರಹಸ್ಯ ಆರನೆಯ ಮುದ್ರಣ ೧೯೯೮ ಪೂ.ಚಂ.ತೇ ಪು.ಸಂ ೪೭

೧೩ ಅಬಚೂರಿನ ಪೋಸ್ಟಾಫೀಸು ಎಂಟನೆಯ ಮುದ್ರಣ ೨೦೦೯, ತಬರನ ಕಥೆ ಪೂ.ಚಂ.ತೇ ಪು.ಸ ೧೦೫

೧೪ ಹೊಸವಿಚಾರಗಳು ಪುಸ್ತಕ ಪ್ರಕಾಶನ ಮೊದಲನೆಯ ಮುದ್ರಣ ೨೦೧೩, ಪು.ಸಂ ಪು.ಸಂ ೨೯೭

೧೫ ಹುಲಿಯೂರಿನ ಸರಹದ್ದು ಆರನೆಯ ಮುದ್ರಣ ೨೦೦೭ ಪೂ.ಚಂ.ತೇ ಪು.ಸಂ ೪೪

೧೬ ಧ್ಯಾನ ಪುಟ ಸಂ ೧೪೫

೧೭ ಕಾಡು ಮತ್ತು ಕ್ರೌರ್ಯ ಎರಡನೆಯ ಮುದ್ರಣ ೨೦೧೩ ಪೂ.ಚಂ.ತೇ ಪು.ಸಂ ೫೪

೧೮ ತೇಜಸ್ವಿ ಲೋಕ, ಪ್ರಹ್ಲಾದ್ ಡಿ.ವಿ, ಸಂಚಯ ಬನಶಂಕರಿ ಬೆಂಗಳೂರು-೮೫:೨೦೦೭ ಪು.ಸಂ ೧೧೯-೧೨೦

೧೯ ಅಸ್ತಿತ್ವವಾದ-ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು ೧೯೮೯ ಪ್ರ ಸಂ ೧೪೯

೨೦ ತೇಜಸ್ವಿ ಲೋಕ, ಪ್ರಹ್ಲಾದ್ ಡಿ.ವಿ, ಸಂಚಯ ಬನಶಂಕರಿ ಬೆಂಗಳೂರು-೮೫:೨೦೦೭ ಪುಸಂ ೨೦

೨೧ ಅಸ್ತಿತ್ವವಾದ-ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು ೧೯೮೯ ಫೀನಾಮಿನನ್ ಪು ಸಂ ೧೧

೨೨ ಕಿರುಗೂರಿನ ಗಯ್ಯಾಳಿಗಳು ಹದಿನೈದನೆಯ ಮುದ್ರಣ ೨೦೦೯ ಪೂ.ಚಂ.ತೇ ಪು.ಸಂ -೨೦

೨೩ ಮಾಯಾಲೋಕ-೧ ಮೂರನೆಯ ಮುದ್ರಣ ೨೦೦೮, ಪೂ.ಚಂ.ತೇ

೨೪ ಕಿರುಗೂರಿನ ಗಯ್ಯಾಳಿಗಳು ಕೃಷ್ಣೇಗೌಡನ ಆನೆ ಹದಿನೈದನೆಯ ಮುದ್ರಣ ೨೦೦೯ ಪೂ.ಚಂ.ತೇ ಪು.ಸಂ ೬೪

೨೫ ಅದೇ ಪು.ಸಂ ೭೪-೭೫

೨೬ ಕಾಡು ಮತ್ತು ಕ್ರೌರ್ಯ ಎರಡನೆಯ ಮುದ್ರಣ ೨೦೧೩ ಪೂ.ಚಂ.ತೇ ಪು.ಸಂ ೭

೨೭ ಕಿರುಗೂರಿನ ಗಯ್ಯಾಳಿಗಳು ಹದಿನೈದನೆಯ ಮುದ್ರಣ ೨೦೦೯ ಪೂ.ಚಂ.ತೇ ಪು.ಸಂ -೧೩

೨೮ ಮಾಯಾಲೋಕ-೧ ಮೂರನೆಯ ಮುದ್ರಣ ೨೦೦೮, ಪೂ.ಚಂ.ತೇ ಪು.ಸಂ

೨೯ ಅನುಭಾವ: ಸಾಂಸ್ಕೃತಿಕ ಸಮಸ್ಯೆ ಮತ್ತು ಹುಡುಕಾಟ ಬಸವರಾಜ ಕಲ್ಗುಡಿ: ಪ್ರಿಯದರ್ಶಿನಿ ಪ್ರಕಾಶನ ಬೆಂಗಳೂರು-೪೦: ೧೯೯೭ ಪು.ಸಂ. ೮೭

೩೦ ತೇಜಸ್ವಿ ಸಾಹಿತ್ಯ ಸಂಕಥನ ಡಾ.ಎನ್ ಎಸ್ ಶಂಕರಗೌಡ ಪು.ಸಂ ೨೨

೩೧ ಚಿದಂಬರ ರಹಸ್ಯ -೧೯೯೮ ಪೂ.ಚಂ.ತೇ ಪು.ಸಂ ೫೪

೩೨ ಜುಗಾರಿಕ್ರಾಸ್ ಪುಸ್ತಕ ಪ್ರಕಾಶನ ಎಂಟನೆಯ ಮುದ್ರಣ ೨೦೦೯ ಪೂ.ಚಂ.ತೇ ಪು.ಸಂ ಮುನ್ನುಡಿ

೩೩ ಚಿದಂಬರ ರಹಸ್ಯ ಆರನೆಯ ಮುದ್ರಣ ೧೯೯೮ ಪೂ.ಚಂ.ತೇ ಪು.ಸಂ ೫೪

೩೪ ಕಿರುಗೂರಿನ ಗಯ್ಯಾಳಿಗಳು ಕೃಷ್ಣೇಗೌಡನ ಆನೆ ಪೂ.ಚಂ.ತೇ ಪು.ಸಂ ೫೪

೩೫ ಮಾಯಾಲೋಕ-೧ ಮೂರನೆಯ ಮುದ್ರಣ ೨೦೦೮, ಪೂ.ಚಂ.ತೇ ಪು.ಸಂ ೬

೩೬ ಪರಿಸರ ಕಥೆ ಇಪ್ಪತ್ತನೆಯ ಮುದ್ರಣ ೨೦೦೯, ಪೂಚಂತೇ ಪು.ಸಂ ೩

೩೭ ಮಾಯಾಲೋಕ-೧ ಮೂರನೆಯ ಮುದ್ರಣ ೨೦೦೮, ಪೂ.ಚಂ.ತೇ ಪು.ಸಂ ೮

೩೮ ಚಿದಂಬರ ರಹಸ್ಯ ಆರನೆಯ ಮುದ್ರಣ ೧೯೯೮ ಪೂ.ಚಂ.ತೇ ಪು.ಸಂ ೨೦೩

೩೯ ಪರಿಸರ ಕಥೆ ಇಪ್ಪತ್ತನೆಯ ಮುದ್ರಣ ೨೦೦೯, ಪೂಚಂತೇ ಪು.ಸಂ ೫

೪೦ ಹೊಸವಿಚಾರಗಳು ಪುಸ್ತಕ ಪ್ರಕಾಶನ ಮೊದಲನೆಯ ಮುದ್ರಣ ೨೦೧೩, ಪು.ಸಂ ೪೨

೪೧ ಕಾಡು ಮತ್ತು ಕ್ರೌರ್ಯ ಎರಡನೆಯ ಮುದ್ರಣ ೨೦೧೩ ಪೂ.ಚಂ.ತೇ ಪು.ಸಂ ೮

೪೨ ಚಿದಂಬರ ರಹಸ್ಯ ಆರನೆಯ ಮುದ್ರಣ ೧೯೯೮ ಪೂ.ಚಂ.ತೇ ಪು.ಸಂ ೨೦೩

೪೩ ಸಂಶ್ಲೇಷಣೆಯ ಅರ್ಥ ಒಂದನ್ನೊಂದು ಸಂಯೋಜಿಸುವ, ಖಂಡ ಖಂಡವಾಗಿ ಅಖಂಡವಾಗಿ ಗ್ರಹಿಸುವ ಸಂಶ್ಲೇಷಣಾ ಕ್ರಿಯೆ

೪೪ ಅಬಚೂರಿನ ಪೋಸ್ಟಾಫೀಸು ಕುಬಿ ಮತ್ತು ಇಯಾಲ ೨೦೦೯ ಪೂ.ಚಂ.ತೇ ಪು.ಸಂ ೬೬

೪೫ ಅದೇ ಪು.ಸಂ ೪೬

೪೬ ಅಬಚೂರಿನ ಪೋಸ್ಟಾಫೀಸು ಅವನತಿ ೨೦೦೯ ಪೂ.ಚಂ.ತೇ ಪು.ಸಂ ೨೩

೪೭ ಅಬಚೂರಿನ ಪೋಸ್ಟಾಫೀಸು ಕುಬಿ ಮತ್ತು ಇಯಾಲ ೨೦೦೯ ಪೂ.ಚಂ.ತೇ ಪು.ಸಂ ೪೫

೪೮ ಅದೇ ಪು.ಸಂ ೪೦

೪೯ ಅದೇ ಪು.ಸಂ ೬೫

೫೦ ಚಿದಂಬರ ರಹಸ್ಯ ಆರನೆಯ ಮುದ್ರಣ ೧೯೯೮, ಪೂ.ಚಂ.ತೇ ಪು.ಸಂ ೧೪೬

೫೧ ಅದೇ ಪು.ಸಂ ೬೬

೫೨ ಕಾಡು ಮತ್ತು ಕ್ರೌರ್ಯ ಪೂ.ಚಂ.ತೇ ಪು.ಸಂ ೪೦

೫೩ ಅದೇ ಪು.ಸಂ ೧೨೭

೫೪ ಕರ್ವಾಲೊ ಪುಸ್ತಕ ಪ್ರಕಾಶನ ಇಪ್ಪಾತ್ತಾರನೆಯ ಮುದ್ರಣ ೨೦೦೯ ಪು.ಸಂ ೧೨

೫೫ ಕನ್ನಡ ಸಾಹಿತ್ಯದಲ್ಲಿ ಸಾಂಸ್ಕೃತಿಕ ಸಂಘರ್ಷ: ಕೋದಂಡರಾಮ ಎನ್ ಕೆ: ಗಾಯತ್ರಿ ಸ್ಮಾರಕ ಗ್ರಂಥಮಾಲೆ ಬೋಗಾದಿ ಮೈಸೂರು: ೧೯೯೬ ಪು.ಸಂ ೨೫೨

೫೬ ಮಾಯಾಲೋಕ ಪೂ.ಚಂ.ತೇ ಪು.ಸಂ ೮

೫೭ ಏಕ ಅನೇಕ ಪು. ಸಂ ೨೧೧

೫೮ ಜುಗಾರಿಕ್ರಾಸ್ -೧೯೯೮ ಪೂ.ಚಂ.ತೇ ಪು.ಸಂ ೪೭

೫೯ ಮಾಯಾಲೋಕ-೧ ಮೂರನೆಯ ಮುದ್ರಣ ೨೦೦೮, ಪೂ.ಚಂ.ತೇ ಪು.ಸಂ ೮

೬೦ ಕಾಡು ಮತ್ತು ಕ್ರೌರ್ಯ ಎರಡನೆಯ ಮುದ್ರಣ ೨೦೧೩ ಪೂ.ಚಂ.ತೇ ಪು.ಸಂ ೮

೬೧ ಅಬಚೂರಿನ ಪೋಸ್ಟಾಫೀಸು ತುಕ್ಕೋಜಿ ೨೦೦೯ ಪೂ.ಚಂ.ತೇ ಪು.ಸಂ ೬೭-೬೯

೬೨ ತೇಜಸ್ವಿಲೋಕ: ತೇಜಸ್ವಿಯವರ ಜುಗಾರಿಕ್ರಾಸ್ ಎಲ್ ಸಿ ಸುಮಿತ್ರ ಪು.ಸಂ ೨೮

೬೩ ಹುಲಿಯೂರಿನ ಸರಹದ್ದು ಪುಸ್ತಕ ಪ್ರಕಾಶನ ಆರನೆಯ ಮುದ್ರಣ ೨೦೦೭ ಪೂ.ಚಂ.ತೇ ಪು.ಸಂ ೪೪

೬೪ ವಸಾಹತುಶಾಹಿ ಅನುಭವ ಮತ್ತು ಕನ್ನಡ ಕಾದಂಬರಿಗಳು ೧೨೫

೬೫ ತೇಜಸ್ವಿ ಲೋಕ, ಕೆ ಸಿ ಶಿವಾರೆಡ್ಡಿ, ಸಂ: ಪ್ರಹ್ಲಾದ್ ಡಿ.ವಿ, ಸಂಚಯ ಬೆಂಗಳೂರು-೮೫: ಪು.ಸಂ ೯೦

೬೬ ಅಬಚೂರಿನ ಪೋಸ್ಟಾಫೀಸು ಕುಬಿ ಮತ್ತು ಇಯಾಲ ೨೦೦೯ ಪೂ.ಚಂ.ತೇ ಪು.ಸಂ ೫೩

೬೭ ಅಬಚೂರಿನ ಪೋಸ್ಟಾಫೀಸು ತಬರನ ಕಥೆ ಪೂ.ಚಂ.ತೇ ಪು.ಸಂ ೧೦೫

೬೮ ಪ್ರಮಾಣು ಪು.ಸಂ ೧೫೨

೬೯ ಶ್ರೀ ಕುವೆಂಪು ಸಂ; ಜಿ ಎಸ್ ಶಿವರುದ್ರಪ್ಪ ಪ್ರಸಾರಾಂಗ ೧೯೯೧ ಬೆ ವಿ ವಿ ಬೆಂಗಳೂರು ಪು.ಸಂ ೨

೭೦ ಮಾಯಾಲೋಕ-೧ ಮೂರನೆಯ ಮುದ್ರಣ ೨೦೦೮, ಪೂ.ಚಂ.ತೇ ೨೦೫

೭೧ ಅದೇ ಪು.ಸಂ ೧೬೧

೭೨ ಪರಿಸರ ಕಥೆ ಇಪ್ಪತ್ತನೆಯ ಮುದ್ರಣ ೨೦೦೯, ಪೂಚಂತೇ ಪು.ಸಂ ೫೩

೭೩ ಅದೇ ಪು.ಸಂ ೫೩

೭೪ ಅದೇ ಪು.ಸಂ ೫೩

೭೫ ಕರ್ವಾಲೊ ಇಪ್ಪಾತ್ತಾರನೆಯ ಮುದ್ರಣ೨೦೦೯ ಕರ್ವಾಲೋ ಪೂ.ಚಂ.ತೇ ಪು.ಸಂ ೫೪

೭೬ ಅದೇ ಪು.ಸಂ ೫೩

೭೭ ಪರಿಸರ ಕಥೆ  ಇಪ್ಪತ್ತನೆಯ ಮುದ್ರಣ ೨೦೦೯, ಪೂಚಂತೇ ಪು.ಸಂ ೫೩

೭೮ ಮಾಯಾಲೋಕ-೧ ಮೂರನೆಯ ಮುದ್ರಣ ೨೦೦೮, ಪೂ.ಚಂ.ತೇ ಪು.ಸಂ ೭೩

# ಅಧ್ಯಾಯ ೪

## ಪೂರ್ಣಚಂದ್ರತೇಜಸ್ವಿ ಕಥನಗಳಲ್ಲಿ ಸ್ಥಿತ್ಯಂತರ

**ಶೀರ್ಷಿಕೆಯಲ್ಲಿನ (concept) ಪರಿಕಲ್ಪನೆ 'ಸ್ಥಿತ್ಯಂತರ' ಈ ಪದದ ಅರ್ಥವಿಶ್ಲೇಷಣೆ**

ಶಬ್ದಕೋಶದಲ್ಲಿ ಬೇರೆ ಬೇರೆ ಅರ್ಥಗಳಿವೆ. ಅದರಲ್ಲಿ ಪ್ರೊ ಜಿ ವೆಂಕಟಸುಬ್ಬಯ್ಯನವರ ಪ್ರಕಾರ ಬದಲಾವಣೆ: ಪರಿವರ್ತನೆ: ೨. (ಸಂಗೀತ) ಒಂದು ಸ್ವರ ಸ್ಥಾಯಿಯಿಂದ ಮತ್ತೊಂದಕ್ಕೆ ತಾತ್ಕಾಲಿಕವಾಗಿ ಬದಲಾಯಿಸುವುದು: ಸ್ಥಾಯಿವ್ಯತ್ಯಾಸ, ಬದಲಾವಣೆ ೩.(ಕಲೆ) ಒಂದು ಪದ್ಧತಿಯಿಂದ ಮತ್ತೊಂದಕ್ಕೆ ತಿರುಗುವುದು: ಬದಲಾವಣೆ[೧] ಬದಲಾವಣೆ: ಪರಿವರ್ತನೆ: ಸಂಕ್ರಮಣ (ಕಾಲ), ಪರ್ವ (ಕಾಲ): ಸ್ಥಿತ್ಯಂತರ

**ಸ್ಥಿತ್ಯಂತರವೆಂದರೇನು**?; ಸ್ಥಿತ್ಯಂತರವೆಂದರೆ ಚಲನಶೀಲತೆ, ಸೃಜನಶೀಲತೆ. ಸ್ಥಿತಿಯಿಂದ ಸ್ಥಿತಿಗೆ ಬದಲಾವಣೆಯಾಗುವುದನ್ನು ಅಥವಾ ಶಾಬ್ದಿಕವಾಗಿ ಸ್ಥಿತ್ಯಂತರ ಶಬ್ದನಿಷ್ಪತ್ತಿಯನ್ನು ಹೇಳಹೊರಟರೆ ಸ್ಥಿತಿಯಿಂದ ಎಂದರೆ ಈಗಿರುವ, ವರ್ತಮಾನದ, ವಾಸ್ತವದಿಂದ ಮತ್ತೊಂದು ಸ್ಥಿತಿಯನ್ನು, ಈಗಿಲ್ಲದ, ವರ್ತಮಾನದ ಸ್ಥಿತಿಗಿಂತ ಭಿನ್ನವಾದ ಸ್ಥಿತಿಯನ್ನು ಪಡೆದು ಕೊಳ್ಳುವುದು ಸ್ಥಿತ್ಯಂತರ. ಪ್ರಸ್ತುತ ಯಾವ ಪರಿಸ್ಥಿತಿಯಲ್ಲಿರುವುದೋ ಆ ಭೌತಿಕವಸ್ತು, ಅದಕ್ಕಿಂತ ಬೇರೆಯಾದ ಮತ್ತೊಂದು ವರ್ತಮಾನಕ್ಕೆ, ವಾಸ್ತವಕ್ಕೆ ನಮ್ಮ ಇಂದಿನ ವರ್ತಮಾನ ತೆರೆದು ಕೊಳ್ಳುವುದು. ಇರುವ ವರ್ತಮಾನವನ್ನೊಪ್ಪಿ ಮತ್ತೊಂದು ವಾಸ್ತವಕ್ಕೆ ಅಣಿಗೊಳ್ಳುವುದು ತೆರೆದುಕೊಳ್ಳುವುದೂ ಕೂಡಾ ಸ್ಥಿತ್ಯಂತರ/ಅವಸ್ಥಾಂತರವಾಗಬಹುದು. ಹಾಗೆಂದ ಮಾತ್ರಕ್ಕೆ ಸ್ಥಿತ್ಯಂತರವೆಂದರೆ ಹಿಂದೆ ಹೀಗಿರಲಿಲ್ಲ, ಇಂದೂ ಹೀಗಿಲ್ಲ ಅಂಥದ್ದೊಂದು ಸ್ಥಿತಿಯನ್ನು ಪಡೆದುಕೊಳ್ಳುವುದೆಂಬ ಅಥವಾ ಹೊಸದೊಂದು ಸ್ಥಿತಿಯನ್ನು ಪಡೆಯುವುದೆಂಬ ಅರ್ಥಕಲ್ಪನೆ ಖಂಡಿತವಾಗಿಯೂ ತಪ್ಪು. ಇಂದು ಹೀಗಿಲ್ಲ; ಇಂದಿಲ್ಲದ ಬೇರೊಂದು ಪರಿಸ್ಥಿತಿಯನ್ನು ತಲುಪುವುದೇ ಸ್ಥಿತ್ಯಂತರ.

ಯಾವುದೇ ಒಂದು ಸಮಾಜ, ತನ್ನ ಸಮುದಾಯ-ಸಂಸ್ಕೃತಿ ಎಂಬ ಚೌಕಟ್ಟಿನೊಳಗೇ ನಿರಂತರವಾಗಿ ಬಂಧಿತವಾಗಿರುವುದಿಲ್ಲ. ಕಾಲಕಾಲಕ್ಕೆ ಅನಿವಾರ್ಯವಾಗಿಯಾದರೂ ಬದಲಾವಣೆಗೆ ಒಳಪಡುತ್ತಲೇ ಇರುತ್ತದೆ. ಬದಲಾಗುವ ಕಾಲಮಾನಕ್ಕೆ ಅನುಗುಣವಾಗಿ ತನ್ನನ್ನು ವಿಸ್ತರಿಸಿಕೊಳ್ಳುತ್ತಾ, ಹೊಂದಿಸಿಕೊಳ್ಳುತ್ತಾ ಜೀವಂತಿಕೆಯಿಂದಲೇ ಸಾಗುತ್ತದೆ. ಇಂತಹ ಬದಲಾವಣೆಗಳು ಅನಿವಾರ್ಯವೂ ಹೌದು. ಕೋಟ್ಯಂತರ ವರ್ಷಗಳ ಇತಿಹಾಸವನ್ನು ಗಮನಿಸಿದಾಗ, ವಿಕಾಸವಾದದ ಹಿನ್ನೆಲೆಯಲ್ಲಿ ಆಗಿರುವ ಪಲ್ಲಟಗಳ ಸಿಂಹಾವಲೋಕನ ವಿಶಿಷ್ಟಮಯವಾಗಿ ಕಂಡುಬರುತ್ತದೆ. ವಿಕಾಸವಾದದ ಹಿನ್ನೆಲೆಯಲ್ಲಿಯೇ ಸಾಮಾಜಿಕ ಪಲ್ಲಟಗಳು ಸಾಗಿಬಂದಿವೆ. ಸಾಮಾಜಿಕ ಪಲ್ಲಟಗಳಿಗೆ ಇಂತಹುದೇ ಪ್ರಮುಖ ಕಾರಣವೆಂದೇನೂ ಇಲ್ಲ. ವೈಜ್ಞಾನಿಕ ಪ್ರಗತಿ, ವಾಸ್ತವತೆ, ಸಮಾನತೆಯ ತತ್ವ , ಸ್ವಕೀಯದರ್ಶನ, ಅನ್ಯಜ್ಞಾನದರ್ಶನ, ಜನ ಸಂಸ್ಕೃತಿಯ ಆಶಯ ಹೀಗೆ ಹತ್ತು ಹಲವಾರು ಚಿಂತನೆಗಳಿಗೆ, ಸಂವೇದನೆಗಳಿಗೆ ಹಲವಾರು ಸಮುದಾಯಗಳು ಮಿಶ್ರ ಪ್ರತಿಕ್ರಿಯೆಯ ಮೂಲಕ ಸ್ಪಂದಿಸುತ್ತಲೇ ಬಂದಿವೆ. ಕಾಲದ ಪ್ರಭಾವ, ಒತ್ತಡಗಳು ಸಮುದಾಯದ ಮೇಲೆ ಬದಲಾವಣೆಯ ಅನಿವಾರ್ಯತೆಯನ್ನು ಒಡ್ಡಿದಾಗ ಸಂಸ್ಕೃತಿ ತನ್ನಷ್ಟಕ್ಕೆ ತಾನೇ ಸಾಮಾಜಿಕ ಸ್ಥಿತ್ಯಂತರಗಳಿಗೆ ಒಳಗಾಗುತ್ತದೆ.

# ಅಧ್ಯಾಯ ೪

# ಪೂರ್ಣಚಂದ್ರತೇಜಸ್ವಿ ಕಥನಗಳಲ್ಲಿ ಸ್ಥಿತ್ಯಂತರ

**ಶೀರ್ಷಿಕೆಯಲ್ಲಿನ (concept) ಪರಿಕಲ್ಪನೆ 'ಸ್ಥಿತ್ಯಂತರ' ಈ ಪದದ ಅರ್ಥವಿಶ್ಲೇಷಣೆ**

ಶಬ್ದಕೋಶದಲ್ಲಿ ಬೇರೆ ಬೇರೆ ಅರ್ಥಗಳಿವೆ. ಅದರಲ್ಲಿ ಪ್ರೊ ಜಿ ವೆಂಕಟಸುಬ್ಬಯ್ಯನವರ ಪ್ರಕಾರ ಬದಲಾವಣೆ: ಪರಿವರ್ತನೆ: ೧. (ಸಂಗೀತ) ಒಂದು ಸ್ವರ ಸ್ಥಾಯಿಯಿಂದ ಮತ್ತೊಂದಕ್ಕೆ ತಾತ್ಕಾಲಿಕವಾಗಿ ಬದಲಾಯಿಸುವುದು: ಸ್ಥಾಯಿವ್ಯತ್ಯಾಸ, ಬದಲಾವಣೆ ೩.(ಕಲೆ) ಒಂದು ಪದ್ಧತಿಯಿಂದ ಮತ್ತೊಂದಕ್ಕೆ ತಿರುಗುವುದು: ಬದಲಾವಣೆ[1] ಬದಲಾವಣೆ: ಪರಿವರ್ತನೆ: ಸಂಕ್ರಮಣ (ಕಾಲ), ಪರ್ವ (ಕಾಲ): ಸ್ಥಿತ್ಯಂತರ

**ಸ್ಥಿತ್ಯಂತರವೆಂದರೇನು**?; ಸ್ಥಿತ್ಯಂತರವೆಂದರೆ ಚಲನಶೀಲತೆ, ಸೃಜನಶೀಲತೆ. ಸ್ಥಿತಿಯಿಂದ ಸ್ಥಿತಿಗೆ ಬದಲಾವಣೆಯಾಗುವುದನ್ನು ಅಥವಾ ಶಾಬ್ಧಿಕವಾಗಿ ಸ್ಥಿತ್ಯಂತರ ಶಬ್ದನಿಷ್ಪತ್ತಿಯನ್ನು ಹೇಳಹೊರಟರೆ ಸ್ಥಿತಿಯಿಂದ ಎಂದರೆ ಈಗಿರುವ, ವರ್ತಮಾನದ, ವಾಸ್ತವದಿಂದ ಮತ್ತೊಂದು ಸ್ಥಿತಿಯನ್ನು, ಈಗಿಲ್ಲದ, ವರ್ತಮಾನದ ಸ್ಥಿತಿಗಿಂತ ಭಿನ್ನವಾದ ಸ್ಥಿತಿಯನ್ನು ಪಡೆದು ಕೊಳ್ಳುವುದು ಸ್ಥಿತ್ಯಂತರ. ಪ್ರಸ್ತುತ ಯಾವ ಪರಿಸ್ಥಿತಿಯಲ್ಲಿರುವುದೋ ಆ ಭೌತಿಕವಸ್ತು, ಅದಕ್ಕಿಂತ ಬೇರೆಯಾದ ಮತ್ತೊಂದು ವರ್ತಮಾನಕ್ಕೆ, ವಾಸ್ತವಕ್ಕೆ ನಮ್ಮ ಇಂದಿನ ವರ್ತಮಾನ ತೆರೆದು ಕೊಳ್ಳುವುದು. ಇರುವ ವರ್ತಮಾನವನ್ನೊಪ್ಪಿ ಮತ್ತೊಂದು ವಾಸ್ತವಕ್ಕೆ ಅಣಿಗೊಳ್ಳುವುದು ತೆರೆದುಕೊಳ್ಳುವುದೂ ಕೂಡಾ ಸ್ಥಿತ್ಯಂತರ/ಅವಸ್ಥಾಂತರವಾಗಬಹುದು. ಹಾಗೆಂದ ಮಾತ್ರಕ್ಕೆ ಸ್ಥಿತ್ಯಂತರವೆಂದರೆ ಹಿಂದೆ ಹೀಗಿರಲಿಲ್ಲ, ಇಂದೂ ಹೀಗಿಲ್ಲ ಅಂಥದ್ದೊಂದು ಸ್ಥಿತಿಯನ್ನು ಪಡೆದುಕೊಳ್ಳುವುದೆಂಬ ಅಥವಾ ಹೊಸದೊಂದು ಸ್ಥಿತಿಯನ್ನು ಪಡೆಯುವುದೆಂಬ ಅರ್ಥಕಲ್ಪನೆ ಖಂಡಿತವಾಗಿಯೂ ತಪ್ಪು. ಇಂದು ಹೀಗಿಲ್ಲ; ಇಂದಿಲ್ಲದ ಬೇರೊಂದು ಪರಿಸ್ಥಿತಿಯನ್ನು ತಲುಪುವುದೇ ಸ್ಥಿತ್ಯಂತರ.

ಯಾವುದೇ ಒಂದು ಸಮಾಜ, ತನ್ನ ಸಮುದಾಯ–ಸಂಸ್ಕೃತಿ ಎಂಬ ಚೌಕಟ್ಟಿನೊಳಗೇ ನಿರಂತರವಾಗಿ ಬಂಧಿತವಾಗಿರುವುದಿಲ್ಲ. ಕಾಲಕಾಲಕ್ಕೆ ಅನಿವಾರ್ಯವಾಗಿಯಾದರೂ ಬದಲಾವಣೆಗೆ ಒಳಪಡುತ್ತಲೇ ಇರುತ್ತದೆ. ಬದಲಾಗುವ ಕಾಲಮಾನಕ್ಕೆ ಅನುಗುಣವಾಗಿ ತನ್ನನ್ನು ವಿಸ್ತರಿಸಿಕೊಳ್ಳುತ್ತಾ, ಹೊಂದಿಸಿಕೊಳ್ಳುತ್ತಾ ಜೀವಂತಿಕೆಯಿಂದಲೇ ಸಾಗುತ್ತದೆ. ಇಂತಹ ಬದಲಾವಣೆಗಳು ಅನಿವಾರ್ಯವೂ ಹೌದು. ಕೋಟ್ಯಂತರ ವರ್ಷಗಳ ಇತಿಹಾಸವನ್ನು ಗಮನಿಸಿದಾಗ, ವಿಕಾಸವಾದದ ಹಿನ್ನೆಲೆಯಲ್ಲಿ ಆಗಿರುವ ಪಲ್ಲಟಗಳ ಸಿಂಹಾವಲೋಕನ ವಿಶಿಷ್ಟಮಯವಾಗಿ ಕಂಡುಬರುತ್ತದೆ. ವಿಕಾಸವಾದದ ಹಿನ್ನೆಲೆಯಲ್ಲಿಯೇ ಸಾಮಾಜಿಕ ಪಲ್ಲಟಗಳು ಸಾಗಿಬಂದಿವೆ. ಸಾಮಾಜಿಕ ಪಲ್ಲಟಗಳಿಗೆ ಇಂತಹುದೇ ಪ್ರಮುಖ ಕಾರಣವೆಂದೇನೂ ಇಲ್ಲ. ವೈಜ್ಞಾನಿಕ ಪ್ರಗತಿ, ವಾಸ್ತವತೆ, ಸಮಾನತೆಯ ತತ್ವ , ಸ್ವಕೀಯದರ್ಶನ, ಅನ್ಯಜ್ಞಾನದರ್ಶನ, ಜನ ಸಂಸ್ಕೃತಿಯ ಆಶಯ ಹೀಗೆ ಹತ್ತು ಹಲವಾರು ಚಿಂತನೆಗಳಿಗೆ, ಸಂವೇದನೆಗಳಿಗೆ ಹಲವಾರು ಸಮುದಾಯಗಳು ಮಿಶ್ರ ಪ್ರತಿಕ್ರಿಯೆಯ ಮೂಲಕ ಸ್ಪಂದಿಸುತ್ತಲೇ ಬಂದಿವೆ. ಕಾಲದ ಪ್ರಭಾವ, ಒತ್ತಡಗಳು ಸಮುದಾಯದ ಮೇಲೆ ಬದಲಾವಣೆಯ ಅನಿವಾರ್ಯತೆಯನ್ನು ಒಡ್ಡಿದಾಗ ಸಂಸ್ಕೃತಿ ತನ್ನಷ್ಟಕ್ಕೆ ತಾನೇ ಸಾಮಾಜಿಕ ಸ್ಥಿತ್ಯಂತರಗಳಿಗೆ ಒಳಗಾಗುತ್ತದೆ.

ಪ್ರಾಕೃತಿಕವಾಗಿ ಮನುಷ್ಯ ಚಿಂತನೆಯಲ್ಲಿ ಆಗುವ ಬದಲಾವಣೆಯನ್ನು ಗುರುತಿಸುವ ಈ ಕೆಳಗಿನ ಅಭಿಪ್ರಾಯವು ಸ್ಥಿತ್ಯಂತರದ ಪರಿಭಾಷೆಗೆ ಒಂದು ಸ್ಪಷ್ಟ ರೂಪ ಕೊಡುತ್ತದೆ.

> ಮಾರ್ಕ್ಸ್ ಮತ್ತು ಏಂಗೆಲ್ಸ್‌ರ ಅಭಿಪ್ರಾಯದಂತೆ-ಸಾಮಾಜಿಕ ಒತ್ತಡವು ಜಗತ್ತನ್ನು ಬದಲಾಯಿಸಬಲ್ಲದು. ಅದರ ಮೂಲಕ ಜಗತ್ತು ಅಭಿವೃದ್ಧಿಯನ್ನು ಸಾಧಿಸುತ್ತದೆ. ಅಭಿವೃದ್ಧಿಯೆಂದರೆ ಅದು ಕೇವಲ ಅರ್ಥಶಾಸ್ತ್ರ; ರಾಜಕಾರಣಕ್ಕೆ ಸಂಬಂಧಿಸಿದ್ದಲ್ಲ. ಅದರ ಮೂಲಕ ಸಂಸ್ಕೃತಿಯು ಬದಲಾಗುತ್ತದೆ. ಸಂಸ್ಕೃತಿಯು ಬದಲಾದಾಗ ಮನುಷ್ಯನ ಸ್ವಭಾವ ಮತ್ತು ಚಿಂತನೆಗಳಲ್ಲಿ ಬದಲಾವಣೆ ಕಾಣಿಸಿಕೊಳ್ಳುತ್ತದೆ. ಆಗ ನೈತಿಕತೆ ಮತ್ತು ಸೌಂದರ್ಯಾತ್ಮಕ ಮೌಲ್ಯಗಳಲ್ಲಿಯೂ ಬದಲಾವಣೆ ಕಾಣಿಸಿಕೊಳ್ಳುತ್ತದೆ.[2]

ಸಾಮಾಜಿಕ ಬದುಕಿನ ಈ ಏರಿಳಿತವನ್ನು ಸಮುದಾಯ ಒಮ್ಮೆಗೇ ಸ್ವೀಕರಿಸಿದೆ ಎನ್ನಲಾಗುವುದಿಲ್ಲ ಸ್ವೀಕರಣ ಮತ್ತು ಪ್ರತಿರೋಧಗಳು ಕಾಲ ಕಾಲಕ್ಕೆ ತಮ್ಮ ಇರುವಿಕೆಯನ್ನು ಸ್ಥಾಪಿಸುತ್ತಲೇ ಬಂದಿವೆ. ಇಂತಹ ಪಲ್ಲಟಗಳು ಸಮಾಜವನ್ನು, ಸಮುದಾಯದೊಂದಿಗೆ ಬೆಸೆಯುವ, ಅರ್ಥಪೂರ್ಣವಾಗಿ ಅನ್ವಯಿಸುವ ಪ್ರಕ್ರಿಯೆಯಲ್ಲಿ ತೊಡಗುತ್ತವೆ. ಸ್ವೀಕರಣ ಮತ್ತು ಪ್ರತಿರೋಧಗಳ ನಡುವೆ ಉಂಟಾಗುವ ಸಂಘರ್ಷಗಳಿಂದಾಗಿ ವ್ಯಕ್ತಿ ಮತ್ತು ಸಮುದಾಯ ಅನೇಕ ಬದಲಾವಣೆಗಳಿಗೆ ಒಳಗಾಗುತ್ತದೆ. ಸಂಘರ್ಷಗಳಿಂದ ಸ್ಥಿತ್ಯಂತರ ಉಂಟಾದಂತೆ ಸ್ಥಿತ್ಯಂತರಗಳಿಂದ ಸಂಘರ್ಷವು ತಲೆದೋರುತ್ತದೆ.

> ವ್ಯಕ್ತಿಯ ಆಂತರಿಕ ಮತ್ತು ಬಾಹ್ಯಾಕರ್ಷಗಳ ನಡುವೆ ಘಟಿಸುವ ತಾಕಲಾಟವನ್ನೇ ಸಾಂಸ್ಕೃತಿಕ ಸಂಘರ್ಷವೆಂದು ಮಾನವ ವಿಜ್ಞಾನಿಗಳು ಕರೆಯುತ್ತಾರೆ. ಇಲ್ಲಿ ವ್ಯಕ್ತಿ ಮತ್ತು ಸಮಾಜ ಏಕಕಾಲದಲ್ಲಿ ಪಾತ್ರ ನಿರ್ವಹಿಸುತ್ತವೆ. ಸಾಮಾನ್ಯವಾಗಿ ವ್ಯಕ್ತಿಯ ನಡವಳಿಕೆಯೇ ಹೆಚ್ಚಿನ ಪ್ರಮಾಣದಲ್ಲಿ ಅನುಮೋದನೆಯನ್ನು ಪಡೆದುಕೊಳ್ಳುತ್ತದೆ. ಇದು ವ್ಯಕ್ತಿ ತನ್ನ ವೈಯಕ್ತಿಕ ಆವರಣದಲ್ಲಿ ಕಾರ್ಯನಿರತನಾದಾಗ ಫಲಿಸುವಂಥದು. ಬಾಹ್ಯ ಸಂಗತಿ ವ್ಯಕ್ತಿಯಲ್ಲಿ ಸಮಾಜದ ಪ್ರತಿನಿಧಿಯಾದ್ದರಿಂದ ಅವನ ಶುದ್ಧಿಗೆ ಇದು ಪರೋಕ್ಷವಾಗಿ ಗಮನಕೊಡುವುದರಿಂದ ಇದರ ಪ್ರಮಾಣ ಬಹಳ ಕಡಿಮೆ. ಇದು ಮಾರ್ಕ್ಸವಾದಿ ವಿಚಾರಧಾರೆಗೆ ಹತ್ತಿರವಾದದ್ದು. ಅಂದರೆ, ವ್ಯಕ್ತಿ ತನ್ನ ಶಕ್ತಿಯನ್ನು ಸಮಾಜಕ್ಕಾಗಿ ವಿನಿಯೋಗಿಸುವುದು[3]

ಇದು ಕೂಡ ಸ್ಥಿತ್ಯಂತರಕ್ಕೆ ಹೊಂದಿಕೊಳ್ಳುವ ವ್ಯಾಖ್ಯೆಯನ್ನು ನೀಡುತ್ತದೆ.

ನಾಗರಿಕತೆ ದಿನೇ ದಿನೇ ಆಧುನೀಕರಣಗೊಂಡು ತನ್ನ ಸ್ವಂತಿಕೆ ಅಥವಾ ಸಹಜತೆಯನ್ನು ಉಳಿಕೊಳ್ಳುವ ದಿಶೆಯತ್ತ ಒಂದಡಿಯಿಟ್ಟರೆ, ನಾಗರಿಕರು ತಮ್ಮ ಜೀವನ ಹಾಗೂ ಜೀವನಾನುಭವಗಳ ಮೊತ್ತವನ್ನೆಲ್ಲಾ ಒತ್ತೆಯಿಟ್ಟು ಬೌದ್ಧಿಕತೆಯನ್ನು ವ್ಯಾಪಾರೀಕರಣಗೊಳಿಸುತ್ತಿರುವುದು ಮತ್ತೊಂಡು ಕಡೆ. ಹೀಗೆ ತಮ್ಮನ್ನು ತಾವೇ ತಮಗರಿವಿದ್ದಂತೆ; ಇಲ್ಲದಂತೆಯೇ ಆಧುನೀಕರಣಗೊಳ್ಳುತ್ತಿರುವ ನಾಗರಿಕರು ಎಲ್ಲೋ ಒಂದು ಕಡೆಯಲ್ಲಿ ದ್ವಂದ್ವ ಹಾಗೂ ಸಂಘರ್ಷಗಳನ್ನು ಅನುಭವಿಸುತ್ತಿರುತ್ತಾರೆ. ಇಂಥ ದ್ವಂದ್ವ-ಸಂಘರ್ಷಗಳು ಅವರನ್ನು ಯಾವುದೇ ದಿಸೆಯಲ್ಲಿಯೂ ಕೊಂಡೊಯ್ಯಬಹುದು: ಸಾಂದರ್ಭಿಕವಾಗಿ ಎದುರುಗೊಳ್ಳುವ ಸ್ಥಿತಿಯು ತಮಗೆ ಸರಿಯಿದೆಯೇ ಅಥವಾ ಇನ್ನೊಂದು ಸ್ಥಿತಿಯನ್ನು ವರ್ತಮಾನಕ್ಕೆ ಎಳೆದುಕೊಳ್ಳಬೇಕೆ ಎಂಬ ಸವಾಲು ಕೂಡ ಸಹಜವಾಗಿ ಆವಿರ್ಭವಿಸುತ್ತದೆ. ಅಂಥ ಸಂದರ್ಭಗಳಲ್ಲಿ ಅವರು ದ್ವಂದ್ವ ತುಮುಲಗಳಿಗೆ ಮುಖಾಮುಖಿಯಾಗಿ ಅದರಲ್ಲಿ ಯಾವುದೋ ಒಂದನ್ನು ತಮ್ಮ ವರ್ತಮಾನಕ್ಕೆ ಅಳವಡಿಸಿಕೊಳ್ಳುವುದು ಅನಿವಾರ್ಯವಾದಾಗ ಈಗಿರುವ ಸ್ಥಿತಿಯನ್ನೇ ಅವರು ಒಪ್ಪಿಕೊಂಡರೆ ಸಂಘರ್ಷವನ್ನು ಮಾತ್ರ ಎದುರಿಸುತ್ತಾರೆ. ಈಗಿರುವ

ಪರಿಸ್ಥಿತಿಯನ್ನು ಒಪ್ಪಿಕೊಳ್ಳಲಾರದೆ ಇನ್ನೊಂದನ್ನು ಅಳವಡಿಸಿಕೊಳ್ಳಬೇಕೆಂದು ಹೊರಟಾಗ ಅವರಲ್ಲಿ ಸಹಜವಾಗಿ ಸ್ಥಿತ್ಯಂತರವುಂತಾಗುತ್ತದೆ. ಇಂದಿನ ವಾಸ್ತವ ಸರಿಯಾಗದಿದ್ದಾಗ/ಅಸಮಾಧಾನಕ್ಕೀಡು ಮಾಡಿದಾಗ ಭೌತಿಕವಾಗಿರಲೀ, ಬೌದ್ಧಿಕವಾಗಿರಲಿ ಸ್ಥಿತ್ಯಂತರ ಉಂಟಾಗುತ್ತದೆ. ಇಂದಿನ ವಾಸ್ತವ ಸರಿಹೊಂದದೆ ಅಸಮಾಧಾನವುಂಟಾದಾಗ ಈಗಿರುವ ಸ್ಥಿತಿಯು ಅನಪೇಕ್ಷಿತವೆನಿಸುತ್ತದೆ.

**ಸ್ಥಿತ್ಯಂತರ: ಒಂದು ತರ್ಕಾತೀತ ವಾಸ್ತವದ ಅನಾವರಣ**

ಸ್ಥಿತ್ಯಂತರ ಮತ್ತು ಅದರ ವಿಭಿನ್ನ ನೆಲೆಗಳನ್ನು ದಾಟಿ ಮುಂದೆ ಸಾಗಿದಾಗ ಸ್ಥಿತ್ಯಂತರಕ್ಕೆ ಕಾರಣಗಳೇನುಂಬುದನ್ನು ವಿವೇಚಿಸುವುದು ಅನಿವಾರ್ಯವಾಗುತ್ತದೆ. ಸಾಮಾನ್ಯವಾಗಿ ಪ್ರತಿಯೊಂದಕ್ಕೂ ಕಾರ್ಯ–ಕಾರಣ ಭಾವದ ಸಂಬಂಧ ಇದ್ದೇ ಇರುತ್ತದೆ. ಹಾಗೆಯೇ ತರ್ಕ ದೃಷ್ಟಿಯಿಂದ ನೋಡಿದಾಗಲೂ ತರ್ಕಾತೀತ ದೃಷ್ಟಿಯಿಂದ ನೋಡಿದಾಗಲೂ ಸ್ಥಿತ್ಯಂತರಕ್ಕೆ ಸಂಘರ್ಷ, ಸವಾಲುಗಳು, ದ್ವಂದ್ವಗಳೇ ಕಾರಣವೆನ್ನಬಹುದು. ಏಕೆಂದರೆ ಸ್ಥಿತಿಯನ್ನಾದರೂ ಬೌದ್ಧಿಕತೆಯಿಂದ ಅಳೆಯಬಹುದು ಆದರೆ ಆ ಸ್ಥಿತಿಯಿಂದುಂಟಾಗಬಹುದಾದ ಮತ್ತೊಂದು ಸ್ಥಿತಿಯ ಅನಾವರಣ ಹೀಗೆಯೇ ಆಗುತ್ತದೆ ಎಂದು ತರ್ಕಿಸುವುದು ಅಥವಾ ಧೇನಿಸುವುದು ಖಂಡಿತವಾಗಿ ಅಸಾಧ್ಯ! ಸ್ಥಿತ್ಯಂತರವಾದ ಮೇಲೆ ಆ ಸ್ಥಿತಿಯನ್ನು ಸ್ವೀಕರಿಸಬಹುದು ಇಲ್ಲವೆ ನಿರಾಕರಿಸಬಹುದೇ ವಿನಾ ಅದು ಇಂಥದ್ದೇ ಕಾರಣದಿಂದ ಹೀಗೆಯೇ ಸಂಭವಿಸಬಹುದು ಎಂದು ವಿಶದೀಕರಿಸಲು ಸಾಧ್ಯವಿಲ್ಲ. ಆದ್ದರಿಂದಲೇ ಅದನ್ನು ತರ್ಕಾತೀತ ಎಂದು ಹೇಳಬಹುದು.

ಸ್ಥಿತ್ಯಂತರದ ಪರಿಭಾಷೆಯನ್ನು ಸಾಮಾನ್ಯವಾಗಿ ಗಮನಿಸಿದ ನಂತರ ಅದು ವಿಷಯದಿಂದ ವಿಷಯಾಂತರಗೊಂಡಂತೆ ತನ್ನಲ್ಲಿಯೇ ಸಣ್ಣ ಸಣ್ಣ ಬದಲಾವಣೆಗಳನ್ನು ತಂದುಕೊಳ್ಳುತ್ತದೆಯೆಂಬುದು ತಿಳಿದ ವಿಚಾರವೇ ಆಗಿದೆ. ಬದಲಾಗುತ್ತಿರುವ ಕಾಲ ಮತ್ತು ಸನ್ನಿವೇಶಗಳಲ್ಲಿ ಪರಿಸ್ಥಿತಿಗನುಗುಣವಾಗಿ ಭೌತವಸ್ತುವಿನಲ್ಲಿಯೂ ಅದೆಷ್ಟೋ ಆಯಾಮಗಳಲ್ಲಿ ತರತರಹದ ಬದಲಾವಣೆಗಳು ಆಗುತ್ತಿರುವುದನ್ನು ಕಾಣಬಹುದು. ಸನ್ನಿವೇಶಗಳು, ವಸ್ತುಗಳು, ವಿಷಯಗಳು ತಮ್ಮ ತಮ್ಮ ಸ್ಥಿತಿಗನುಗುಣವಾಗಿ ಸಹಜವಾದ ಬದಲಾವಣೆಗೆ ಮುಖಾಮುಖಿಯಾಗುತ್ತಿರುತ್ತವೆ. ಸಂಘರ್ಷದಂತೆಯೇ ಸ್ಥಿತ್ಯಂತರವನ್ನೂ ಕೂಡ ಮಾನವನ ವಿಚಾರದಲ್ಲಿ ಆಂತರಿಕ ಮತ್ತು ಬಾಹ್ಯವೆಂದು ಎರಡು ರೀತಿಗಳಲ್ಲಿ ವರ್ಗೀಕರಿಸಬಹುದು. ಸಮಾಜಕ್ಕೆ ಅಭಿಮುಖಿಯಾದ ಸ್ಥಿತ್ಯಂತರವನ್ನು ವೈಯಕ್ತಿಕ ಮತ್ತು ಸಾಮುದಾಯಿಕ ಎಂದು ವಿಭಜಿಸಬಹುದಾದರೂ ಸ್ಥಿತ್ಯಂತರವೆಂಬುದು ಯಾವುದೇ ಒಂದು ಸಮಾಜ–ಸಮುದಾಯ ಅಥವಾ ವ್ಯಕ್ತಿಯ ಭೌತಿಕ–ಬೌದ್ಧಿಕ ಪರಿಧಿಯ ಸೀಮಿತ ಚೌಕಟ್ಟಿನೊಳಗೆ ಬಂಧಿಯಾಗಲಾರದು. ಏಕೆಂದರೆ ಸ್ಥಿತ್ಯಂತರದ ವ್ಯಾಪ್ತಿ ಬಹು ವಿಶಾಲವಾದದ್ದು, ಚಲಿಸುವ ಸಮಯಚಕ್ರದ ಬದಲಾವಣೆಗೆ ಅಥವಾ ಪರಿವರ್ತನೆಯ ನಿಯಮಕ್ಕೆ ಒಳಪಟ್ಟ ಸಕಲ ಚರಾಚರ, ಜೀವ–ನಿರ್ಜೀವ ವಸ್ತುಗಳೆಲ್ಲದರ ಮೇಲೂ ತನ್ನ ಪರಿಣಾಮ ಬೀರುತ್ತದೆ. ಅದು ಪರಿಸ್ಥಿತಿಗನುಗುಣವಾಗಿ ಪರಿವರ್ತಿಸುತ್ತಿರಬೇಕಾದರೆ ಕೇವಲ ಭೌತಿಕ, ಬೌದ್ಧಿಕ, ಸಾಮಾಜಿಕ, ಸಾಂಸ್ಕೃತಿಕ ಎಂಬುದಾಗಿ ಸ್ಥಿತ್ಯಂತರವನ್ನು ವಿಭಜಿಸುವುದು ಕಷ್ಟಕರವಾಗುತ್ತದೆ. ಪೂರ್ಣಚಂದ್ರ ತೇಜಸ್ವಿ ಸಾಹಿತ್ಯ/ಸಂಕಥನವನ್ನು ಮಾನವ ಮತ್ತಾತನ ಸುತ್ತಲಿನ ಪರಿಸರದ ಸ್ಥಿತ್ಯಂತರವೆಂದು ಪರಿಗಣಿಸಿ ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ಎಂಬಿತ್ಯಾದಿಗಳನ್ನು ಭೌತಿಕದಲ್ಲಿಯೂ; ವಿಚಾರ, ಯೋಚನೆ, ಬುದ್ಧಿಮತ್ತೆ, ಸೃಜನಶೀಲತೆ

ಇತ್ಯಾದಿಗಳನ್ನು ಬೌದ್ಧಿಕ ಸ್ಥಿತ್ಯಂತರಗಳಲ್ಲಿ ಸೀಮಿತಗೊಳಿಸುತ್ತಾ ಲೇಖಕನ ಹಾಗೂ ಲೇಖನದ ಸ್ಥಿತ್ಯಂತರಗಳನ್ನು ಪ್ರಜ್ಞಾಪೂರ್ವಕವಾಗಿ ವಿಮರ್ಶಿಸುತ್ತಾ ಸಾಗಬಹುದು.

**ತೇಜಸ್ವಿ ಕಥನಗಳಲ್ಲಿ ಸ್ಥಿತ್ಯಂತರ : ವ್ಯೂಹಾತ್ಮಕ ವಿಶ್ವವ್ಯವಸ್ಥೆಯಲ್ಲಿ ಸ್ಥಿತಿಸಂಕ್ರಮಣ.**

ತೇಜಸ್ವಿ ಕಥನಗಳಲ್ಲಿ ಸ್ಥಿತ್ಯಂತರಗಳನ್ನು ಕಾಣುವುದಕ್ಕೂ ಮೊದಲು ಅವರ ವೈಯಕ್ತಿಕ ಹಾಗೂ ಬೌದ್ಧಿಕ ವಿಚಾರಲಹರಿಯಲ್ಲುಂಟಾದ ಪಲ್ಲಟಗಳನ್ನು ಕುರಿತು ವಿಶ್ಲೇಷಿಸಬಹುದು. ನವ್ಯಕಾಲದ ಉದಯೋನ್ಮುಖ ಕಾಲದಲ್ಲಿ ಬರವಣಿಗೆಯಲ್ಲಿ ತೊಡಗಿಕೊಂಡರೂ ನಿರ್ದಿಷ್ಟ ಕಾಲಮಾನದಲ್ಲಿನ ಸೃಜನಶೀಲವಾದ ಬರವಣಿಗೆ ಮತ್ತು ಚಿಂತನೆಗಳು ಇತರೆಲ್ಲರಿಗಿಂತಲೂ ವಿಭಿನ್ನವಾದ ಆಯಾಮಗಳನ್ನು ತೆರೆದುತೋರುತ್ತವೆ. ಮೈಸೂರಿನಂತಹ ನಗರ ಪರಿಸರದಲ್ಲಿ ವಿದ್ಯಾಭ್ಯಾಸವನ್ನು ಪೂರೈಸಿಯೂ ಅಲ್ಲಿಯೇ ನೆಲೆನಿಲ್ಲದೆ ಗ್ರಾಮೀಣಾಭಿಮುಖಿಯಾಗಿ ಹೊರಟು ಪ್ರಭಾವಿತ ತತ್ವಗಳನ್ನು ಪ್ರಯೋಗಕ್ಕೆ ಒಳಪಡಿಸಿದ್ದು ಮೂಡಿಗೆರೆಯ ಸೀಮಿತ ಪರಿಧಿಯಲ್ಲಿ. ಬದುಕಿನ ಪಾಠಗಳು ವಿಶ್ವರಹಸ್ಯವನ್ನು ಬೆರಗುಗಣ್ಣಿನಿಂದ ವೀಕ್ಷಿಸುವುದನ್ನು ಮಾತ್ರ ಕಲಿಸದೆ, ಬಹುಮುಖಿಯಾದ ಚಲನಾತ್ಮಕತೆಯನ್ನು ಅವಲೋಕಿಸಲು, ಸಾರಸಂಗ್ರಹವನ್ನು ಭಾಷಾಮಾಧ್ಯಮಕ್ಕೆ ಅಳವಡಿಸಲು, ಜೈವಿಕವ್ಯವಸ್ಥೆಯ ರಚನಾವ್ಯೂಹವನ್ನು ವಿಸ್ಮಯದಿಂದ ವೀಕ್ಷಿಸಲು ಅನುವುಮಾಡಿಕೊಟ್ಟಿತು. ವೀಕ್ಷಣೆ ಅನುಭವಕ್ಕೆ ಪ್ರಾಧಾನ್ಯತೆ ನೀಡಿತು. ಅನುಭದ್ರವ್ಯವೇ ಅಭಿವ್ಯಕ್ತಿಯ ಕ್ರಮವಾಯಿತು.

ತೇಜಸ್ವಿಯವರು ಪರಿಸರವೆಂಬುದನ್ನು ಕೇವಲ ಭಾಷಣಗಳ ಸಿದ್ಧವಸ್ತುವನ್ನಾಗಿಸದೇ ತಮ್ಮ ದಿನನಿತ್ಯದ ಚಟುವಟಿಕೆಗಳನ್ನು ಪರಿಸರದ ಮಡಿಲಿನಲ್ಲಿಯೇ ಮಾಡುತ್ತಾ ಮಾತು ಮತ್ತು ಕಾರ್ಯಗಳೆರಡರಲ್ಲೂ ಪರಿಸರದ ಕಾಳಜಿಯನ್ನು ಮತ್ತದರೆಡೆಗೆ ನಿಷ್ಠೆಯನ್ನೂ ತೋರಿಸಿದವರು. ಮತ್ತೊಬ್ಬರ ಅನುಭವದಿಂದ ಪ್ರೇರಿತರಾಗಿ ಸಾಹಿತ್ಯ ಕೃಷಿ ನಡೆಸುವುದಕ್ಕೂ ಸ್ವಂತ ಅನುಭವದಿಂದ ಸಾಹಿತ್ಯ ಕೃಷಿ ನಡೆಸುವುದಕ್ಕೂ ಬಹು ವ್ಯತ್ಯಾಸವಿದೆ. ಆದ್ದರಿಂದಲೇ ಪುಟ್ಟ ಪುಟ್ಟ ಮಂಜಿನ ಹನಿಯಿಂದ ಹಿಡಿದು ಮೀನು, ಹಾರುವ ಓತಿಯವರೆಗೂ ಕಥನಕ್ಕೆ ವಸ್ತುವಾಗಿದ್ದು. ನವ್ಯ ಸಾಹಿತ್ಯವು ಉಛ್ರಾಯ ಸ್ಥಿತಿಯಲ್ಲಿದ್ದ ಕಾಲದಲ್ಲಿ ನವ್ಯಕಥೆಗಾರರ ಆತ್ಮಾವಲೋಕನ–ಸ್ವವಿಮರ್ಶೆಯಂಥ ವಿಚಾರಗಳು ತೇಜಸ್ವಿಯವರಿಗೆ ಅಪ್ರಸ್ತುತವೆನಿಸಿ 'ಮಾನವಾತೀತವೂ ಪ್ರಪಂಚವೇ' ಎಂದೆನಿಸಿತು. ಕಥಾ ವಿಷಯಗಳನ್ನು, ವಸ್ತುಗಳನ್ನು ಕೇವಲ ಮಾನವನಿಗಷ್ಟೇ ಸೀಮಿತಗೊಗೊಳಿಸದೇ ಪರಿಸರ, ಮೀನು, ಹಾವು, ಹಕ್ಕಿಯಂಥ ವಿಚಾರಗಳನ್ನು ಕಥೆಗಳ ವಸ್ತುಗಳನ್ನಾಗಿಸಿದರು. ಅನುಭವ ನವ್ಯತೆಯಿಂದ ಮತ್ತೊಂದರೆಡೆಗೆ ಹೊಸ ವಾಸ್ತವಕ್ಕೆ ತೆರೆದುಕೊಂಡಂತಾದರೆ ಅದನ್ನು ಮಹತ್ತರವಾದ ಸ್ಥಿತಿಸಂಕ್ರಮಣವೆಂದೇ ಗುರುತಿಸಬಹುದು.

ಸೃಷ್ಟಿಪ್ರಕ್ರಿಯೆಯ ಅನಂತತೆಯಲ್ಲಿ ಮಾನವನೂ ಒಬ್ಬ ಜೀವಿ ಮಾತ್ರ. ಮಾನವ ಮಾತ್ರವಲ್ಲದೆ ಅನೇಕಾನೇಕ ಜೀವಿಗಳು ಈ ಪ್ರಕೃತಿಯಲ್ಲಿವೆ. ಪ್ರಕೃತಿ ಮಾನವನಿಂದಾದದ್ದಲ್ಲ; ಪ್ರಕೃತಿಯಿಂದ ಮಾನವ ಎಂಬ ತತ್ವವನ್ನು ಒಪ್ಪಿಕೊಂಡುದರಿಂದಲೇ, ಅರ್ಥೈಸಿಕೊಂಡದ್ದರಿಂದಲೇ ಪ್ರಕೃತಿಯ ಸೂಕ್ಷ್ಮಾತಿಸೂಕ್ಷ್ಮವಾದ ಜೀವಜಂತುಗಳೂ ಕೂಡಾ ತೇಜಸ್ವಿಕಥನಗಳಲ್ಲಿ ಜಾಗಗಿಟ್ಟಿಸಿದ್ದು. ಇದೂ ಕೂಡಾ ಅಸಂಗತ ವ್ಯವಸ್ಥೆಯಲ್ಲಿ ಪ್ರತಿಯೊಬ್ಬ ಮಾನವನೂ ಸ್ವಾರ್ಥಿಯಾಗಿ ತನ್ನ ಬಗ್ಗೆ ಚಿಂತಿಸುತ್ತಾ, ಪ್ರಕೃತಿನಾಶದ ಜೊತೆಯಲ್ಲಿ ತನ್ನ ಸರ್ವನಾಶವನ್ನೂ ಮೈಮೇಲೆಳೆದುಕೊಳ್ಳುವ ಸಂದರ್ಭದಲ್ಲಿ ತೇಜಸ್ವಿಯವರ ಬೌದ್ಧಿಕತೆಯಲ್ಲಿ ಮತ್ತವರ ನಿಲುವಿನಲ್ಲಾದ ಮಾರ್ಪಾಡುಗಳು

ಎನ್ನಬಹುದು. ಪಟ್ಟಣದ ಜೀವನದಿಂದ ಹಳ್ಳಿಯ ರೈತಜೀವನದ ಸ್ಥಿತ್ಯಂತರವನ್ನೊಪ್ಪಿದಾಗ ಅಥವಾ ಬೇಕೆಂದೇ ಅದನ್ನಾಯ್ದುಕೊಂಡಾಗಿನ ಸಂದರ್ಭಗಳಲ್ಲಿ ಪ್ರಕೃತಿಯ ನೋಟ ಬೇರೆಯದೇ ಸ್ವರೂಪದಲ್ಲಿತ್ತು. ನಿರಂತರ ಸೃಷ್ಟಿಯ ಪ್ರಕೃತಿ; ಅದರ ಮಡಿಲಲ್ಲಿ ಪ್ರತಿಯೊಂದೂ ಮುಖ್ಯವೇ ಎಂದು, ಮಾನವರನ್ನು ಬಿಟ್ಟು ಉಳಿದ ಜೀವಿಗಳ ಪ್ರಾಮುಖ್ಯತೆಯನ್ನು ಒಪ್ಪಿಕೊಂಡು ಅದನ್ನು ತನ್ನ ಸಂವೇದನೆಗಳಷ್ಟೇ ಮುಖ್ಯವೆಂದು ಸಾಹಿತ್ಯಾತ್ಮಕವಾಗಿ ತೊಡಗಿಸಿಕೊಂಡಾಗ ಅದು ಬದುಕಿನ ಶೋಧನೆಯ ಅಂಗವಾಗಿ ಸೇರ್ಪಡೆಯಾಯಿತು. ಶೋಧನೆಯ ಆಳಕ್ಕಿಳಿದಂತೆಲ್ಲಾ ಮನುಷ್ಯ ಸಮಾಜದ ದುರವಸ್ಥೆಗಳನ್ನು, ಮಾನವ ಮಾನವೀಯತೆಯನ್ನು ಕಳೆದುಕೊಂಡಾಗ ಉಂಟಾಗುವ ಸಮಸ್ಯೆಗಳನ್ನು ವಿಷಾದದಿಂದ ನೋಡುತ್ತಾ ಅದನ್ನು ವಿಡಂಬನಾತ್ಮಕವಾಗಿ ಪ್ರಚುರಪಡಿಸಿದರೆಂದರೆ ಅದು ಆ ಕಾಲಘಟ್ಟದ ಮಹತ್ತರ ಬದಲಾವಣೆಯೇ ಸರಿ. ಈ ಪರಿವರ್ತನೆಯ ಫಲವಾಗಿ ವಿಶ್ವವಿದ್ಯಾಲಯದ ಪುಸ್ತಕದ ಓದು ಮತ್ತು ಜ್ಞಾನಕ್ಕಿಂತ ನಿಜಜೀವನದ ಸಂಗತಿಗಳ ಪ್ರಾಮುಖ್ಯೀಕರಣವೂ ಸಾಹಿತ್ಯದ ಮುಖೇನ ಮಹತ್ವಪಡೆಯಿತು.

ನವ್ಯಸಾಹಿತ್ಯಧೋರಣೆಯ ಸಾಹಿತ್ಯ ಕಲಾಪ್ರಕಾರವನ್ನು ಬದಿಗೊತ್ತಿ ಅದರ ಸೀಮಿತತೆ ಮತ್ತು ಸ್ವಕೇಂದ್ರಿತ ಸಾಹಿತ್ಯ ಮೇರೆ ಮೀರಿ ಅದರಾಚೆಯ ಜಗತ್ತಿನ ವ್ಯಾಪ್ತಿ ಮತ್ತು ವಿಸ್ತೀರ್ಣವನ್ನಳೆಯುವಂತೆ ತೇಜಸ್ವಿಯವರ ನಂತರದ ಕಥೆಗಳು ಮೈದಳೆದಿವೆ. ಇಂಥ ಕಥೆಗಳಲ್ಲಿ ಬಂದ ಮುಗ್ಧ ಹಾಗೂ ಅನಕ್ಷರಸ್ಥ ಪಾತ್ರಗಳಾದ ಅವನತಿಯ ಸೂರಾಚಾರಿ, ಅಬಚೂರಿನ ಪೋಸ್ಟಾಫೀಸಿನ ಬೋಬಣ್ಣ ಮತ್ತು ಇತರ ಕಥೆಗಳಲ್ಲಿನ ಯಂಗ್ಟ, ತಬರ, ಚೀಂಕ್ರಮೇಸ್ತ್ರಿ, ಮಂದಣ್ಣ ಇವು ಕೇವಲ ನವ್ಯಧೋರಣೆಯ ನಿರಾಕರಣೆಯ ಪ್ರತೀಕ ಮಾತ್ರವೆಂಬಂತೆ ಬಂದವಲ್ಲ. ಬದಲಾಗಿ ಜೀವನಾನುಭವದಿಂದ ಬಂದವು.

## ೪.೧ ತನಗೆ ತಾನೇ ಪರಕೀಯನಾಗುವ ಮಾನಸಿಕ ಹಿಂಸೆ

ಮಾನವರೆಷ್ಟೇ ಬುದ್ಧಿವಂತರೆಂದುಕೊಂಡರೂ ಪ್ರಕೃತಿಯೆದುರಿಗೆ ಅವರಾಟವೇನೂ ನಡೆಯದು. ಪ್ರಕೃತಿಸೃಷ್ಟಿಯ ಅನಂತತೆ, ಅಗಾಧತೆಯಲ್ಲಿ ಅನಂತಾನಂತ ಜೀವಿಗಳು ಬಂದು ಹೋಗಿವೆ. ಅಂಥ ಜೀವರಾಶಿಯ ವ್ಯೂಹದೊಳಗೆ ಒಂದಾದ ಜಂತುಗಳು ಮಾನವರು. ಅವರು ತಮ್ಮ ಬುದ್ಧಿಶಕ್ತಿಯಿಂದ ಕಾರ್ಯಕಾರಣ ಭಾವಗಳ ಚಿಂತನೆಯಿಂದ ಪ್ರಕೃತಿಯನ್ನು ಅದೆಷ್ಟೇ ಅರ್ಥಮಾಡಿಕೊಳ್ಳ ಬಯಸಿದರೂ, ದೃಗ್ಗೋಚರವಾದದ್ದನ್ನೇ ಅರ್ಥೈಸಿಕೊಳಲಾಗದೇ ತೊಳಲಾಡುತ್ತಾ ಇಡೀ ಸೃಷ್ಟಿಸಂರಚನೆಯನ್ನೇ ಅಳೆದು ತೂಗಿಬಿಡುವೆನೆಂದು ಹೊರಟರೂ 'ತಾವು' ಯಾರು, ತಾವೇಕಿಲ್ಲಿದ್ದೇವೆ, ತಮ್ಮಿಂದೇನು ಸಾಧ್ಯ ಎಂದು ಚಂಚಲರಾಗಿ ಯೋಚಿಸುತ್ತಲೇ ಇರುತ್ತಾರೆ. ಹಾಗೆ ಇದರಿಂದ ಹೊರಬಂದು ಜಗತ್ತಿನಲ್ಲಿ, ತಮ್ಮ ಸ್ಥಿತಿಯೇನು ಎಂದು ಎಷ್ಟೇ ಮೂಲವನ್ನರಸುತ್ತಾ ಹೊರಟರೂ, ಬುದ್ಧಿಜೀವಿಗಳ ನಡುವಿದ್ದು [ಅಕಾಡೆಮಿಕ್] ಜಗತ್ತಿನಲ್ಲಿ ಸ್ಥಾನಮಾನಗಳನ್ನು ಅರಸುತ್ತಾ ಇದ್ದರೂ ಅದಕ್ಕೊಂದು ಕೊನೆಯೆಂಬುದಿದೆ ಎಂದು ತಿಳಿದಾಗ, ಮೃತ್ಯುಭಯವು ಅವರನ್ನಾವರಿಸುತ್ತದೆ. ಅಸ್ತಿತ್ವವಾದವಿರಲಿ, ನಾಸ್ತಿಕವಾದವಿರಲಿ, ಇತ್ಯಾತ್ಮಕತೆಯಿರಲಿ, ಮಾನವನಲ್ಲಿ ವಯಸ್ಸು ಕಳೆದಂತೆ, ಬುದ್ಧಿಬೆಳೆದಂತೆ, ತಾನುಮಾಡಿದ್ದು ಏನೆಂಬುದು ಕಣ್ಣೆದುರಿಗೇ ಗೋಚರಿಸುತ್ತಾ ಹೋದಂತೆ, ಅನುಭವಗಳು ಆತನನ್ನಾವರಿಸಿದಂತೆ ಅವರಿಗೆ ತಮ್ಮ ಅಸ್ತಿತ್ವದ, ತಾವು ಮಾಡಿದ ಕಾರ್ಯಗಳ ಫಲಾಫಲಗಳು ಗೋಚರಿಸುತ್ತವೆ.

ಅನುಭವಗಳು ಭಿನ್ನವಾಗುತ್ತಾ ಸಾಗಿದಂತೆ ಜೀವನ ಮತ್ತು ಜೀವನಾನುಭವಗಳ ವಿಚಾರದಲ್ಲಿ ವ್ಯಕ್ತಿಯ ಧೋರಣೆಗಳು ಬದಲಾಗುತ್ತವೆ. ಪ್ರತಿಯೊಂದೂ ವ್ಯರ್ಥ; ಸಾವು, ನಿರಾಶೆ, ದುರಂತಗಳೇ ಮುಂದಿನ ಜೀವನದಲ್ಲಿವೆ ಎಂಬ ನಿರ್ಧಾರಕ್ಕೆ ಬಂದರೆ ಎಲ್ಲಾ ಗೋಜಲು ಗೋಜಲುಮಯವೇ, ಸಂಘರ್ಷವೇ, ತೊಳಲಾಟವೇ, ದ್ವಂದ್ವವೇ. ಜೀವನದ ಬಗೆಗೆ ಯಾವ ಚಿಂತೆಯಿಲ್ಲದ ಮನುಷ್ಯರು ಹೀಗೆ ಅನುಭವಗಳನ್ನರಸಿ ಅದರ ಅರಸರಾಗಬೇಕೆಂದು ಸ್ಥಿತ್ಯಂತರಗೊಳ್ಳುತ್ತಾರೆ. ವಾಸ್ತವವಾಗಿ ಅವರ ಮೂಲ ವ್ಯಕ್ತಿತ್ವವು ಹಾಗಿಲ್ಲವಾದರೂ ವರ್ತಮಾನಮುಖಿಯಾಗಿ ಅವರು ನಾನಾ ಜಂಜಾಟಗಳಿಂದ ಬಚಾವಾಗಲು ಹೀಗೆ ಬದಲಾಗುತ್ತಲೇ ಬಂದಿದ್ದಾರೆ. ಬದಲಾವಣೆ ಆಂತರ್ಯದಲ್ಲಿ ಘಟಿಸದೇ ಹೋದಾಗ ಕೆಲವು ಒಡೆದ ವ್ಯಕ್ತಿತ್ವಗಳ ವ್ಯಕ್ತಿಗಳಾಗಿ ಮಾರ್ಪಡುತ್ತಾರೆ. ಇಂಥ ವ್ಯಕ್ತಿಗಳ ವ್ಯಕ್ತಿತ್ವ ಚಿತ್ರಣವೇ 'ಸ್ವರೂಪ' ಹಾಗೂ 'ನಿಗೂಢ ಮನುಷ್ಯರು' ಎಂಬ ಕಿರುಕಾದಂಬರಿಗಳಲ್ಲಿ ಕಂಡುಬರುವುದು. ಇವು ನವ್ಯಧೋರಣೆಯ ಕಥಾನಕಗಳು. ಈ ಕಥಾ ಹಂದರದಲ್ಲಿ ಬರುವುದೆಲ್ಲವೂ ಹೆಚ್ಚಿನದಾಗಿ ಸ್ವವಿಮರ್ಶೆಗಳಾದರೂ ಈ ಮೊದಲಿನ 'ಲಿಂಗಬಂದ' ಇತರ ಕಥೆಗಳಿಗಿಂತ ಭಿನ್ನವಾದ ಆಲೋಚನಾಗ್ರಹಿಕೆ ಕಾಣಬರುತ್ತದೆ. 'ಉರ್ವಶಿ', 'ಹುಲಿಯೂರಿನ ಸರಹದ್ದು' ಇವುಗಳೂ ನವ್ಯಪ್ರಕಾರಗಳಲ್ಲಿಯೇ ಬರೆದವು ಆದರೂ ಕೂಡಾ ಜಗತ್ತನ್ನೇ ಬೆರಗುಗಣ್ಣಿನಿಂದ ನೋಡುವ ದೃಷ್ಟಿಯಿದೆ. ಮನುಷ್ಯನ ವ್ಯಾಪ್ತಿಯಾಚೆಗೂ ನೂರಾರು ವಿಷಯಗಳಿವೆಯೆಂಬುದನ್ನು ಮನದಟ್ಟು ಮಾಡಿಸುತ್ತದೆ. ಮನುಷ್ಯನ ಕ್ರಿಯಾಶಕ್ತಿ ಮತ್ತು ಇಚ್ಚಾಶಕ್ತಿಗಳು ಪ್ರಕೃತಿಯ ಇಚ್ಚಾಶಕ್ತಿಯೆದುರು ಏನೂ ಅಲ್ಲ; ಪ್ರಕೃತಿ ತನ್ನ ನಿಗೂಢ ರಹಸ್ಯಗಳನ್ನು ಬಯಲು ಮಾಡದು ಎಂದು ನವ್ಯಧಾಟಿಯಲ್ಲಿಗೆ ಸ್ಥಿತ್ಯಂತರಗೊಳ್ಳುತ್ತದೆ ಲೇಖಕರ ಶೈಲಿ. ಇಂಥ ಶೈಲಿಯಲ್ಲಿ ಮೂಡಿಬಂದವು 'ಸ್ವರೂಪ'ದ ಶ್ರೀನಿವಾಸ, 'ನಿಗೂಢ ಮನುಷ್ಯರು' ಜಗನ್ನಾಥ, ಗೋಪಾಲಯ್ಯ, 'ಹುಲಿಯೂರಿನ ಸರಹದ್ದು'

ಕಥೆಯ ಸೋಮ, 'ಉರ್ವಶಿ'ಯ ಸೋಮ ಇಂಥ ಪಾತ್ರಗಳು ಅಸ್ತಿತ್ವವಾದದ' ಹಿನ್ನೆಲೆಯಲ್ಲಿ ಅನುಭವವನ್ನರಸಿ ಹೊರಟಂಥವು. ಇಂತಹ ಹೋರಾಟದ ಪ್ರಕ್ರಿಯೆ 'ಲಿಂಗ ಬಂದ ಕಥೆಯಲ್ಲೇ ತೆರೆಕಾಣುತ್ತದೆ ಮತ್ತು ಅದು ಇಂದಿಗೂ ಅಂತ್ಯ ಕಂಡಿಲ್ಲ. ಹುಲಿಯೂರಿನ ಸರಹದ್ದು ಕಥೆಯ ಸೋಮ, ಸ್ವರೂಪದ ಶ್ರೀನಿವಾಸ, 'ನಿಗೂಢಮನುಷ್ಯರು' ಗೋಪಾಲಯ್ಯ ಸೋಮ ಇವರುಗಳು ಮಾತ್ರ ಹೋರಾಟದ ಪ್ರಕ್ರಿಯೆಗೆ ತೀವ್ರತರವಾಗಿ ಸ್ಪಂದಿಸುವವರು.

ನಿರೂಪಕ ಎಂ ಡಿ ಶ್ರೀನಿವಾಸ 'ಅನೇಕ ದಿನಗಳಿಂದ ನನ್ನನ್ನು ಬೆಂಬತ್ತುತ್ತಿರುವ ಈ ಮೌನದಿಂದ ಕೆಲವು ಕ್ಷಣಗಳಾದರೂ ಬಿಡಗಡೆ ಆಗುತ್ತೇನೆ' ಎಂದು ನುಡಿಯುತ್ತಾ ಭೂತಕಾಲ ಘಟನೆಗಳನ್ನು ಒಂದೊಂದಾಗಿ ಪರಾಮರ್ಶೆಗೆ ಒಡ್ಡುತ್ತಾನೆ. ವಿದ್ಯಾರ್ಥಿ ಜೀವನದಿಂದ ಸಾಹಿತಿಯಾಗಿ, ಸಾಹಿತ್ಯ ರಚನೆಯಿಂದ, ಕೃಷಿಕನಾಗಿ ಸ್ಥಿತ್ಯಂತರಗೊಂಡಿರುವುದಕ್ಕೆ ಹತ್ತುಹಲವು ನಿದರ್ಶನಗಳನ್ನು ಸಾದ್ಯಂತವಾಗಿ ವಿವರಿಸುತ್ತಾನೆ. ಸಹಪಾಠಿ ಮಿತ್ರರಂತೆ ಬರೆವಣಿಗೆಯನ್ನು ನೆಚ್ಚಿಕೊಳ್ಳಲು ಇಷ್ಟವಾಗಿರದಿದ್ದುದೇ, ಅಂಗಾಡಿ ಗ್ರಾಮಕ್ಕೆ ಚಿಕ್ಕಪ್ಪನ ಆಸ್ತಿಯ ವಾರಸುದಾರನಾಗಿ ಬಂದಿರುವುದಕ್ಕೆ ಕಾರಣವೆನ್ನುವ ಶ್ರೀನಿವಾಸ ಭೌತಿಕ-ಬೌದ್ಧಿಕ ಸ್ಥಿತ್ಯಂತರಗಳೆರಡನ್ನೂ ಏಕೀಕರಣಗೊಳಿಸುತ್ತಾನೆ. ನಗರದಿಂದ ಮಲೆನಾಡಿನ ಗವಿಗುಡ್ಡಕ್ಕೆ ಭೌತಿಕವಾಗಿ ವಲಸೆ ಬಂದದ್ದಾದರೂ ತನ್ನಲ್ಲಾದ ಅನೇಕ ಬದಲಾವಣೆಗಳನ್ನು ಹೊಸ ತಿಳಿವಿನೊಂದಿಗೆ ಅವಲೋಕಿಸುವುದು ಪ್ರಮುಖವಾಗುತ್ತದೆ.

ಶ್ರೀನಿವಾಸನೇ ಹೇಳುವಂತೆ ಎಲ್ಲಕ್ಕಿಂತ ಮಿಗಿಲಾಗಿ ಕೇವಲ ಭೂಮಿಗಾಗಿ ಅಗೌರವಯುತವಾದ ನಡವಳಿಕೆಗೆ ಅಸಭ್ಯವಾದ ವ್ಯವಹಾರಗಳು ನನಗೆ ಹಿಡಿಸದು ಎನ್ನುವ ಈ ಮಾತು ನಿಜ. ಗೌರವ-ಘನತೆಯ ಸದುದ್ದೇಶವೇ ಜೀವನದ ಅನೇಕವಾದಗಳಿಂದ ನಗರದಿಂದ ಮಲೆನಾಡಿನ ಗವಿಗುಡ್ಡಕ್ಕೆ ಸ್ಥಳಾಂತರಗೊಳ್ಳಲು ಕಾರಣ. ಚಿಕ್ಕಪ್ಪನಿಗೆ ಸಂಬಂಧಿಸಿದ್ದ ಆಸ್ತಿಯ ಮೇಲಿನ ವಾರಸುದಾರಿಕೆ ಮಾತ್ರವಲ್ಲ ಜೀವನ ಜಂಜಾಟಗಳಿಂದ ಬೇಸತ್ತು-ಬರವಣಿಗೆಯನ್ನೂ ಮಾಡಲಿಚ್ಛಿಸದೆ ಕೃಷಿಭೂಮಿಗೆ ಒಡೆಯನಾಗಲು ಬಂದಿರುವುದನ್ನು ಸ್ಪಷ್ಟಪಡಿಸುತ್ತಾನೆ.

ವ್ಯಕ್ತಿ ತನ್ನ ಬದುಕಿನಲ್ಲಿ ಎಂತಹುದೇ, ಎಷ್ಟೇ ಕಾರ್ಯಗಳಿಂದ ನಿವೃತ್ತಿ ಪಡೆದರೂ ಬದುಕುವ ಜೀವಿಸುವ ಕಾರ್ಯದಿಂದ ನಿವೃತ್ತಿ ಪಡೆಯಲಾಗುವುದಿಲ್ಲ. ಬದುಕಲೇಬೇಕು; ಅಂತೆಯೇ ಉಳಿದೆಲ್ಲವು ಸಾರಹೀನ, ಸತ್ವಹೀನವಾದಂತೆ ತೋರಿದಾಗ ಅವುಗಳನ್ನು ಬಿಟ್ಟರೂ ಬದುಕಿನ ವೃತ್ತಿಯಾಗಿ ಇನ್ನಾವುದನ್ನೋ ಹುಡುಕಿ ಹಿಡಿದುಕೊಳ್ಳುವುದು ಅನಿವಾರ್ಯ. ನಿರೂಪಕನೇ ಹೇಳುವಂತೆ ಅಸಾಧ್ಯವಾದ ಎಷ್ಟೋ ವಿಷಯಗಳನ್ನು ಅವು ಹಾಗೆಯೇ ಇರುವಂತೆ ಆರೋಪಿಸಿ ಅದರಿಂದ ತನ್ನ ಗೌರವವನ್ನು ಹೆಚ್ಚಿಸಿಕೊಳ್ಳುವುದು ಮನುಷ್ಯ ಸ್ವಭಾವ. ಉಳಿದೆಲ್ಲ ವಿಚಾರಗಳಲ್ಲಿ ಆದರ್ಶ-ತತ್ವಚಿಂತನೆ-ಸಿದ್ಧಾಂತಗಳೆಂದು ಅವುಗಳನ್ನು ಸಾಧಿಸ ಹೊರಡುವವರಲ್ಲಿ ತಮ್ಮದೇ ವಿಚಾರದಲ್ಲಿ ತಮ್ಮ ಘನತೆಯನ್ನು ಹೆಚ್ಚಿಸುವಂಥದ್ದಾದರೆ ತತ್ವಸಿದ್ಧಾಂತಗಳನ್ನೆಲ್ಲ ಬಿಟ್ಟು ಘನತೆಯನ್ನು ಏಕದೃಷ್ಟಿಯಿಂದ ನೋಡಿ ವೀಕ್ಷಿಸುತ್ತಾ ಉಳಿದವುಗಳನ್ನು ಅಲಕ್ಷಿಸುವ ಪರಿಪಾಠ ಅಪ್ರಜ್ಞಾಪೂರ್ವಕವಾಗಿ ಬೆಳೆದುಬಿಡುತ್ತದೆ. ಅಂತಹುದೇ ಅಪ್ರಜ್ಞಾಪೂರ್ವಕ ಸ್ಥಿತಿಯಲ್ಲಿ ಘಟಿಸಿದ ಘಟನೆಗಳನ್ನು ಪ್ರಜ್ಞಾಪೂರ್ವಕವಾಗಿ ವಿಮರ್ಶಿಸತೊಡಗುತ್ತಾನೆ ಶ್ರೀನಿವಾಸ. ಇದು ಆತನಲ್ಲಾಗಿದ್ದ ಪ್ರಮುಖ ಬದಲಾವಣೆ.

ಹೇಮಂತವನ್ನು ಶ್ರೋತೃವಾಗಿರಿಸಿಕೊಂಡು ಒಂದೊಂದಾಗಿ ತೆರೆದುಕೊಳ್ಳುವ ಭೂತಕಾಲೀನ ಘಟನೆಗಳು ಬದುಕಿನ ವೈರುಧ್ಯಗಳನ್ನು ಗೊತ್ತು ಹಚ್ಚಿ ಔನತ್ಯದತ್ತ ಚಲಿಸುವುದಕ್ಕೆ ಜೊತೆ ನೀಡುತ್ತವೆ. ವಿದ್ಯಾರ್ಥಿಜೀವನ ಮತ್ತು ಯೌವ್ವನದ ಮತ್ತಿನ ಕಾಮವಿಲಾಸದ ಸಾಹಸಗಳು, ಅನ್ಯಜಾತೀಯ ಹುಡುಗಿಯೊಂದಿಗಿನ ಪ್ರೇಮ, ಪ್ರೇಮಭಂಗ, ಶಿಕಾರಿಯ ಅನುಭವ, ವಿಶ್ವವಿದ್ಯಾಲಯದ ಅಧ್ಯಾಪಕರ ಸಭ್ಯತೆಯ ಸೋಗು, ಜಾತೀಯತೆ, ಆಷಾಢಭೂತಿತನ, ಸಾಹಿತ್ಯದ ಅಪಮೌಲೀಕರಣ, ಅಪಕ್ವ-ಅಪ್ರಬುದ್ಧ ಸಾಹಿತ್ಯ ರಚನೆ, ದೇವರು-ದೆವ್ವಗಳ ಬಗೆಗಿನ ನಂಬಿಕೆ-ಅಪನಂಬಿಕೆ, ಭಿಕ್ಷುಕನ ಭೀಕರ ಅವತಾರ, ಅಜ್ಞಾತ ಬದುಕು ಹೀಗೆ '**ಸ್ವರೂಪ**'ವು ಬದುಕಿನ ಅಮುಖ್ಯ, ಅರ್ಥಹೀನ, ತಾರ್ಕಿಕ ವಿವರಗಳನ್ನು ಶ್ರುತ ಪಡಿಸುತ್ತಲೇ ಬದುಕಿನ ಅರ್ಥವನ್ನು, ತಾತ್ವಿಕ ದರ್ಶನವನ್ನು ಮಾಡಿಸಿಬಿಡುತ್ತದೆ.

'ನಿಗೂಢಮನುಷ್ಯರು' ಕಥೆಯ ಗೋಪಾಲಯ್ಯನನ್ನು ತೆಗೆದುಕೊಂಡರೆ, ಆತ ಸ್ಥಿತಿಯಿಂದ ಮತ್ತೊಂದು ಪರಿಸ್ಥಿತಿಗೆ ಸ್ಥಿತ್ಯಂತರ ಹೊಂದುತ್ತಾ ಒಂದರಿಂದ ಮತ್ತೊಂದು ವಾಸ್ತವಕ್ಕೆ ತನ್ನನ್ನು ತಾನೆ ತೆರೆದುಕೊಳ್ಳುತ್ತಾನೆ. ಮೈನಸ್ ಗೋವಿಯಸ್ ಮೈನಸ್ ಜಾದವ್ ಹೀಗೆ ತನ್ನ ಅತೀತದಲ್ಲಾತ ಛಿದ್ರ ವಿಛಿದ್ರ ವ್ಯಕ್ತಿಗಳಾಗಿ ತನ್ನನ್ನು ತಾನೇ ಸ್ಥಿತ್ಯಂತರಗೊಳಿಸಿಕೊಳ್ಳುತ್ತಾ ತನ್ನನ್ನು ತಾನೇ ಕಳೆದುಕೊಂಡು, ಮೂಲವ್ಯಕ್ತಿತ್ವವೇ ಇಲ್ಲದಂತಾಗಿ ತನ್ನನ್ನು ಸ್ಥಿತ್ಯಂತರಗೊಳಿಸಿಕೊಳ್ಳುತ್ತಾನೆ. ಇದಕ್ಕೆ ಕಾರಣವೂ ಹಾಗೆಯೇ, ಮೊದಲಿನಂತೆಯೇ ದ್ವಂದ್ವಗಳು, ಸಂಘರ್ಷಗಳು, ಮತ್ತು ತುಮುಲಗಳು, ಅದು ಹೇಗಾದಿತೆಂದರೆ ತುಂಬಿದ ಕೊಡವೊಂದರಲ್ಲಿ ಮತ್ತೆ ಮೇಲಿನಿಂದೆಷ್ಟೇ ನೀರನ್ನು ತುಂಬಿದರೂ ಅದು ಪರಿಪೂರ್ಣವಾದ ಮೇಲೆ ಮತ್ತೆ ನೀರಿನ ಬರವು ಮತ್ತು ಹರಿವನ್ನು ನಿರೀಕ್ಷಿಸದು. ಹಾಗೆಯೇ ಎಲ್ಲಿ ಅಪರಿಪೂರ್ಣತೆಯಿದೆಯೋ, ದ್ವಂದ್ವವಿದೆಯೋ ಅಲ್ಲಿಯೇ ಪರಿಪೂರ್ಣತೆಯೆಡೆಗೆ ತುಡಿತ, ತುಮುಲಗಳು ಮತ್ತು ಅವೆರಡರ ನಡುವಿನ ಸಂಘರ್ಷ ಹಾಗೂ ಅದು ಸರಿಯೋ ಅಥವಾ ಇದು ಸರಿಯೋ ಎಂಬ ದ್ವಂದ್ವಗಳು ಇರುತ್ತದೆ. ಆ ಸಮಯದಲ್ಲಿಯೇ ಸ್ಥಿತಿಯಿಂದ ಸ್ಥಿತಿಗೆ ಹೊಯ್ದಾಟ-ತೊಯ್ದಾಟಗಳು ಮತ್ತು ಸ್ಥಿತ್ಯಂತರಗಳು ಸಮಯ ಸಂದರ್ಭಗಳನುಗುಣವಾಗಿ ಉಂಟಾಗುತ್ತವೆ. ಇದೇ ಕಾರಣಕ್ಕಾಗಿ ಗೋಪಾಲಯ್ಯನು ವ್ಯಕ್ತಿಯಿಂದ ವ್ಯಕ್ತಿಗೆ ತನ್ನನ್ನು ತಾನು ಬದಲಾಯಿಸಿಕೊಳ್ಳುತ್ತಾನೆ. ಆತನಿಗೆ ಆತ ಧರಿಸಿದ ಯಾವ ವ್ಯಕ್ತಿತ್ವದಲ್ಲೂ ತೃಪ್ತಿಯಿಲ್ಲ. ಎಲ್ಲಿ ಅತೃಪ್ತಿಯೋ ಅಲ್ಲಿ ಆತ ಇನ್ನೊಂದು ರೂಪದಲ್ಲಿ ತೃಪ್ತಿಯೆಡೆಗೆ ಹೆಜ್ಜೆ ಹಾಕಬೇಕೆಂದು ಅಂದುಕೊಳ್ಳುತ್ತಾನೆ. ಆ ದಿಸೆಯಲ್ಲಿ ಮುಂದುವರೆಯುತ್ತಾನೆ ಆದರೂ ತಾನು ಧರಿಸಿರುವ ದೇಹವನ್ನು ತನ್ನದೇ ಅನುಭವದ ಮೂಲಕ ಅರಿಯಲಾರದೆ ಹಿಮ್ಮೆಟ್ಟುತ್ತಾನೆ.

ಮುಕ್ತವಾಗಿ ಬಂದ ಬದುಕನ್ನು ಬಂದಂತೆ ಬದುಕಲಾರದ ಮಾನವ ಪ್ರತಿಯೊಂದು ಪರಿಸ್ಥಿತಿಯಿಂದಲೂ ಪಲಾಯನಗೈಯ್ಯುತ್ತಲೇ ಇದ್ದರೆ ಆತನಿಗೆ ಒಂದು ಪೂರ್ಣ ವ್ಯಕ್ತಿತ್ವ ಕೊನೆವರೆಗೂ ಬರಲು ಸಾಧ್ಯವೇ ಇಲ್ಲ. ಎಂದಿಗೆ ಆ ಪರಿಪೂರ್ಣತೆಯ ಪ್ರಜ್ಞೆಯಾದರೂ ಮಾನವನಲ್ಲಿ ಇಣುಕುತ್ತದೆಯೋ ಅಂದು ಆತನಿಗೆ ಇಂಥ ಬದುಕು ಬೇಡವೆನ್ನಿಸುತ್ತದೆ ಅರ್ಥಹೀನವೆನ್ನಿಸುತ್ತದೆ. ಆದ್ದರಂದಲೇ ಗೋಪಾಲಯ್ಯ ಹೇಳುವುದು 'ಜಗನ್ನಾಥ ಒಡೆದ ಬದುಕುಗಳನ್ನು ಬದುಕಿ ಸಾಕಾಗಿದೆ' ಎಂದು. ಆದ್ದರಿಂದಲೇ ಮೂಕಿ ಶಾರಿಯ ಅಂತಿಮ ನಿರ್ಣಯವಾದ ದಾರಿ ತಿಳಿದೂ ಆಕೆ ಅಲ್ಲಿಯೇ ನಿಲ್ಲುವುದು ಅರ್ಥಪೂರ್ಣವೆನ್ನಿಸುತ್ತದೆ. ಏಕೆಂದರೆ ಅನುಭವಗಳನ್ನು ಹುಡುಕಿ ಹೊರಡುವ ನಿರ್ಧಾರ ಮಾಡಿದ ಮಾನವನಿಗೆ ಅಂಥ

ಸನ್ನಿವೇಶಗಳಲ್ಲಿ ಅವುಗಳನ್ನೆದುರಿಸುವ ಮನೋಸ್ಥೈರ್ಯವೂ ಇರಬೇಕಲ್ಲವೇ! ಅನುಭವಗಳನ್ನರಿಸಿ ಹೊರಡದ ಅಥವಾ ಅದೇನೆಂದು ತಿಳಿಯದವರು ವರ್ತಮಾನದೊಂದಿಗೆ ಹೊಂದಿಕೊಂಡುಬಿಡುತ್ತಾರೆ.

ವರ್ತಮಾನದ 'ಇರುವಿಕೆ' ಯಲ್ಲಿಯೇ ಜೀವನದ ಸಂತೋಷ ಕಾಣಹೊರಟವರು ಅಥವಾ ವರ್ತಮಾನದಲ್ಲಿಯೇ 'ಇದ್ದು' ತಮ್ಮ 'ಇರುವಿಕೆಯ'ಯನ್ನೇ ಅರಿಯಲಾರದವರು; ಅರಿಯುವ ಮನಸ್ಸಿಲ್ಲದ ವ್ಯಕ್ತಿಯೊಬ್ಬನಿಗೆ ತನ್ನ ಇಂದಿನ 'ಇರುವಿಕೆ'ಯನ್ನು; ಮತ್ತು ಆ ಇರುವಿಕೆಯ ಅವಸಾನವನ್ನು ಅರ್ಥಮಾಡಿಸುವುದು ಕಷ್ಟ. ಅಂತಹುದರಲ್ಲಿ ಇರುವಿಕೆಯ ಅನುಭವಗಳನ್ನು ಹಾಗೂ ಅದರರ್ಥವನ್ನೂ ಅರಿತ ವ್ಯಕ್ತಿಯೊಬ್ಬನಿಂದ ಮತ್ತೊಬ್ಬರಿಗೆ ಹೇಳಲ್ಪಟ್ಟಾಗ; ಹೇಳಲ್ಪಟ್ಟ ವ್ಯಕ್ತಿಗೆ ತನ್ನ ಆ ಮಾತು ತನ್ನ ಇರುವಿಕೆಯ ಯಾವುದೇ ಜಾಡನ್ನೂ, ಪರಿಚಯವನ್ನೂ ಬೋಧಿಸಲು ಸಾಧ್ಯವಾಗದೆಂದು ತಿಳಿದಾಗ ಇರುವಿಕೆಯ ಅರ್ಥವನ್ನು ತಿಳಿದ ಆ ವ್ಯಕ್ತಿಗೆ ಮಾತಿನ ಮೇಲೆ ದಿವ್ಯ ನಿರ್ಲಕ್ಷ್ಯ ಉಂಟಾಗಬಲ್ಲುದೇ ವಿನಃ ಅದರಮೇಲೆ ಮೋಹವುಂಟಾಗಲಾರದು. ಹೀಗಿದ್ದಾಗ ಅದನ್ನರಿಸಿ ಮತ್ತೆ ಆತ ಹೊರಡಲಾರ. ಇದು ಒಂದು ಕಡೆಯಾದರೆ ನಾಗರಿಕತೆಯ ಎಲ್ಲಾ ಭಾವನೆಗಳನ್ನು ಸಮರ್ಪಕವಾಗಿ ಸೆರೆಹಿಡಿದು ನಾಗರಿಕತೆಯ ಮನಸ್ಸನ್ನು ನಾಟಬಹುದಾದ ಮಾತೇ ಅರ್ಥ ಕಳೆದುಕೊಂಡರೆ ನಾಗರಿಕತೆಗೆ ಏನರ್ಥ ಉಳಿದೀತು ಎಂಬ ಪ್ರಶ್ನೆ ಸಹಜವಾಗಿ ಉದ್ಭವಿಸುತ್ತದೆ. ಆಗ ಆ ಮಾತು ಮಾತಾಗಿಯೇ ಉಳಿಯಲಿ; ಮಾತೂ ಮೌನವಾಗಿಬಿಟ್ಟರೆ ಮುಂದೇನು ಎಂಬ 'ದುರಂತಸತ್ಯ' ಎದುರಾಗುತ್ತದೆ. ಸೀಮಿತ ಚೌಕಟ್ಟಿನೊಳಗೆ 'ಇರುವಿಕೆ'ಯನ್ನು ಅರಿತವನು, ಅರಿಯದವನು ತನ್ನ ಭಾವನೆಗಳನ್ನು ಸಾಧ್ಯವಾದಷ್ಟರ ಮಟ್ಟಿಗೆ ಅರ್ಥೈಸಿಕೊಳ್ಳಲಿ ಎಂಬ ಆಶಯ ಮನದಾಳದಲ್ಲಿ ಒಡಮೂಡಿ ಕುಡಿ ಒಡೆಯುತ್ತದೆ. ಅದರಿಂದಾಗಿಯೇ 'ಇರುವಿಕೆ'ಯನ್ನರಿತ ವ್ಯಕ್ತಿಗೆ ಮಾತು ಬೇಕೆನ್ನಿಸುತ್ತದೆ. ತನ್ನದಾಗಿಸಿಕೊಳ್ಳಬೇಕೆನ್ನಿಸುತ್ತದೆ. ಅಥವಾ ತನ್ನಲ್ಲಿ ಗರಿಗೆದರಿದ ಆ ಭಾವನೆ (ಮಾತಿನಬಗೆ) ತನ್ನಲ್ಲಿಯೇ ಉಳಿದು 'ಇರುವಿಕೆ'ಯ ಕತ್ತನ್ನು ಅವ್ಯಕ್ತವಾಗಿ ಹಿಚುಕತೊಡಗಿದರೆ? ಎಂಬ ಸಂದೇಹ ಕಾಡುತ್ತದೆ. ಘಟಿಸಬಹುದಾದ ದುರಂತ ಸತ್ಯದ ಸಾಧ್ಯತೆಯೇ ಆ ವ್ಯಕ್ತಿ ಮತ್ತೆ ಮಾತನ್ನೇ ನೆಚ್ಚಿಕೊಳ್ಳಬೇಕೆಂಬ ಪರಿಸ್ಥಿತಿಯನ್ನು ನಿರ್ಮಿಸುತ್ತದೆ. ಇದೇ ಆತನ ಸೃಜನಶೀಲತೆಗೆ ಹೊಸ ಹೊಸ ಸಾಧ್ಯತೆ ಮತ್ತು ಮಾರ್ಗಗಳನ್ನು ತೋರಿಸಿ ಆತ ಸೃಷ್ಟಿ ಪ್ರಕ್ರಿಯೆಯಲ್ಲಿ ಮತ್ತೆ ತೊಡಗಿಕೊಳ್ಳುವಂತೆ ಮಾಡುತ್ತದೆ. ಅದಕ್ಕಾಗಿಯೇ ಕರಾಳ ಅನುಭವಗಳನ್ನು ನೋಡಿ ಹೆದರುವ ಮಾನವನ ಪಲಾಯನವನ್ನು, ಅಪರಿಪೂರ್ಣತೆಯನ್ನು ಜಗನ್ನಾಥನಂಥವರಲ್ಲಿ ನಾವು ಕಾಣಬಹುದು. ಎಲ್ಲಿಯೇ ಹೋದರೂ ಇಂಥ ಅನುಭವಗಳು ಬೆನ್ನ ಹಿಂದಿನ ಉಗ್ರಗಿರಿಯಂತೆಯೇ ಬರುತ್ತವೆ. ಅದಕ್ಕಾಗಿ ಹೆದರಬೇಕಾದದ್ದು ಏನಿಲ್ಲ ಎಂಬುದು ಗೋಪಾಲಯ್ಯನ ಅಭಿಪ್ರಾಯ.

ನಿಗೂಢಮನುಷ್ಯರು ಕಥಾನಕದ ಉಳಿದ ಪಾತ್ರಗಳಾದ ಕಾಂಪ್ರ, ಮರಸ, ಲೋರಿ ಇನ್ನಿತರ ಪಾತ್ರಗಳನ್ನು ತೆಗೆದುಕೊಂಡರೆ ಇವರು ಇನ್ನೂ ವೈಚಾರಿಕವಾಗಿ ಸ್ಥಿತ್ಯಂತರಗೊಳ್ಳದ ಅಥವಾ ಬಾಹ್ಯ ರೂಪುರೇಷೆಗಳನ್ನು ತೆಗೆದುಕೊಂಡರೂ ಅವರು ಕೇವಲ ನೋಡಲೊಂದೇ ಮಾನವರು. ಇಂಥ ನಾಗರಿಕ, ಆಧುನಿಕ ಸಮಾಜದಲ್ಲಿ ಇದ್ದೂ ಕೂಡಾ ಮಾನವರಾಗಿ ಸ್ಥಿತ್ಯಂತರಗೊಳ್ಳದವರು. ಅವರ ವಿಚಾರ ಧೋರಣೆಗಳು ಆಧುನಿಕವಾಗಿ ಸ್ಥಿತ್ಯಂತರಗೊಳ್ಳುವುದರ ಬದಲಾಗಿ ಇನ್ನೂ ಆದಿಮಾನವರಂತೆಯೇ ಉಳಿದವರು. ಇಂಥ ಸಮಾಜದಲ್ಲಿಯೂ ಅಂಥ ವಿಕೃತ, ಮನಸ್ಸಿನ ಮನಷ್ಯರಿರುವರೇ ಎಂಬ ಸಂದೇಹ ಸಹಜವಾದರೂ ಅದು ಕೇವಲ ಪಾತ್ರಸೃಷ್ಟಿಯಷ್ಟೇ ಅಲ್ಲದೇ

ಆಧುನಿಕ ಅಥವಾ ಆಧುನೀಕೃತ ಮಾನವ ಸಮಾಜದ ವಿಡಂಬನಾತ್ಮಕ ಚಿತ್ರಣವೂ ಹೌದು. ಹೊಟ್ಟೆಪಾಡಿಗಾಗಿ ಸತ್ತ ಮಗನ ಹೆಣದಲ್ಲಿ ಉಂಡೆಗಳನ್ನಿಟ್ಟು ಅದನ್ನು ತಿನ್ನಲು ಬರುವ ಹಂದಿಗಳನ್ನು ಹೊಡೆಯುವ ಚಿತ್ರಣ ನಾಗರಿಕರಣಗೊಂಡಿರುವ ಸಮಾಜ; ಚಂದ್ರಮಂಡಲಕ್ಕೆ ಹೋಗಿಬಂದರೂ ಇನ್ನೂ ಅದೇ ದಿಸೆಯಲ್ಲಿ ಉಳಿದಿದೆ ಮತ್ತು ಸ್ಥಗಿತಗೊಂಡಿದೆ ಎಂಬುದರ ಚಿತ್ರಣವನ್ನು ನೀಡುತ್ತದೆ. ನಾಲಿಗೆಯ ಚಪಲಕ್ಕಾಗಿ ತನ್ನ ಅಭಿಲಾಷೆಗಳ ಪೂರೈಕೆಗಾಗಿ ಏನೇನನ್ನು ಮಾಡುತ್ತಾ ಹೇಗೆ ಜಡಗೊಂಡಿದ್ದಾನೆ ಎಂಬುದರ ವ್ಯಂಗ್ಯವೂ ಇದಾಗಿದೆ.

ಇನ್ನು ಶಾರಿಯ ಚಿತ್ರಣದಲ್ಲಿ ಮತ್ತೊಂದು ರೀತಿಯ ಸ್ಥಿತ್ಯಂತರವನ್ನು ಕಾಣುತ್ತೇವೆ. ಅದೇನೆಂದರೆ ವ್ಯವಸ್ಥೆಯ ಹೆಸರಿನಲ್ಲಿ ಕಾಳಾದಂಥಕೋರ ವಿಧಿಸುವ, ಕಾನೂನುಗಳ ಎಲ್ಲೆಯನ್ನು ಮೀರಿದಾಗ ಅದನ್ನು ಮೀರಿದಂತಹ ಜನ ತಮ್ಮ ರಹಸ್ಯಗಳನ್ನು ಬಯಲು ಮಾಡಿದರೆ ಎಂಬ ಭಯದಲ್ಲಿ ಎಂಥ ಕೃತ್ಯವನ್ನು ಎಸಗಲೂ ಹಿಂಜರಿಯರು. ಅಂದರೆ ಸ್ವಾರ್ಥವನ್ನು ಮೀರಿ [ಸರಿಯಾದ ವ್ಯವಸ್ಥೆಯಾಗಿದ್ದಲ್ಲಿ] ವ್ಯವಸ್ಥೆಯನ್ನು ರಕ್ಷಿಸಬೇಕು. ದೇಶಕ್ಕಾಗಿ, ತಮಗಾಗಿ ಜೀವಸಂಕುಲ ಉಳಿಯಲಿ ಎಂಬ ಸಂವೇದನೆಯಿಂದಾದರೂ ಕಾನೂನನ್ನು ಮೀರಿ ನಡೆಯಬಾರದು. ಆದರೆ ವ್ಯವಸ್ಥಿತವಾಗಿ ಕಾನೂನುಬಾಹಿರ ಕಾರ್ಯಗಳಿಗೆ ಸಂಚನ್ನು ನಡೆಸುತ್ತಾ ಹಿಂಸೆಕಾರ್ಯಗಳನ್ನು ನಡೆಸುತ್ತಾ ಬುದ್ಧಿಯನ್ನು ಸ್ವಾರ್ಥಪರ್ಯವಸಾಯಿನಿಯನ್ನಾಗಿ ರೂಪಿಸಿಕೊಂಡು ಮನುಷ್ಯತ್ವವನ್ನು ಮರೆತು ಬೀಭೀತ್ಸ ಕೃತ್ಯಗಳಲ್ಲಿ ತೊಡಗಿಸಿಕೊಂಡು ಬುದ್ಧಿ ಮತ್ತು ಕಾರ್ಯಗಳಲ್ಲಿ ಪಾಶವೀಯತೆಯತ್ತ ಸ್ಥಿತ್ಯಂತರಗೊಳ್ಳುತ್ತಿದ್ದಾರೆ ಎಂಬುದನ್ನು ಕಾಣಬಹುದು. ಮೂಕಿಯಾದ ಶಾರಿ ತನ್ನ ಜೀವನ ಮತ್ತು ಜೀವನ್ನನುಭವಗಳಿಂದ ಬಳಲಿ ಬೇಸತ್ತು ಅನುಭವಗಳನ್ನು ಹುಡುಕುತ್ತಾ ಹೊರಟರೆ ಪ್ರಯೋಜನ ಏನೂ ಇಲ್ಲ ಅನುಭವಗಳಿಗಾಗಿ ಅದನ್ನು ಹುಡುಕಿಕೊಂಡು ಹೊರಡಬೇಕಾಗಿಲ್ಲ ವಾಸ್ತವ ಜೀವನವನ್ನೇ ಒಪ್ಪಿಕೊಂಡರೆ ಸಾಕು ಅನುಭವಗಳು ಸಾಕಷ್ಟಾಗುತ್ತವೆಂದು ನಿರ್ಧರಿಸುವಂತೆ ಕಥೆಯ ಕೊನೆಯಲ್ಲಿ ಕಂಡುಬರುತ್ತಾಳೆ. ಗೋಪಾಲಯ್ಯನೇ ಹೇಳಿದ ಹಾಗೆ ಅಕೆ ಜೀವನದಲ್ಲಿ ಮೊದಲು ಏನೇ ಮಾಡಿದ್ದರೂ ನಂತರ ಅದಕ್ಕಿಂತಲೂ ಭಯಾನಕ ಸ್ಥಿತಿಗೆ ಹೋಗುವ ಮುನ್ನ ತನ್ನನ್ನು ಇದೇ ಸ್ಥಿತಿಯಲ್ಲಿ ಬದುಕಿಸಿದ್ದಕ್ಕೆ ಗೋಪಾಲಯ್ಯನಿಗೆ ಕೃತಜ್ಞತೆ ಸೂಚಿಸುವ ಸಲುವಾಗಿ ಅವನೊಂದಿಗೆ ಅಲ್ಲಿಯೇ ನಿಂತುಬಿಡುತ್ತಾಳೆ.

ಪುರೂರವನ ಪುರಾಣ ಪ್ರಖ್ಯಾತ ಪ್ರೇಮದ ಸನ್ನಿವೇಶವನ್ನು ಹಿನ್ನಲೆಯಾಗಿ ಇಟ್ಟುಕೊಂಡು ಸೋಮು ಮತ್ತು ಸುಭದ್ರೆಯರ ಕಥೆಯನ್ನು **ಊರ್ವಶಿ** ಹೆಸರಿನಲ್ಲಿ ಹೆಣೆಯಲಾಗಿದೆ. ಈ ಕಥೆಯ ಶಾಪ, ವಿರಹ, ಮಿಳನ ಎಂದು ಮೂರು ಭಾಗವಾಗಿ ಬೆಳೆಯುತ್ತದೆ. ಈ ಕಥೆಯ ನಾಯಕನಾದ ಸೋಮು ಸುಭದ್ರೆಯನ್ನು ಪ್ರೀತಿಸುತ್ತಿರುವನಾದರೂ ಪ್ರೇಮ ನಿವೇದನೆಯಲ್ಲಿ ವಿಫಲನಾಗುತ್ತಾನೆ. ಸೋಮು ತನ್ನ ಅನುಭವವನ್ನು ಹೇಳಲು ಪ್ರೇಯಸಿ ಸುಭದ್ರಾಳನ್ನು ಕೇಂದ್ರವಾಗಿಟ್ಟುಕೊಳ್ಳುವುದು ಮತ್ತು ಆಕೆಯನ್ನು ನಾಯಿಯೊಂದಿಗೆ ಸಮೀಕರಿಸಿ ನೋಡುವುದು ಆತನ ಪ್ರೇಮದ ನಿಖರತೆಯನ್ನು ಪರೀಕ್ಷೆ ಮಾಡುವುದಾಗಿದೆ.

'ಶಾಪ'ದಲ್ಲಿ ಕಡಲೆ ಬೀಜ ಮೆಲ್ಲುತ್ತ ಕುಳಿತಿದ್ದ ಸೋಮುವಿನ ಕಣ್ಣಿಗೆ ಖಾರ ಬಿದ್ದು ಕಣ್ಣು ಮುಚ್ಚಿ ಉಜ್ಜಿಕೊಳ್ಳುತ್ತಿರುವಾಗ ಊರ್ವಶಿಯ ನೆನಪು ಕಾಡುತ್ತದೆ. ಆಕೆ ತನ್ನನ್ನು ತೊರೆದು ಹೋಗಿರುವುದಕ್ಕೆ ಕಾರಣವಾದ ಸಂದರ್ಭವನ್ನು ಸ್ಮರಿಸಿಕೊಳ್ಳುತ್ತಾನೆ. ಕಟ್ಟ ಕಡೆಯ ಭೇಟಿಯಲ್ಲಿ ಆಕೆ

ಓದೆಂದು ಕೊಟ್ಟ ನೀಲಿ ಕಾಗದವನ್ನು ಓದದೆ ಜೇಬಿಗಿಳಿಬಿಡುತ್ತಾನೆ. ಅದೇ ಸಮಯಕ್ಕೆ ಎಲ್ಲಿಂದಲ್ಲೋ ಬೀಸಿದ ಗಾಳಿಗೆ ಹಾರಿದ ಸೆರಗಿನ ಹಿಂದಿದ್ದ ಅವಳ ಬರಿಯ ಕುಪ್ಪಸದ ಎದೆ ಸೋಮುವಿಗೆ ಚೇತೋಹಾರಿಯಾಗಿರುವಂತೆ ಸುಭದ್ರೆಗೆ ಹೆಣ್ಣಿಗೆ ಆದ ಅವಮಾನವೆಂದಣಿಸಿ ಸೋಮುವಿನ ಭಾವನೆಗಳನ್ನೆಲ್ಲಾ ನಿರ್ದಾಕ್ಷಿಣ್ಯವಾಗಿ ಧಿಕ್ಕರಿಸಿ ಹೊರಟುಹೋಗುತ್ತಾಳೆ. ಸ್ಪಷ್ಟ ಕಾರಣವಿಲ್ಲದೆ ಹೊರಟು ಹೋಗಿದ್ದ ಅವಳ ಆಲೋಚನೆಯಲ್ಲಿಯೇ ಕಡಲೆ ಬೀಜ ತಿನ್ನುವುದರಲ್ಲಿ ಮಗ್ನನಾಗಿದ್ದ ಸೋಮುವಿಗೆ ಕಡಲೆ ಬೀಜದ ತುತ್ತು ಗಂಟಲಲ್ಲಿ ಶ್ವಾಸಕೋಶದ ಹಾದಿ ಹಿಡಿದು ನೆತ್ತಿಗೇರುತ್ತದೆ. ಕೆಮ್ಮು ಸೀನುಗಳಿಂದ ಅಲ್ಲಿಯೇ ಕುಣಿಯುತ್ತಾನೆ. ಅದುವರೆಗೂ ಅವನ ಚಲನವಲನವನ್ನು ಸೂಕ್ಷ್ಮವಾಗಿ ಗಮನಿಸುತ್ತಾ ಅವನ ಆಲೋಚನೆಯಲ್ಲಿ ಸಹಭಾಗಿಯಾಗಿ ಅಲ್ಲೇ ಕುಳಿತಿದ್ದ ನಾಯಿ ಆತನ ಇಂಗಿತವನ್ನರಿಯುವುದಕ್ಕೆ ಮುನ್ನ ತನ್ನ ನಾಲ್ಕೂ ಕೋರೆ ಹಲ್ಲುಗಳನ್ನು ಅವನ ಕಾಲಿನಲ್ಲಿ ನಾಟಿಸಿ ಶಿವಮೊಗ್ಗದ ಕತ್ತಲಿನಲ್ಲಿ ಮಾಯವಾಗಿ ಬಿಡುತ್ತದೆ.

'ವಿರಹ'ದಲ್ಲಿ ಸೋಮುವಿಗೆ ನಾಯಿ ಕಚ್ಚಿದ ನಂಜು ಸುಭದ್ರೆಯ ನಂಜಾಗಿ ಪರಿವರ್ತಿತವಾಗುತ್ತದೆಯೇ ಎಂಬ ಸಂಶಯ ಕಾಡುತ್ತದೆ. ಹುಚ್ಚುನಾಯಿ ಕಡಿತದಿಂದ ಜೀವಕ್ಕೆ ಅಪಾಯವಾಗಬಹುದು ಎಂದು ವೈದ್ಯರ ನಿರ್ದೇಶನದಂತೆ ಕಚ್ಚಿದ್ದು ಹುಚ್ಚು ನಾಯಿ ಹೌದು ಅಲ್ಲವೋ ಎಂದು ಖಚಿತಪಡಿಸಿಕೊಳ್ಳಲು ಬಳಿ ಬಾಲದ ಕಪ್ಪು ನಾಯಿಯ ಸುಳಿವಿಗಾಗಿ ಅಲೆದಾಡುತ್ತಾನೆ. ಹೊಕ್ಕಳ ಸುತ್ತ ಇಂಜೆಕ್ಷನ್ ಚುಚ್ಚಸಿಕೊಂಡು ನರಕಯಾತನೆಯನ್ನು ಅನಯಭವಿಸುತ್ತಾ ಇದುವರೆಗೂ ಪತ್ತೆ ಇರದ ನಾಯಿ ಮತ್ತು ಸುಭದ್ರೆಯ ಹುಡುಕಾಟದಿಂದ ಬೇಸರಗೊಂಡ 'ಥೂ ನಾನೊಬ್ಬ ನಿರಂತರ ಪುರೂರವ ಚಿರವಿರಹಿ' ಎಂದುಕೊಳ್ಳುತ್ತಾನೆ.

'ಮಿಳನ'ದಲ್ಲಿ ವೈದ್ಯನ ಗಿಲೀಟಿನ ಮಾತಿಗೆ ಮರುಳಾಗಿ ಹೊಕ್ಕಳ ಸುತ್ತ ಇಂಜೆಕ್ಷನ್ ಚುಚ್ಚಿಸಿ ಕೊಂಡಿದ್ದ ಸೋಮು ನೋವಿನ ಯಮಯಾತನೆಯನ್ನು ಭರಿಸಲಾರದೆ ಏಳಕ್ಕೆ ನಿಲ್ಲಿಸುತ್ತಾನೆ. ಸ್ಥಗಿತಗೊಳಿಸಿದ ಇಂಜೆಕ್ಷನ್‌ನಿಂದ ಹುಚ್ಚು ಉಲ್ಬಣಿಸಿ ಸಾಯುತ್ತೇನೇನೋ ಎಂಬ ಕನವರಿಕೆಯಲ್ಲಿ ಕಾಣದ ನಾಯಿ ಮತ್ತು ಸುಭದ್ರಳಿಗೆ ಶಪಿಸುತ್ತಾನೆ. ಆತನ ಆಲೋಚನೆಗಳೆಲ್ಲ ಇದರ ಸುತ್ತಲೇ ಭ್ರಮಿಸುತ್ತಾ ಅದರಿಂದ ಹೊರಬಾರಲಾರದೆ ಸಾಯಬೇಕೋ ಬದುಕಬೇಕೋ ನಿರ್ಧರಿಸಲಾರದಂತ ತ್ರಿಶಂಕು ಸ್ಥಿತಿ ಮುಟ್ಟುತ್ತಾನೆ. ಇಂತಹ ನೂರಾರು ಆಲೋಚನೆಗಳೊಂದಿಗೆ ದುಃಖ, ಭಯ, ಪುನರ್ಜನ್ಮದ ಸಿದ್ಧಾಂತಗಳೆಲ್ಲ ಆತನನ್ನು ವ್ಯಾಪಿಸಿಕೊಳ್ಳುತ್ತದೆ. ಅದೇ ಸಮಯಕ್ಕೆ ಎದುರಿಗಿನ ಟಾರು ರಸ್ತೆಯ ಮಧ್ಯೆ ಕಾರಿನ ಚಕ್ರಕ್ಕೆ ಸಿಕ್ಕಿ ಸಾಯಬಹುದಾಗಿದ್ದ ಕೋಳಿಮರಿಗಳು ರಸ್ತೆ ಬದಿಗೆ ಸರಿದು ಬದುಕಿ ಉಳಿದದ್ದು ಆತನಲ್ಲೂ ಬದುಕಬೇಕೆಂಬ ಬಯಕೆಯನ್ನು ಪ್ರಬಲಗೊಳಿಸುತ್ತದೆ. ಆಗ 'ಇಹಪರದ ಪರಿವೆ ಮರೆತ ಈ ಹುಚ್ಚುನಾಯಿ ಹುಚ್ಚಿನ ಸಾವು ಯಾರಿಗೆ ಬೇಕು? ಬದುಕಬೇಕು ಬದುಕಬೇಕು ಸತ್ತರೂ ಸಾಕ್ರೆಟೀಸನಂತೆ' ಎಂದುಕೊಳ್ಳುತ್ತಾನೆ. ಒಂದೊಮ್ಮೆ ಸತ್ತರೂ, ವಿಷಹೀರಿ, ಅದೂ ತನ್ನ ಸಾವು ಎಷ್ಟು ಘನವಾದದ್ದು ಎಂದು ಸುಭದ್ರಳಿಗೆ ತಿಳಿಯಬೇಕೆಂಬ ಗುಂಗಿನಲ್ಲಿದ್ದಾತನಿಗೆ ತಿಂಗಳ ಹಿಂದೆ ಕಾಲನ್ನು ಕಚ್ಚಿದ ನಾಯಿ ಜೀವನ್ಮುಕ್ತನಂತೆ ಕಾಣಿಸಿಕೊಳ್ಳುತ್ತದೆ. ಇದು ನಾಯಿ ಕಡಿತದ ಹುಚ್ಚಿನಿಂದ, ಸುಭದ್ರೆಯ ಮೇಲಿರುವ ಹುಚ್ಚಿನಿಂದ ಇದುವರೆಗೂ ಸಾಯಬೇಕು ಎಂದುಕೊಂಡಿದ್ದ ಮನಸ್ಥಿತಿಯಿಂದ ಸಂಪೂರ್ಣವಾಗಿ ಮುಕ್ತಗೊಳಿಸುತ್ತದೆ.

ಇರುವ ಸ್ಥಿತಿಗಿಂತ ಭಿನ್ನವಾಗಿ ಅಲೋಚಿಸುವ ಸೋಮು ಜೀವನಕ್ರಮದ ತನ್ಮಯತೆಯಿಂದ ಹೊರಗೆ ನಿಂತು ಪರಕೀಯತೆಯನ್ನು ಅನುಭವಿಸಿದವನು. ತಾನು ವ್ಯಕ್ತಪಡಿಸಲಾಗದ ಸಂವೇದನೆಗಳಿಂದ ಮಾನಸಿಕವಾಗಿ ಹಿಂಸೆಗೆ ಒಳಗಾಗುತ್ತಿರುವುದು ವರ್ತಮಾನ ಮತ್ತು ಭೂತದ ನಡುವಿನ ತಾಕಲಾಟಗಳಿಂದಲೇ ಎನಿಸುತ್ತದೆ. ಸುಭದ್ರೆಯ ಮತ್ತು ತನ್ನ ತಾರುಣ್ಯದ ಮನಸ್ಥಿತಿಯನ್ನು ಸೂಕ್ಷ್ಮತೆಗಳನ್ನು ಅರ್ಥೈಸಿಕೊಳ್ಳಲಾಗದೆ ಭ್ರಮೆಗೆ ಸಿಲುಕುವ ಸೋಮು ಇವುಗಳಿಂದ ಮುಕ್ತನಾಗಲು ಬಯಸುತ್ತಾ ಹುಚ್ಚು ನಾಯಿಯ ಅನ್ವೇಷಣೆಯಲ್ಲಿ ತೊಡಗುತ್ತಾನೆ.

ಗೋಪಾಲಕೃಷ್ಣ ಅಡಿಗರ ಪದ್ಯದ ಕೆಲವು ಸಾಲುಗಳನ್ನು ಉದ್ದರಿಸುತ್ತಾ ಕಥೆ **ಹುಲಿಯೂರಿನ ಸರಹದ್ದು** ಪ್ರಾರಂಭವಾಗುತ್ತದೆ.

ಸಮಕೇಂದ್ರ ವೃತ್ತದಾ ಚಂದ್ರತಾರಕಮಾಲೆ । ಒಂದರೊಳಗೊಂದು ಕೂಡಿ ಕ್ರಮಬದ್ಧ ಪರಿಧಿ ಪ್ರಪಂಚ । ಚೆನ್ನಾಗಿ ಎಣ್ಣೆಯುಜ್ಜಿದ ಚಕ್ರಸಂತಾನ । ಉರುಳಿತಿವೆ ನಿರಾಯಾಸ, ಹಳಿ ತೊಗಲುಪಟ್ಟಿ । ಚೈನಿನ ಸರಳ ದಾರಿಯಲಿ । ಎಂಬ ಗೋಪಾಲಕೃಷ್ಣ ಅಡಿಗರ ಪದ್ಯದ ಸಾಲುಗಳಿಂದ ಪ್ರಾರಂಭವಾಗುವ ಈ ಕಥೆಯಲ್ಲಿ ವರ್ತುಳ, ವರ್ತುಳ, ವರ್ತುಳವಾಗಿ ಗರುಡನ ನೆರಳೊಂದು ದಿಡೀರನೆ ಕಮರಿಗೆ ಬಿದ್ದು, ಧಿಗ್ಗನೆ ಬೆಟ್ಟವನ್ನೇರಿ, ತುಂಗೆಯ ನೀರಿನ ಮೇಲೆ ತೇಲಿ, ಆಗಸದಿಂದ ಜುಣುಗಿ ಇಳಿದ ಅರೆಬರೆ ಬಿಸಿಲಿನಲ್ಲೇ ತನ್ನ ಮೇರೆಯನ್ನು ನಿರ್ದೇಶಿಸುತ್ತಿತ್ತು. ಮೇಲೆ ಬಹುಮೇಲೆ ಒಂದು ಗರುಡ ಹಾಯಾಗಿ ರೆಕ್ಕೆಯನ್ನು ಬಿಚ್ಚಿಕೊಂಡು ಸುತ್ತೀ ಸುತ್ತೀ ಸುತ್ತೀ ತೇಲುತ್ತಿತ್ತು. ಮೇಲೇರುತ್ತಿತ್ತೋ, ಕೆಳಗಿಳಿಯುತ್ತಿತ್ತೋ ಅಂತೂ ಅದರ ಮಾಂತ್ರಿಕ ವರ್ತುಳ ವಿನ್ಯಾಸ ಭೂಗ್ರಹ ತಾರೆಗಳ ದೈತ್ಯ ರಾಸಕ್ರೀಡೆಗೆ ಕನ್ನಡಿ ಹಿಡಿದಂತಿತ್ತು. ಅದರ ನೆರಳು ಹುಲಿಯೂರಿನ ಮನೆ ಮನೆಗಳ ಮರ ಮರಗಳ ಎದೆಯಲ್ಲಿ ಹೊಕ್ಕು ಹೊರಟರೂ ಅದು ಆಗಸದಲ್ಲೇ, ಇದು ಇಲ್ಲೆ. ಗದ್ದೆ ಹೂಡುತ್ತಿದ್ದ ಲಿಂಗನಾದಿಯಾಗಿ ಯಾರೂ ಕತ್ತೆತ್ತಿ ಕೂಡಾ ನೋಡಲಿಲ್ಲ. ಆ ಗರುಡ ಮಾತ್ರ ಏನನ್ನೋ ಒತ್ತಿ ಒತ್ತಿ ಮತ್ತೆ ಮತ್ತೆ ಹೇಳುವಂತೆ ಹುಲಿಯೂರಿನ ನೆತ್ತಿಯ ಮೇಲೆ ಗಿರ ಗಿರ ಸುತ್ತಿಯೇ ಸುತ್ತುತ್ತಿತ್ತು.....' [3]

ಜೀವನದ ಸರಪಳಿಯಲ್ಲಿ ಒಬ್ಬರು ಇನ್ನೊಬ್ಬರ ಅಧೀನದಲ್ಲಿರಬೇಕಾದ, ಒಬ್ಬರು ಮತ್ತೊಬ್ಬರಿಗಾಗಿ ಬದುಕನ್ನು ನಡೆಸಬೇಕಾದ ಸಂದಿಗ್ಧತೆಯನ್ನು ಈ ಕಥೆಯು ಪ್ರಚುರಪಡಿಸುತ್ತದೆ. ಬದುಕಿನಲ್ಲಿ ಸಾಮರಸ್ಯದೊಂದಿಗೆ-ಸರಹದ್ದುಗಳನ್ನು ಪಾಲಿಸಬೇಕಾದ ಅನಿವಾರ್ಯತೆಯು ಸಹಜವಾಗಿ ಇರುವಂತದ್ದಾಗಿದೆ. ಬದುಕೇ ಸರಪಳಿಯಿಂದ ಆವೃತವಾಗಿರುವುದು ಹಾಗೆಂದು ಸರಪಳಿಯಿಂದ ಬಂಧಿತರಾಗುವುದು ವ್ಯಕ್ತಿಗತವಾದ ಆಸೆ-ಆಕಾಂಕ್ಷೆಗಳಿಗೆ ತಡೆಯೊಡ್ಡಿದಂತೆ, ಅದನ್ನು ಮೀರಿ ಹೊರಬರುವ ಸಾಧ್ಯತೆಗಳಿರುತ್ತವೆ. ಹುಟ್ಟಿನಿಂದ ಬೆಳೆದು ಬರುವ ಸರಹದ್ದುಗಳನ್ನು ದಾಟಬೇಕೆನ್ನುವವನು ಎಲ್ಲಾ ರೀತಿಯ ಸೋಲು-ಗೆಲುವುಗಳನ್ನು ಸ್ವೀಕರಿಸಬೇಕಾಗುತ್ತದೆ.

ವ್ಯಕ್ತಿ ವಿಕಸನಕ್ಕೆ ಮಿತಿಯಾಗಿ ನಿಲ್ಲಬಲ್ಲ ಪ್ರೀತಿ, ರಕ್ತಸಂಬಂಧ, ಜಾತಿ, ಧರ್ಮ, ದೇವರು, ಮತೀಯ ಆಚರಣೆಗಳು, ಕೌಟುಂಬಿಕ ಬಂಧನ ಎಲ್ಲವೂ ಒಂದರೊಳಗೊಂದು ಹೆಣೆದುಕೊಂಡು ಅರ್ಥವಾಗದ ಸತ್ಯವಾಗಿ ಬದಲಾಗುತ್ತದೆ. ಬದುಕಿನ ಎಷ್ಟೋ ಸ್ತರದಲ್ಲಿ ಸಂದರ್ಭಗಳೊಂದಿಗೆ ರಾಜಿಯಾಗುವುದು ಮಾನಸಿಕ ಸ್ಥಿರತೆಯನ್ನು ಕಾಯ್ದುಕೊಳ್ಳಲು ಸಾಧ್ಯವಾದಾಗ ಮಾತ್ರ! ಮನಸಿಗೆ ಹಿತವಾಗುವಂತಹ ಕಾರ್ಯಗಳು ಜರುಗುತ್ತಲೇ ಇದ್ದರೆ ಬದುಕು ಸುಲಲಿತ, ಆದರೆ ಹಾಗೆಂದು ಪ್ರಿಯವಾದದ್ದು ಘಟಿಸುತ್ತಲೇ ಇರುವುದಕ್ಕೆ ಸಾಧ್ಯವೇ? ಈ ಕಥೆಯ ನಾಯಕ ಸೋಮು ತನ್ನನ್ನು ಸುತ್ತುವರೆದಿರುವ ತಂದೆಯ ನಿರ್ಣಾಯಕ ಆಲೋಚನೆಗಳಿಂದ ದೂರ ಸರಿದು ತನ್ನದೇ ಆದ ಸ್ವಂತಿಕೆಯನ್ನು ಕಟ್ಟಿಕೊಳ್ಳಬೇಕೆಂದು ಪ್ರಯತ್ನಿಸುತ್ತಾನೆ. ಅದಕ್ಕೆ ಹುಲಿಯೂರಿನ ಸರಹದ್ದನ್ನು ದಾಟಿ, ತನ್ನನ್ನು ಬಂಧಿಸಿ ಹಿಡಿದಿರುವ ಶಕ್ತಿಯನ್ನು ಝಾಡಿಸಿ

ಒಗೆದು, ತಾನು ನಳಿನಾಕ್ಷಿಯ ಜೊತೆ ಓಡಿ ಹೋಗಬೇಕೆಂದು ಆಲೋಚಿಸುತ್ತಾನೆ. ಸಂಪ್ರಾದಾಯಿಕವಾದ ಕೌಟುಂಬಿಕ ಸರಹದ್ದಿನಿಂದ ಹೊರಬರಬೇಕಾದರೆ ತಾನು ಗರುಡನಂತೆ ಈ ಅಪ್ಪ ಅಮ್ಮರ ಕುತ್ತಿಗೆಗೆ ಕೊಕ್ಕಿನಿಂದ ಇರಿದು ಬಾಂದಳಕ್ಕೆ ಹಾರಿ ಹೋಗಲೇಬೇಕು ಎಂದುಕೊಳ್ಳುತ್ತಿರುವ ಸಮಯಕ್ಕೆ ಆತ ತನ್ನ ಕಣ್ಣೆದುರು ಶೂನ್ಯ ಬಿಲದ ಬಾಯಿಯಿಂದ ಹೊರ ಬರುವ ಮಳೆಹುಳು ಮತ್ತು ಗೆದ್ದಲುಗಳನ್ನು ತಾಯಿ ಹೇಂಟೆ ಶಿಶುವಿನ ಶವದ ಇದಿರು ನುಂಗುತ್ತಿದ್ದ ಕ್ಷುದ್ರವ್ಯಾಪಾರವನ್ನು ಗಮನಿಸುತ್ತಾನೆ. ಸಂಪ್ರದಾಯವನ್ನು ಒಪ್ಪಿಕೊಂಡು ಅದರಲ್ಲೇ ಮುಂದುವರೆಯಬೇಕೆನ್ನುವ ತಂದೆ, ಅವನ ಅನುಯಾಯಿ ಆಳು ಲಿಂಗ, ಸಂಪ್ರದಾಯವೇ ಉಸಿರಾಗಿರುವ ಸಿಬ್ಬಲಗುಡ್ಡೆ ಭಟ್ಟ–ಇವರೆಲ್ಲರಿಗಿಂತ ತಾನು ಭಿನ್ನನಾಗಿ ವಿಚಾರವಾದಿ, ಕ್ರಾಂತಿಕಾರಿ ಎಂಬ ಹಮ್ಮಿನಲ್ಲಿ ತಾನೇ ಸೃಷ್ಟಿಕರ್ತನೆಂಬಂತೆ ಜಗತ್ತಿನತ್ತ ದೃಷ್ಟಿ ಬೀರುತ್ತಾನೆ.

ಸೋಮು ತನ್ನ ಸ್ವತಂತ್ರ ಬದುಕಿನ ಸ್ವಚ್ಛಂದ ವ್ಯಕ್ತಿತ್ವದ ಸಂಕೇತವಾದ ಗಿಡುಗನನ್ನು ತಂದೆ, ತಾಯಿ, ಲಿಂಗ, ನಾಯಿ ಡೂಲಿ ಮುಂತಾದವರಿಂದ ರಕ್ಷಿಸಲು ಹೆಣಗಾಡುತ್ತಾನೆ. ಕೋಳಿಮರಿಯನ್ನು ಕಬಳಿಸಲು ಬಂದ ಗರುಡ ನಾಯಿ ಬಾಯಿಗೆ ಸಿಕ್ಕಿಬೀಳುತ್ತದೆ. ಅದನ್ನು ಉಳಿಸುವ ಯತ್ನದಲ್ಲಿದ್ದ ಸೋಮುವಿನ ಅಂಗೈನಲ್ಲಿ ಗರುಡನ ಚೂಪಾದ ಉಗುರುಗಳು ಸಿಕ್ಕಿ ಕೀಲಿಸಿಕೊಂಡು ಅದು ಹಾರುವುದಕ್ಕೆ ಪ್ರಯತ್ನಿಸಿದಂತೆಲ್ಲಾ ಯಮಯಾತನೆಯನ್ನನುಭವಿಸುತ್ತಾನೆ. ಅಲ್ಲಿ ನಡೆಯುತ್ತಿದ್ದನ್ನು ಅರ್ಥೈಸಿಕೊಳ್ಳಲಾಗದ ಆ ಪರಿಸ್ಥಿತಿಯಿಂದ ಹೊರತರುವುದಕ್ಕಾಗಿ ಓಡಾಡುತ್ತಿರುವ ತಂದೆ ಮತ್ತು ಲಿಂಗ ಇಬ್ಬರು ಕತ್ತಿ ತರುವುದರೊಳಗಾಗಿ ನೋವನ್ನು ತಡೆಯಲಾಗದೆ ಅಸಹನೆಯಿಂದ ತಾನೆ ಗರುಡನ ಕತ್ತನ್ನು ಕಟಕಟನೆ ಜಗಿದು ಕೊಂದು ಬಿಡುತ್ತಾನೆ. ಜೀವವಿರೋಧಿ ನಿಲುವನ್ನು ತಾಳಿದ್ದ ಸೋಮು ತನ್ನ ಉಳಿವಿಗಾಗಿ ಗರುಡನನ್ನು ಕೊಂದು ತಂದೆಯಿಂದ ಶ್ವಸಪಚನೆಂದು ಹೀನಾಮಾನ ಬೈಸಿಕೊಳ್ಳುತ್ತಾನೆ. ಕಡೆಗೆ ಅಲ್ಲಿಂದ ಹೊರಹೋದರೆ ಸಾಕೆಂದು ತಂದೆಗೆ ಸವಾಲೆಸೆದು ಊರು ಬಿಡುತ್ತಾನೆ.

ಪರಂಪರಾಗತವಾದ ಸಂಸ್ಕೃತಿಯ ಆಶಯಗಳನ್ನು ಶೋಧಿಸುವುದರ ಜೊತೆಗೆ ವ್ಯಕ್ತಿತ್ವ ಶೋಧನೆಯು ಈ ಕಥನಗಳಲ್ಲಿನ ಪ್ರಧಾನ ಅಂಶವಾಗಿದೆ. 'ಪರಕೀಯತೆಯು ಮಾನಸಿಕವಾಗಿ ಹಿಂಸಿಸಿದರೂ, ಮುಂದೆ ರಚನಾತ್ಮಕತೆಯನ್ನು ಸಾಧಿಸಲು, ಇದರಿಂದ ಇತ್ಯಾತ್ಮಕ ಪರಿಣಾಮವೇ ಉಂಟಾಯಿತು. ಪರಂಪರೆಯನ್ನು ದೂರದಿಂದ ನಿಂತು ವಿಶ್ಲೇಷಿಸಲು, ಕಾಯಕಲ್ಪ ಮಾಡಲು ಅನುವು ಮಾಡಿಕೊಟ್ಟಿತು. 'ಇರುವಿಕೆ'ಯಿಂದ ಹೊರಗೆ ಬಂದು ನಿಂತ ಸ್ಥಿತಿಯ ಪರಕೀಯತೆಯು 'ಆಗುವಿಕೆ' ಆಗುವಲ್ಲಿ ಪರಂಪರೆಯನ್ನು ಶೋಧಿಸಿತು. ಜೊತೆಗೆ ಕೆಲವೊಮ್ಮೆ ವ್ಯಕ್ತಿಯನ್ನೂ ಶೋಧಿಸಿತು. ಈ ರೀತಿಯ ದ್ವಿಮುಖ ಶೋಧನೆ ಹೊಸ ಜಗತ್ತುಗಳನ್ನು ಮೌಲ್ಯಗಳನ್ನು ನಿರ್ಮಿಸಲು ಮತ್ತು ಸಂಸ್ಕೃತಿಯನ್ನು ಹೊಸ ದಿಕ್ಕುಗಳಿಂದ ಅನ್ವೇಷಿಸಲು ಸಾಧ್ಯವಾಯಿತು.'[5] ಆತ್ಮ ನಿರೀಕ್ಷಣೆಯ ಮೂಲಕ ತೆರೆದುಕೊಳ್ಳುವ ಈ ಕಥನಗಳು ಜೀವನಕ್ರಮದ ಏಕತಾನತೆಯಿಂದ ಬೇಸರಗೊಂಡು ಪರಂಪರೆಯಲ್ಲಿನ ಚೌಕಟ್ಟುಗಳನ್ನು ಮುರಿಯುವಲ್ಲಿ ಮೊದಲ ಹೆಜ್ಜೆಯನ್ನು ಇರಿಸಿದವು ಎಂದು ಹೇಳಬಹುದು.

ಪ್ರತಿಯೊಬ್ಬ ವ್ಯಕ್ತಿಗೂ 'ವೈಯಕ್ತಿಕ' ಎನ್ನಬಹುದಾದ ಗುಣಾವಗುಣಗಳಿರಬಹುದಾದರೂ ತನ್ನ ವರ್ಗದ ಗುಣಾವಗುಣಗಳ, ಮಿತಿ ಸಾಮರ್ಥ್ಯಗಳ, ಒಟ್ಟಾರೆ ಸಮುದಾಯದ ಅನುಭವಗಳ

ಹಿನ್ನೆಲೆಯಲ್ಲಿಯೇ ಆತನ ಬದುಕು ರೂಪುಗೊಳ್ಳುವುದರಿಂದ ವರ್ಗ-ವರ್ಗಗಳ ನಡುವಣ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಮತ್ತು ಬೌದ್ಧಿಕ ಅಂತರಗಳು ಅವುಗಳ ಪರಸ್ಪರ ನಿಗೂಢತೆಗೆ ಕಾರಣವಾಗಿರುತ್ತವೆ. ಹೀಗಾಗಿ ಒಂದು ನಿರ್ದಿಷ್ಟ ಸಂದರ್ಭದಲ್ಲಿ ಒಬ್ಬನಿಗೆ ಮುಖ್ಯವಾಗುವುದು ಮತ್ತೊಬ್ಬನಿಗೆ ಅಷ್ಟೇನು ಮುಖ್ಯವಾಗಿ ಕಾಣದಿರಬಹುದು. ಒಬ್ಬನಿಗೆ ಸಾಮಾನ್ಯವಾಗಿ ಕಾಣುವಂಥದ್ದು ಮತ್ತೊಬ್ಬನಿಗೆ ಅಸಾಮಾನ್ಯ ಎನಿಸಬಹುದು. ಈ ವೈದೃಶ್ಯಗಳೇ ಒಟ್ಟು ಬದುಕಿನ ಸಂದರ್ಭದಲ್ಲಿ ವಿಸ್ಮಯವನ್ನುಂಟುಮಾಡುತ್ತವೆ. ಅನುಭವ ವೈವಿಧ್ಯ, ಮೌಲ್ಯಗಳ ಸಾಪೇಕ್ಷ ಸ್ವರೂಪ, ಸಂದರ್ಭಗಳ ಸಂಕೀರ್ಣತೆ-ಇವೆಲ್ಲವುಗಳನ್ನೂ ಒಳಗೊಳ್ಳುವ ಬದುಕು ಎಲ್ಲ ಮನುಷ್ಯರಿಗೂ ಸಾಮಾನ್ಯವಾದದ್ದನ್ನು ಕೊಡುವಂಥದು ಏನು ಎಂಬ ಪ್ರಶ್ನೆ ಈ ಕಾರಣದಿಂದಲೇ ತುಂಬ ಜಟಿಲವಾದದ್ದೂ, ಮಹತ್ವಪೂರ್ಣವಾದದ್ದೂ ಆಗುತ್ತದೆ.[2] ಕರ್ವಾಲೋ ಕೃತಿಯ ಸಂದರ್ಭದಲ್ಲಿ ಈ ಅಭಿಪ್ರಾಯದ ಉಲ್ಲೇಖವಾಗಿದ್ದರೂ ಕಾಡು ಮತ್ತು ಕ್ರೌರ್ಯ ಕಾದಂಬರಿಯ ಸಂದರ್ಭಕ್ಕೂ ಈ ಮಾತು ಅನ್ವಯಿಸುತ್ತದೆ.

ಭರತ ಖಂಡದ ಯುವಕ ಇಂದು ಬುದ್ಧಿಜೀವಿಯಾಗಿ ಮತಾಂತರ ಹೊಂದಿದರೆ ಆತನ ಅಂತರ್ದೃಷ್ಟಿಗೆ ಮೊದಲು ಅರಿವಾಗುವುದು ತನ್ನ ವ್ಯಕ್ತಿತ್ವವು ವಿದಳನಗೊಳ್ಳುತ್ತಿರುವುದು. ಎರಡು ವಿರುದ್ಧ ಜೀವನ ಶಕ್ತಿಗಳು ಆತನಿಗೆ ದ್ವಂದ್ವ ವ್ಯಕ್ತಿತ್ವವನ್ನು ಆರೋಪಿಸುವುದನ್ನು ಕಾಣಬಹುದು.[3]

> ವ್ಯಕ್ತಿತ್ವದ ಸಮಗ್ರತೆಗಾಗಿ ಮಾನಸಿಕ ತಿಕ್ಕಾಟ ಎಂದರೆ, ಪ್ರಾಮಾಣಿಕತೆಗಾಗಿ ಎಂದೂ ಅರ್ಥವಾಗುತ್ತದೆ. ಪ್ರಾಮಾಣಿಕತೆ ಎನ್ನುವ ಪದವನ್ನು ನಾವು ಈಗಾಗಲೇ ಕನ್ನಡ ಸಾಹಿತ್ಯದಲ್ಲಿ ಅನೇಕಾನೇಕ ಅನಿಶ್ಚಿತವೂ ವಿಚಿತ್ರವೂ ಆದ ಅರ್ಥದಲ್ಲಿ ಉಪಯೋಗಿಸಿರುವೆವು. ಅನೇಕ ಬಾರಿ ಪ್ರಾಮಾಣಿಕತೆಯನ್ನು ಸಾಹಿತ್ಯ ವಿಮರ್ಶೆಯಲ್ಲಿ ಕಲಾ ಪರಿಪೂರ್ಣತೆಗೆ ಸಂವಾದಿಯಾಗಿಯೂ ಅಪ್ರಾಮಾಣಿಕತೆಯನ್ನು ಕಲಾತ್ಮಕವಾಗಿ ಇಲ್ಲದುದಕ್ಕೂ ಉಪಯೋಗಿಸುರಿವೆವು. ಇನ್ನು ಹಲವು ಬಾರಿ ಅಭಿವ್ಯಕ್ತಿಯ ಪ್ರಶ್ನೆಯಾಗದೆ ಕಲಾವಿದನ ಜೀವನ ಚರಿತ್ರೆಗೂ ಆತನ ಕಲೆಗೂ ಇರುವ ಸಂಬಂಧದ ಪ್ರಶ್ನೆಯಾಗುತ್ತದೆ. ಅನೇಕಬಾರಿ ಪ್ರಾಮಾಣಿಕತೆಯನ್ನು ನಮಗೆ ಬೇಡದವರ ವಿರುದ್ಧ ಹೊಡೆಯಲು ನಾವು ಬತ್ತಳಿಕೆಯಲ್ಲಿ ಇಟ್ಟುಕೊಳ್ಳುವ ಬ್ರಹ್ಮಾಸ್ತ್ರವಾಗುತ್ತದೆ. ಹೀಗಾಗಿ ಪ್ರಾಮಾಣಿಕತೆಗೆ ಒಂದು ಅರ್ಥವೇ ಇಲ್ಲ. ಅಥವಾ ನಾವು ಒಂದೊಂದು ಬಾರಿ ಉತ್ತರಿಸಿದಾಗಲೂ ನಾವು ನಮ್ಮದೇ ಆದ ವಿಶಿಷ್ಟಾರ್ಥಗಳನ್ನು ಉದ್ದೇಶಿಸಿರುತ್ತೇವೆ.[4]

ತಾನು ಹೇಳಬೇಕೆಂದಿರುವುದನ್ನು ಹೇಳಲಾಗದೆ ಹಿಂಜರಿಯುತ್ತಿರುವುದಕ್ಕೂ, ಒಂದೊಮ್ಮೆ ಹೇಳಿದರೂ ಮನದಟ್ಟು ಮಾಡಿಸಲಾಗದ ವಿಷಮ ಪರಿಸ್ಥಿತಿಯನ್ನು ಇದು ಸೂಚಿಸುತ್ತದೆ.

ಮನುಷ್ಯ ಮತ್ತು ಜೀವ ಪರಿಸರ ಇವುಗಳ ಸಂಬಂಧಗಳ ವಿನ್ಯಾಸ ಇಲ್ಲಿ ಕತೆಗಳಲ್ಲಿ ವ್ಯಾಪಕವಾಗಿ ಮೂಡಿಬಂದಿದೆ. ಶ್ರೀ ಸಾಮಾನ್ಯನ ಜೀವನವನ್ನು ಕೇಂದ್ರವಾಗಿಟ್ಟುಕೊಂಡು ಕತೆ ಹಣೆಯುವ ತೇಜಸ್ವಿಯವರು ಮನುಷ್ಯನ ಬದುಕಿನ ಹಿಂದೆ ಅಡಗಿರುವ ನಿಗೂಢತೆಯನ್ನು ಯಶಸ್ಸು ಮತ್ತು ವೈಫಲ್ಯಗಳನ್ನು ತಮ್ಮ ಕತೆಗಳ ಮೂಲಕ ಚಿತ್ರಿಸಿದ್ದಾರೆ. ಹಾಗೆಂದು ಯಾವುದೇ ಒಂದು ನಿರ್ದಿಷ್ಟ ಧೋರಣೆಯನ್ನು ಈ ಕತೆಗಳಲ್ಲಿ ಗುರುತಿಸುವುದು ಕಷ್ಟ. ಈ ಕತೆಗಳಲ್ಲಿ ಚಿತ್ರಣಗೊಳ್ಳುವ ಪ್ರತಿಯೊಬ್ಬ ಸಾಮಾನ್ಯನ (ಮನುಷ್ಯನ) ವ್ಯಕ್ತಿತ್ವವೂ ಪ್ರತ್ಯೇಕವಾಗಿರುತ್ತದೆ. ಅಲ್ಲದೆ ಶ್ರೀ ಸಾಮಾನ್ಯನನ್ನು ತಾತ್ವಿಕ ಅನನ್ಯತೆಯ ಪ್ರತೀಕವಾಗಿ ನೋಡುವ ಮನೋಧರ್ಮ ಸ್ಥಾಯಿರೂಪಿಯಾಗಿದೆ ಮತ್ತು ವ್ಯಕ್ತಿಯ ಆಲೋಚನೆಗಳು-ಪ್ರತಿಕ್ರಿಯೆಗಳು ಸಂದರ್ಭಕ್ಕನುಗುಣವಾಗಿ ಮಾರ್ಪಡುವುದು ನಡೆಯುತ್ತಿರುತ್ತದೆ.

## ೪.೨ ಹಿರಿದು ಹಿಗ್ಗುವ ವಿಸ್ಮಯ ಕೋಶ

ಬಾಲ್ಯಕಾಲದ ಮನೋವೃತ್ತಿಗಳು ಕೌತುಕ, ಕುತೂಹಲವನ್ನು ಕೆರಳಿಸುತ್ತವೆ ಮತ್ತು ತಿಳಿದಷ್ಟೂ ಮತ್ತೂ ತಿಳಿಯಬೇಕೆಂಬ ಬಯಕೆಯನ್ನು ಹೆಚ್ಚಿಸುತ್ತದೆ. ಪ್ರತಿಯೊಂದು ವಸ್ತುವೂ ನಿಗೂಢತೆಯನ್ನು ಸೆಳೆಸೆಳೆದು ತನ್ನೊಳಗೆ ಬಚ್ಚಿಟ್ಟುಕೊಂಡಂತೆ ಕಾಣುತ್ತದೆ. ಯಾರು, ಏನು, ಎಲ್ಲಿ ಎಂಬಿತ್ಯಾದಿ ಪ್ರಶ್ನೆಗಳನ್ನು ದಮನ ಮಾಡಿದಷ್ಟೂ ಪುಟಿದೇಳುತ್ತವೆ. ಮಾನಸಿಕ ಶಾಂತಿಯನ್ನು ಕೆಡಿಸಿಬಿಡುತ್ತವೆ. ಅಂತಹ ವಿಷಯಗಳನ್ನು ತಿಳಿಯುವುದೇ ಜೀವನದ ಅಂತಿಮ ಉದ್ದೇಶವೆಂಬಂತೆ ಬಾಲ್ಯದ ವ್ಯವಹಾರಗಳಿರುತ್ತವೆ. ಮಕ್ಕಳ ಮನಸ್ಸಿಗೆ ತಿಳಿದ ವಿಷಯಗಳು ಸುಪ್ತಮನಸ್ಸಿನಲ್ಲಿ ಅಡಗಿರುತ್ತವೆ. ಮಕ್ಕಳ ಪ್ರಶ್ನೆಗಳು, ಕುತೂಹಲಗಳು ನೇರಾನೇರವಾಗಿದ್ದು ಕೊಂಕುತನವನ್ನು ಹೊಂದಿರಲಾರವು. ಪ್ರಾಮಾಣಿಕ ಮನಸ್ಥಿತಿಯೂ ಸ್ವಭಾವಸಹಜವಾಗಿರುತ್ತದೆ. ಇಂಥ ಮನಸ್ಥಿತಿಯು ನಿದ್ರೆಯನ್ನೂ ಕೆಡಿಸಿ, ಪ್ರತಿಯೊಂದನ್ನೂ ಸಂಶಯದೃಷ್ಟಿಯಿಂದಲೇ ನೋಡುತ್ತದೆ. ಹೀಗಿರುವ ಮನಸ್ಥಿತಿಗಳನ್ನು ಅರ್ಥಮಾಡಿಕೊಂಡಿರುವ ತೇಜಸ್ವಿಯವರು ಮಕ್ಕಳನ್ನು ಮಕ್ಕಳಾಗಿ ಮಾತ್ರ ಕಾಣದೆ ಮನೋವೈಜ್ಞಾನಿಕ ಹಿನ್ನೆಲೆಯಲ್ಲಿ ಅರ್ಥೈಸಿಕೊಂಡಿದ್ದಾರೆ ಎನ್ನಬಹುದು.

**ಲಿಂಗ ಬಂದ** ಕಥೆಯು ಹತ್ತು ವರ್ಷದ ಕಿಟ್ಟಿ ಏಳು ವರ್ಷದ ತಂಗಿ ಸುಭದ್ರ ಇವರಿಬ್ಬರ ಕಾಲ್ಪನಿಕ ಪ್ರಪಂಚದೊಳಗೆ ಪ್ರಾಕೃತಿಕ ಲೋಕವು ತನ್ನ ಭಯಂಕರ ಸ್ವರೂಪದೊಂದಿಗೆ ಪ್ರವೇಶಿಸುತ್ತಿರುವುದನ್ನು ಆ ಮಕ್ಕಳು ಕುತೂಹಲದಿಂದ ಸ್ವೀಕರಿಸುತ್ತಾರೆ. ಕಿಟ್ಟಿಯು ತಾನು ಓದಿಕೊಳ್ಳುತ್ತಿರುವ ಗೋವಿನ ಹಾಡಿನ ಸಾಲು 'ಹಬ್ಬಿದಾ ಮಲೆ ಮಧ್ಯದೊಳಗೆ' ನಿಗೂಢತೆಯನ್ನು ಸೃಷ್ಟಿಸಿದಂತೆಯೇ ಮಳೆಗಾಲದ ಕರಾಳ ರಾತ್ರಿಯು ಅಸಹಜ ಸಂಗತಿಗಳತ್ತ ವಾಲುವುದಕ್ಕೆ ಪ್ರೇರೇಪಿಸುತ್ತದೆ. ಸುಭದ್ರಳಿಗೆ ತಮ್ಮ ಸದಾನಂದ ಹೇಗೆ ಹುಟ್ಟಿದ ಎಂಬುದೇ ಪ್ರಶ್ನೆಯಾಗಿದ್ದರೆ ಅದಕ್ಕೆ ಮರು ಉತ್ತರಿಸಲು ಸಾಧ್ಯವಾಗದ ಕಿಟ್ಟಿ ತನ್ನದೇ ಕಾಲ್ಪನಿಕ ಲೋಕದಲ್ಲಿ ಮುಳುಗಿ ಹೋಗುತ್ತಾನೆ. ಕಿವುಡಚ್ಚಿಡಿಸುವ ಜೀರುಂಡೆಯ ಸದ್ದು, ಗಾಳಿಯ ಭೋರ್ಗರೆತ, ದಟ್ಟವಾದ ಕತ್ತಲು, ತೂಗುವ ತೊಟ್ಟಲಿನ ಕಿರ್ ಕಿರ್ ಸದ್ದು ಗುಡುಗು-ಮಿಂಚಿನ ಹೊಳಪು ಸಿಳ್ಳೆಯ ಹಾಕುವಗಾಳಿ, ಎಲ್ಲವೂ ಆ ಮುಗ್ಧ ಹೃದಯಗಳಲ್ಲಿ ಭಯದ ಸಂಚಲನೆಯನ್ನುಂಟು ಮಾಡುತ್ತದೆ. ಭಯದಿಂದ ಹೊರಬರಲು ಮತ್ತು ತಂಗಿಯ ಸ್ಥಳಾಪೇಕ್ಷೆಯನ್ನು ನಿರಾಕರಿಸುವ ಸ್ಥಿತಿಗೆ ಜಗಿಯುವ ಕಿಟ್ಟಿ ಲಿಂಗನಿಂದ ಕೇಳಿದ್ದ ಕತೆಯನ್ನು ತಂಗಿಗೆ ಹೇಳುತ್ತಾನೆ. ಕಿಟ್ಟಿ ಹೇಳುವ ಕತೆಯ ಸಂದರ್ಭಕ್ಕೆ ಅನುಗುಣವಾದ ಪ್ರತಿಕ್ರಿಯೆಯನ್ನು ಸುಭದ್ರೆಯು ಮಂಚದ ಮೇಲೆ ಕುಳಿತೇ ಅನುಭವಿಸುತ್ತಾಳೆ. ಬೆಳೆಯುತ್ತಿದ್ದ ರಾಕ್ಷಸ ಮಗುವನ್ನು ಲಿಂಗನ ಅಜ್ಜ ಸಂಹರಿಸುವುದು ಕಿಟ್ಟಿಯ ಸಂದರ್ಭಕ್ಕೆ ಒತ್ತುಕೊಡುತ್ತದೆಯಾದರೂ ರಾಕ್ಷಸ ಮಗುವಿನ ಕತೆ ಮುಗಿದ ಮೇಲೆ ಕಿಟ್ಟಿ ಸುಭದ್ರೆಯರಿಗೂ ತಮ್ಮನಾದ ಸದಾನಂದನ ಬಗೆಗೂ ಅದೇ ರೀತಿಯ ಸಂದೇಹ ತಲೆದೋರಿ ಅವನೂ ರಾಕ್ಷಸನಂತೆ ಬೆಳೆಯುತ್ತಿರಬಹುದೆಂಬ ಭ್ರಮೆಗೆ ಸಿಲುಕಿ ಭಯಭೀತರಾಗುತ್ತಾರೆ. ತೊಟ್ಟಿಲ ನೆರಳು ಸದಾನಂದನ ನೆರಳಿನಂತೆಯೇ ಕಂಡು ಕಿರುಚಿಕೊಳ್ಳುತ್ತಾರೆ. ಇಬ್ಬರ ಗದ್ದಲದಲ್ಲಿ ಎಚ್ಚರಗೊಂಡ ಮಗುವಿನಿಂದಾಗಿ ತಾಯಿ ಅವರಿಬ್ಬರ ಮೇಲೂ ರೇಗುತ್ತಾಳೆ. ಅಷ್ಟರಲ್ಲಿ ಗದ್ದೆ ಕಡಿಯಲಿಕ್ಕೆಂದು ಹೋಗಿದ್ದ ತಂದೆ ಮತ್ತು ಲಿಂಗ ಹಿಂತಿರುಗುತ್ತಾದ್ದರಿಂದ ಭಯ ಹಿಮ್ಮೆಟ್ಟುತ್ತದೆ. ಲಿಂಗ ರಾಕ್ಷಸನನ್ನು ಕೊಂದವನ ಮೊಮ್ಮಗನಾದ್ದರಿಂದ ಕಿಟ್ಟಿಗೆ ಧೈರ್ಯ ಮೂಡುತ್ತದೆಯಾದರೂ ಸುಭದ್ರೆಗೆ ತಮ್ಮ ಸದಾನಂದ ಬೆಳೆಯುವ ವಿಷಯಕ್ಕೆ ಸಮರ್ಪಕವಾದ ಉತ್ತರ ದೊರೆಯದೆ ಗಲಿಬಿಲಿಯಾಗುತ್ತದೆ.

ಸ್ಥಳಾಪೇಕ್ಷೆಯ ಸಣ್ಣ ಜಾಡು ಹಿಡಿದು ಹುಟ್ಟಿಕೊಳ್ಳುವ ಈ ಕಥೆಯಲ್ಲಿ ವಯಸ್ಸಿಗೆ ಮೀರಿದ ಅನುಭವದ ಬಗೆಗಿನ ಕುತೂಹಲದಲ್ಲಿ ಕಿಟ್ಟಿಯ ಬಾಲ್ಯ ಪ್ರಬುದ್ಧತೆಯತ್ತ ಪಲ್ಲಟಗೊಳ್ಳುತ್ತಿರುವುದು ಸ್ಪಷ್ಟವಾಗುತ್ತದೆ.

ಏನೋ ಮಾಡಲು ಹೋಗಿ ಮತ್ತೇನೊ ಎಡವಟ್ಟು ಮಾಡಿಕೊಂಡು ಪೇಚಾಡುತ್ತಾರೆ **ಪಂಜ್ರೊಳ್ಳಿ ಪಿಶಾಚಿಯ ಸವಾಲು** ಕಥೆಯ ನಿರೂಪಕ, ಎಡ್ವರ್ಡ್ ಮತ್ತು ಶಾಮಣ್ಣ. ಈ ಗೆಳೆಯರ ಗುಂಪಿಗೆ ಕಾಫಿ ಕದಿಯುವುದು ಕುಡಿಯುವ ಬಯಕೆಗಿಂತ ಹೆಚ್ಚಿನದು. ಪರಭಾಷೆಯನ್ನು ಕಲಿಯುವುದರಲ್ಲಿ ತಮ್ಮೆಲ್ಲ ಶ್ರಮವನ್ನೂ ವಿನಿಯೋಗಿಸಿ ವಿಫಲರಾಗುತ್ತಿರುವ ಈ ಗೆಳೆಯರು ಅಂತಹ ಆವರಣದಿಂದ ಹೊರಬರುವುದಕ್ಕೆ ಕಾಫಿಯನ್ನು ಕದಿಯುವ ಕ್ರಿಯೆಯಲ್ಲಿ ಹುರುಪಿನಿಂದ ತೊಡಗುವುದು ಬಲವಂತದ ಮಾಘಸ್ನಾನದಿಂದ ಹೊರಬರುವ ಸೂಚನೆಯಾಗಿದೆ. ಒಟ್ಟಾರೆಯಾಗಿ ಕಳ್ಳತನದ ಬಗೆಗಿನ ಚರ್ಚೆಯಲ್ಲಿ ಕಾಫಿಯನ್ನು ಕದಿಯುವುದೇ ಒಂದು ಸೃಜನಾತ್ಮಕ ಕ್ರಿಯೆಯಾಗಿ ಮಾರ್ಪಟ್ಟು, ಸದ್ದುಗದ್ದಲವಿಲ್ಲದೆ ತಲೆದೋರುತ್ತದೆ. ಪರಸ್ಪರ ಎಚ್ಚರಿಕೆಯಿಂದ ಕಾಫಿ ಕದಿಯುವುದಕ್ಕೆ ಮುಂದಾಗುತ್ತಾರೆ. ಅಷ್ಟರಲ್ಲಿ ಹಠಾತ್ತಾಗಿ ಏನೋ ಬಂದು ಕಾಲಿಗೆ ತಾಗಿದಂತಾಗುತ್ತದೆ. ರಕ್ತನಾಳದಲ್ಲಿ ರಕ್ತ ಜೋರಾಗಿ ನುಗ್ಗಿದ ಅನುಭವದೊಡನೆ ಎದೆಯಲ್ಲಿ ನಡುಕವುಂಟಾಗಿ ಅದು ಅಲೆ ಅಲೆಯಾಗಿ ದೇಹದಾದ್ಯಂತ ವ್ಯಾಪಿಸಿಕೊಳ್ಳುತ್ತದೆ. ಹಿಂತಿರುಗಿ ನೋಡಲು ಭಯ, ಅಜ್ಜಿ ಹೇಳಿದಂತೆ ಪಂಜ್ರೊಳ್ಳಿ ಪಿಶಾಚಿಯಾಗಿದ್ದರೆ ಎಂದು ಭಯದಿಂದ ತಿರುಗಿ ನೋಡಿದಾಗ ಸಾಕು ನಾಯಿಯನ್ನು ಕಂಡು ಸುಧಾರಿಸಿಕೊಂಡರೂ ನಾಯಿಯ ರೋಮವೇನಾದರೂ ಮನೆಯಲ್ಲಿ ಬಿದ್ದು ಬಿಟ್ಟರೆ ಅಜ್ಜಿಯ ಪೆಟ್ಟಿಗೆ ಕಾರಣರಾಗುತ್ತೇವೆಂದು ನಿರೂಪಕ ಅದನ್ನು ಹೊರಕ್ಕೆ ಓಡಿಸಿದಾಗ ಅದು ಹೊಸ್ತಿಲಿನ ಮೇಲಿನ ಡಬ್ಬಿಯನ್ನು ಕೆಡವಿ ಬಿಡುತ್ತದೆ. ಅದೇ ಡಬ್ಬಿಯಲ್ಲಿ ಕದ್ದ ಹಾಲು ಮತ್ತು ಡಿಕಾಕ್ಷನ್ ಇದ್ದುದರಿಂದ ಅದು ಚೆಲ್ಲಿಹೋಗಿ, ಕದ್ದದ್ದು ಗೊತ್ತಾಗದಂತೆ ಹೊರ ಬೀಳುವಷ್ಟರಲ್ಲಿ ಸಾಕು ಸಾಕೆನಿಸುತ್ತದೆ. ಕದ್ದ ಕಾಫಿಯನ್ನು ಹಂಚಿಕುಡಿದರೂ ಅಸಮಧಾನ ಹೊಗೆಯಾಡುತ್ತಿರುತ್ತದೆ. ಮರುದಿನ ಅಜ್ಜಿಯ ಅವಾಂತರದಿಂದಾಗಿ ತಾವು ಕದ್ದು ತಂದ ಡಬ್ಬಿ ಯಾವುದೆಂದು ತಿಳಿದಾಗ ಅದರ ನೆನಪು ಅಸಹ್ಯ ಅದರ ನೆನಪು ಅಸಹ್ಯ ಮತ್ತು ವಾಕರಿಕೆಯನ್ನು ತರಿಸುತ್ತದೆ.

**ಗಾಂಧೀಜಿ ದೆಸೆಯಿಂದ** ಕಥೆಯಲ್ಲಿ ಗಾಂಧೀಜಿಯ ಆದರ್ಶಗಳನ್ನು ಪಾಲಿಸಲು ಹೋಗಿ ಶಿಕ್ಷೆ ಅನುಭವಿಸುವ ಮುಗ್ಧ ಬಾಲಕನ ಚಿತ್ರಣದೊಂದಿಗೆ ವರ್ತಮಾನದಲ್ಲಿ ಆದರ್ಶಗಳು ಒಂದರ್ಥದಲ್ಲಿ ವಿಡಂಬನೆಗೆ ಗುರಿಯಾಗಿವೆ. ಗಾಂಧಿಯ ಮಹತ್ವದ ನಡವಳಿಕೆಗಳನ್ನು ಬದುಕಿನಲ್ಲಿ ಅಳವಡಿಸಿಕೊಳ್ಳಲು ಹೋಗಿ, ತಂದೆಯಿಂದ ಅವಹೇಳನಕ್ಕೆ ಗುರಿಯಾಗುವ ಪ್ರಸಂಗವೇ ಈ ಕಥೆಯ ವಸ್ತು. ಈ ಕಥೆಯ ನಾಯಕ ಹನ್ನೊಂದು ವರ್ಷದ ಶಾಲಾ ಬಾಲಕ ಕೆ. ಜಿ. ಮೋಹನ್ ದಾಸ್. ಕಲ್ಲಹಳ್ಳಿಯ ಗುಂಡೇಗೌಡರ ಮಗನಾಗಿದ್ದ ಆತ, ಶಾಲೆಗೆ ಭಾನುವಾರದ ರಜೆಯಾದ್ದರಿಂದ ಆಟವಾಡಲು ಹೋಗದೆ ಗಾಂಧಿಯ ಪಾಠ ಓದುವುದರಲ್ಲಿ ಮಗ್ನನಾಗಿರುತ್ತಾನೆ, ತಾಯಿ ಕೂಗಿದಾಗ ಓಗೊಡದೆ ತಂಗಿಯ ಸುಳ್ಳಿನಿಂದ ಬೈಯ್ಗುಳ ಕೇಳುತ್ತಾನೆ. ನಂತರ ತಾಯಿಯ ಅಣತಿಯಂತೆ ಅಸಾಧ್ಯವಾದ ಜ್ವರ, ಸೀತ, ನೆಗಡಿ, ಕೆಮ್ಮು, ಮೈಕೈ ನೋವು ಮತ್ತು ತಲೆಸಿಡಿತಗಳಿಗೆ ಒಳಗಾಗಿರುವ ತಂದೆಗಾಗಿ ತೀರ್ಥಹಳ್ಳಿಗೆ ಹೋಗಿ ತಮ್ಮ ಪರಿಚಯದ ವೈದ್ಯ ಗಂಗಪ್ಪನವರಿಂದ ಔಷಧಿ ತರಬೇಕೆಂದು ತಾಯಿ ಬರೆದು ಕೊಟ್ಟ ಚೀಟಿ ಹಿಡಿದು ಹೊರಡುತ್ತಾನೆ. ನಾಲ್ಕು ಮೈಲಿಯ ತೀರ್ಥಹಳ್ಳಿಗೆ ಹೆಜ್ಜೆ ಹಾಕುತ್ತ ಗಾಂಧೀಜಿಯ ಪಥ್ಯದ ಅನುಕರಣೆಯಲ್ಲೇ ಇದ್ದ

ಮೋನಿ ತಾನು ಗಾಂಧೀಜಿಯಂತೆ ತಂದೆಗೆ ಪತ್ರ ಬರೆಯುವುದರ ಮುಖೇನ ತಪ್ಪುಗಳನ್ನು ನಿವೇದಿಸಿಕೊಳ್ಳಬೇಕು ಎಂಬ ನಿಶ್ಚಯಕ್ಕೆ ಬರುತ್ತಾನೆ. ಮಾತುಮಾತಿಗೂ ಹೊಡೆಯುವ ತಾಯಿ, ರೇಗಾಡುವ ತಂದೆ, ಸುಳ್ಳು ಹೇಳುವ ತಂಗಿಯ ಬಗೆಗೆ ಆಲೋಚಿಸುತ್ತಾ ಹೋಗುವ ದಾರಿಯಲ್ಲೇ ಔಷಧಿ ಚೀಟಿಯನ್ನು ಕಳೆದು ಕೊಳ್ಳುತ್ತಾನೆ.

ಹಿಂದಿನ ಜಿಜ್ಞಾಸೆಯಲ್ಲೇ ತೀರ್ಥಹಳ್ಳಿಯ ಮಿತ್ರನ ರೂಮಿನಲ್ಲಿ ಕುಳಿತು ಊರಿಗೆ ಪತ್ರ ಬರೆಯುತ್ತಾನೆ. ತಾನು ಪೆನ್ಸಿಲ್ಲನ್ನು ಸಿದ್ಧನಿಗೆ ಕೊಟ್ಟು(ಮಾರಿ) ಕಳೆದು ಹೋಯ್ತೆಂದು ಸುಳ್ಳು ಹೇಳಿದ್ದು, ಸ್ಕೂಲಿಗೆ ಚಕ್ಕರ್ ಕೊಟ್ಟದ್ದು, ತಾನು ಕದ್ದು ಬೀಡಿ ಸೇದಿದ್ದು, ಇದರ ಮಧ್ಯೆ ಮಾಂಸವಿದೆ, ಮದ್ಯ ಹೀರಿದೆ ಎಂದೆಲ್ಲ ಬರೆಯಬೇಕೆಂದು ಕೊಳ್ಳುತ್ತಾನಾದರೂ 'ಅಪ್ಪನೇ ಆಗೆಲ್ಲ ಕಳ್ಳು ಕುಡೀತಿದ್ದರು, ಅಮ್ಮನೇ ಕೋಳಿ ಕಡೀತಾರೇ! ಬೇಡ ಎಂಬ ನಿರ್ಧಾರ ತಾಳಿ ತಾನು ತನ್ನ ತರಗತಿಯ ಶಾಂತಿಯನ್ನು ಮನಸ್ಸಲ್ಲೇ ಪ್ರೀತಿಸುತ್ತಿರುವುದನ್ನೂ ಬರೆಯದೆ ತಾನು ಪಾತಕಿ, ಪಾಪಿ ಎಂದು ಬರೆದು ಮುಗಿಸಿ ಪತ್ರವನ್ನು ಅಂಚೆಗೆ ಹಾಕುತ್ತಾನೆ. ಸಂಜೆವರೆಗೂ ವೈದ್ಯರಿಗಾಗಿ ಕಾದು ಅವರ ಭೇಟಿಯಾಗದೆ ಹಿಂದಿರುಗುವ ವೇಳೆಗೆ ಪತ್ರ ತಲುಪಿ ತಂದೆ ಪತ್ರವನ್ನು ಓದಿ ಸಿಟ್ಟಿನ ಮುದ್ದೆಯಾಗುತ್ತಾರೆ. ಬರುವ ದಾರಿಯಲ್ಲಿ ಕಳೆದು ಕೊಂಡಿದ್ದ ಚೀಟಿ ಸಿಗುತ್ತದೆ. ಪತ್ರದ ವಿಷಯದ ಜೊತೆಗೆ ಇನ್ನೊಂದಷ್ಟು ವಿಚಾರವನ್ನು ಹೇಳಿ ತಂದೆ ಬೈಯ್ದರೆ ತಾಯಿ ತಪರಾಕಿಯನ್ನು ಕೊಡುತ್ತಾಳೆ. 'ಗಾಂಧೀಜಿಯ ಕಥೆಯಿಂದ' ಪ್ರಭಾವಿತನಾಗಿ, ಅದೇ ಆದರ್ಶಗಳನ್ನು ಪಾಲಿಸುವ ಮನಸ್ಥಿತಿಯವನಾಗುವ ಮೋನಿ ಪ್ರಾಮಾಣಿಕತೆ, ಆದರ್ಶಗಳಿಂದಾಗಿ ಮನೆಗೆ ಬಂದಾಗ ಕುಪಿತ ತಂದೆಯ ಆಕ್ರೋಶದ ಪರಿಣಾಮವನ್ನು ಎದುರಿಸಬೇಕಾಗುತ್ತದೆ.

ಮಗುವಿನ ಮುಗ್ಧಮನವೊಂದು ಏನನ್ನೂ ಅರಿಯದ ಎಳೆತನದಲ್ಲಿ ಬಾಹ್ಯ ಪ್ರಪಂಚದ ಕನ್ನಡಿಯಾಗಬೇಕಾದಾಗ, ಮನಸ್ಸು ಎದುರಿಸುವ ಘರ್ಷಣೆ ಅನಂತವಾಗಿರುತ್ತದೆ. ಮೊಗ್ಗು ಬಿರಿಯುವಾಗಲೂ ಬಿರಿದ ಮೊಗ್ಗು ಮುದುಡುವಾಗಲೂ ಘರ್ಷಿಸುತ್ತಲೇ ಇರಬೇಕು. ಬಾಲ್ಯಾವಸ್ಥೆಯಿಂದ ಮತ್ತೊಂದು ಸ್ಥಿತಿಗೆ ದಾಟುತ್ತಿರುವ ಹಂತದಲ್ಲಿ ಹುಡುಗತನದ ಹುಡುಗಾಟಿಕೆ ಮತ್ತು ಅದನ್ನು ಎದುರಿಸುವ ಸಂದರ್ಭ ಎರಡೂ ಸಂಘರ್ಷಮಯವೇ. ಇಂತಹದೊಂದು ಘರ್ಷಣೆಯಲ್ಲಿಯೇ ಬಾಲ್ಯದಿಂದ ಪ್ರೌಢತೆಗೆ ಜಿಗಿಯುವ ಸ್ವಾಭಾವಿಕ ಹಂತ ಘಟಿಸಿಬಿಡುತ್ತದೆ. ಅದು ಅರಿವಿಗೆ ಬಂದರೂ ಅನುಭವದ ಮಟ್ಟಿಗೇ ಸೀಮಿತಗೊಂಡಿದ್ದು **'ರಹಸ್ಯ ವಿಶ್ವ'**

ಕಥೆಯ ಮೊದಲಿಗೇ 'ಶಿವಮೊಗ್ಗ ಈಗಿದ್ದ ಹಾಗೆ ಆಗ ಇರಲಿಲ್ಲ' ಎಂದೇ ಭೌತಿಕವಾಗಿ ಬದಲಾವಣೆಗೊಂಡಿರುವ ನಗರದ ಬಗ್ಗೆ ಉಲ್ಲೇಖಿಸುತ್ತಾರೆ. ಬದಲಾವಣೆ ಎನ್ನುವುದು ಸಾರ್ವಕಾಲಿಕ. ಬದಲಾದ ಕಾಲದಲ್ಲಿ ಬದಲಾದ ಸನ್ನಿವೇಶದಲ್ಲಿ ಅನಿವಾರ್ಯವಾಗಿಯಾದರೂ ಸರಿ ಜನರು, ಜನಜೀವನವೂ ತನಗರಿವಿರುವಂತೆಯೇ, ಇಲ್ಲದಂತೆಯೇ ಸಂಕ್ರಮಣಕ್ಕೊಳಪಡುತ್ತಲೇ ಇರುತ್ತದೆ. ಅಂತೆಯೇ ಆ ಕಾಲದ ಕಥೆಯೊಂದನ್ನು ನೆನಪಿನ ಬುತ್ತಿಯಂತೆ ಬಿಚ್ಚಿಡುವ ಕಥಾ ನಿರೂಪಕರು, ಕ್ಷಣಕ್ಷಣಕ್ಕೂ ಕಾಲವೆಂಬ ಚಕ್ರದ ಸೈಕಲ್ಲನ್ನೇರಿ ಬದಲಾದ ಕಾಲಮಾನದಲ್ಲಿ ನಿಂತು ಮೂಲಸ್ಥಿತಿಯ ಕಥೆಯನ್ನು ಹೇಳುತ್ತಾರೆ. ಅಂಥ ಕಾಲದಲ್ಲಿ ಬದಾಲಾಗಬೇಕಾದಾಗಿನ ಸಂಘರ್ಷವೇ ಈ ಸೈಕಲ್ ಸವಾರಿ.

ಬೇಸಿಗೆಯ ರಜೆಯನ್ನು ಅಜ್ಜಿ ಮನೆಯಲ್ಲಿ ಕಳೆಯಲು ಬಂದಿದ್ದ ನಿರೂಪಕ ಪ್ರಫುಲ್ಲ ಮತ್ತು ಪುರುಷೋತ್ತಮರಿಂದ ಸೈಕಲ್ ಕಲಿಯಲು ಪ್ರಾರಂಭಿಸುತ್ತಾನೆ. ಮೊದಮೊದಲಿನ (ಸೈಕಲ್ ಕಲಿಸುವ) ಉತ್ಸುಕತೆ ಕ್ರಮೇಣ ನಿರ್ಲಕ್ಷ್ಯದತ್ತ ಸರಿಯುತ್ತದೆ. ಎಷ್ಟೇ ಹೇಳಿಕೊಟ್ಟರೂ ಪೆಡಲ್ ತುಳಿಯದೆ ಬ್ಯಾಲೆನ್ಸ್ ಮಾಡಲು ಪ್ರಯತ್ನಿಸದೆ, ಗಟ್ಟಿಯಾಗಿ ಕೂರುತ್ತಿದ್ದ ನಿರೂಪಕನನ್ನು ಸೈಕಲ್ ತುಳಿದು ಬ್ಯಾಲೆನ್ಸ್ ಮಾಡುವಂತೆ ಪ್ರೇರೇಪಿಸುವುದರಲ್ಲಿ ಇಬ್ಬರಿಗೂ ಸಹನೆ ಮೀರುತ್ತದೆ. ಸೈಕಲ್ ಕಲಿಸುವುದರಿಂದ ಬೇಸತ್ತ ಪ್ರಫುಲ್ಲ ಪುರುಷೋತ್ತಮ ತಮ್ಮಿಬ್ಬರ ಸಹಾಯವಿಲ್ಲದೆ ಸೈಕಲ್ ಬ್ಯಾಲೆನ್ಸ್ ಮಾಡುವುದಕ್ಕೆ ಅವಕಾಶವಾಗಲೆಂದು ಇಳಿಜಾರಿನ ದಿಬ್ಬದ ತುದಿಯಲ್ಲಿ ಸೈಕಲ್ ಮೇಲೆ ಕೂರಿಸಿ ಕೈ ಬಿಡುತ್ತಿದ್ದಂತೆಯೇ ಸೈಕಲ್ ಸುಲಲಿತವಾಗಿ ಇಳಿಜಾರಿನಲ್ಲಿ ಜಾರುತ್ತಾ ಹೊರಟು ವೇಗವನ್ನು ವೃದ್ಧಿಸಿಕೊಳುತ್ತಾ ದೈತ್ಯಾಕಾರದ ರಂಗಮ್ಮನಿಗೆ ಢಿಕ್ಕಿ ಹೊಡೆದು ಕೆಳಗೆ ಬೀಳುತ್ತಾನೆ. ಅಪಘಾತಕ್ಕೆ ಸಿಕ್ಕು ಸತ್ತೇ ಹೋದೆನೆಂದು ತಿಳಿದ ಹುಡುಗನಿಗೆ ಕತ್ತಲ ಅನುಭವದಲ್ಲಿ ತಾನೆಲ್ಲಿದ್ದೇನೆಂದು ಮರೆತು ದಿಗ್ಭ್ರಾಂತ ಸ್ಥಿತಿಗೆ ಒಳಗಾಗಿದ್ದವನು. ರಂಗಮ್ಮ ತನ್ನ ಸೀರೆಯೊಳಗೆ ತೂರಿಕೊಂಡ ಹುಡುಗನನ್ನು ಹೊರಗೆಳೆದು ನಾಲ್ಕು ತಪರಾಕಿ ತಟ್ಟಿ ಅಶ್ಲೀಲವಾಗಿ ಬಯ್ಯತೊಡಗಿದಳು. ತೀರ ಚಿಕ್ಕವನಾದ ಆ ಹುಡುಗನಿಗೆ ಬಯ್ದರೂ ಅವಳ ಬಯ್ಗುಳಗಳಾವುವೂ ರಂಗಮ್ಮ ನಿರೀಕ್ಷಿಸಿದ ಪರಿಣಾಮಗಳನ್ನು ಬೀರದೆ ಹಿಮ್ಮೆಟ್ಟುತ್ತದೆ. ಅಜ್ಜಿಯ ಬಳಿ ದೂರು ಹೇಳಿ ಮರ್ಯಾದೆ ಕಳೆಯುವಳೆಂದು ಭಾವಿಸಿದ್ದ ಹುಡುಗನಿಗೆ ಆಕೆ ತನ್ನನ್ನು ಆರೋಪಿಯನ್ನಾಗಿ ಮಾಡದೆ ಸರ್ವೆ ಸಾಧಾರಣವಾಗಿ ಲೋಕಾ ರೂಢಿಯ ಮಾತನ್ನಾಡಿ, ನಡೆದಿದ್ದನ್ನು ಹೇಳದೆ ಹೊರಟು ಹೋಗುವುದು ಮತ್ತೊಂದು ಆಘಾತದಂತಾಗುತ್ತದೆ.

ಮನೆಯೊಳಗಿದ್ದ ಹೆಂಗಳೆಯರೆಲ್ಲಾ ಹೊರಬಂದು ಏನು ನಡೆಯಿತು ವಿಚಾರಿಸಿದಾಗ ಯಾರಿಗೂ ಹೇಳಲಾರದ ತನಗೆ ತಾನೇ ಹೇಳಿಕೊಳ್ಳಬಹುದಾದ ರಹಸ್ಯ ವಿಶ್ವ ಒಂದು ಅಂದಿನಿಂದ ಆತನೊಳಗೆ ರೂಪುಗೊಳ್ಳತೊಡಗಿದ್ದು. ಮಕ್ಕಳ ಮನಸ್ಥಿತಿಗೆ ಕನ್ನಡಿ ಹಿಡಿಯುವಂತೆ ಇರುವ ಆ ಸಂದರ್ಭ ಕಥನಕಾರನ ತಂತ್ರಗಾರಿಕೆಗೆ ವಸ್ತುವಾಗಿದೆ. ಈ ನೆಲೆಯಲ್ಲಿ ವಿಶ್ಲೇಷಿಸಿದರೆ ಇಲ್ಲಿನ ಸೈಕಲ್ ಎಂಬುವುದು ಓಡುತ್ತಿರುವ ಕಾಲದಂತೆ ಭಾಸವಾದರೆ ಅಲ್ಲಿ ಬರುವ ಗಿಡ-ಮರ-ಮೈದಾನಗಳು ಸರಿದುಹೋಗುವ ವಿಚಾರಗಳಂತೆ ಹಾಗೂ ದಾರಿಯು ಸಮಕಾಲೀನತೆಯಂತೆ ಆಗಾಗ ಬದಲಾಗುತ್ತಾ ಇಲ್ಲವೆ ದಾರಿಹೋಕ/ಸವಾರನನ್ನು ಬದಲಿಸುವಂತೆ ಕಾಣುತ್ತದೆ. ಎದುರಿಗೆ ಬರುವ ರಂಗಮ್ಮ ಬದಲಾದರೂ ಬದಲಾಗದ ಸ್ಥಿರವಸ್ತುವಿನಂತೆ, ನಿರೂಪಕ ಜೀವನದ ಪಯಣಿಗರಂತೆ ಪ್ರೌಢವಾಗಿಯೇ ಭಾಸವಾಗುತ್ತಾರೆ ಮಕ್ಕಳಾದಿಯಾಗಿ ವೃದ್ಧರವರೆಗಿನ ಎಲ್ಲರ ಮನಸ್ಥಿತಿಯನ್ನು ಅವರವರ ಬುದ್ಧಿಮತ್ತೆ ಹಾಗೂ ವಯಸ್ಸಿನ ಇತಿಮಿತಿಗಳ ಪರಿಧಿಯೊಳಗೆ ತೇಜಸ್ವಿ ಸಮರ್ಥವಾಗಿ ಹಿಡಿದಿಡಬಲ್ಲರು. ಆಯಾ ವಯಸ್ಸಿನ ಬೌದ್ಧಿಕ ಸಾಮರ್ಥ್ಯಕ್ಕೆ ತಕ್ಕಂತೆ ಕಥೆಗಳನ್ನು ರಚಿಸುವುದು ಅವರ ದೊಡ್ಡ ಕೌಶಲ್ಯ.

ಲಿಂಗಬಂದ, ಗಾಂಧೀಜಿ ದೆಸೆಯಿಂದ, ರಹಸ್ಯ ವಿಶ್ವ, ತ್ಯಕ್ತ ಈ ಕಥನಗಳಲ್ಲಿ ಹತ್ತು ವರ್ಷದ ವಯೋಮಾನದೊಳಗಿನ ಬಾಲ್ಯದ ಮುಗ್ಧ ಮನಸ್ಸನ್ನು ಅನಾವರಣಗೊಳಿಸಲಾಗಿದೆ. ಇವು ಬಾಲ್ಯ ಕಾಲದ ಘಟನೆಗಳು ಅಥವಾ ಆ ವ್ಯಕ್ತಿಗೆ ಸಂಬಂಧಿಸಿದ ವಸ್ತು ಅದರ ಎಲ್ಲ ಸೂಕ್ಷ್ಮ ಸ್ವರಗಳ ಹಿನ್ನೆಲೆಯಲ್ಲಿ ರೂಪುಗೊಂಡಿರುವುದು. ಈ ಕಥೆಗಳು ಬಾಲ್ಯ ಸಹಜ ಮುಗ್ಧತೆಗಳ ಭಾವಲೋಕವನ್ನು ಕಟ್ಟಿಕೊಡುತ್ತವೆ. ಲಿಂಗಬಂದ ಕಥೆಯ ಕಿಟ್ಟಿ ಮತ್ತು ಸುಭದ್ರೆಯ ಸ್ಥಳಾಪೇಕ್ಷೆಯ

ಹಿಂದೆ ಬಾಲ್ಯ ಸಹಜ ಆಸೆ ಆಕಾಂಕ್ಷೆಗಳೇ ಇದ್ದರೂ ಅದು ಭೀಕರಾಕಾರ ತಳೆಯಬಹುದಾದ ಸಾಧ್ಯತೆಗಳನ್ನು ಸೂಕ್ಷ್ಮವಾಗಿ ಕಟ್ಟಿಕೊಡುತ್ತಿರುವಾಗಲೇ ಅದನ್ನು ಮತ್ತೊಂದರೆಡೆಗೆ ಕೇಂದ್ರೀಕರಿಸಿಬಿಡುತ್ತದೆ. ಲಿಂಗಬಂದ ಕಥೆಯ ಕಿಟ್ಟಿ ಮತ್ತು ಸುಭದ್ರೆ, ತ್ಯಕ್ತದ ಕಿಟ್ಟಿ, ರಹಸ್ಯವಿಶ್ವದ ಬಾಲಕ, ಗಾಂಧೀಜಿ ದೆಸೆಯಿಂದ ಮೋಹನ ಈ ಮಕ್ಕಳಲ್ಲಿ ಅಡಗಿರುವ ಬಾಲ್ಯ ಸಹಜ ಮುಗ್ಧತೆ ವಿಕಸನಗೊಳ್ಳುತ್ತಿರುವ ಪ್ರೌಢಾವಸ್ಥೆಯತ್ತ ವಾಲುತ್ತಿರುವುದನ್ನು ಅದ್ಭುತವಾಗಿ ಕಟ್ಟಿಕೊಟ್ಟಿದ್ದಾರೆ. ಮಕ್ಕಳ ಬಾಲ್ಯದ ಲೋಕವನ್ನು ವಯಸ್ಕ ಪ್ರಪಂಚದ ಜೊತೆಗಿಟ್ಟು ಹೋಲಿಸುವುದರ ಮೂಲಕ ಜೀವನದ ಹಲವು ಸತ್ಯಗಳನ್ನು ಒಟ್ಟಿಗೇ ಕಾಣಿಸುವ ಮಹತ್ವಾಕಾಂಕ್ಷೆ ಈ ಕಥನಗಳಲ್ಲಿ ಗೋಚರವಾಗುತ್ತದೆ.

## ೪.೩ ಕುಬ್ಜಗೊಂಡ ಮಾನವೀಯತೆ

ವಿಶ್ವವ್ಯಾಪ್ತಿಯಲ್ಲಿ ಪ್ರತಿಯೊಂದೂ ದಿನಕಳೆದಂತೆ ರಾಕ್ಷಸಾಕಾರದಲ್ಲಿ ಬೆಳೆಯುತ್ತಿದ್ದು ಕೈಗೆಟುಕದಷ್ಟು ವಿಶಾಲವಾಗಿದೆ. ಆದರೆ ಸಮಾಜದಲ್ಲಿನ ನೈತಿಕ, ಮಾನವೀಯ ಮೌಲ್ಯಗಳು ದಿನೇ ದಿನೇ ಕುಸಿಯುತ್ತಿವೆ. ಮಾನವರ ಒಡನಾಟ ಮತ್ತು ಅದರ ವ್ಯಾಪ್ತಿ ಹೆಚ್ಚಿದಂತೆಯೂ, ದುಡ್ಡಿನ ಮೇಲಿನ ವ್ಯಾಮೋಹವೂ ಅಷ್ಟೇ ಹೆಚ್ಚುತ್ತಿದೆ. ಧನದಾಸೆಗಾಗಿ ಎಂತಹ ಕೆಲಸವನ್ನಾದರೂ ಮಾಡುವೆನೆಂಬ ಗೊಡ್ಡು ಮೊಂಡುತನ ಹೆಚ್ಚಿದಷ್ಟೂ; ಮಾಡುತ್ತಿರುವುದು ಎಷ್ಟು ಸರಿ, ಎಷ್ಟು ತಪ್ಪು ಎಂಬ ವಿವೇಕವೂ ಇಲ್ಲದಂತಾಗುತ್ತಿರುವುದು ವಿಪರ್ಯಾಸ. ಜಗತ್ತೆಲ್ಲವೂ ದುಡ್ಡಿನಿಂದಲೇ ನಡೆಯುತ್ತದೆ ಎಂಬುದು ಸತ್ಯವೇ ಆದರೂ ಸಂಬಂಧಗಳ ಬೆಲೆಯನ್ನೂ ಆ ಭಾವನೆಗಳ ಬೆಲೆಯನ್ನು ದುಡ್ಡಿನಿಂದ ಕಟ್ಟಿಬಿಡುತ್ತೇನೆ ಎನ್ನುವುದು ಸುಳ್ಳು. ಒಬ್ಬರ ಸಮಾಧಿಯ ಮೇಲೆ ಮತ್ತೊಂದು ಭವನವನ್ನು ನಿರ್ಮಿಸುತ್ತಾ ಮನುಷ್ಯರು ನಡೆದು ಬಂದಿರುವುದನ್ನು ಇತಿಹಾಸವೇ ಹೇಳುತ್ತಾದರೂ, ಆ ಭವನ ನಿರ್ಮಾಣಕ್ಕಾಗಿಯೇ ಸಮಾಧಿಯನ್ನು ನಿರ್ಮಿಸುವುದು ತಪ್ಪು ಎಂಬ ಕೇವಲ ಪ್ರಜ್ಞೆಯಾದರೂ ಜಾಗೃತವಾದರೆ ಮಾನವರು ಧನದಾಸೆಗಾಗಿ ಏನನ್ನಾದರೂ ಮಾಡುವುದನ್ನು ಬಿಟ್ಟಾರು ಎಂಬ ಆಶಯವನ್ನು ತೇಜಸ್ವಿಯವರ ಕಥನಗಳಲ್ಲಿ ಗುರುತಿಸಬಹುದು.

ಮನುಷ್ಯ ತನ್ನ ಸ್ವಾರ್ಥಕ್ಕಾಗಿ ಮನುಷ್ಯತ್ವವನ್ನು ಕೊಂದು ಆತ್ಮಸಾಕ್ಷಿಯನ್ನು ಬಲಿಕೊಟ್ಟು ತಮ್ಮ ಅಜ್ಜಿಯ ದುರಂತ ಸಾವಿಗೆ ಕಾರಣವಾಗುವ ವಸ್ತು **ಗುಡುಗು ಹೇಳಿದ್ದೇನು**? ಕಥೆಯಲ್ಲಿದೆ. ಸೋಮಾರಿಗಳಾದ ಸೋಮ ಮತ್ತು ಲಕ್ಕರು ಚಿಕ್ಕನೂರು ಸುಬ್ಬೇಗೌಡರ ಒಕ್ಕಲುತನವನ್ನು ತ್ಯಜಿಸಿ, ಕಡಿದಾಳು ಶಾಮಣ್ಣರ ಬಳಿ ಕೆಲಸಕ್ಕೆ ಹೋಗುವ ಸಿದ್ಧತೆಯನ್ನು ನಡೆಸುತ್ತಿರುವ ಸಂದರ್ಭದಲ್ಲೇ ಮಂಜಪ್ಪನ ಅಪ್ಪ ಬಸ್ಸಿನ ಅಪಘಾತದಲ್ಲಿ ಮರಣಿಸಿದ್ದಕ್ಕಾಗಿ ನ್ಯಾಯಾಲಯವು ಸತ್ತವನ ಮಗನಿಗೆ ಎರುಡುನೂರು ರೂಪಾಯಿಗಳನ್ನು ಪರಿಹಾರವಾಗಿ ಕೊಡಿಸಿದ ಸಂಗತಿ ತಿಳಿಯುತ್ತದೆ. ಮಂಜಪ್ಪನಿಗೆ ಅಪ್ಪ ಇದ್ದಾಗಲೂ ಲಾಭ, ಸತ್ತಾಗಲೂ ಲಾಭ ಎಂಬುವ ಆಲೋಚನೆಯೇ ಅಣ್ಣತಮ್ಮಂದಿರಲ್ಲಿ ವಿಘಟನ ಸ್ಥಿತಿಯನ್ನು ತಂದೊಡ್ಡಿ ತಾವೂ ಕೂಡ ಹೇಗಾದರೂ ಸರಿ ಹಣ ಸಂಪಾದಿಸಿಯೇ ತೀರಬೇಕೆಂಬ ಆಸೆಯನ್ನು ಹುಟ್ಟು ಹಾಕುತ್ತದೆ. ತಂದೆ ತಾಯಿಯಿಲ್ಲದ ಈ ಇಬ್ಬರೂ ಸಹೋದರರು ತಮ್ಮ ವ್ಯಸನಗಳಿಗೆ ಇದ್ದದ್ದನ್ನೆಲ್ಲ ಮಾರಿಕೊಂಡು ಈಗ ಉಳಿದಿರುವ ಆಸ್ತಿಯೆಂದರೆ ಮುರುಕು ಗುಡಿಸಲು, ಕಾಲುಭಾಗ ಕಿವುಡು, ಮುಕ್ಕಾಲು ಭಾಗ ಕುರುಡಾದ ಅಜ್ಜಿ ಮಾತ್ರ. ಹಾಗಾಗಿ ಮನಸಿಲ್ಲದ ಮನಸ್ಸಿನಿಂದ ಅಜ್ಜಿಯನ್ನೂ ತಮ್ಮ ಜೊತೆಯಲ್ಲಿ ಒಯ್ಯುತ್ತಾರೆ. ತಮ್ಮ ಬಿರುಸು ನಡಿಗೆಗೆ ಸರಿಸಾಟಿಯಾಗಿ ಹೆಜ್ಜೆ ಹಾಕಲಾಗದ ಅಜ್ಜಿಯ ಅಸ್ತಿತ್ವವನ್ನು ತಿರಸ್ಕರಿಸುವ ಮೊಮ್ಮಕ್ಕಳಿಗೆ ತಂದೆ ಸತ್ತಾಗ ಸೋಮನನ್ನು, ತಾಯಿ ಖಾಯಿಲೆ ಬಿದ್ದಾಗ ಲಕ್ಕನನ್ನು ಲಾಲನೆಪಾಲನೆ ಮಾಡಿದ್ದನ್ನು ನೆನಪಿಸುತ್ತಾಳೆ. ಮುದುಕಿಯ ಮಾತಿಗೆ ಬೇಸತ್ತ ಮೊಮ್ಮಕ್ಕಳು ಅವಳಿಂದ ಬಿಡುಗಡೆ ಬಯಸುತ್ತಾರೆ. ಆಗ ಮಂಜಪ್ಪನಿಗೆ ದೊರೆತ ಪರಿಹಾರಧನ ಕಣ್ಣೆದುರಿಗೆ ನಿಂತು ಧನಾರ್ಜನೆಯ ಮಾರ್ಗೋಪಾಯವನ್ನು ಸೂಚಿಸುತ್ತದೆ. ತೀರ್ಥಹಳ್ಳಿಯಿಂದ ಕೊಪ್ಪಕ್ಕೆ ಹೋಗುವ ಡಾಂಬರು ರಸ್ತೆಯಲ್ಲಿ ಸೋಮ, ಲಕ್ಕ, ಅಜ್ಜಿ ಮೂವರೇ ನಡೆಯುತ್ತಿರುವಾಗ ಹೊಟ್ಟೆ ಬಟ್ಟೆ ಕಟ್ಟಿ ಬೆಳೆಸಿದ ಅಜ್ಜಿಯನ್ನು ಹಣ ಸಂಪಾದಿಸುವ ಸಾಧನವಾಗಿ ಬಳಸಿಕೊಳ್ಳಲು ಯೋಚಿಸುತ್ತಾರೆ. ಎದುರು ತಿರುವಿನಿಂದ ಇವರತ್ತ ಧಾವಿಸುತ್ತಿದ್ದ ಕಾರು ಇವರ ದುರಾಸೆಗೆ ಇಂಬು ಕೊಡಲಾಗಿ ಕಾರಿನ ಚಕ್ರಕ್ಕೆ ಅಜ್ಜಿಯನ್ನು ದೂಡುತ್ತಾರೆ. ಅಜ್ಜಿಯ ಸಾವಿಗೆ ದುಃಖವನ್ನು

ಸೂಚಿಸುತ್ತಾ ಕಾರಿನ ಮಾಲಿಕನಿಂದ ಹಣ ಕೀಳುವತ್ತ ದೌಡಾಯಿಸುತ್ತಾರೆ. ಪರಿಹಾರ ಧನ ಸಿಕ್ಕೇ ಬಿಟ್ಟಿತು ಎನ್ನುವಷ್ಟರಲ್ಲಿ ಕಾರಿನ ಮಾಲೀಕರಾದ ಸುಬ್ಬೇಗೌಡರ ಹೆಂಡತಿಯಲ್ಲಿ ಅಜ್ಜಿ ಈ ಹಿಂದೆ ಮಾಡಿದ ಸಾಲಕ್ಕೆ ಪ್ರತಿಯಾಗಿ ಬರಲಿದ್ದ ಹಣವು ಸಾಲರೂಪದಲ್ಲಿ ಚುಕ್ತ ಆಗಿ ಬಂದ ಮೂಲವನ್ನೇ ಆಶ್ರಯಿಸುತ್ತದೆ. ವಯಸ್ಸಾದ ಕಾಲಕ್ಕೆ ಆಸರೆಗೋಲಾಗಿ ಇರಬೇಕಾಗಿದ್ದ ಮೊಮ್ಮಕ್ಕಳೇ ಅವಳ ಸಾವಿನಿಂದ ಬರಬಹುದಾಗಿದ್ದ ಪರಿಹಾರಧನಕ್ಕಾಗಿ ಆಶಿಸಿ ಆಕೆಯನ್ನು ಸಾವಿನ ಬಾಯಿಗೆ ದೂಡುವುದು ಒಂದಡೆ ಶೋಷಣೆಯಾದರೆ ಮತ್ತೊಂದಡೆ ಮಾನವೀಯ ಮೌಲ್ಯಗಳು ಸ್ವಾರ್ಥದೆದುರು ನಿಷ್ಪ್ರಯೋಜಕವಾಗುತ್ತಿರುವುದನ್ನು ಸಾಬೀತು ಪಡಿಸುತ್ತದೆ.

ಇಂತಹುದೇ ವಸ್ತುಗಳನ್ನೊಳಗೊಂಡದ್ದು ಹಿಂದಿ ಸಾಹಿತ್ಯದ ಪ್ರಖ್ಯಾತ ಸಾಹಿತ್ಯಗಳಾದ ಪ್ರೇಮ್‌ಚಂದ್‌ರ ಕಥೆ(ಹೆಣದಬಟ್ಟೆ)'ಕಫನ್'. ಈ ಕಥೆಯಲ್ಲಿನ ಎರಡು ಪ್ರಮುಖ ಪಾತ್ರಗಳೆಂದರೆ ಘೀಸು ಮತ್ತು ಮಾಧವ. ತಂದೆ ಮಗ ಇಬ್ಬರೂ ತಮ್ಮ ಆಲಸ್ಯತನದಿಂದಾಗಿ ಎಲ್ಲವನ್ನೂ ಕಳೆದುಕೊಂಡು ಊರಿನವರ ತಿರಸ್ಕರಣೆಗೆ ಒಳಗಾಗಿರುತ್ತಾರೆ. ಮಾಧವನ ಹೆಂಡತಿ ಬುಧಿಯಾಳಿಂದ ಸ್ವಲ್ಪ ಮಟ್ಟಿನ ಜೀವನ ನಡೆಯುತ್ತಿತ್ತು. ಅವಳೂ ಹೆರಿಗೆ ಬೇನೆಯಿಂದ ನರಳುತ್ತಿದ್ದು ದುಡಿಯಲಾರದೆ ನೆಲೆ ಹಿಡಿದಿದ್ದಾಳೆ. ಅವಳಿಗೆ ವೈದ್ಯ ಮಾಡಿಸುವುದನ್ನು ಬಿಟ್ಟು ತಂದೆ ಮಗ ಬೆಂದ ಆಲೂಗಡ್ಡೆ ತಿನ್ನುವ ಪೈಪೋಟಿಯಲ್ಲಿ ಮಗ್ನರಾಗುತ್ತಾರೆ. ಮನೆ ಸೊಸೆ ನರಳಿ ನರಳಿ ಸತ್ತಾಗ ಅವಳ ಅಂತ್ಯಸಂಸ್ಕಾರಕ್ಕಾಗಿ ಚಂದಾ ಬೇಡಿ ಐದು ರೂಪಾಯಿ ತರುತ್ತಾದರೂ ಹೆಣದ ಬಟ್ಟೆಗೆ ದುಡ್ಡು ದಂಡವೆಂದು ಅದೇ ಹಣಕ್ಕೆ ತಿಂದು ಕುಡಿದು ಮಜಾಮಾಡುತ್ತಾರೆ. ಇವರು ಹಣಕ್ಕಾಗಿ, ತಿಂದು ಬದುಕುವುದಕ್ಕಾಗಿ, ಮತ್ತೊಂದು ಜೀವವನ್ನು ಬಲಿತೆಗೆದುಕೊಂಡವರು ನೋವಿನಿಂದ ಗೋಳಿಡುತ್ತಿರುವವಳ ಬಗೆಗೆ ಕಿಂಚಿತ್ತೂ ಕರುಣೆಯಿಲ್ಲದೆ 'ನಾಳೆ ಸಾಯೋಳು ಇವತ್ತೇ ಸಾಯಬಾರದ' ಎಂಬ ಅಪ ಶಬ್ದಗಳನ್ನಾಡುವ ಕಟುಕ ಗಂಡ ಮಾಧವ, ಆಲಸ್ಯ ಬೇಜವಾಬ್ದಾರಿತನಗಳಿಂದ ತುಂಬಿ ಹೋಗಿರುವ ಇವರಿಬ್ಬರೂ ಆತ್ಮವನ್ನು ಕೊಂದು ಕೊಂಡು ಬದುಕುವವರು. ಪ್ರೇಮ್‌ಚಂದ್‌ರ ಈ ಕತೆಯು ೧೯೩೬ರಲ್ಲಿಯೇ ರಚನೆಯಾಗಿದ್ದು ನೈತಿಕವಾಗಿ ಕುಸಿಯುತ್ತಿರುವುದಕ್ಕೆ ಬೇಜವಾಬ್ದಾರಿತನ, ಆಲಸ್ಯ, ಸೋಮಾರಿತನವೇ ಕಾರಣವೆಂದು ನಿರೂಪಿಸುತ್ತದೆ. ಗುಡುಗು ಹೇಳಿದ್ದೇನು? ಮತ್ತು ಕಫನ್ ಎರಡೂ ಕಥೆಗಳು ತಮ್ಮ ಬದುಕಿಗಾಗಿ ಮತ್ತೊಂದು ಜೀವಿಯ ಹತ್ಯೆಗೂ ಹೇಸದೆ ಮಾನವೀಯತೆಯನ್ನು ಕಳೆದುಕೊಂಡವರ ಬರ್ಬರ ಬದುಕನ್ನು ಅನಾವರಣಗೊಳಿಸುತ್ತದೆ.

## ೪.೪ ಪೂರ್ವಾಗ್ರಹದಿಂದ ಪರಿವರ್ತನೆ

ಯಾವುದಾದರೂ ಹೊಸ ವಸ್ತುವಿನ ಆವಿಷ್ಕಾರವಾದರೆ ಅದರ ಬಗ್ಗೆ ಪರಿಕಲ್ಪನೆಗಳು ಜನಸಾಮಾನ್ಯರಿಗೆ ಇರುವುದಿಲ್ಲ. ಆದರೆ ಸಿದ್ಧವಸ್ತು ಮತ್ತು ವ್ಯಕ್ತಿಗಳ ಬಗೆಗೆ ಪ್ರತಿಯೊಬ್ಬರಲ್ಲಿಯೂ ಅವರದೇ ಆದ ಪರಿಕಲ್ಪನೆಗಳಿರುವುದು ಲೋಕರೂಢಿ. ಇಂತಹ ಪರಿಕಲ್ಪನೆಗಳು ಕೆಲವೊಮ್ಮೆ ಸುಳ್ಳಾಗಿಬಿಡುತ್ತವೆ. ಇಲ್ಲವಾದರೆ ಮತ್ತೊಂದು ಪರಿಕಲ್ಪನೆಯಲ್ಲಿ ಪರಿವರ್ತನೆಯಾಗುತ್ತದೆ. ಇಂತಹ ಸತ್ಯ ಅಥವಾ ಸುಳ್ಳಿನ ಪರಿಕಲ್ಪನೆಗಳಿಗೆ ಹಲವು ಮುಖಗಳಿರುತ್ತವೆ. ಸ್ವಕಲ್ಪಿತವಾದ ಕಲ್ಪನೆಯ ಮತ್ತೊಂದು ಮುಖವೂ ಪರಿಚಯವಾದಾಗ, ಅದರ ಸತ್ಯಾಸತ್ಯತೆಗಳು ತಿಳಿಯುತ್ತವೆ. ಸತ್ಯದ ಹಲವು ಮುಖಗಳು ಏಕಕಾಲದಲ್ಲಿ ಅನುಭವಕ್ಕೆ ಬಾರದೆ ಹೋಗುವ ಸಾಧ್ಯತೆಗಳೇ ಹೆಚ್ಚು. ಬೇರೆಯವರಿಂದ ತಿಳಿಯಲ್ಪಡುವ ಅಥವಾ ಸ್ವತಃ ಪ್ರತ್ಯಕ್ಷೀಕರಿಸಿಕೊಂಡಾಗ ಹಿಂದಿನ ಕಲ್ಪನೆಯು ತಪ್ಪಿದ್ದ ಪಕ್ಷದಲ್ಲಿ ಸತ್ಯವಾದುದನ್ನು ಒಪ್ಪಿಕೊಳ್ಳದೆಯೇ ಸುಳ್ಳನ್ನೇ ಸತ್ಯವೆಂದು ವಾದಿಸುವ ಪ್ರಜ್ಞಾಪೂರ್ವಕಸ್ಥಿತಿಯೇ ಪೂರ್ವಾಗ್ರಹವೆಂದು ಕರೆಸಿಕೊಳ್ಳುತ್ತದೆ. ನಾವು ಎಷ್ಟೋ ಬಾರಿ ಮತ್ತೊಮ್ಮೆ ಪರಿಶೀಲಿಸಿದಾಗ ಪೂರ್ವಾಗ್ರಹಗಳಿಂದ ಬಿಡುಗಡೆ ಹೊಂದಿ ಸರಿಯಾದ ದಾರಿಯತ್ತ ನಡೆದು ನಮ್ಮ ಮನಸ್ಥಿತಿಯನ್ನು ಧನಾತ್ಮಕವಾಗಿಯೋ ಋಣಾತ್ಮಕವಾಗಿಯೋ ಬದಲಾಯಿಸಿ ಕೊಂಡಿರುತ್ತೇವೆ. ಇದು ಜೀವ ಸಹಜ ಕ್ರಿಯೆ. ಇದನ್ನು ತೇಜಸ್ವಿಯವರ ಕಥನಗಳಲ್ಲಿ ಗುರುತಿಸಲು ಸಾಧ್ಯವಿದೆ.

ಹಾಸ್ಯ ಮಿಶ್ರಿತ ವ್ಯಂಗ್ಯ ಶೈಲಿಯಲ್ಲಿ ಕಲಾತ್ಮಕವಾಗಿ ನಿರೂಪಿಸಲ್ಪಟ್ಟ **ಡೇರ್ ಡೆವಿಲ್ ಮುಸ್ತಾಫಾ** ಕಥೆಯು ಕಾಲೇಜಿನ ಪರಿಸರದಲ್ಲಿ ವಿದ್ಯಾರ್ಥಿ ದೆಸೆಯಲ್ಲಿ ಮೂಡುವ ವೈಷಮ್ಯ-ಜಾತೀಯತೆಯ ದಳ್ಳುರಿ ಪರಸ್ಪರ ದ್ವೇಷ ಅಸೂಯೆಗೆ ದಾರಿ ಮಾಡಿದಂತೆ ಅದರಿಂದ ಹೊರಬರುವುದಕ್ಕೆ ಸಹಜ ಸ್ನೇಹ ವಿಶ್ವಾಸ ಕಾರಣವಾಗುವ ರೀತಿಯನ್ನು ಚಿತ್ರಿಸುತ್ತದೆ.

ಮುಸ್ತಾಫ ಆ ಕಾಲೇಜಿನಲ್ಲಿರುವ ಒಬ್ಬನೇ ಮುಸ್ಲಿಂ ವಿದ್ಯಾರ್ಥಿ. ಅವನ ಹೆಸರು 'ಜಮಲ್ ಅಬ್ದುಲ್ ಮುಸ್ತಾಫ ಹುಸೇನ್' ಆತನ ಹೆಸರು ಕರಾಳತೆಯನ್ನು ಕಲ್ಪಿಸಿಕೊಳ್ಳುವುದಕ್ಕೆ ಅವಕಾಶ ಮಾಡಿಕೊಡುತ್ತದಯೇ ಹೊರತು ಆತನ ಸ್ವಭಾವ ಆ ರೀತಿಯದಲ್ಲ. ಆತನು ತನ್ನ ನಡವಳಿಕೆಗಳಿಂದ ವಿಶ್ವಾಸ ಹುಟ್ಟಿಸುತ್ತಾ ಎಲ್ಲರೊಳಗೊಂದಾಗಿ ಜಾತೀಯತೆಯನ್ನು ಮರೆಸುವಂತಾಗುತ್ತಿತ್ತು. ಆದರೆ ಮುಸ್ಲಿಮತೆಯ ಸಂಕೇತವಾಗಿ ಆತ ಧರಿಸುತ್ತಿದ್ದ ಫೇಜ್ ಟೋಪಿ ಇತರರು ಅವನೊಡನೆ ಸಹಕರಿಸಿದಂತೆ ಅಡ್ಡಿ ಒಡ್ಡುತ್ತಿತ್ತು. ಆತನ ಫೇಜ್ ಟೋಪಿಯ ಧಾರಣೆಯಿಂದ ಕಿರಿಕಿರಿಯನ್ನನುಭವಿಸುತ್ತಿದ್ದ ಕೆಲವರು ತಮಗೆ ಬೋರ್ಡ್ ಕಾಣುವುದಿಲ್ಲವೆಂಬ ಕಾರಣದಿಂದ ಆತನನ್ನು ಹಿಂದಕ್ಕೆ ಕಳುಹಿಸಿದರೆ ಯಾವುದಕ್ಕೂ ಬಗ್ಗದ ಹಿಂಜರಿಯದ ತಾನು 'ಡೇರ್ ಡೆವಿಲ್ ಮುಸ್ತಾಫ' ಎಂದು ಕರೆದುಕೊಳ್ಳುತ್ತಾನೆ. ಇದರಿಂದಾಗಿ ಆತನ ಇಮೇಜು ಬೆಳೆದು ಮುಸ್ಲಿಂ ಹುಡುಗ ಎಂಬ ಅಂತರ ಕಡಿಮೆಯಾಗುತ್ತದೆ. ಕ್ರಮೇಣ ಇತರ ಹುಡುಗರೊಂದಿಗೆ ಸಹಜವಾಗಿ ಬೆರೆತು ಆಡುತ್ತಾ ನಂಬಿಕೆ ವಿಶ್ವಾಸ ಗಳಿಸುಕೊಳ್ಳುತ್ತಾನೆ. ಜಾತೀಯತೆ ಎಂಬುದು ಸಮಾಜದ ಇತರ ವರ್ಗದಲ್ಲಿದ್ದಷ್ಟು ತೀವ್ರವಾಗಿ ಇವರುಗಳನ್ನು ಕಾಡುವುದಿಲ್ಲ. ಒಮ್ಮೆ ಆಟವಾಡುವಾಗ ಗುಂಪಿನಗುಂಪಿನ ನಡುವೆ ಜಗಳವಾಗಿ ಮುಸ್ತಾಫನನ್ನು ಕೇಂದ್ರಬಿಂದುವನ್ನಾಗಿಟ್ಟುಕೊಂಡು ಶಂಕರ, ರಾಮಾನುಜ ಅಯ್ಯಂಗಾರಿ ಕಾದಾಡುತ್ತಾರೆ.

ದೂಡಾಟದಲ್ಲಿ ಮುಸ್ತಾಫನ ಫೆಜ್ ಟೋಪಿ ನೆಲಕ್ಕೆ ಬಿದ್ದು ಉಳಿದ ವಿದ್ಯಾರ್ಥಿಗಳ ಕಾಲ್ತುಳಿತಕ್ಕೆ ಸಿಕ್ಕಿ ಮತ್ತೆ ಧರಿಸಲಾಗದ ಸ್ಥಿತಿ ತಲುಪುತ್ತದೆ. ಟೋಪಿಗಾದ ಗತಿಯಿಂದ ಅವಮಾನಿತನಾದೆನೆಂದು ಖಿನ್ನನಾದ ಮುಸ್ತಾಫ ಮುಯ್ಯಿ ತೀರಿಸಿಕೊಳ್ಳಲು ಸಮಯ ಕಾಯುತ್ತಾನೆ. ಇಲ್ಲಿಯೂ ಜಾತಿವೈಷಮ್ಯದಿಂದ ಕಾರ್ಯಗತನಾಗುವುದಕ್ಕೆ ಮುಂದಾಗುವುದಲ್ಲ. ತನ್ನ ವ್ಯಕ್ತಿಗತ ಅಹಂಗೆ ಬದ್ಧ ಪಟ್ಟಿನಿಂದ ತಳೆದ ನಿರ್ಧಾರವಷ್ಟೇ!

ಗಣೇಶೋತ್ಸವವೆಂದರೆ ಎಲ್ಲಿಲ್ಲದ ಗದ್ದಲ, ತರಾತುರಿ, ವಿಜೃಂಭಣೆ, ಉತ್ಸವ ಎಲ್ಲಾ! ಅಂತೆಯೇ ಅಲ್ಲಿ ನಡೆಯುತ್ತಿದ್ದ ಉತ್ಸವ ಈ ಹಿಂದೆ ನಡೆದ ಉತ್ಸವದ ಗಲಭೆಯನ್ನೂ ಮೀರಿಸ ಬಹುದೆಂದು ಕುತೂಹಲಿತರಾದವರು ಎಂದಿನಂತೆ ನಡೆದ ಗಲಭೆಗೆ ಮುಸ್ಲಿಮರೇ ಕಾರಣ ಎಂದು ತಪ್ಪು ತಿಳುವಳಿಕೆಗೆ ಒಳಗಾಗುತ್ತಾರೆ. ಆ ಸಂದರ್ಭದಲ್ಲಿ ಏರ್ಪಟ್ಟ ಗದ್ಧಲ ದೊಂಬಿಯನ್ನು ಮುಸ್ತಾಫ ಹರಸಾಹಸದಿಂದ ನಿಯತ್ರಿಸುತ್ತಾನೆ. ಆಗ ಏರ್ಪಟ್ಟ ಗಾಯದಿಂದ ಆಸ್ಪತ್ರೆಗೆ ಸೇರುತ್ತಾನೆ. ಇದರಿಂದ ಇಡೀ ಕಾಲೇಜಿನ ವಿದ್ಯಾರ್ಥಿಗಳು ತೆಳೆದಿಂದ ವೈರದ್ವೇಷ ಭಾವನೆ ಕರಗಿ ಮುಸ್ತಾಫನ ಬಗ್ಗೆ ಮೃದು ಧೋರಣೆ ತಳೆಯುವುದಕ್ಕೆ ಕಾರಣವಾಗುತ್ತದೆ. ಡೇರ್ ಡೇವಿಲ್ ಎಂಬ ಹೆಸರು ಅನ್ವರ್ಥವಾಗುತ್ತದೆ.

ಕಾಲೇಜಿನ ವಾರ್ಷಿಕೋತ್ಸವದ ಸ್ಪರ್ಧೆಯಲ್ಲಿ ಭಾಗವಹಿಸುವಂತೆ ಮುಸ್ತಾಫನ ಹೆಸರನ್ನು ಸೂಚಿಸಲಾಗಿದ್ದು ಅದರ ಅರಿವಿರದ ಮುಸ್ತಾಫ ವೇದಿಕೆಯಲ್ಲಿ ಗೊಂದಲಕ್ಕೀಡಾಗುವುದು ಎಲ್ಲಾ ನಡೆದೇ ಇರುತ್ತದೆ. ಒಟ್ಟಿನಲ್ಲಿ ಸಹಪಾಠಿಗಳಿಗೆ ಮೋಜಿನ ಪ್ರಸಂಗವನ್ನು ಒದಗಿಸುವ ವ್ಯಕ್ತಿಯಾಗಿ ಮುಸ್ತಾಫ ನಿಲ್ಲುತ್ತಾನೆ. ವಾರ್ಷಿಕೋತ್ಸವದ ಮತ್ತೊಂದು ಸ್ಪರ್ಧೆಯಲ್ಲಿ ಜಾದೂ ಮಾಡುವುದಾಗಿ ಹೇಳಿ ಆ ಸಂದರ್ಭವನ್ನು ತನಗಾಗಿದ್ದ ಫೆಜ್‌ಟೋಪಿಯ ಅವಮಾನದ ಮುಯ್ಯಿ ತೀರಿಸಲು ಹವಣಿಸುತ್ತಾನೆ. ರಾಮಾನುಜ ಅಯ್ಯಂಗಾರಿಯನ್ನು ಜಾದೂಗೆ ಬಳಸಿಕೊಂಡು ಹಾಸ್ಯದ ಮುಖೇನ ಬಿಗುವಾಗಲಿದ್ದ ಪ್ರಕ್ರಿಯೆಯನ್ನು ಸಡಿಲಗೊಳಿಸುತ್ತಾನೆ. ಅಲ್ಲಿಗೆ ಅವನ ಸೇಡು ಇಲ್ಲವಾಗಿ ಕಾರ್ಯಕ್ರಮ ಮುಕ್ತಾಯಗೊಳ್ಳುತ್ತದೆ. ತಾನು ಮಾಡಿದ ಕ್ರಿಯೆಗಾಗಿ ಕ್ಷಮೆಯಾಚಿಸುತ್ತಾನೆ. ಈ ಕಥೆಯಯಲ್ಲಿ ಕೋಮು ಭಾವನೆಗಳು ವಿದ್ಯಾರ್ಥಿಜೀವನದ ಉಂಟು ಮಾಡುವ ಪರಿಣಾಮವನ್ನು ಅದನ್ನು ಮೀರಿ ಬೆಳೆದಾಗ ಅಲ್ಲಿ ಉಂಟಾಗುವ ಸಾಮರಸ್ಯವನ್ನು ಸಹಜ-ಸ್ನೇಹ ವಿಶ್ವಾಸವನ್ನು ಹಾಸ್ಯಮಯ ಚಿತ್ರಣದೊಂದಿಗೆ ಕಟ್ಟಿಕೊಡಲಾಗಿದೆ.

ತ್ಯಕ್ತ ಕಥೆಯಲ್ಲಿ ಪತ್ರಿಕೆಯಲ್ಲಿ ಸುದ್ದಿಯೊಂದನ್ನು ಓದಿದ ಸೋಮುವಿಗೆ ಅಲ್ಲಿನ ವಾರ್ತೆ ಜೀವನ ಮತ್ತು ಸಾವಿನ ಬಗ್ಗೆ ಹಲವು ಪ್ರಶ್ನೆಗಳನ್ನು ಹುಟ್ಟುಹಾಕುತ್ತದೆ. ಅದೇ ಸಮಯಕ್ಕೆ ಅಲ್ಲಿಗೆ ಬಂದ ಗೆಳೆಯ ಹೇಮಂತನೊಡನೆ ಸಮಾಜ, ಅತ್ಯಾಚಾರ, ಅಪರಾಧಿ, ನಿರಪರಾಧಿ ಎಂದೆಲ್ಲ ತನ್ನ ಇತ್ಯರ್ಥವಾಗದ ಪ್ರಶ್ನೆಗಳ ಜಿಜ್ಞಾಸೆಯಲ್ಲಿ ಚರ್ಚೆಗೆ ತೊಡಗುತ್ತಾನೆ. ಗೊಂದಲದ ಗೂಡಂತೆ ಸೋಮುವಿನ ಅರ್ಥವಾಗದ ಮಾತುಗಳಿಂದ ರೋಸಿ ಹೋದ ಹೇಮಂತ ಆತನನ್ನು ಬೌದ್ಧರ ಶೂನ್ಯವಾದಿ, ದುರಂತ ಪ್ರವಾದಿ ಎಂದು ಜರೆದು ಅಲ್ಲಿಂದ ಕಾಲು ಕೀಳುತ್ತಾನೆ. ಯಾರೂ ತನ್ನನ್ನು ಅರ್ಥೈಸಿಕೊಳ್ಳುತ್ತಿಲ್ಲವೆಂದು ಗೊಣಗುತ್ತಾನೆ. ಒಂಟಿತನ ಮತ್ತು ಬೇಸರಿಕೆಯಿಂದ ಸುಮ್ಮನೆ ಕೂತಿದ್ದಾತ ಅದರಿಂದ ಹೊರಬರಲು ಕಥೆ ಹೇಳೇಂದು ಪೀಡಿಸುವ ಆರು ವರ್ಷದ ಕಿಟ್ಟುವಿನೊಡನೆ ಮಾತಿಗಿಳಿಯುತ್ತಾನೆ. 'ಗೂಬೆಗುಮ್ಮನ' ಕಥೆಯನ್ನು ಭಯದಿಂದ ಆಲಿಸಿದ ಕಿಟ್ಟಿ ಆ

ನಂತರ ಅಜ್ಜಿಯ ಬಳಿ ಹೋಗಿ ಸೃಷ್ಟಿಸಿದ ಅವಾಂತರದಿಂದ ಮನೆಯ ವಾತಾವರಣ ತಲ್ಲಣಗೊಳ್ಳುತ್ತದೆ. ಗೂಬೆಗುಮ್ಮನಿಂದಾಗಿ ಭಾಷಾತೀತ ಅನುಭವಗಳು ತರ್ಕದ ಜೊತೆ ಗುದ್ದಾಟಕ್ಕಿಳಿದು 'ತ್ಯಕ್ತ ಪ್ರವಾದಿ'ಯಾಗಿ ರೂಪುತಾಳುತ್ತದೆ.

ಸೊಳ್ಳೆಬೈಲು ಬಿಳಿಯಪ್ಪ ಹೆಗ್ಗಡೆಯ ಸತ್ಕಾರ–ಮಾತುಕತೆ, ಅಜ್ಜಿಯ ಸಾವಿನ ಸಂದರ್ಭದಲ್ಲಿ ಹೇಮಂತನ ಸಂತಾಪ ಸೂಚಕ ಮಾತುಗಳು, ಅಜ್ಜಿಯು ಸತ್ತ ನಂತರದ ಸ್ಥಿತಿಯ ಯಾರು ಎಲ್ಲಿಗೆ ಕೊಂಡೊಯ್ದರು ಎಂಬ ಕಿಟ್ಟಿಯ ಪ್ರಶ್ನೆ, ಅದಕ್ಕೆ ಸೋಮು ಕೊಟ್ಟ ಉತ್ತರ ಇವೆಲ್ಲವುಗಳ ಜೊತೆ ಮಾತಿನಾಚೆಗಿನ ಸತ್ಯ; ಸತ್ಯ ಮೂರ್ತವಾಗಲು ಮಾತಿನ ಅಗತ್ಯ, ಮಾತಿನ ಮಿತಿ, ಮಾತು ಮತ್ತು ವಾಸ್ತವಿಕತೆಯ ಸಂಬಂಧಗಳನ್ನು ಒರೆ ಹಚ್ಚಿ ಸೋಮು ತನ್ನಷ್ಟಕ್ಕೆ ನಿರೂಪಿಸಿಕೊಳ್ಳುತ್ತಾನೆ. ಒಟ್ಟಾರೆಯಾಗಿ ಈ ಕಥೆ ಜೀವನದ ಅನೇಕ ವಿಷಯಗಳತ್ತ ಗಮನಹರಿಸಿದರೂ ಯಾವುದನ್ನೂ ಸ್ಪಷ್ಟವಾಗಿ ಭಾಷೆಯ ಮೂಲಕ ವ್ಯಕ್ತಪಡಿಸಲು ಸಾಧ್ಯವಾಗದ ಮಾತಿನ ಸೋಲನ್ನೇ ಸೂಚಿಸುತ್ತದೆ.

## ೪.೫ ಪ್ರಜ್ಞಾತೀತ ವಾಸ್ತವ ಹಿಡಿದ ಜಡದಾರಿ

ವಿಜ್ಞಾನ-ತಂತ್ರಜ್ಞಾನದಲಾದ ಪ್ರಗತಿಯಿಂದ ಬದಲಾವಣೆಯ ಗತಿ ಅತ್ಯಂತ ರಭಸದ್ದಾಗಿತ್ತು. ಈ ಪ್ರಕ್ರಿಯೆಯು ಒಂದು ಪ್ರದೇಶಕ್ಕೆ ಸೀಮಿತವಾಗದೆ ವಸಾಹತುಶಾಹಿ-ಸಾಮ್ರಾಜ್ಯಶಾಹಿಯ ಪ್ರಭಾವದಿಂದ ಪ್ರಪಂಚದಾದ್ಯಂತ [ಕಬಂಧ ಬಾಹುವನ್ನು ಚಾಚಿತು] ವ್ಯಾಪಕವಾಗಿ ಹರಡಿದ್ದಿತು. ಭಾರತೀಯ ಬದುಕಿನಲ್ಲಿ ಬಿರುಗಾಳಿಯಂತೆ ಬಂದ ಆಧುನಿಕತೆ ವರ್ತುಲವರ್ತುಲವಾಗಿ ಆಕ್ರಮಿಸಿಕೊಂಡು ದೇಶದ ಸಾಮಾಜಿಕ ಸಾಂಸ್ಕೃತಿಕ ವಲಯದಲ್ಲಿ ಬದಲಾವಣೆಯನ್ನುಂಟು ಮಾಡಿತು. ವ್ಯಕ್ತಿ ಮತ್ತು ಸಾಮಾಜಿಕ ಆಶಯಗಳು ಭಿನ್ನ ನೆಲೆಯಲ್ಲಿ ಪರಿವರ್ತನೆಗೆ ಈಡಾಗಬೇಕಾಯಿತು. ಸಾಮಾಜಿಕ ಆಶಯಗಳಲ್ಲಿ ಪ್ರಾಮುಖ್ಯತೆಯನ್ನು ಪಡೆಯುವುದೇ ಪರಂಪರಾಗತ ನಂಬಿಕೆಗಳು, ನೆಮ್ಮದಿಯನ್ನು ಪೋಷಿಸುವ ಸಾಂಪ್ರದಾಯಿಕ ವಾತಾವರಣದ ಒಪ್ಪಿತ ಬದುಕು, ಮತೀಯ ಆವರಣ, ಆರ್ಥಿಕಸ್ಥಾನಮಾನ ಇವೆಲ್ಲವೂ ವ್ಯಕ್ತಿಯ ಸಾಮಾಜಿಕ ಸ್ಥಾನಮಾನವನ್ನು ನಿರ್ಧರಿಸುವಂತಹವಾಗಿದೆ. ಅದರಿಂದಲೇ ಮನುಷ್ಯ ತನ್ನ ಸಾಮಾಜಿಕ ಸ್ಥಿತಿಗತಿಯನ್ನು ಔನ್ನತ್ಯದತ್ತ ಕೊಂಡೊಯ್ಯಲು ಹರಸಾಹಸ ಪಡುತ್ತಾನೆ. ಇದು ಆತನನ್ನು ಬೌದ್ಧಿಕ ದಾಸ್ಯಕ್ಕೆ ಈಡು ಮಾಡುತ್ತಾದ್ದರಿಂದ ಅದರಿಂದ ಹೊರಬರುವ ಪ್ರಯತ್ನ ಯಶಸ್ವಿಯಾಗುವುದಿಲ್ಲ. ಇಂತಹ ಸಂದರ್ಭದಲ್ಲಿ ಆಧುನಿಕತೆ ಶಿಕ್ಷಣದ ಮೂಲಕವಾಗಿ ಇಲ್ಲವೆ ಸಾಧನ ಸಾಮಾಗ್ರಿಗಳ ಮುಖಾಂತರ ಬದುಕನ್ನು ಪ್ರವೇಶಿಸಿದಾಗ ಸಾಮಾಜಿಕ ಸ್ಥಿತ್ಯಂತರಕ್ಕೆ ಕಾರಣವಾಗಿ ಸಾಂಸ್ಕೃತಿಕ ಆಶಯಗಳು ಬುಡಮೇಲಾಗುತ್ತವೆ. ಏಕೆಂದರೆ ಪ್ರಸ್ತುತ ಬದುಕುತ್ತಿರುವ ಸಾಮಾಜಿಕ ಆವರಣವು ಪರಂಪರಾಗತ ಮೌಲ್ಯಗಳನ್ನು ಒಪ್ಪಿಕೊಳ್ಳಲೂ ಬಿಡದೆ ಆಧುನಿಕ ಆವಶ್ಯಕತೆಗಳನ್ನು ಅಪ್ಪಿಕೊಳ್ಳಲು ಆಗದಂತಹ ಸಂಧಿಕಾಲಕ್ಕೆ ತಂದು ನಿಲ್ಲಿಸಿದ್ದು. ದ್ವಂದ್ವದಲ್ಲಿ ಬಿದ್ದ ಸಾಮಾಜಿಕ ಜನಜೀವನಕ್ಕೆ ಇಂತಹ ಬದಲಾವಣೆಯೊಂದಿಗೆ ರಾಜಿಮಾಡಿಕೊಳ್ಳಲು ಸಾಕಷ್ಟು ತಡಬಡಿಕೆ ಉಂಟಾಯಿತು.

ತಬರನ ಕಥೆ, ಕುಬಿ ಮತ್ತು ಇಯಾಲ, ಅಬಚೂರಿನ ಪೋಸ್ಟಾಫೀಸು, ಅವನತಿ, ತುಕ್ಕೋಜಿ ಈ ಕಥನಗಳು ಸ್ವಾತಂತ್ರ್ಯೋತ್ತರ ಭಾರತದ ಕರಾಳ ಪರಿಸ್ಥಿತಿಗಳನ್ನು ಚಿತ್ರಿಸುತ್ತದೆ. ಈ ಕಥನಗಳ ಮೂಲಕ ಗ್ರಾಮೀಣ ಸಮಾಜದ ಸಾಂಸ್ಕೃತಿಕ ಸಾಮಾಗ್ರಿಗಳನ್ನು ಅನ್ವೇಷಿಸಿರುವುದು ಔಚಿತ್ಯಪೂರ್ಣವಾಗಿದೆ.

ಬ್ರಿಟಿಷರ ಆಳ್ವಿಕೆಯ ಕಾಲದಲ್ಲಿ ನಾಲ್ಕನೇಯ ದರ್ಜೆಯ ನೌಕರನಾಗಿದ್ದ ಪಡುಗೆರೆಯ ತಬರಶೆಟ್ಟಿ ಸರ್ಕಾರದ ಹಲವು ಇಲಾಖೆಗಳಲ್ಲಿ ದುಡಿದು ಸ್ವಾತಂತ್ರ್ಯೋತ್ತರ ಭಾರತದಲ್ಲಿ ನಿವೃತ್ತನಾಗಿರುತ್ತಾನೆ. ನಿವೃತ್ತಿ ವೇತನ ಪಡೆಯುವುಕ್ಕಾಗಿ ಇಲಾಖೆಯಿಂದ ಇಲಾಖೆಗೆ ಅಲೆದಾಡಿದರೂ ಯಾವುದೇ ಪ್ರಯೋಜನವಾಗುವುದಿಲ್ಲ ಎಲ್ಲಡೆಯಿಂದ ಅಸಹಕಾರ ಮತ್ತು ತಿರಸ್ಕಾರಕ್ಕೆ ಮಾತ್ರ ದೊರೆಯುತ್ತದೆ. ನಿವೃತ್ತಿಗೆ ಮೊದಲು ತಬರಶೆಟ್ಟಿ ಕಾಫಿ ಡಿಪೋದ ಬಳಿ ಸುಂಕ ವಸೂಲಿ ಕೆಲಸ ಮಾಡಪಟ್ಟು ಮೊದಲನೇ ದಿನವೇ ಅಲ್ಲಿ ನಡೆದ ಕಲಹದಿಂದಾಗಿ ಕರನಿರಾಕರಣೆಯ ಚಳುವಳಿ ಹರಿದಿದ್ದು ಅದನ್ನು ಅವರು ಪಾವತಿಸಿದ ಕಾರಣ ಅರವತ್ತು ರೂಪಾಯಿ ಸಂಬಳದವನಾದ ಆತ ಮೂರು ನೂರ ಅರವತ್ತು ರೂಪಾಯಿಗಳನ್ನು ಅಧ್ಯಾಯವಾಗಿ ತೆರಬೇಕಾಗಿ ಬರುತ್ತದೆ. ಇದರ ಜೊತೆಗೆ ಮನೆಯಲ್ಲಿದ್ದ ಆತನ ಹೆಂಡತಿ ಅಪ್ಪಿ ದಿನದಿನಕ್ಕೆ ಸೊರಗುತ್ತಿರುತ್ತಾಳೆ. ವೈದ್ಯರಲ್ಲಿ ತೋರಿಸಿದಾಗ ಸಕ್ಕರೆಖಾಯಿಲೆ ಎಂದು ತಿಳಿದುಬರುತ್ತದೆ. ಅದೇ

ಸಮಯಕ್ಕೆ ತಬರ ನಿವೃತ್ತನಾಗುತ್ತಾನೆ. ಹೆಂಡತಿಯ ರೋಗ ದ್ವಿಗುಣಗೊಂಡು ಕಾಲಿನ ಕಿರುಬೆರಳು ಗ್ಯಾಂಗ್ರೀನ್‌ಗೆ ತುತ್ತಾಗಿದೆಯೆಂದು ಅದನ್ನು ಕತ್ತರಿಸಿ ತೆಗೆಯಬೇಕೆಂದು ಸಲಹೆ ಕೊಡುತ್ತಾರೆ. ಹಣವಿಲ್ಲದೆ ಔಷಧಿಯನ್ನು ಕೊಡಿಸಲು ಸಾಧ್ಯವಾಗದ ತಬರ ಪಂಡಿತರ ಬಳಿಯೇ ಮದ್ದು ಕೊಡಿಸಿದರರಾಯಿತೆಂದು ಮರಳಿ ಬರುತ್ತಾನೆ. ಈ ಮಧ್ಯೆ ತನ್ನ ಪಿಂಚಣಿಹಣ ಪಡೆಯುವ ಉದ್ದೇಶದಿಂದ ತಾನು ಮೂವತ್ತು ವರ್ಷ ಸೇವೆ ಸಲ್ಲಿಸಿದ ಎಲ್ಲಾ ಇಲಾಖೆಗೂ ಸುತ್ತಾಡಿದರೂ ತನ್ನ ಸೇವಾ ಘೋಷಣೆಯ ದಾಖಲೆಗಳನ್ನು ಒಟ್ಟುಗೂಡಿಸುವಲ್ಲಿ ವಿಫಲನಾಗುತ್ತಾನೆ. ಇತ್ತ ಹೆಂಡತಿಯ ರೋಗ ಉಲ್ಬಣಗೊಂಡು ಕಾಲನ್ನು ಮಂಡಿಯವರೆಗೆ ಕತ್ತರಿಸಿ ತೆಗೆಯದಿದ್ದರೆ ಬದುಕುಳಿಯುವುದಿಲ್ಲವೆಂದು ವೈದ್ಯರು ಸೂಚಿಸುತ್ತಾರೆ. ಹಣದೊರೆಯದೆ ಶುಶ್ರೂಷೆ ಮಾಡಿಸಲಾಗದೆ ಆಸ್ಪತ್ರೆ ಅಲೆದಾಟದಿಂದ ಸುಸ್ತಾಗಿದ್ದ ತಬರಗಿನೆ ಅಪ್ಪಿ ತನಗೆ ಔಷಧಿ ಏನೂ ಬೇಡ ನಾಕಾಣೆ ಪಾಷಾಣ ತಂದುಕೊಡಿ ಎಂದು ನೋವಿನಿಂದ ನುಡಿಯುತ್ತಾಳೆ. ವ್ಯಂಗ್ಯವೆಂದರೆ ಪಾಷಾಣ ತರಲಿಕ್ಕೂ ತಬರನ ಜೇಬಿನಲ್ಲಿ ನಾಲ್ಕಾಣೆಯೂ ಇರುವುದಿಲ್ಲ. ಹಣವಿಲ್ಲದೆ ಚಿಂತಿತನಾಗುವ ತಬರ ಅಪ್ಪಿಯನ್ನು ಉಳಿಸಿಕೊಳ್ಳುವ ಸಲುವಾಗಿ ಅವಳ ಕಾಲನ್ನು ಮಂಡಿಯವರೆಗೆ ಕಡಿದುಹಾಕಲು ಕಟುಕ ಯೂಸುಫನನ್ನು ಬೇಡಿಕೊಳ್ಳುತ್ತಾನೆ. ಅವನ ಹೃದಯವಿದ್ರಾವಕವಾಗಿರುತ್ತದೆ ಆದರೂ ವ್ಯವಸ್ಥೆಗೆ ಮಾತ್ರ ಕರಣೆ ಬರುವುದಿಲ್ಲ.

ತಬರನ ನಿವೃತ್ತಿವೇತನಕ್ಕೆ ಸಂಬಂಧಿಸುತ್ತದೆ ಪಡುಗೆರೆಯಲ್ಲಿನ ಪ್ರತಿಷ್ಠಿತ ವ್ಯಕ್ತಿಗಳ ಪ್ರಮಾಣ ಪತ್ರಗಳ ಅವಶ್ಯಕತೆಯಿರುತ್ತದೆ. ಎಷ್ಟೋ ದಿನ ಅಲೆದಲೆದು ಸುಸ್ತಾದ ನಂತರ; ಕಡೆಗೊಮ್ಮೆ ತಬರನ ಪಿಂಚಣಿ ಹಣದ ಫೈಲು ಸಿದ್ಧವಾಗಿ ಹಣ ಮಂಜೂರಾಗುವುದಾಗಿ ತೀರ್ಮಾನವಾಗುತ್ತದೆ. ಫೈಲು ತಹಶೀಲ್ದಾರರ ಮೇಜಿನ ಮೇಲೆ ಬಂದಾಗ ಅವನು ಲಂಚ ಕೇಳುತ್ತಾನೆ. ಹೆಂಡತಿಯನ್ನು ಉಳಿಸಿಕೊಳ್ಳಲು ಸಾಧ್ಯವಾಗದ ಅಸಹಾಯಕತೆ, ಇನ್ನೊಂದೆಡೆ ಕ್ರೌರ್ಯ ತುಂಬಿದ ವ್ಯವಸ್ಥೆಯಿಂದ ಹತಾಶನಾದ ತಬರ ಹುಚ್ಚನಂತೆ ವರ್ತಿಸತೊಡಗುತ್ತಾನೆ. ನಿರ್ದಯ ಜಗತ್ತಿನ ಎದುರು ಆತನ ಮಾತುಗಳೆಲ್ಲವೂ ಅಸಂಬದ್ಧವಾಗಿರುತ್ತದೆ. ಅಧಿಕಾರಶಾಹಿ ದರ್ಪದಿಂದ ತಬರನ ವ್ಯಕ್ತಿತ್ವ ವಿನಾಶವನ್ನು ಹೊಂದುತ್ತದೆ.

ಮೌಢ್ಯ–ಅಜ್ಞಾನ, ಬಡತನ–ಕೊಳಕು, ಸ್ವಾರ್ಥ ರಾಜಕೀಯ ಇವುಗಳ ಕೊಂಪೆಯಾಗಿರುವ ಭೈರಾಪುರಕ್ಕೆ ಯಾವ ಸರ್ಕಾರಿ ವೈದ್ಯನೂ ಬರಲೊಪ್ಪದ ಸಂದರ್ಭದಲ್ಲಿ ವೈಜ್ಞಾನಿಕ ಮನೋಭಾವದ ಡಾ ಕುಬೇರನಾಥ ಅಲ್ಲಿಗೆ ಬರಲು ಒಪ್ಪುತ್ತಾನೆ. ವಿಚಾರವಾದಿಯಾದ ಡಾ. ಕುಬಿ ಕೇವಲ ರೋಗಗಳ ವಿರುದ್ಧ ಮಾತ್ರ ಹೋರಾಡದೆ ಭೈರಪುರದ ಎಲ್ಲಾ ಅನಿಷ್ಟಗಳ ವಿರುದ್ಧವೂ ಹೋರಾಡುವಂತಹ ಪರಿಸ್ಥಿತಿ ಎದುರಾಗುತ್ತದೆ. ಡಾ. ಕುಬಿ ಭೈರಾಪುರದ ಸರ್ಕಾರಿ ಆಸ್ಪತ್ರೆಗೆ ಬರುವ ಮೊದಲೇ ಅಲ್ಲಿ ಕಾಂಪೌಂಡರ್ ಆಗಿ ಕೆಲಸ ಮಾಡುತ್ತಿದ್ದ ರಾಮರಾಯ ಊರಿನ ಎಲ್ಲ ರೋಗಿಗಳ–ರೋಗಗಳ ಕಾಂಟ್ರಾಕ್ಟ್ ತೆಗೆದುಕೊಂಡು ಔಷಧಿಗಳನ್ನು, ಶಸ್ತ್ರಾಸ್ತ್ರಗಳನ್ನು ಅವರ ಮೇಲೆ ಮನಸ್ಸಿಗೆ ಬಂದಂತೆ ಪ್ರಯೋಗಿಸುತ್ತಾ ಅನೇಕ ಎಡವಟ್ಟುಗಳಿಗೆ ಕಾರಣೀಭೂತನಾಗಿರುತ್ತಾನೆ. ಅವನ ವಿಚಿತ್ರ–ತರ್ಕ ಅವಾಂತರಗಳಿಂದಾಗಿ ಊರಿನಲ್ಲಿ ಅವಘಡಗಳು ಸಂಭವಿಸುತ್ತಲೇ ಇರುತ್ತವೆ. ಒಮ್ಮೆ ರಾಮರಾಯ ತಲೆನೋವಿಗೆ ತಾನೇ ಯಾವುದೋ ಮಾತ್ರೆಯನ್ನು ನುಂಗಿ ಪ್ರಾಣಾಪಾಯಕ್ಕೆ ಸಿಲುಕಿಕೊಳ್ಳುತ್ತಾನೆ. ಆತನನ್ನು ಆಸ್ಪತ್ರೆಗೆ ದಾಖಲಿಸಿ ಡಾ. ಕುಬೇರ ಔಷದೋಪಚಾರಗಳಿಂದ ಬದುಕುಳಿಸುತ್ತಾನೆ. ರಾಮರಾಮ ಕುಬಿಯ

ವೈದ್ಯಕೀಯ ನೈಪುಣ್ಯವನ್ನು ಅರಿಯುವುದರ ಬದಲಾಗಿ ಮೌಢ್ಯ ಹೆಚ್ಚಾಗುತ್ತದೆ. ಇದೇ ಕಾರಣವಾಗಿ ಡಾ. ಕುಬಿಗೆ ದೈವತ್ವವನ್ನು ಆರೋಪಿಸಿ ಸಾಕ್ಷಾತ್ ಭಗವಂತನ ದರ್ಶನವಾಯಿತೆಂದು ಕುಬಿಯ ಹಸ್ತಗುಣದ ಬಗ್ಗೆ ಭೈರಾಪುರದಲ್ಲಿ ಪ್ರಚಾರ ಮಾಡುತ್ತಾನೆ. ಕುಬಿ ಪ್ರಸಿದ್ಧ ವೈದ್ಯನೆಂದು ಸಾಬೀತಾಗುವುದರ ಬದಲಿಗೆ ಮಂತ್ರವಾದಿಯಂತೆ ಕಂಡುಬರುತ್ತಾನೆ.

ಈ ನಡುವೆ ಭೈರಾಪುರದಲ್ಲಿ ನಡೆದ ದುರಂತ ಅಲ್ಲಿನ ಮೌಢ್ಯ ಮತ್ತು ಅವಿವೇಕಕ್ಕೆ ಇಂಬುಕೊಡುವಂತಿರುತ್ತದೆ. ಊರಿನ ಮುಗ್ಧ ಹುಡುಗಿ ಇಯಾಲಳ ಕೊಲೆಯಾಗಿದ್ದು, ಆಕೆಯ ದೇಹ ಧೂಪದ ಮರದ ಬಂಡೆಯ ಬದಿ ಬಿದ್ದಿರುತ್ತದೆ. ಈ ಕೊಲೆ ಯಾರಿಂದ, ಯಾಕಾಗಿ ನಡೆಯಿತು ಎಂದು ತಿಳಿಯದೆ, ಯಾರ ಯಾರದೋ ಹೆಸರಿನಲ್ಲಿ ರಾಜಕೀಯ ಪಿತೂರಿಗಳು ನಡೆಯುತ್ತವೆ. ಈ ವಿಚಾರವಾಗಿ ಊರಿನ ಜನರು ನಾನಾ ತರಹದ ಕತೆಯನ್ನು ಹಬ್ಬಿಸುತ್ತಾರೆ. ಧೂಪದ ಮರದ ಬಂಡೆಯ ವಿಚಾರವಾಗಿ ಹಲವಾರು ಬಾರಿ ಸಂಬಂಧಪಟ್ಟವರನ್ನು ಸಂಪರ್ಕಿಸಿದ್ದ ಡಾ.ಕುಬಿ ಧೂಪದ ಮರದ ಬಂಡೆಯನ್ನು ಒಡೆದು ತೆಗೆಯಲೇಬೇಕೆಂದು ತೀವ್ರತರವಾದ ಪ್ರಯತ್ನದಲ್ಲಿ ತೊಡಗುತ್ತಾನೆ. ಅದರ ಫಲವಾಗಿ ಡೈನಮೇಟ್‌ನಿಂದ ಆ ಬಂಡೆಯನ್ನು ಒಡೆಯಲು ಇಬ್ಬರು ಕಸುಬುದಾರರು ಬರುತ್ತಾರೆ. ಆಕಸ್ಮಿಕವಾಗಿ ಸಿಡಿದ ಡೈನಮೇಟ್‌ನಿಂದ ಸ್ಥಳದಲ್ಲೇ ಒಬ್ಬ ಮೃತಪಟ್ಟರೆ ಮತ್ತೊಬ್ಬ ಲೋರಿ ಸುಟ್ಟುಗಾಯಗಳಿಂದಾಗಿ ಪ್ರಜ್ಞಾಹೀನನಾಗಿರುತ್ತಾನೆ. ಸಾವಿನ ಅಂಚಿನಲ್ಲಿದ್ದ ಆತನನ್ನು ಡಾ.ಕುಬಿ ಬದುಕುಳಿಸುವ ಯತ್ನದಲ್ಲಿದ್ದಾಗ ತಾನು ಇಯಾಲಳನ್ನು ಕೊಲೆಗೈದದ್ದರಿಂದ ಹೀಗಾಯಿತೆಂದು ಹಲುಬುತ್ತಿರುತ್ತಾನೆ. ಕುಬಿ ತನ್ನ ವೈದ್ಯಕೀಯ ಜ್ಞಾನವನ್ನು ಸಂಪೂರ್ಣವಾಗಿ ಆತನ ಮೇಲೆ ಪ್ರಯೋಗಿಸಿ ಸಾವಿನದವಡೆಯಲ್ಲಿದ್ದ ಆತನಿಗೆ ಎಚ್ಚರಿಕೆ ಬರಿಸಿ ಮಾತನಾಡಿದಾಗ ಇಯಾಲಳ ಕೊಲೆಯ ಹಿಂದಿನ ಸತ್ಯ ತಿಳಿದುಬರುತ್ತದೆ. ಸತ್ತಂತಿದ್ದ ಲೋರಿಯನ್ನು ಮಾತನಾಡಿಸಿದ ಕುಬಿ ಭೈರಾಪುರದ ಜನರಿಗೆ ಅತಿಮಾನುಷ ವ್ಯಕ್ತಿಯಾಗಿ ಗೋಚರಿಸುತ್ತಾನೆ. ಕುಬಿ ಯಾವುದನ್ನು ನಂಬದೆ ವಿರೋಧಿಸಿದ್ದನೋ ಅದಕ್ಕೆ ಬಲಿಯಾಗಬೇಕಾಗುತ್ತದೆ. ಅಲ್ಲಿನ ಧೂಪದ ಮರದ ಕಲ್ಲುಬಂಡೆ ನಡುರಸ್ತೆಯಲ್ಲಿ ಅಲ್ಲಾಡದೆ ನಿಂತು ಆ ಊರಿನ ಜಡತ್ವಕ್ಕೆ ಸಾಂಕೇತಿಕವಾಗಿ, ಅವಿವೇಕಕ್ಕೆ ಮೂಕ ಸಾಕ್ಷಿಯಾಗಿ ಚಿರಾಯುವಾಗುತ್ತದೆ. ಏಕೆಂದರೆ ಯಾರೋ ಮಾಡಿದ ತಪ್ಪಿಗೆ ಯಾರಿಗೋ ಶಿಕ್ಷೆ ನೀಡುವ ಪೋಲಿಸ್ ಇಲಾಖೆ, ರಸ್ತೆ ರಿಪೇರಿಗಾಗಿ ರಸ್ತೆಕಾಮಗಾರಿ ಕಂಟ್ರ್ಯಾಕ್ಟರ್ ಸತ್ತಾರ್‌ಸಾಬ್ ಮತ್ತು ಊರಿನವರ ತಿಕ್ಕಾಟದಿಂದಾಗಿ ಧೂಪದ ಬಂಡೆ ಇದ್ದಲ್ಲೇ ಇದ್ದು ಸಂಚಾರಕ್ಕೆ ಒಡ್ಡುವ ಅಡಚಣೆ, ಸೊಸೈಟಿಯ ಧವಸಧಾನ್ಯಗಳ ನೂರಾರು ಮೂಟೆಗಳು ಒಳಗಿಂದೊಳಗೇ ಕಳುವಾಗಿ ಹಮಾಲರು ಅದಕ್ಕಾಗಿ ಶಿಕ್ಷೆ ಅನುಭವಿಸುವಂತ ಅವ್ಯವಸ್ಥೆ, ಸರಕಾರಿ ಇಲಾಖೆಗಳ, ರಾಜಕಾರಣಿಗಳ ದೊಂಬರಾಟ ಇವೆಲ್ಲವನ್ನೂ ಯಾವುದೇ ರೀತಿಯಲ್ಲಿ ಸರಿಪಡಿಸಲಾಗದೆ ಒದ್ದಾಡುತ್ತಾನೆ ಡಾ.ಕುಬೇರನಾಥ.

ಅಬಚೂರಿಗೆ ಹೊಸದಾಗಿ ಬಂದ ಅಂಚೆಕಛೇರಿಯಿಂದಾಗಿ ಬೋಬಣ್ಣನ ಸಾಂಸಾರಿಕ ಜೀವನ ಅಸ್ತವ್ಯಸ್ತವಾಗುವುದರೊಂದಿಗೆ ಇಡೀ ಊರು ಅನಗತ್ಯ ಜಂಜಾಟದಲ್ಲಿ ಸಿಲುಕಿ ಗೊಂದಲಕ್ಕೀಡಾಗುತ್ತದೆ. ಬೋಬಣ್ಣ ತನ್ನದೇ ಆದ ಸ್ವಂತಿಕೆಯಿಲ್ಲದ, ತಂದೆತಾಯಿಯೂ ಇಲ್ಲದ ತಬ್ಬಲಿ. ಅದಕ್ಕಾಗೇ ಮಾಚಮ್ಮ ತನ್ನ ಒಬ್ಬಳೇ ಮಗಳು ಕಾವೇರಿಯನ್ನು ಮದುವೆ ಮಾಡಿಕೊಟ್ಟು ಬೋಬಣ್ಣನನ್ನು ತನ್ನ ಮನೆ ಅಳಿಯನನ್ನಾಗಿ ಮಾಡಿಕೊಂಡು ಮಗಳು ಮತ್ತು ಅಳಿಯನ ಮೇಲೆ

ತನ್ನ ಅಧಿಪತ್ಯವನ್ನು ಸ್ಥಾಪಿಸುತ್ತಾಳೆ. ಆಧುನಿಕತೆಯ ಕುರುಹಾಗಿ ಅಬಚೂರಿನಲ್ಲಿ ಸ್ಥಾಪಿಸಲಾದ ಅಂಚೆಕಛೇರಿಯ ಮೇಲುಸ್ತುವಾರಿಯನ್ನು ವಹಿಸಿಕೊಳ್ಳುವ ಬೋಬಣ್ಣನಿಗೆ ವ್ಯಾವಹಾರಿಕ ಜ್ಞಾನದ ಕೊರತೆಯ ಜೊತೆಗೆ ಹೊರಜಗತ್ತಿನ ಆಗುಹೋಗುಗಳ ಅರಿವು ಇರುವುದಿಲ್ಲ. ಇದರಿಂದ ಹಲವು ಎಡವಟ್ಟುಗಳು ಸಂಭವಿಸಿ ಪೋಸ್ಟಾಫೀಸು ಅಶಾಂತಿಯ ಕೇಂದ್ರವಾಗುತ್ತದೆ.

ಅಂಚೆಕಛೇರಿಗೆ ಬಂದಿದ್ದ ಒಂದು ಕವರಿನೊಳಗೆ ಹಣವಿರಬಹುದು ಎಂಬ ಅನುಮಾನದಿಂದ ಒಡೆದು ನೋಡಿ ಹಣದ ಬದಲು ಆ ಊರಿನ ಅಜೀಜನಿಗೆ ಬಂದಿದ್ದ ಯಾವುದೋ ಚಿತ್ರವನ್ನು ಕಂಡು ತಿರುಗಿಸಿ ನೋಡಿ; ಅಲ್ಲಿದ್ದ ಅರೆನಗ್ನ ಚಿತ್ರದಿಂದ ಕುತೂಹಲಗೊಂಡ ಬೋಬಣ್ಣ ಅಂಚೆಕಛೇರಿಗೆ ಬರುವ ಪತ್ರಗಳೆಲ್ಲ ಅಂತಹುದೇ ಆಗಿರಬಹುದೆಂದು ಗುಮಾನಿಯಿಂದ ಬಂದ ಕಾಗದ ಪತ್ರಗಳನ್ನೆಲ್ಲಾ ಒಡೆದು ನೋಡುವ ಚಾಳಿಗೆ ಇಳಿಯುತ್ತಾನೆ. ಸಮಯ ದೊರಕಿಸಿಕೊಂಡು ಅರೆನಗ್ನಚಿತ್ರವನ್ನು ಕದ್ದು ಕದ್ದು ನೋಡುತ್ತಾ ಉನ್ಮತ್ತನಾಗುತ್ತಿದ್ದ ಬೋಬಣ್ಣ ಹೆಂಡತಿಯ ಸುಖಾಪೇಕ್ಷಿಯಾಗುತ್ತಾನೆ. ಆತನ ಪ್ರಯತ್ನ ತೀವ್ರವಾದಂತೆಲ್ಲಾ ಮುಜುಗರಕ್ಕೊಳಗಾಗುತ್ತಿದ್ದ ಕಾವೇರಿ ಬೋಬಣ್ಣನ ಚೇಷ್ಟೆಗಳಿಂದ ತಾಯಿ ಏನೆಂದುಕೊಳ್ಳುವಳೋ ಎಂದು ಹಿಂದೆ ಸರಿಯುತ್ತಾಳೆ. ಮಾಚಮ್ಮ ಅಳಿಯ ಹಾಗೂ ಮಗಳಿಬ್ಬರೂ ತನ್ನ ನಿಯಂತ್ರಣದಲ್ಲಿರಬೇಕೆಂದು ಹದ್ದುಬಸ್ತಿನಲ್ಲಿಡಲು ಪ್ರಯತ್ನಿಸುತ್ತಿರುತ್ತಾಳೆ. ಇವರಿಬ್ಬರ ಮಧ್ಯೆ ಸಿಲುಕಿದ ಬೋಬಣ್ಣನ ದಾಂಪತ್ಯ ಹದಗೆಡುತ್ತಾ ಹೋಗುತ್ತದೆ.

ಸರ್ಕಾರಿ ಆದೇಶದ ಮೇರೆಗೆ ಅಂಚೆಕಛೇರಿಯ ವ್ಯವಹಾರ ಕುಂಠಿತಗೊಳ್ಳುವುದನ್ನು ತಪ್ಪಿಸುವ ಸಲುವಾಗಿ ಊರವರ ಪತ್ರ ಬರೆಯಲು, ಓದಲು ತೊಡಗಿಕೊಳ್ಳುತ್ತಾನೆ. ಬೋಬಣ್ಣನಿಂದ ಪತ್ರ ಬರೆಸಲು, ಓದಿಸಲು ಬರುತ್ತಿದ್ದ ಜನ ಕ್ರಮೇಣವಾಗಿ ದಿನ ನಿತ್ಯ ಜಮಾಯಿಸಲು ತೊಡಗುತ್ತಾರೆ. ಅಂಚೆಕಛೇರಿಗೆ ಆಶ್ರಯವಾಗಿದ್ದ ಮನೆ ಹರಟೆಕೇಂದ್ರಕ್ಕೆ ಆಗರವಾಗಿ ದಿನದಿಂದದಿನಕ್ಕೆ ಬೋಬಣ್ಣನ ಮನಃಶಾಂತಿಯನ್ನು ಹಾಳುಗೆಡುವುದರೊಂದಿಗೆ ಸಾಂಸಾರಿಕ ಜೀವನವನ್ನೂ ಅಸ್ತವ್ಯಸ್ತಗೊಳಿಸುತ್ತದೆ. ಈ ಮಧ್ಯೆ ಶರಾಬು ಅಂಗಡಿಯ ಮರಪ್ಪನ ಆಳು ಬೇಲಾಯದನಿಗೆ ಒಂದು ಪತ್ರ ಬರುತ್ತದೆ. ಆತನ ಪತ್ತೆಯೇ ಇಲ್ಲದ ಹಲವು ವಿಳಾಸದಲ್ಲಿ ಹಾಯ್ದು ಬಂದು ಅಪಾಯಕಾರಿಯಾದ ಜಾಕಾಯಿ ಪೆಟ್ಟಿಗೆಯೊಳಗೆ ಇಳಿದು ಊರವರ ಬಾಯಿಗೆ ಬಿದ್ದು ಬೇಲಾಯದನ ಮಗಳ ಶೀಲಕ್ಕೆ ಸಂಬಂಧಿಸಿದ ವಿಚಾರ ರಂಗುರಂಗಿನ ಮಾತುಗಳಿಗೆ ಭಾಜನವಾಗುತ್ತದೆ. ಇಷ್ಟಾದರೂ ಪತ್ರ ಸಂಬಂಧಪಟ್ಟವರಿಗೆ ತಲುಪದೆ ಹರಿದು ಈ ಛಿದ್ರವಾಗುವ ಹಂತಕ್ಕೆ ಬರುತ್ತದೆ. ಬೋಬಣ್ಣ ಜೀರ್ಣಾವಸ್ಥೆಗೆ ತಲುಪಿದ್ದ ಪತ್ರದ ನಕಲು ಮಾಡಿ ಬೇಲಾಯದ ತನ್ನ ಸ್ವಂತ ಊರಿನಲ್ಲಿ ಇಲ್ಲದಿರುವುದರಿಂದ ಅವನಿರುವ ಉಜಿರೆಯ ವಿಳಾಸಕ್ಕೆ ಕಳುಹಿಸುತ್ತಾನೆ. ಹೆಣ್ಣಿನ ನಡವಳಿಕೆಗೆ ಸಂಬಂಧಿಸಿದ ಸೂಕ್ಷ್ಮವಿಚಾರ ರುದ್ರರೂಪವಾಗಿ ಪತ್ರ ಬರೆದದ್ದು ಬೋಬಣ್ಣನೇ ಎಂದು ರಾದ್ಧಾಂತಗೊಂದು ಜಗಳಕ್ಕೆ ನಿಲ್ಲುತ್ತಾರೆ. ಪರಸ್ಪರ ಬೈದಾಡುವ ಭರದಲ್ಲಿ ಮೂಗೂರಿನ ಮೇಸ್ತ್ರೀ ಬೋಬಣ್ಣನ ಹೆಂಡತಿ ಕಾವೇರಿಯ ಬಗ್ಗೆ ಹಗುರವಾಗಿ ಮಾತನಾಡುತ್ತಾನೆ. ಆ ಸಂದರ್ಭದಲ್ಲಿ ಕಾವೇರಿಯಾಗಲಿ, ಮಾಚಮ್ಮನಾಗಲಿ ಏನೂ ಪ್ರತಿಕ್ರಿಯಿಸದೇ ಇರುವುದು ಬೋಬಣ್ಣನಿಗೆ ಆಘಾತವನ್ನುಂಟುಮಾಡುತ್ತದೆ. ತನ್ನ ಕುಟುಂಬದವರ ಮೇಲಿನ ರೋಷವನ್ನು ಮೂಗೂರಿನ ಮೇಸ್ತ್ರಿಗೆ ಗುದ್ದುವುದರೊಂದಿಗೆ ತೀರಿಸಿಕೊಂಡಾಗ ಅತ್ತೆ ಮಾಚಮ್ಮ ಅಳಿಯನ ವಿರುದ್ದವಾಗಿ ಅಲ್ಲಿರುವ ಗುಂಪನ್ನು ಪ್ರಚೋದಿಸುತ್ತಾಳೆ. ತನ್ನ ಹೆಂಡತಿ ಕಾವೇರಿಯ ಅಸಹಕಾರ,

ಅತ್ತೆಯ ಅಸಹ್ಯದ ನಡವಳಿಕೆಯಿಂದ ರೋಸಿ ಹೋದ ಬೋಬಣ್ಣ ಕತ್ತಲೆಯಲ್ಲಿ ಓಡಿಹೋಗಿ ಮರೆಯಾಗುತ್ತಾನೆ. ಅಂಚೆಕಛೇರಿ ವಿದ್ಯುಕ್ತವಾಗಿ ಮುಚ್ಚಲ್ಪಡುತ್ತದೆ. ಜೀವನ ಅಸಂಬದ್ಧಂತೆಯಿಂದ ಕೂಡಿದ್ದು, ಸಾಮಾಜಿಕ ಪ್ರತಿಕ್ರಿಯೆಗಳು ಯಾವ ರೀತಿ ಪಲ್ಲಟಗೊಳ್ಳುತ್ತಿರುತ್ತದೆ ಎಂಬುದಕ್ಕೆ ಈ ಕಥನ ರೂಪಕವಾಗಿದೆ.

ಫ್ರಾನ್ಸಿನ ರಾಜ್ಯಕ್ರಾಂತಿ, ರಷ್ಯಾದ ಹಸಿರು ಕ್ರಾಂತಿಗಳಿಂದಾಗಿ ರಾಜಕೀಯ ವಲಯದಲ್ಲಿ ರಾಜಸತ್ತೆಯ ವಿರುದ್ಧ ಸಂಘಟಿತ ಹೋರಾಟಗಳು ನಡೆದವು. ಈ ಹೋರಾಟದ ಪ್ರತಿರೂಪವೇ ಪ್ರಜಾಪ್ರಭುತ್ವ. ಪ್ರಜಾಪ್ರಭುತ್ವದಿಂದ ಆಧುನಿಕತೆಯ ಪ್ರಸಾರ ಮೇಲ್ಮಟ್ಟದಲ್ಲಿ ನಡೆಯಿತು. ವಿಜ್ಞಾನ ಪ್ರಗತಿಯ ಜೊತೆಜೊತೆಯಲ್ಲಿ ಜಗತ್ತಿನಲ್ಲಿನ ಅತ್ಯುತ್ತಮವಾದುದ್ದಲ್ಲ ಆಧುನಿಕತೆಯ ಹೆಸರಿನಲ್ಲಿ ಮನೆ ಮನೆಯ ಬಾಗಿಲು ತಟ್ಟಿದವು. ಆರ್ಥಿಕ ಮತ್ತು ಕೈಗಾರಿಕಾ ವಲಯದಲ್ಲಿ ಉಂಟಾದ ಕ್ರಾಂತಿಯಿಂದಾಗಿ ಸಾಮಾಜಿಕ, ಸಾಂಸ್ಕೃತಿಕ ಜೀವನ ವ್ಯವಸ್ಥೆಯಲ್ಲಿ ಹೊಸ ಬದಲಾವಣೆ ಕಂಡು ಬಂದಿತು. ಕೈಗಾರೀಕರಣ ಪರಿಣಾಮವಾಗಿ ಜಮೀಂದಾರಿ ವ್ಯವಸ್ಥೆಯು ಹಿಂದೆ ಸರಿದು ಬಂಡವಾಳಶಾಹಿ ವ್ಯವಸ್ಥೆ ರೂಪುಗೊಂಡಿತು. ಕೈಗಾರೀಕರಣ ಮೂಲೋದ್ಧೇಶವೇ ದೊಡ್ಡ ಪ್ರಮಾಣದ ಬಂಡವಾಳ ತೊಡಗಿಸುವಿಕೆ ಮತ್ತು ಎರಡರಷ್ಟು ಪ್ರಮಾಣದ ಉತ್ಪಾದನೆ ಇದಕ್ಕಾಗಿ ದೊಡ್ಡ ಮಟ್ಟದಲ್ಲಿ ಕಾರ್ಖಾನೆಗಳೂ, ಯಂತ್ರಗಳೂ ಬೇಕಾಯಿತು. ಯಂತ್ರಗಳೊಂದಿಗೆ ಕಾರ್ಖಾನೆಗಳಲ್ಲಿ ದುಡಿಯುವ ಕೂಲಿಕಾರರು ಗ್ರಾಮೀಣ ಪ್ರದೇಶದಿಂದ ದೊರೆತರು. ಉತ್ಪಾದಿತ ಸರಕುಗಳ ವಿಲೇವಾರಿಗಾಗಿ ಮಾರುಕಟ್ಟೆಗಳು ಸಿದ್ಧಗೊಂಡವು. ಇವುಗಳ ತೀವ್ರ ಪೈಪೋಟಿ ಮಹತ್ವಾಕಾಂಕ್ಷೆಯನ್ನು ಬೆಳೆಸಿತು. ಈ ಮಹತ್ವಾಕಾಂಕ್ಷೆ ಗ್ರಾಮೀಣ ಜನರ ಮುಗ್ಧತೆಯನ್ನು, ಸ್ವತ್ತನ್ನು ಸೂಗೆಹೊಡೆದವು. ಕಚ್ಚಾ ಸಾಮಗ್ರಿಗಳ ಕೊರತೆಯಿಂದ ಗ್ರಾಮೀಣ/ಗುಡಿಕೈಗಾರಿಕೆಗಳು ಕುಸಿತಗೊಂಡು ಉದ್ಯೋಗವಿಲ್ಲದೆ ಪರದಾಡುವಂತಾಗಿ ಉದರ ನಿಮಿತ್ತ ನಗರಗಳಿಗೆ ಉದ್ಯೋಗ ಹುಡುಕಿಕೊಂಡು ವಲಸೆ ಬಂದು ನಗರದ ಬದುಕಿಗೆ ಶರಣಾದರು.

'ಅಬಚೂರಿನ ಪೋಸ್ಟಾಫೀಸು' ಕತೆಯಲ್ಲಿನ ಪೋಸ್ಟ್‌ಮಾಸ್ಟರ್ ಬೋಬಣ್ಣ, 'ಅವನತಿ' ಕಥೆಯ ಶಿಲ್ಪಿಸೂರಾಚಾರಿ, 'ತುಕ್ಕೋಜಿ' ಕಥೆಯ ದರ್ಜಿ ತುಕ್ಕೋಜಿ, ಇವರುಗಳು ಆಧುನಿಕತೆಯ ಆಕ್ರಮಣದಿಂದ ತತ್ತರಿಸಿ ಹೋಗಿ ವೈಯಕ್ತಿಕ ನೆಮ್ಮದಿಯನ್ನು ಕಳೆದುಕೊಂಡವರು. ನಗರೀಕರಣದಿಂದ ಇವರುಗಳ ವೈಯಕ್ತಿಕ ಬದುಕಿನಲ್ಲೂ ಬದಲಾವಣೆ (ಸ್ಥಿತ್ಯಂತರಗಳು) ಗಳಾದವು. ಅವು ಅವರ ವೃತ್ತಿ ಬದುಕಿನಲ್ಲಿ ಅಸಫಲತೆಯನ್ನುಂಟುಮಾಡಿದವು. ಜಾಗತೀಕರಣದ ಹಿನ್ನೆಲೆಯಲ್ಲಿ ಅನೇಕ ವೃತ್ತಿಗಳು ಅರ್ಥ ಕಳೆದುಕೊಳ್ಳುತ್ತಿರುವುದನ್ನು ಈ ಪಾತ್ರಗಳ ಮೂಲಕ ವಿಶ್ಲೇಷಿಸಲಾಗಿದೆ.

ಇಸ್ಲಾಪುರ, ಇತ್ತಾವರ, ಜೋಗತಿ ಪೇಟೆ, ಮಾಲೂರು, ಎಂಬ ಒಂದೇ ಕೂಗಳತೆ ದೂರದಲ್ಲಿರುವ ಸುತ್ತಮುತ್ತಲ ಊರುಗಳ ನಿತ್ಯ ಜನ ಜೀವನ ಕ್ರಮವನ್ನು ದಾಖಲು ಮಾಡುವುದರ ಮುಖಾಂತರ 'ಅವನತಿ' ಕತೆ ಆರಂಭವಾಗುತ್ತದೆ. ಈ ಊರುಗಳ ಜನರೆಲ್ಲಾ ಆರಕ್ಕೇರದೆ ಮೂರಕ್ಕಿಳಿಯದೆ ಲಾಭನಷ್ಟವನರಿಯದೆ ಅಸಲಿನಲ್ಲೇ ಓಡಾಡುವ ಕೃಷಿ ಮೂಲದವರು. ಇಸ್ಲಾಪುರವು ಮುಸಲ್ಮಾನರ ಕುಟುಂಬಗಳು ಮಸೀದಿಯನ್ನು ಒಳಗೊಂಡಿತ್ತು. ಅಂತೆ ಹಿಂದೂ-ಮುಸ್ಲಿಂ ಗಲಾಟೆ, ಬಡತನ, ದಾರಿದ್ರ್ಯ, ಚುನಾವಣೆ ಕಾಲದ ಗದ್ದಲ ಎಲ್ಲದರಿಂದ

ಕ್ರೋಢೀಕರಣಗೊಂಡಿದ್ದು ಪ್ರಸಕ್ತ ರಾಜಕಾರಣ ಹಾಗೂ ಸಾಮಾಜಿಕ ಸಮಸ್ಯೆಗಳಿಗೆ ನಿಜಕ್ಕೂ ಈ ಹಳ್ಳಿಗಳೇ ಸವಾಲಾಗಿ ನಿಂತಿದ್ದವು. ಊರಿನ ಬಹಳಷ್ಟು ಮಂದಿ ಬೇರೆ ಬೇರೆ ಕುಲ ಕಸುಬಿನಲ್ಲಿ ತೊಡಗಿಕೊಂಡವರೂ ಇದ್ದರು. ಸಾಲ ಕೊಡುವವರು, ಕೊಳ್ಳುವವರು, ವಸೂಲಿ ಮಾಡುವವರು ಹೀಗೆ ಅನೇಕ ವೃತ್ತಿಗಳಲ್ಲಿ ತೊಡಗಿ ಕೊಂಡಿದ್ದರೂ ಇವರೆಲ್ಲರಿಗಿಂತಲೂ ಪಳಗಿದವನೆಂದರೆ ಇಸ್ಲಾಪುರದ ಸುರಾಚಾರಿ.

ಇಸ್ಲಾಪುರದ ಒಂದು ದೊಡ್ಡ ಹಳ್ಳಿಯಾದರೂ ಅಲ್ಲಿನ ಶಿಲ್ಪಿ ಸೂರಾಚಾರಿಯ ಉನ್ನತ ಮಟ್ಟದ ಪ್ರತಿಭೆಗೆ ಬೆಲೆ ಸಲ್ಲದೆ ಹೋದಾಗ ತನ್ನ ಕುಲಕಸುಬು ಆದಾಯ ತರಲಾರದು ಎಂದು ಆಲೋಚಿಸಿ ಇತರೆ ಕಸುಬುಗಳನ್ನು ತನ್ನದಾಗಿಸಿಕೊಳ್ಳುತ್ತಾನೆ. ಮನೆಯ ತುಳಸಿಯ ಕಟ್ಟೆಯ ನಿರ್ಮಾಣ, ಕಲ್ಲಿಗೆ ಉಳಿ ಹಾಕುವುದು, ಮಾರಿ ಮಸಣಿಗಳನ್ನು ಮಾಡಿ ಕೊಡುತ್ತಾ ದಿನಕಳೆದಂತೆ ಸೂರಾಚಾರಿ ಅಲ್ಲಿನ ಜನರ ಅಭಿರುಚಿ ನಿರೀಕ್ಷೆಗಳಿಗೆ ತಕ್ಕಂತೆ ಕೆಳಮಟ್ಟದಲ್ಲಿ ಯೋಚಿಸುತ್ತ ತನ್ನ ಕಲೆಯ ಉನ್ನತ ಗುಣಮಟ್ಟವನ್ನು ಮರೆಯುತ್ತಾನೆ. ಅದಕ್ಕೆ ಸಾಕ್ಷಿಯೆಂಬಂತೆ ಅಕರಾಳ- ವಿಕರಾಳ ರೂಪದ ಮಾರಿ ಮೂರ್ತಿಗಳನ್ನು ಕೆತ್ತುವುದು, ಭತ್ತದ ವ್ಯಾಪಾರ ಮಾಡುವುದು, ಒರಳು ಕಲ್ಲಿಗೆ ಉಳಿ ಹೊಡೆಯುವುದು, ತಾಯಿತ ಮಂತ್ರಿಸುವುದು, ಹೆಣ್ಣು-ಗಂಡಿನ ಮದುವೆ ಕುದುರಿಸುವುದು, ಎತ್ತಿನ ದಲ್ಲಾಳಿತನ, ಹೀಗೆ ಹತ್ತು ಹಲವಾರು ಗೊತ್ತುಗುರಿ ಇಲ್ಲದ ಜುಜುಬಿ ಕಸುಬುಗಳಲ್ಲಿ ಮುಳುಗಿ ಹೋಗುತ್ತಾನೆ. ಅವುಗಳ ಮುಖಾಂತರವೇ ಊರಿನ ಜನರಿಗೆಲ್ಲಾ ಒಳ್ಳೆಯದನ್ನು ಮಾಡುತ್ತೇನೆನ್ನುವ ಆತನ ಮಾತುಗಳಲ್ಲಿ ವ್ಯಾವಹಾರಿಕ ಚಾಣಾಕ್ಷತೆಯನ್ನು ಗುರುತಿಸಬಹುದು ಅಷ್ಟೇ.

ಇತ್ತಾವರದ ಸುಬ್ಬಯ್ಯನ ಬಳಿಯಿದ್ದ ಎತ್ತನ್ನು ಈರೇಗೌಡನಿಗೆ ಕೊಡಿಸುವ ಸಲುವಾಗಿ ಇಸ್ಲಾಪುರದಿಂದ ಇತ್ತಾವರಕ್ಕೆ ಹೊರಟು ಬಂದಿದ್ದ ಸೂರಾಚಾರಿ ಎತ್ತನ್ನು ಮಾರಬೇಕೆಂದಿದ್ದ ಸುಬ್ಬಯ್ಯನ ಹೆಂಡತಿಯೇ ಗೌರಿ. ಗೌರಿ ಮಲೆನಾಡಿನ ಅತ್ಯದ್ಭುತ ಕಲಾಸೃಷ್ಟಿ. ಆಕೆಗೆ ಇದ್ದ ಸಂಕಟವೆಂದರೆ ಮದುವೆಯಾದ ನಾಲ್ಕು ವರ್ಷಗಳಲ್ಲಿ ಕ್ರಮವಾಗಿ ಹುಟ್ಟಿದ್ದ ಮೂರು ಮಕ್ಕಳು ಹುಟ್ಟಿದ ತಿಂಗಳೊಳಗೆ ಮರಣಿಸಿದ್ದು. ಅದಕ್ಕೆ ಅವು ಮಳೆಗಾಲದಲ್ಲಿಯೇ ಹುಟ್ಟುತ್ತಿದ್ದುದೇ ಕಾರಣವಿರಬಹುದೆಂಬ ಶಂಕೆ ಗೌರಿಯದ್ದಾದರೆ ಗಂಡ ಸುಬ್ಬಯ್ಯನಿಗೆ ಈ ವಿಷಯದಲ್ಲಿ ಆಕೆಗೆ ಏನೋ ಒಳದೋಷ ಇರಬೇಕೆಂಬ ಅನುಮಾನ. ಈರೇಗೌಡನಿಗೆ ಸುಬ್ಬಯ್ಯನ ಎತ್ತನ್ನು ಕೊಡಿಸಲು ಮಧ್ಯಸ್ತಿಕೆ ವಹಿಸಿ ಬಂದಿದ್ದ ಸೂರಾಚಾರಿಗೆ ಪ್ರಾಸಂಗಿಕವಾಗಿ ತನ್ನ ಮಕ್ಕಳ ಸಾವಿನ ಬಗ್ಗೆ ತಿಳಿಸಿ ಅದಕ್ಕೆ ಪರಿಹಾರವನ್ನು ಬಯಸುತ್ತಾನೆ ಈ ಸುಬ್ಬಯ್ಯ. ವಿಶೇಷವೇನೆಂದರೆ, ಸೂರಾಚಾರಿ, ಈರೇಗೌಡ, ಸುಬ್ಬಯ್ಯ, ಮೂವರು ಲೌಕಿಕ ದೋಷಗಳಲ್ಲಿ ಮೈ ಪಡೆದವರೇ ಹಾಗಾಗಿ ಒಬ್ಬೊಬ್ಬರೂ ತಮ್ಮ ಅಜ್ಞಾನವನ್ನೂ ಮೌಢ್ಯವನ್ನೂ ಕುಟಿಲ ತುಂಬಿದ ಮನಸ್ಸಿನಿಂದ ಪ್ರದರ್ಶಿಸುತ್ತಾರೆ. ಈರೇಗೌಡನಿಗಂತೂ ಮಕ್ಕಳ ಸಾವಿಗೆ ಸುಬ್ಬಯ್ಯನಲ್ಲಿರುವ ದೋಷವೇ ಕಾರಣವೆಂಬ ಅನುಮಾನ. ಈರೇಗೌಡತನ್ನ ಹೆಂಡತಿಯನ್ನು ಕಳಿಸಿಕೊಟ್ಟರೆ ಒಳದೋಷವೇನು ಎಂಬುದನ್ನು ತೋರಿಸುತ್ತೇನೆ ಎಂಬ ಸವಾಲು ಸುಬ್ಬಯ್ಯನದು. ಇವರಿಬ್ಬರ ನಡುವಿನ ವೈಮನಸ್ಸನ್ನು ತನ್ನ ಹಿತವರ್ಧನೆಗಾಗಿ ಬಳಸಿಕೊಳ್ಳುವ ಚಾಣಾಕ್ಷತೆ ಸೂರಾಚಾರಿಯದು.

ಮಕ್ಕಳು ಸಾಯಲು ಗೌರಿಯ ಮೊಲೆಯ ದೋಷವೆಂದೂ, ಅವು ಉಳಿಯಬೇಕಾದರೆ ಮೊಲೆಯ ನೀಲಿನರವನ್ನು ಅರಿಶಿನ ಕೊಂಬಿನ ಕೆಂಡದಲ್ಲಿ ಸುಟ್ಟು ತೆಗೆಯಬೇಕೆಂದು ತನ್ನ ವೈದ್ಯಕೀಯ ಪಾಂಡಿತ್ಯವನ್ನು ಪ್ರದರ್ಶಿಸುತ್ತಾನೆ. ತನ್ನ ಹೆಂಡತಿಯ ಕುರೂಪ ಸೂಕ್ಷ್ಮವಾಗಿ ಆತನ ಮನಸ್ಸಿನಲ್ಲಿ ನೆಲೆಯೂರಿದ್ದರಿಂದಲೇ ಆ ಗೌರಿಯ ಸೌಂದರ್ಯಕ್ಕೆ ಬರೆಯಿಡುವ ಹಂತಕ್ಕೆ ಸಾಗಿ ಹೋಗುತ್ತಾನೆ ಸೂರಾಚಾರಿ. ಮೂಲತಃ ವೈದ್ಯನೂ ಅಲ್ಲದ, ರೋಗದ ಸ್ಪಷ್ಟ ತಿಳುವಳಿಕೆಯೂ ಇಲ್ಲದ ಸೂರಾಚಾರಿಯ ಮಾತಿಗೆ ಸುಬ್ಬಯ್ಯ ಸಮ್ಮತಿಸುತ್ತಾನೆ. ಸೂರಾಚಾರಿ ತನ್ನ ವೃತ್ತಿಗೆ ತಕ್ಕ ಅವಕಾಶಗಳಿಲ್ಲದ ಪರಿಸರದಲ್ಲಿ ಆ ಪರಿಸರಕ್ಕೆ ತಕ್ಕ ಅಸಂಬಂಧಗಳಿಂದ ಜೀವನ ಕಳೆಯುತ್ತಾ ತನ್ನ ಪ್ರತಿಭೆಗೆ ಕುಂದು ತಂದು ಕೊಂಡಿದ್ದಲ್ಲದೆ, ತಾನು ಅವನತಿಯತ್ತ ಸಾಗುತ್ತಾ ಸಮಾಜವನ್ನು ಅವನತಿಯತ್ತ ಕೊಂಡೊಯ್ಯುತ್ತಾನೆ.

'ಸುಬ್ಬಯ್ಯನ ಮದುವೆ, ಗೌರಿಯ ಹೆರಿಗೆ, ಮಕ್ಕಳ ಸಾವು, ಭೈರಪ್ಪ ಮಂಗನ ತಿಂದು ತಿಂದು ನಿರ್ಮಾಣ ಮಾಡಿರುವ ಸುಡುಗಾಡು, ಈರೇಗೌಡನ ಚೌಕಾಸಿ, ಥಂಡಿ, ಯಶೋಧೆಯ ಭೂತ ಚೇಷ್ಟೇ ಎಲ್ಲವೂ ಒಂದೇ ಬಗೆಯವು. ಗೌರಿಯ ಹೆಣ್ತನ, ತಾಯ್ತನಗಳು ತನ್ನ ಮಾವ ಭೈರಪ್ಪನ ಕಣ್ಣಿಗೆ ಔಷಧಿಗೆಂದು ಎದೆಹಾಲು ಕೊಡಬಹುದಾದಷ್ಟು ಮಾತ್ರ ಪ್ರಯೋಜನಕ್ಕೆ ಬರುವಂತೆ, ಆಕೆಯ ಪಾತ್ರವನ್ನು ಮೂಡಿಸಿರುವ ಅಂಶ ಕಥೆಯಿಂದ ತಿಳಿದುಬರುತ್ತದೆ. ಗೌರಿಗೆ ಬದುಕಿನ ಬಗ್ಗೆ ಹೊರದಾರಿಗಳ ಸಾಧ್ಯತೆಗಳೇ ಇಲ್ಲ. ಗೌರಿಯ ಸೌಂದರ್ಯಕ್ಕೆ ಬರೆ ಇಡುವವರೆಗೆ ಹೋಗುವ ಕಣ್ಣುಗಳನ್ನು ಪಡೆದ ಮಂಕು ಕವಿದ ಸಮಾಜದ ಅವನತಿ ಒಂದುಕಡೆ, ಬರೆ ಇಡುವ ಕ್ರಿಯೆಯವರೆಗೆ ಪತಿತನಾಗಿರುವ ಸೂರಾಚಾರಿಯ ಬದುಕಿನ ದುರಂತ ಮತ್ತೊಂದು ಕಡೆ. ಇವೆರಡರ ನಡುವೆ ರಾಜಾಕೀಯವಾಗಿ, ಸಾಂಸ್ಕೃತಿಕವಾಗಿ, ಸಮಗ್ರವಾಗಿ ಚಕ್ಕಳವಾಗಿ ಹೋಗಿರುವ ಹಳ್ಳಿಯ ಜನಜೀವನ ಕ್ರಮ; ಕಲೆಗಾರಿಕೆ ನಶಿಸಿ ಹೋಗಿ ಅರ್ಥಪೂರ್ಣವಾದುದನ್ನು ಸೃಷ್ಟಿಸಲಾರದೆ ಒಟ್ಟು ಬದುಕಿನ ಕ್ಷಣಗಳನ್ನು ಕೊಲ್ಲುತ್ತಿರುವ ಅಸಹಾಯಕ ಮನುಷ್ಯನಾಗಿರುವ ಸೂರಾಚಾರಿ ಇವುಗಳ ಮೂಲಕ ಈ ಕಥೆಯನ್ನು ಕಟ್ಟುವಿಕೆಯು ಸಾಧಿತವಾಗಿದೆ.'[10] ಹೀಗೆ ಪ್ರತಿಭಾಶಕ್ತಿಯನ್ನೂ, ಸೃಜನಶೀಲತೆಯನ್ನೂ ಕಳೆದುಕೊಳ್ಳುವ ಕಲಾವಿದ ತನ್ನ ಓರೆಕೋರೆಗಳನ್ನು, ಅಸಂತೃಪ್ತಿಗಳನ್ನು ಹೆಣ್ಣಿನ ಸೌಂದರ್ಯವನ್ನು ವಿರೂಪಗೊಳಿಸುವುದರ ಮೂಲಕ ತುಂಬಿಕೊಳ್ಳುವ ವಿಪರ್ಯಾಸವನ್ನು **'ಅವನತಿ'** ಕಥೆ ಧ್ವನಿಸುತ್ತದೆ.

ಸಮಾಜದಲ್ಲಿ ಆಗುತ್ತಿರುವ ಬದಲಾವಣೆಯನ್ನು **ತುಕ್ಕೋಜಿ**ಯ ಸಂಸಾರದಲ್ಲಿ ಆಗುತ್ತಿರುವ ಬದಲಾವಣೆಗಳಲ್ಲೇ ಧ್ವನಿಸುವ, ಸಕ್ರಿಯಗೊಳಿಸುವ ಮೂಲಕ ಸಾಮಾಜಿಕ ಸ್ಥಿತ್ಯಂತರವನ್ನೂ ಅದರ ಪರಿಣಾಮಗಳನ್ನು ತೇಜಸ್ವಿ ವೈಚಾರಿಕವಾಗಿ ಸೆರೆಹಿಡಿದಿದ್ದಾರೆ. ಪರಂಪರಾಗತವಾದ ಹಳ್ಳಿಯ ಬದುಕಿಗೆ ನಗರೀಕರಣ, ಆಧುನೀಕರಣಗಳ ಪ್ರಭಾವ ದಟ್ಟವಾಗಿ ಹಬ್ಬಿರುವುದನ್ನೂ, ಅದರ ಫಲಾನುಭವಿಗಳ ಚಿತ್ರಣವನ್ನೂ ಕಥೆ ಕಟ್ಟಿಕೊಡುತ್ತಾ ಸಾಗುತ್ತದೆ. ಈ ಪ್ರಕ್ರಿಯೆ ತೇಜಸ್ವಿಯವರ ಕಥೆಗಳಲ್ಲಿ ಪದೇ ಪದೇ ಕಾಣಿಸಿಕೊಳ್ಳುತ್ತದೆ. ಆಧುನಿಕ ಮನಸ್ಸಿಗೆ ಕನ್ನಡಿ ಹಿಡಿದಿರುವ ಈ ಕಥೆ ಹಿಂದಿನ ಮತ್ತು ಇಂದಿನ ಸ್ಥಿತಿಗಳನ್ನು ಏಕಕಾಲಕ್ಕೆ ವಿಮರ್ಶೆಗೆ ಒಡ್ಡುತ್ತದೆ. ತುಕ್ಕೋಜಿಯ ವೈಯಕ್ತಿಕ ಜೀವನದ ಸ್ಥಿತ್ಯಂತರದ ಜೊತೆಗೆ ರೈಲ್ವೆ ನಿಲ್ದಾಣದ ಆಗಮನದಿಂದ ಗುರುಗಳ್ಳಿಯಲ್ಲಾದ ಬದಲಾವಣೆಯನ್ನು

ಗುರುಗಳ್ಳಿ ಒಂದು ಕಾಲಕ್ಕೆ ಹಳ್ಳಿಯಾಗಿದ್ದಿತ್ತಾದರು ಇಡೀ ಅಖಂಡ ಭಾರತದ ವಿಕಾಸದೊಂದಿಗೇ ನಿಧಾನವಾಗಿ ಬೆಳೆದು ಬೆಳೆದು ಸಣ್ಣ ಪೇಟೆಯಾಯ್ತು. ಆಸ್ಪತ್ರೆ, ಬಸ್ ನಿಲ್ದಾಣ, ಪೋಲೀಸ್ ಸ್ಟೇಷನ್ನು, ಪೋಸ್ಟಾಫೀಸು, ಒಂದು ಗುಡಾರದ ಸಿನಿಮಾ ಇತ್ಯಾದಿಗಳಲ್ಲಾ ಆದ ಮೇಲಂತೂ ಅದೊಂದು ಪೇಟೆ ಎನಿಸಕೊಳ್ಳಲು ಅನುರೂಪವಾದ ಜಾಗವಾಗಿ ಹೋಯ್ತು. ಈ ಧೂಳು ಗುಜು ಗುಜು ಗಲಾಟೆಗಳ ನಡುವೆಯೇ ಇನ್ನೂ ಒಂದು ಚರಿತ್ರಾರ್ಹ ಘಟನೆ ನಡೆಯಿತು. ಹಾಸನ ಮಂಗಳೂರಿನ ರೈಲು ಮಾರ್ಗ ಗುರುಗಳ್ಳಿ ಮುಖಾಂತರವೇ ಹೋಗುವುದೆಂದು ನಿರ್ಣಯವಾಯ್ತು..... ಈ ಮುಖ್ಯವಾದವುಗಳ ನಡುವೆ ಈ ನಾಗರಿಕತೆಯ ವಿಕಾಸಕ್ಕೆ ಶ್ರಮಿಸುವ ಅನೇಕರೂ ಇದ್ದರು. ವಿದ್ಯಾರ್ಥಿ ಭವನದ ಹೋಟೆಲು ತಿಮ್ಮಪ್ಪಯ್ಯ...., ಸ್ಟೂಡೆಂಟ್ ಹೇರ್ಕಟಿಂಗ್ ಸೆಲೂನಿನ ಭಂಡಾರಿ ಕೃಷ್ಣ ..... ಆದರೆ ಇವರಿಗೆಲ್ಲರಿಗಿಂತ ಮಿಗಿಲಾದ ಜವಬ್ದಾರಿ ಟೈಲರ್ ತುಕ್ಕೋಜಿಯದ್ದಾಗಿತ್ತೆಂಬುದನ್ನು ಯಾರೂ ನಿರ್ವಿವಾದವಾಗಿ ಒಪ್ಪಬೇಕಾದುದೆ. ಸಂತೆಯಲ್ಲಿ ವರುಷಕ್ಕೊಂದಾವರ್ತಿ ಚೀಟಬಟ್ಟೆಯ ರೆಡಿಮೇಡು ಉಡುಪುಗಳನ್ನು ಕಂಡು ಹಾಕಿಕೊಂಡು ಹೋಗುತ್ತಿದ್ದ ಹಳ್ಳಿಗರು ಉತ್ತಮವಾದ ಕಚ್ಚಾಬಟ್ಟೆಗಳನ್ನು ಅಂಗಡಿಗಳಲ್ಲಿ ಕೊಂಡು ಅದನ್ನು ತಮ್ಮ ಅಳತೆ ಅಭಿರುಚಿಗಳಿಗೆ ತಕ್ಕಂತೆ ಹೊಲಿಸಿಕೊಂಡು ಓಡಾಡುವ ಅಭಿರುಚಿಯನ್ನೂ ಶಿಸ್ತನ್ನೂ ಕಲಿಸಬೇಕಾದರೆ ಅದೇನೂ ಸಾಮಾನ್ಯವಾದ ಕೆಲಸವಲ್ಲ. ಅವನಿಗೆ ಈ ಗುರುತರ ಕಾರ್ಯದಲ್ಲಿ ಈಚೆಗೆ ಆರಂಭವಾದ ಜೂನಿಯರ್ ಕಾಲೇಜು ಸಿನಿಮಾ ಇತ್ಯಾದಿಗಳೆಲ್ಲ ಸಹಾಯ ಮಾಡಿದವು ಎನ್ನುವುದೇನೋ ನಿಜ!'

ಈ ನಡುವೆ ಗುರುಗಳ್ಳಿ ನಿಧಾನವಾಗಿ ಇನ್ನೂ ಬೆಳೆಯಿತು. ಕತ್ತಲಾದ ಮೇಲೆ ಜನ ಒಂದು ಕಾಲದಲ್ಲಿ ಓಡಾಡಲೂ ಹೆದರುತ್ತಿದ್ದ ಕಡೆಗಳೆಲ್ಲೆಲ್ಲಾ ಈಗ ಮನೆಗಳು ಏಳತೊಡಗಿದವು. ತುಕ್ಕೋಜಿಗೆ ಒಂದು ಮಗುವಾದಾಗ ಗುರುಗಳ್ಳಿಯ ಜನಸಂಖ್ಯೆ ಅವನ ಮಗ ಕೃಷ್ಣೋಜಿಯನ್ನೂ ಸೇರಿಸಿಕೊಂಡು ಸಾವಿರದ ಮೇರೆ ಮೀರಿತು.[11]

ಎಂದು ವಿವರಿಸುತ್ತಾರೆ. ಈ ಒಂದು ವಿಶ್ಲೇಷಣೆಯೇ ಸಾಕು ಕಾಲ ಯಾರಿಗೂ ಕಾಯದೆ, ಯಾರ ಪರಿವೆಯೂ ಇಲ್ಲದೆ ತನ್ನಷ್ಟಕ್ಕೆ ತಾನೇ ಸರಿದು ಇತಿಹಾಸವನ್ನು ನಿರ್ಮಿಸುತ್ತಾ ಸಾಮಾಜಿಕ, ಸಾಂಸ್ಕೃತಿಕ ಪಲ್ಲಟಗಳನ್ನು ಒಡಲೊಳಗೆ ಹುದುಗಿಸಿಕೊಂಡಿರುವ ಸತ್ಯವನ್ನು ಅರ್ಥಮಾಡಿಸುತ್ತದೆ.

ಮೂಲತಃ ಹಾಸನದವನಾದ ತುಕ್ಕೋಜಿಗೆ ಅನುವಂಶಿಕವಾಗಿ ಬಂದದ್ದು ಹೊಲಿಗೆ ವೃತ್ತಿ. ಹಾಸನದ ಹೆಸರಾಂತ ಬಟ್ಟೆ ವ್ಯಾಪಾರಿಯಾದ ತಂದೆಯ ಆಜ್ಞೆಗೆ ಅವಿಧೇಯನಾಗಿ ತನ್ನಿಚ್ಛೆಯಂತೆ ಸರೋಜಳನ್ನು ಮದುವೆಯಾಗಿ ಗುರುಗಳ್ಳಿಯಲ್ಲಿ ನೆಲೆಸಿದ್ದ. ಗುರುಗಳ್ಳಿಯಲ್ಲಿ ಸೇರ್ಪಡೆಯಾಗುತ್ತಿದ್ದ ಒಂದೊಂದೇ ನಾಗರಿಕ ವ್ಯವಸ್ಥೆಯಿಂದಾಗಿ ಹಳ್ಳಿ, ಪೇಟೆಯಾಗಿ ವಿಕಸನಗೊಳ್ಳುತ್ತಿರುತ್ತದೆ. ಆಸ್ಪತ್ರೆ, ಪೋಸ್ಟಾಫೀಸು, ಬಸ್‌ನಿಲ್ದಾಣ, ಸಿನಿಮಾಟಾಕೀಸು ಹೀಗೆ ಒಂದೊದರ ಹೆಚ್ಚಳಕ್ಕೆ ದರ್ಜಿ ತುಕ್ಕೋಜಿಯಂತೆಯೇ, ಹೋಟೆಲು ತಿಮ್ಮಪ್ಪಯ್ಯ, ಸೆಲೂನಿನ ಕೃಷ್ಣಭಂಡಾರಿ, ಡಾಕ್ಟರು ನರೇಂದ್ರ ಎಲ್ಲರೂ ಭೌತಿಕವಾಗಿ ಶ್ರಮಿಸುತ್ತಾರೆ. ಇನ್ನು ತುಕ್ಕೋಜಿಯ ವೃತ್ತಿ ಸಮರ್ಪಣೆಗೆ ಹೆಂಡತಿ ಸರೋಜಳ ಸಹಾಯ ಕೂಡ ಲಭಿಸುತ್ತಿರುತ್ತದೆ. ತನ್ನ ಅವಳ ಏಕಾಗ್ರತೆ ಆತನಿಗೆ ಕೆಲಸದಲ್ಲಿ ಆತ್ಮವಿಶ್ವಾಸ ಮೂಡಿಸುವುದರೊಂದಿಗೆ ಆಕೆ ಅವನ ಅದೃಷ್ಟ ದೇವತೆಯೆಂಬುದೇ ಆತನ ಮನದಿಂಗಿತವಾಗಿರುತ್ತದೆ. ಇದರಿಂದ ತಕ್ಕೋಜಿಗೆ ಏಕಾಗ್ರತೆ ಸಾಧಿತವಾಗುತ್ತಿರುತ್ತದೆ. ಸಮಯಪಾಲನೆ, ಗಿರಾಕಿಗಳಿಗೆ ಹೊಲಿದು ಕೊಡುತಿದ್ದಂತಹ ಬಟ್ಟೆಗಳು ದೇವರು ಕೊಟ್ಟ ಚರ್ಮದಂತೆ ಸ್ವಾಭಾವಿಕವಾಗಿ ಹೊಂದಿಕೊಳ್ಳುತ್ತದ್ದರಿಂದ ಬಹಳ ಬೇಗನೆ ಪ್ರಶಂಸೆಗೆ ಒಳಗಾಗುತ್ತಾನೆ. ಕ್ರಮೇಣ ಹೆಚ್ಚು ಗಿರಾಕಿಗಳು ಆಕರ್ಷಿತರಾಗಿ ದಿನದಿಂದ ದಿನಕ್ಕೆ ತಕ್ಕೋಜಿಯೇ ಬಟ್ಟೆ ಹೊಲಿದು ಕೊಡಬೇಕೆಂದು ಬೇಡಿಕೆ ಹೆಚ್ಚುತ್ತದೆ.

ಹೇಮಾವತಿ ನದಿಗೆ ಇನ್ನೊಂದು ರೈಲುಸೇತುವೆ, ಗುರುಗಳ್ಳಿಯಲ್ಲಿ ಒಂದು ರೈಲು ನಿಲ್ದಾಣ ನಿರ್ಮಾಣವಾಗುವ ಹಂತದಲ್ಲಿರುವಾಗ ತುಕ್ಕೋಜಿ, ಸರೋಜರಿಗೆ ಕೃಷ್ಣೋಜಿ(ಕಿಟ್ಟು) ಎಂಬ ಮಗು

ಹುಟ್ಟುತ್ತಾನೆ. ಕಿಟ್ಟುವಿನ ಬೆಳವಣಿಗೆಯ ಜೊತೆಯಲ್ಲಿ ಆತನ ತಂಟೆ ತಕರಾರುಗಳು ಹೆಚ್ಚುತ್ತಾ ಬರುತ್ತದೆ. ಇದರಿಂದ ದರ್ಜಿಯ ನಾಜೂಕಾದ ಕೆಲಸದಲ್ಲಿ ಏರುಪೇರಾಗುತ್ತದೆ. ಮಗುವಿನ ಲಾಲನೆ ಪಾಲನೆಯಲ್ಲಿ ಸರೋಜಾಳ ಹೆಚ್ಚಿನ ಸಮಯ ವ್ಯಯವಾಗುತ್ತಿದ್ದರಿಂದ ಹೊಲಿಗೆ ಕೆಲಸದಲ್ಲಿ ಸಹಕರಿಸಲಾಗದೆ ವೃತ್ತಿ ಬದುಕು ಸುಸೂತ್ರವಾಗಿ ನಡೆಯುವುದಿಲ್ಲ. ಮಗುವಿಗಿಂದ ಘಟಿಸಿದ ಅವಾಂತರಗಳಿಂದ ಮತ್ತು ಗಿರಾಕಿಗಳ ದೂರುಗಳಿಂದ ಬೇಸತ್ತ ತುಕ್ಕೋಜಿ ಇದಕ್ಕೆಲ್ಲಾ ಹೆಂಡತಿಯಾದ ಸರೋಜಳೇ ಕಾರಣವೆಂದು ಸಿಡಿಮಿಡಿಗೊಂಡು ರೇಗಾಡುತ್ತಾನೆ. ದಿನದಿನಕ್ಕೆ ತುಕ್ಕೋಜಿಗೆ ಕೆಲಸದ ರೂಪದಲ್ಲಿ ನಾಗರಿಕತೆಯ ವಿಕಸನದ ಭಾರವು ಹೆಚ್ಚಿದಂತೆ ಅವನ ಮನಸ್ಸು ಹದಗೆಡುತ್ತಾ ವೈಯಕ್ತಿಕ ಜೀವನವು ಅಶಾಂತಿಯ ಹೊಗೆಗೂಡಾಗುತ್ತದೆ. ಇದರ ಜೊತೆಗೆ ಮನೆಯ ಎದುರಿಗೆ ಸ್ವಚ್ಛಂದವಾಗಿ ವಿಹರಿಸುತ್ತಿದ್ದ ದಂಪತಿಗಳನ್ನು ಸರೋಜ ಕಂಡಾಗ ತನ್ನಲ್ಲಿ ಉಕ್ಕುತ್ತಿದ್ದ ಅಪೇಕ್ಷೆ, ತುಕ್ಕೋಜಿಯ ಅರಸಿಕತೆಯ ಭಾವ ಅವಳಲ್ಲಿ ಅನಾಸಕ್ತಿಯನ್ನು ಉಂಟುಮಾಡುತ್ತದೆ. ಕೆಲಸದಲ್ಲಿನ ತನ್ಮಯತೆಯಿಂದ ನೀರಸಗೊಂಡ ಆಕೆಯ ಮನಸ್ಸು ತುಕ್ಕೋಜಿಗೆ ಕೆಲಸದಲ್ಲಿ ಸಹಕರಿಸಿದಂತೆ ಅಡ್ಡಿಪಡಿಸುತ್ತದೆ. ತುಕ್ಕೋಜಿಗೆ ಆತ್ಮವಿಶ್ವಾಸವನ್ನೂ ಶ್ರದ್ಧೆಯನ್ನೂ ಪ್ರೇರೇಪಿಸುತ್ತಿದ್ದ ಸರೋಜಾಳ ನಿಷ್ಠೆ ಬದಲಾದ್ದರಿಂದ ಹೊಲಿಗೆ ಕೆಲಸದಲ್ಲಿ ನೆಮ್ಮದಿ ಏಕಾಗ್ರತೆಯನ್ನು ಕಳೆದುಕೊಂಡು ಬಳಲುತ್ತಾನೆ. ಈ ಮಧ್ಯೆ ಜನರ ಅಪೇಕ್ಷೆಗಳೂ ದಿನದಿನಕ್ಕೆ ಬದಲಾಗುವುದು ಅವನಿಗೆ ಅರ್ಥವಾಗುದಿಲ್ಲ. ತಾನು ಹೊಲೆಯುತ್ತಿದ್ದ ಬಟ್ಟೆಗಳಲ್ಲಾದ ದೋಷಗಳನ್ನು ದೂರುತ್ತಾ ಬಂದ ಗಿರಾಕಿಗಳಿಗೆ ಅವರ ಶರೀರ ರಚನೆ ನಡಿಗೆಗಳೇ ಕಾರಣವೆಂದು ಸಮಾಜಾಯಿಷಿ ನೀಡುವುದರಲ್ಲಿ ವ್ಯತೀತನಾಗುತ್ತಾನೆ. ಎಷ್ಟೆಲ್ಲಾ ಪ್ರಯತ್ನಪಟ್ಟರೂ ಗಿರಾಕಿಗಳಿಂದ ನಿಂದನೆಯ ಮಾತುಗಳನ್ನು ಕೇಳಬೇಕಾದ್ದರಿಂದ ತುಕ್ಕೋಜಿ ಸಂಪೂರ್ಣವಾಗಿ ಸೋತು ಹತಾಶನಾಗುತ್ತಾನೆ.

ಅಬಚೂರಿನ ಪೋಸ್ಟಾಫೀಸು ಸಂಕಲನ ತೇಜಸ್ವಿ ಕಥನದ ಮತ್ತೊಂದು ಮಹತ್ವದ ಪಲ್ಲಟವನ್ನು ಸೂಚಿಸುತ್ತದೆ. ಇಲ್ಲಿ ಬರವಣಿಗೆ ಸಮಾಜ ಮುಖಿಯಾಗದೆ, ಸಂಸ್ಕೃತಿ ಮುಖಿಯಾಗಿದೆ. ಇಲ್ಲಿ ವ್ಯಕ್ತಿಗಳ ಸಮಸ್ಯೆಗಳು ಕೇವಲ ವೈಯಕ್ತಿಕ ಸ್ವರೂಪದವಲ್ಲ. ಮತ್ತು ವ್ಯಕ್ತಿಗಳು ಕೇವಲ ವ್ಯಕ್ತಿಗಳಲ್ಲ. ಅವರೆಲ್ಲ ನಿರ್ದಿಷ್ಟ ಸಾಮಾಜಿಕ ವರ್ಗಗಳಿಗೆ ಸೇರಿದವರೂ ಆಗಿರುತ್ತಾರೆ. ಇವರ ಬದುಕಿನ ವಿದ್ಯಮಾನಗಳನ್ನು ಇವರ ಕೌಟುಂಬಿಕ ಹಿನ್ನೆಲೆ, ಇವರ ವೈಯಕ್ತಿಕ ವ್ಯಕ್ತಿತ್ವದ ಅಂಶಗಳು ನಿಯಂತ್ರಿಸುವಂತೆ ಐತಿಹಾಸಿಕ ಶಕ್ತಿಗಳೂ, ಪ್ರಕ್ರಿಯೆಗಳೂ ನಿರ್ದೇಶಿಸಿ ನಿಯಂತ್ರಿಸಲಾರಂಭಿಸುತ್ತವೆ. ಹಾಗಾಗಿ ಕತೆಗಳು ಆಯಾ ಪ್ರಧಾನ ಪಾತ್ರಗಳ ಸುತ್ತ ಹೆಣೆದಂತೆ ಮೇಲುನೋಟಕ್ಕೆ ಕಂಡರೂ ಒಟ್ಟಾರೆ ಕಥನ ಐತಿಹಾಸಿಕ ಪ್ರಕ್ರಿಯೆಗಳ, ಸಾಮಾಜಿಕ ಪಲ್ಲಟಗಳ ದಾಖಲೆಯೂ ಆಗಿಬಿಡುತ್ತದೆ. ಅಂದರೆ ಒಂದು ಸಾಮಾಜಿಕ ಹಿನ್ನೆಲೆಯಲ್ಲಿ ಮನುಷ್ಯ ಜೀವನದ ಏರುಪೇರುಗಳನ್ನು ಯಶಸ್ಸು ಅಪಯಶಸ್ಸುಗಳನ್ನು ಗುರುತಿಸಿಕೊಳ್ಳುವುದು ಇಲ್ಲಿ ಮುಖ್ಯವಾಗುತ್ತದೆ. ಹೊಸವಿದ್ಯಮಾನಗಳ ಪರಿಣಾಮವಾಗಿ ಹಿಂದಿನ ಜೀವನಕ್ರಮಗಳು ಎದುರಿಸಿದ ಹೊಸ ಸಮಸ್ಯೆ ಸವಾಲುಗಳು ಇಲ್ಲಿ ಪರಿಶೀಲನೆಗೆ ಒಳಗಾಗುತ್ತವೆ.[೨]

ಪೂರ್ಣಚಂದ್ರ ತೇಜಸ್ವಿಯವರ ಸಾಹಿತ್ಯದ ಬಹುಪಾಲು ಕೃತಿಗಳು ಸ್ವಾತಂತ್ರ್ಯೋತ್ತರ ಭಾರತದ ಸಾಮಾಜಿಕ ಹಾಗೂ ಸಾಂಸ್ಕೃತಿಕ ದ್ವಂದ್ವಗಳ ಸಂಕೀರ್ಣತೆಯ ಹಿನ್ನಲೆಯಲ್ಲಿ ಹುಟ್ಟಿಕೊಂಡ ಸವಾಲುಗಳಿಗೆ ಕಂಡುಕೊಂಡ ಉತ್ತರವಾಗಿದೆ. ತೇಜಸ್ವಿಯವರು ವ್ಯಕ್ತಿಪ್ರಜ್ಞೆಯ ಮೂಲಕ ಬದುಕನ್ನು ನೋಡದೆ ಮನುಷ್ಯನ ವ್ಯಕ್ತಿಗತ ಬಾಹ್ಯಸಂಬಂಧಗಳ ಮೇಲೆ ಮತ್ತು ಆತನ ನಡಾವಳಿಗಳ ಮೇಲೆ ಪ್ರಜ್ಞೆ ಬೀರುವ ಪ್ರಭಾವವನ್ನು ಗ್ರಹಿಸುತ್ತಾರೆ. ಬದುಕಿನ ವ್ಯಾಪಾರ ವಹಿವಾಟುಗಳ ಮೇಲೆ ಪ್ರಜ್ಞೆಯ ಪ್ರೇರಣೆ ಯಾವ ರೀತಿಯದ್ದು ಎಂಬ ಹುಡುಕಾಟವೇ ಒಟ್ಟು ಬದುಕಿನ ಅರ್ಥವನ್ನು ವಿಶ್ಲೇಷಿಸುವಂತೆ ಒತ್ತಾಯಿಸುತ್ತದೆ.

## ೪.೬ ತನ್ಮಯತೆಯ ಜೀವನಕ್ರಮದಲ್ಲಿನ ಪಲ್ಲಟಗಳು

೧೯೩೯ ರಿಂದ ೧೯೪೫ ರ ಅವಧಿಯಲ್ಲಿ ನಡೆದ ಎರಡನೇ ಮಹಾಯುದ್ಧದ ತೀವ್ರ ಪರಿಣಾಮ ಭಾರತದ ಮೇಲಾಗದಿದ್ದರೂ ಸ್ವಾತಂತ್ರ್ಯಾನಂತರದ ಬದುಕಿನ ಮೇಲೆ ಅಗಾಧವಾದ ಪರಿಣಾಮವನ್ನೇ ಬೀರಿತು. ಬ್ರಿಟೀಷ್ ಅಧಿಪತ್ಯದಿಂದ ಬಿಡುಗಡೆ ಪಡೆದರೂ ಪಾಶ್ಚಾತ್ಯ ವಿಚಾರಧಾರೆಯಿಂದ ಅತಂತ್ರತೆಯನ್ನು ಅನುಭವಿಸಲೇಬೇಕಾಯಿತು. ಕಾರಣ ಸ್ಪಷ್ಟ. ಅದುವರೆಗೂ ಅನುಭವಿಸಿದ ಬದುಕು ಮುಕ್ತವಾಗಿತ್ತು. ಅಂದರೆ ಆ ಸಂದರ್ಭದಲ್ಲಿ ಪರಕೀಯರ ಆಳ್ವಿಕೆಯಿಂದ ಬಿಡುಗಡೆಗೊಳ್ಳಬೇಕೆಂಬ ತವಕ ಇಮ್ಮಡಿ-ನೂರ್ಮಡಿಯಾಗಿತ್ತೇ ವಿನಹ ಸ್ವತಂತ್ರ ಸಮಾಜದಿಂದ ಉದ್ಭವಿಸಬಹುದಾದ ಬಿಕ್ಕಟ್ಟುಗಳನ್ನೂ ಎದುರಿಸಬೇಕೆಂಬ ಅರಿವು ಇಲ್ಲದೆ ಹೋದದ್ದು ಅಥವಾ ಯಾವುದೇ ಬಿಕ್ಕಟ್ಟುಗಳಿಗೂ ಪರಿಹಾರೋಪಾಯ ಇದ್ದೇ ಇರುತ್ತದೆಯೆಂಬ ಸ್ಥಿರ ನಿಲುವಿಗೆ ತಲುಪಿದ್ದು. ಈ ನಿಲುವು ಚಿರಕಾಲ ಉಳಿಯದೆ ಹೋದ್ದರಿಂದ ಸ್ವಾತಂತ್ರ್ಯ ಸಿಗುವ ತನಕ ಇದ್ದ ನೆಮ್ಮದಿಗೆ ಭಂಗಬಂದಿತು.

ಕೈಗಾರೀಕರಣದ ಫಲವಾಗಿ ಮಾರುಕಟ್ಟೆ-ಮಾರುಕಟ್ಟೆಯಿಂದಾಗಿ ಪೈಪೋಟಿ-ಪೈಪೋಟಿಯಿಂದಾಗಿ ವ್ಯಾಪಾರಿ ಜಾಲ ಇವುಗಳ ನಡುವೆ ವ್ಯಾಪಾರೀ ಅನೀತಿ, ಅನೈತಿಕ ಅವ್ಯವಹಾರ, ಕಾಳಸಂತೆಗಳ ಹೆಚ್ಚಳ ಹೊಸಹೊಸ ಆಸೆ ಆಕಾಂಕ್ಷೆಗಳನ್ನು ಈಡೇರಿಸುವ ಸಲುವಾಗಿ. ವ್ಯವಸ್ಥೆಯು ಹೊಸರೀತಿಯ ಯೋಜನೆಗಳನ್ನು ರೂಪಿಸಿಕೊಂಡವು. ಭೌತಿಕ ಜಗತ್ತಿನ ಆಶೋತ್ತರಗಳನ್ನು ಅಲಕ್ಷಿಸದೆ ಸೀಮಿತ ವರ್ಗದವರಿಗೆ ಗಣನೀಯವಾದ ಸೌಲಭ್ಯವನ್ನೊದಗಿಸಿದ ಪರಿಣಾಮವಾಗಿ ವ್ಯಕ್ತಿಗತ ಬದುಕಿನ ಆಶಯಗಳಿಗೆ ಮನ್ನಣೆ ದೊರೆಯಿತು. ಇದು ವ್ಯಕ್ತಿ ಸ್ವಾತಂತ್ರ್ಯಕ್ಕೆ ಪುಷ್ಠಿ ಕೊಟ್ಟಿತು. ಆಧುನಿಕ ಪಾಶ್ಚಾತ್ಯ ಸಮಾಜದಲ್ಲಿ ಹಳೆ-ಹೊಸ ಮೌಲ್ಯಗಳ ಸಂಘರ್ಷ ಸ್ಥಿತಿ ಬಂದು ಹೊಸ ವರ್ಗ ವ್ಯವಸ್ಥೆ ರೂಪುಗೊಳ್ಳತೊಡಗಿತು. ಕೃಷಿ ಪ್ರಧಾನ ನಾಗರೀಕತೆ ಶಕ್ತಿಹೀನವಾಯಿತು. ಧಾರ್ಮಿಕಪ್ರಜ್ಞೆಗೆ ಪೆಟ್ಟು ಬೀಳಲಾರಂಬಿಸಿತು. ಹಳೆಯದು ಎನ್ನಬಹುದಾದ ಅಂಶಗಳು ಬದಲಾವಣೆಗೆ ಸಜ್ಜಾದವು. ಇಂತಹ ಸಾಮಾಜಿಕ ಸ್ಥಿತ್ಯಂತರ ನಿಧಾನವಾಗಿ ಜನತೆಯ ಮೇಲೂ ಪರಿಣಾಮ ಬೀರತೊಡಗಿತು.

ಕೈಗಾರಿಕಾರಣದ ಫಲವಾಗಿ ಹೊಸ ಆಸೆಗಳನ್ನು ತೆರೆದ ಆರ್ಥಿಕ ಸುಧಾರಣೆಗಳು ಗ್ರಾಮೀಣ ಬದುಕಿನ ರೀತಿನೀತಿಗಳಲ್ಲಿ, ವ್ಯತ್ಯಾಸವುಂಟುಮಾಡಿರುವುದು ಈಗಾಗಲೇ ತಿಳಿದಿರುವ ಸಂಗತಿ. ಆರ್ಥಿಕ ಸುಧಾರಣೆ, ತಾಂತ್ರಿಕ ಪ್ರಗತಿ ಮತ್ತು ನಗರೀಕರಣಗಳು ಪರಸ್ಪರ ಸಂಬಂಧ ಹೊಂದಿದ್ದು ವಿಶಿಷ್ಟ ಸಾಂಸ್ಕೃತಿಕ ಸ್ಥಿತಿ ಏರ್ಪಡುವುದು ಸಹಜ, ಆದರೆ ಆಧುನಿಕ ನಾಗರಿಕತೆಯಿಂದಾಗಿ ಸಂಸ್ಕೃತಿಯೊಂದು ತನ್ನ ಅಸ್ತಿತ್ವವನ್ನು ಹೇಗೆ ಉಳಿಸಿಕೊಳ್ಳಬೇಕೆಂಬ ಸಮಸ್ಯೆಯಲ್ಲಿ ಸಿಲುಕುತ್ತದೆ. ಕೈಗಾರಿಕೀಕರಣದ ಕಾರಣವಾಗಿ ಬದುಕಿನ ಸ್ಥಾವರ ಘಟಕಗಳು ಪಲ್ಲಟಗೊಳ್ಳುತ್ತವೆ. ಏಕೆಂದರೆ ಬಹುರಾಷ್ಟ್ರೀಯ ಕಂಪನಿಗಳ ಮೂಲಕ ಪ್ರಾದೇಶಿಕ ಸಂಸ್ಕೃತಿಗೆ ಬರುತ್ತಿರುವ ಆರ್ಥಿಕ-ರಾಜಕೀಯ ಶಕ್ತಿಗಳು ಅಲ್ಲಿನ ಸಾಂಸ್ಕೃತಿಕ ರಚನೆಗಳನ್ನೇ ಬದಲಾಯಿಸಿಬಿಡುತ್ತವೆ. ಸ್ಥಳೀಯ ಸಂಪನ್ಮೂಲಗಳ ಹಿನ್ನೆಲೆಯಲ್ಲಿ ಸಂಸ್ಕೃತಿಯ ಸ್ವರೂಪವನ್ನು ಗ್ರಹಿಸುವುದಾದರೆ ಹಳೆಯ ಸಾಂಪ್ರದಾಯಿಕ ಸಮಾಜದ ಸ್ಥಿತಿಗೂ ಆಧುನಿಕ ನಾಗರಿಕ ಸಮಾಜದ ಸ್ಥಿತಿಗೂ ಅನೇಕ ವ್ಯತ್ಯಾಸಗಳೇರ್ಪಡುತ್ತದೆ.

ಸ್ವಾತಂತ್ರ್ಯೋತ್ತರದ ಬದುಕು ಹೊಸ ಅಲೆಯನ್ನು ಸೃಷ್ಟಿಸಿ ಜಡಗೊಂಡ ಸಮಾಜದಲ್ಲಿ ಚೈತನ್ಯವನ್ನು ಮೂಡಿಸಿದ್ದು ನಿಜ. ಆದರೆ ವಸ್ತುಸ್ಥಿತಿಗೆ ಅಭಿಮುಖಿಯಾದ ಮನುಷ್ಯ ಬೇಗುದಿಗೆ ಸಿಕ್ಕು ತನ್ನ ಸ್ಥಾನವನ್ನು ಸಮಾಜದಲ್ಲಿ ಗುರುತಿಸಿಕೊಳ್ಳುವುದಕ್ಕೆ ಹೊರಟಾಗ ಗೊಂದಲಕ್ಕೆ ಈಡಾಗಿ ಸಮಾಜ ಮತ್ತು ಸಂಸ್ಕೃತಿಯ ಪರಾಮರ್ಶೆಯಲ್ಲಿ ತೊಡಗಿದ. ಆಗ ದೊರೆತ ಉತ್ತರ ಬಹುಮುಖಿಯಾದ ಚಿಂತನೆಗೆ ಅವಕಾಶ ಒದಗಿಸಿತು. ಸಮಾಜದಲ್ಲಿ ಅದುವರೆಗೂ ನಂಬಿಕೊಂಡು ಬಂದ ಮೌಲ್ಯಗಳು ಪುನರ್‌ವ್ಯಾಖ್ಯಾನಕ್ಕೆ ಒಳಪಟ್ಟವು. ಅವನ್ನು ಒರೆಗಲ್ಲಿಗೆ ಹಚ್ಚುವುದಕ್ಕೆ ಪಾಶ್ಚಾತ್ಯ ವಿಚಾರಧಾರೆಗಳು ಕಾರಣವಾದವು. ಇದರಿಂದಾಗಿ ಸ್ವಾತಂತ್ರ ಪೂರ್ವ ಕಾಲದಿಂದ ಮನೆಮಾಡಿದ್ದ ನಂಬಿಕೆಗಳು ಬುಡಮೇಲಾದವು. ಇದುವರೆಗೂ ಇದ್ದ ಪರಂಪರೆ-ಆದರ್ಶ-ಮೌಲ್ಯ-ಬದುಕಿನ ಮಾದರಿ ಎಲ್ಲವೂ ಪುನರ್‌ವಿಮರ್ಶೆಗೆ ಒಳಪಟ್ಟು ಹೊಸ ಹೊಸ ವ್ಯಾಖ್ಯಾನಗಳೊಂದಿಗೆ ಹೊಸರೂಪದಲ್ಲಿ ಸಾಮಾಜಿಕ ದರ್ಶನಕ್ಕೆ ಮುನ್ನುಡಿ ಹಾಡಿದವು. ಇದಕ್ಕೆ ಬೆನ್ನೆಲುಬಾಗಿ ನಿಂತಿದ್ದು ಪಾಶ್ಚಿಮಾತ್ಯ ಜಗತ್ತು ಮತ್ತು ಸಾಹಿತ್ಯ. ಪಾಶ್ಚಿಮಾತ್ಯದ ಪ್ರೇರಣೆಯಿಂದಾಗಿ ಅನ್ಯಜ್ಞಾನಗಳ ಶಿಸ್ತುಗಳ ಪರಿಚಯ ಕ್ರಮೇಣವಾಗಿ ಭಾರತೀಯ ಸಾಹಿತ್ಯದಲ್ಲಿ ಪ್ರವೇಶ ಪಡೆದು ಆಧುನೀಕರಣಕ್ಕೆ ಜೊತೆ ನೀಡಿದವು. ಸಾಮಾಜಿಕ ಬದಲಾವಣೆಯನ್ನು ಒಂದು ಜೀವನಕ್ರಮದಲ್ಲಿ ಗುರುತಿಸಿ ದಾಖಲಿಸುವ ಕೆಲಸ ಸಾಹಿತ್ಯದ ಸಂದರ್ಭದಲ್ಲಿ ನಡೆಯುವುದು ಕೂಡ ಪ್ರಮುಖವಾಗಿದೆ.

ಚರಿತ್ರೆಯ ಪುಟಗಳಲ್ಲಿ ಸೇರಿ ಹೋಗುವ ಅವಿಸ್ಮರಣೀಯ ಘಟನೆಗಳಂತೆಯೇ ಅನೇಕ ಸ್ವಾರಸ್ಯಕರ ವಿವರಗಳಲ್ಲಿ ನಿರೂಪಿತವಾಗುವ ತುಕ್ಕೋಜಿ, ಅವನತಿ, ಅಬಚೂರಿನ ಪೋಸ್ಟಾಫೀಸು, ಜುಗಾರಿಕ್ರಾಸ್, ಕೃಷ್ಣೇಗೌಡನ ಆನೆ ಈ ಕಥನಗಳು ಕಲಾತ್ಮಕವಾಗಿ ವಿಶ್ಲೇಷಣೆಗೆ ಒಳಪಡುತ್ತದೆ. ಜಾಗತಿಕರಣದಿಂದುಂಟಾದ ಉತ್ಕರ್ಷದ ಜೊತೆಗೆ ವಿಕಸನದ ಸಂದರ್ಭಗಳಲ್ಲಿ ಏರ್ಪಡುವ ಆತಂಕ ಗೊಂದಲಗಳು ಅನೇಕ ಸಮಸ್ಯೆಗಳ ದೆಸೆಯಿಂದಾಗಿ ಸಾಮಾಜಿಕವಾಗಿ ಸಾಂಸ್ಕೃತಿಕವಾಗಿ ಪಡೆದುಕೊಳ್ಳುವ ತಿರುವು ಸಾಹಿತ್ಯಕ ಸಂದರ್ಭದಲ್ಲಿ ಮೇರುಗಲ್ಲಾಗಿದೆ.

ಸಂಸಾರದಲ್ಲಾದ ತಲ್ಲಣಗಳಿಂದ ತುಕ್ಕೋಜಿ ನಾಗರಿಕತೆಯ ಛಂದಸ್ಸನ್ನು ಅರ್ಥಮಾಡಿಕೊಳ್ಳದೆ ಹಾಳುಮಾಡತೊಡಗಿದ ಸಂದರ್ಭದಲ್ಲಿ ಗುರುಗಳ್ಳಿಯಲ್ಲಿ ಸೇತುವೆ ನಿರ್ಮಾಣ ಕಾರ್ಯ ಗರಿಗಟ್ಟುತ್ತದೆ. ಅದಕ್ಕಾಗಿ ಹಳದಿ ಬಣ್ಣದ ವಿಚಿತ್ರ ಸ್ವರೂಪದ ಭಾರೀ ಯಂತ್ರವೊಂದು ಅಲ್ಲಿನ ಕೆಲಸಕ್ಕೆ ಬಂದಿದ್ದು ತುಕ್ಕೋಜಿಯ ಅಂಗಡಿಯ ಎದುರಿಗೆ ಓಡಾಡುತ್ತಿರುತ್ತದೆ. ಕುತೂಹಲಗೊಂಡ ಕಿಟ್ಟು ಅದರಲ್ಲಿ ಕೂಡಬೇಕೆಂಬ ಆಸೆಯಿಂದ ಅದಕ್ಕೆ ಕಲ್ಲೆಸೆದು ಆಟವಾಡುವುದು, ರಸ್ತೆಗೆ ನುಗ್ಗುವುದು ಮಾಡುತ್ತಿರುತ್ತಾನೆ. ಡ್ರೈವರ್ ಇವನ ಕಿಡಿಗೇಡಿತನಕ್ಕೆ ತಂದೆ ತಾಯಿಗಳೇ ಜವಾಬ್ದಾರರಾಗುತ್ತಾರೆಂದು, ಮಕ್ಕಳನ್ನು ರಸ್ತೆಗೆ ಬಿಡಬಾರದೆಂದು ಹೇಳಿ ಮಗುವನ್ನು ಅವರಿಗೆ ಒಪ್ಪಿಸಿ ಹೋಗುತ್ತಾನೆ. ಇನ್ನೊಂದು ದಿನ ಮತ್ತದೇ ತುಂಟತನದಲ್ಲಿ ತೊಡಗಿದ್ದ ಕಿಟ್ಟುವಿನ ಉಪಟಳದ ದೂರನ್ನು ತಂದ ಡ್ರೈವರ್‌ಗೆ ಕಿಟ್ಟುವನ್ನು ತಮಗೆ ಬೇಡದ ಮಗುವೆಂದು ಹೇಳಿ ಕರೆದೊಯ್ಯಲು ಹೇಳುತ್ತಾರೆ. ಹಾಗೆ ಕರೆದು ಕೊಂಡು ಹೋದ ಡ್ರೈವರ್ ಮಗುವನ್ನು ಕರೆದುಕೊಂಡು ಹಿಂದಿರುಗದಾದಾಗ ಆತಂಕಕ್ಕೆ ಒಳಗಾಗುತ್ತಾರೆ. ಮಗುವನ್ನು ಹೆದರಿಸುವ ನೆವದಲ್ಲಿ ಸಿಟ್ಟು ಸೆಡವುಗಳಿಂದ ತುಂಬಿದ ಇಬ್ಬರೂ ಹಠಮಾರಿತನದ ಕಿಟ್ಟು ಹೋದರೆ ಹೋಗಲಿ ಎಂದುಕೊಂಡು ಅಸಡ್ಡೆಯಿಂದ ಒಬ್ಬರನೊಬ್ಬರು ನೋಡುತ್ತಾ ಕೂತಿರುತ್ತಾರೆ. ಆದರೆ ಸ್ವಲ್ಪ ಹೊತ್ತಿನಲ್ಲಿ ಒಬ್ಬರ ಮೇಲೊಬ್ಬರು ಹಗೆ ತೀರಿಸಿಕೊಳ್ಳಲು ಮಗುವನ್ನು ಕಳೆದುಕೊಂಡೆವು ಎಂದು

ಪಶ್ಚಾತ್ತಾಪ ಪಡುತ್ತಾರೆ. [ಸೇತುವೆಗೆ ನರಬಲಿ ಕೊಡುತ್ತಾರೆ ಎಂದು ಯಾರೋ ಹೇಳಿದ್ದು ನೆನಪಿಗೆ ಬಂದು] ಮುಂದೇನೂ ಮಾಡಲಾಗದೆ ಅಸಹಾಯಕರಾಗಿ ಚಡಪಡಿಸುತ್ತಿದ್ದಾಗ ಡ್ರೈವರ್ ಯಂತ್ರವನ್ನು ನಡೆಸುತ್ತಾ ವಾಪಾಸ್ಸು ಬಂದು ಮಗುವನ್ನು ಹಿಂದಿರುಗಿಸುತ್ತಾನೆ. ಗಂಡ ಹೆಂಡತಿಯರಿಬ್ಬರೂ ಈ ಸಂದರ್ಭದಿಂದ ಬಿಗುಮಾನವನ್ನು ಬಿಟ್ಟು ಹೊಂದಿಕೊಳ್ಳಬೇಕಾಗುತ್ತದೆ.

ಅಂಚೆಕಛೇರಿ, ಆಸ್ಪತ್ರೆ, ವೈದ್ಯ, ಔಷಧಿ, ರಸ್ತೆ, ಡೈನಾಮೇಟ್, ಟೈಲರ್, ಬಸ್ ನಿಲ್ದಾಣ, ಸಿನಿಮಾ, ರೈಲ್ವೇ ಇಂಜಿನಿಯರಿಂಗ್ ಸಿಬ್ಬಂದಿಗಳ ಓಡಾಟ, ಡ್ರೈವರ್, ಗ್ಯಾಂಗ್ರಿನ್, ಪೆನ್ಶನ್, ಕರಿಕನ್ನಡಕ– ಹೀಗೆ ಆಧುನಿಕ ವಿಚಾರ ಸಾಧನ ಸಾಮಾಗ್ರಿಗಳ ಮೂಲಕ ಗ್ರಾಮೀಣ ಪ್ರದೇಶಗಳು ನಗರೀಕರಣಗೊಳ್ಳುತ್ತಿರುವುದಲ್ಲದೆ ನಗರದ ಸೂಕ್ಷ್ಮತೆಗಳನ್ನು ಮತ್ತು ಅಲ್ಲಿನ ವೈಚಾರಿಕತೆಯನ್ನು ಬೆಳೆಸಿಕೊಳ್ಳುವತ್ತ ಸಾಗಿದವು. ಅಬಚೂರಿಗೆ ಹೊಸದಾಗಿ ಬರುವ ಅಂಚೆಕಛೇರಿ ಸಹಜ ಪ್ರವೃತ್ತಿಗಳನ್ನು ಜಾಗೃತಗೊಳಿಸುವುದಲ್ಲದೇ ಗ್ರಾಮೀಣ ಪರಿಸರದಲ್ಲಿ ಕ್ಯಾಬರೆ ಹೋಟೇಲು ಉಂಟುಮಾಡುವ ಸಂಚಲನವನ್ನು ಸೃಷ್ಟಿಸುತ್ತದೆ. ಇಸ್ಲಾಪುರದ ಸೂರಾಚಾರಿ ಕುಲಕಸುಬನ್ನು ಬಿಟ್ಟು ಹೊಟ್ಟೆ ಹೊರೆಯುವ ಇತರ ಕಾಯಕಗಳತ್ತ ಪಲ್ಲಟಗೊಳ್ಳುವುದರಿಂದ ಕಲೆಯ ಕಾಯಕ ಅವನತವಾಗುತ್ತದೆ. ಮೌಢ್ಯದಿಂದ ಕೊಳೆತು ನಾರುತ್ತಿರುವ, ನಗರೀಕರಣಗೊಂಡಿರುವ ಭೈರಾಪುರದ ಸಮಾಜ ಜಡ ಪ್ರವೃತ್ತಿಗಳನ್ನು ಹರಡುತ್ತದೆ. ಉತ್ತಮ ಅಭಿರುಚಿ ಮತ್ತು ಶೈಲಿಯ ಮಾರ್ಪಾಡಿನ ರೂಪಕ್ಕೆ ತೆರೆದುಕೊಳ್ಳುವ ತುಕ್ಕೋಜಿಯ ಸಂಸಾರ ತಲ್ಲಣಕ್ಕೆ ಒಳಗಾಗುತ್ತದೆ. ಹೀಗೆ ಗ್ರಾಮೀಣ ಜನಜೀವನವನ್ನು ಉತ್ಕರ್ಷರೂಪದಲ್ಲಿ ಆಕ್ರಮಿಸಿಕೊಳ್ಳುವ ಆಧುನಿಕತೆ ಸಂಘರ್ಷಗಳನ್ನು ಹೊತ್ತು ತಂದು ಬದುಕಿನ ಕ್ರಮಗಳನ್ನು ಮಾರ್ಪಡಿಸಿತು.

ಮೂಡಿಗೆರೆಯ ಗ್ರಾಮೀಣ ಪ್ರದೇಶದ ಸುತ್ತಮುತ್ತಲಿನ ಪರಿಸರದಲ್ಲಿ ಚಿತ್ರಿತವಾಗಿರುವ 'ಕೃಷ್ಣೇಗೌಡನ ಆನೆ' ಕಥನದಲ್ಲಿ ಸಾಂಸ್ಕೃತಿಕವಾಗಿ ಹಲವಾರು ಬದಲಾವಣೆಗೆ ಒಳಗಾಗಿರುವ ಸಾಮಾಜಿಕ ಬದುಕಿನ ವಾಸ್ತವ ದರ್ಶನವಿದೆ. ಗ್ರಾಮೀಣ ಜನಜೀವನದಲ್ಲಿ ಮಿಳಿತವಾಗಿದ್ದ ಮಾನವೀಯತೆ, ಅನುಕಂಪ, ಸಂತೃಪ್ತಿಯ ನೋಟ, ಸಂಘಟನೆಯ ಮನಸ್ಸು ಎಲ್ಲವೂ ಜಾಗತೀಕರಣದ ಅರ್ಥವ್ಯಾಪ್ತಿಯಲ್ಲಿ ಮೌಲ್ಯಹೀನಗೊಂಡು ಅವನತವಾಗಿವೆ ಮತ್ತು ಇಂದು ನಿನ್ನೆಗಳ ಭರಾಟೆಗೆ ಸಿಕ್ಕು ಈ ಗ್ರಾಮೀಣ ಮೌಲ್ಯಗಳು ತಿರಸ್ಕರಣೆಗೆ ಪಾತ್ರವಾಗಿವೆ. ಅಂದರೆ ಹೆಚ್ಚೆಚ್ಚು ಆಧುನಿಕತೆಯನ್ನು ಮೈಗೂಡಿಸಿಕೊಂಡಿರುವ ಮೂಡಿಗೆರೆಯ ಈ ಕಥಾಹಂದರದೊಳಗೆ ಹಲವು ಸಾಮಾಜಿಕ ಸ್ವರೂಪ ತಾನೇ ತಾನಾಗಿ ಬಿಚ್ಚಿಕೊಂಡು ವಿಶ್ಲೇಷಣೆಗೆ ಒಳಗಾಗುತ್ತದೆ.

'ಕೃಷ್ಣೇಗೌಡನ ಆನೆ' ಕಥೆಯಲ್ಲಿ ಲೇಖಕರು ನೀಡುವ ಮೂಡಿಗೆರೆಯ ಚಿತ್ರಣ ಹೀಗಿದೆ.

ಎಲ್ಲೆಂದರಲ್ಲಿ ಎಳೆದಿರುವ ತರತರದ ನೂರಾರು ತಂತಿಗಳು ಮೂಡಿಗೆರೆ ಆಧುನಿಕವಾಗುತ್ತಿರುವುದಕ್ಕೆ ಸಾಕ್ಷಿಯಾಗಿದ್ದವು. ಮಲ್ಯರ ನಾಲ್ಕಂತಸ್ತಿನ ಲಾಡ್ಜಿಂಗ್ ಹತ್ತಿ ಕೆಳಗೆ ನೋಡಿದರೆ ಈ ತಂತಿಗಳ ಜಾಲದೊಳಗೆ ಇಡೀ ಮೂಡಿಗೆರೆ ಬಲೆಗೆ ಬಿದ್ದು ಮಿಸುಕಾಡುವ ಮೃಗದಂತೆ ಕಾಣುತ್ತದೆ. ಎಲೆಕ್ಟ್ರಿಕ್ ಆಫೀಸಿನವರ ಪ್ರೈಮರಿ ಲೈನುಗಳು ಸೆಕಂಡರಿ ಲೈನುಗಳು ಟೆಲಿಫೋನ್ ಕನೆಕ್ಷನ್ ಲೈನುಗಳು ಟ್ರಂಕ್ ಲೈನುಗಳು ಇದರ ನಡುವೆ ಡಿಶ್ ಆಂಟೆನಾ ಕೇಬಲ್‌ಗಳು! ಈ ತಂತಿಗಳ ಕಂಬಗಳ ನೂಕುನುಗ್ಗಲಿನಲ್ಲಿ ಕಾಗೆ ಗುಬ್ಬಿಗಳು ಸಹ ಕೆಳಮಟ್ಟದಲ್ಲಿ ಹಾರಾಡುವುದನ್ನು ಕೈಬಿಟ್ಟವು. ಗಾಳಿ ಬೀಸುವುದು, ಸಿಡಿಲು ಹೊಡೆಯುವುದು ಇರಲಿ, ಯಾರಾದರೂ ಗಟ್ಟಿಯಾಗಿ ಸೀನಿದರೆ ಕೆಮ್ಮಿದರೆ ಸಹ ಜೋಲಾಡುವ ತಂತಿಗಳು ಒಂದಕ್ಕೊಂದುತಾಗಿ ಡಿಪಾರ್ಟಮೆಂಟ್ ಡಿಪಾರ್ಟಮೆಂಟ್‌ಗಳಿಗೆ ಜಗಳ ಶುರುವಾಗುತ್ತಿತ್ತು. ಯಾವಾಗ ನೋಡಲಿ ಟಿವಿಯಲ್ಲಿ ಚಿತ್ರ ಸರಿ ಬರುತ್ತಿಲ್ಲ ಎಂದು

ಟೆಕ್ನೀಶಿಯನ್ನಗಳೂ, ಫೋನ್ ಗೊರಗೊರ ಎನ್ನುತ್ತೆ ಎಂದು ಲೈನ್ಮನ್ಗಳೂ, ಫ್ಯೂಸ್ ನಿಲ್ಲುತ್ತಿಲ್ಲ ಎಂದು ಕರೆಂಟಿನವರೂ ಕಟಿಂಗ್ ಪ್ಲೇಯರ್ ಸ್ಕ್ರೂಡ್ರೈವರ್ರು ಕೈಯಲ್ಲಿ ಹಿಡಿದುಕೊಂಡು ಆಕಾಶ ನೋಡುತ್ತಾ ಎದುರಿಗೆ ಬರುವವರೆಗೆ ಢಿಕ್ಕಿ ಹೊಡೆದುಕೊಂಡು ಓಡಾಡುತ್ತಿರುವುದು ಸರ್ವೇಸಾಮಾನ್ಯ ದೃಶ್ಯ.[೨]

ಮಲೆನಾಡಿನ ಸಾಮಾಜಿಕ ಜೀವನದ ಎಲ್ಲಾ ಗೊಂದಲಗಳಿಂದ ಬೇಸತ್ತ ಮೂಡಿಗೆರೆಯ ಜನ ತಮ್ಮೂರಿನ ಸುತ್ತಮುತ್ತಲು ಏನೇ ಅವಗಡಗಳು ಸಂಭವಿಸಿದರೂ (ಮೂಡಿಗೆರೆಯ ಕೃಷ್ಣೇಗೌಡ ಗೂಳೂರಿನ ಮಠದಿಂದ ಆನೆಯನ್ನು ಕೊಂಡು ತಂದ ನಂತರ) ಅದಕ್ಕೆ ನೇರವಾದ ಸಂಬಂಧವಿಲ್ಲದಿದ್ದರೂ ಕೃಷ್ಣೇಗೌಡನ ಆನೆಯನ್ನು ಹೊಣೆಯಾಗಿಸುತ್ತಾರೆ. ಕೃಷ್ಣೇಗೌಡನ ಆರ್ಥಿಕ ಲಾಭವನ್ನು ಹೆಚ್ಚಿಸುವ ಸಂದರ್ಭಗಳಿಗೆ ಆನೆಯ ಗುಲಾಮತನದ ಜೊತೆಗೆ ಅದರ ಮಾವುತ ವೇಲಾಯುಧನಿಗೆ ಆನೆಯ ಜವಾಬ್ದಾರಿ ಹೆಗಲೇರುತ್ತದೆ. ಇದೇ ಕಾರಣವಾಗಿಯೋ ಏನೋ ಊರಿನ ಜನರಂತೆಯೇ ವೇಲಾಯುಧನೂ ಸ್ಥೈರಣೆ ಕಳೆದುಕೊಳ್ಳುವತ್ತ ಚಲಿಸಿಬಿಡುತ್ತಾನೆ.

ಶಿವೇಗೌಡರ ಸಾಮಿಲ್ಲಿನಲ್ಲಿ ಕಳ್ಳನಾಟ ಇಳಿಸಲು ರಾತ್ರೋರಾತ್ರಿ ಆನೆಯನ್ನು ಕರೆದೊಯ್ದಾಗ ಸಾಮಿಲ್ಲಿನ ಲೋಡು ಲಾರಿಯ ಡ್ರೈವರ್ ಅನಿರೀಕ್ಷಿತವಾಗಿ ಘಟಿಸಿದ ಅನಾಹುತದಲ್ಲಿ ಮರಣಿಸುವುದು, ಟೆಲಿಫೋನ್ ಲೈನ್ ಮನ್ ತಿಪ್ಪಣ್ಣ ಟೆಲಿಫೋನ್ ಲೈನ್ ರಿಪೇರಿಗೆಂದು ಕಂಬ ಹತ್ತಿ ಮೂವತ್ತು ನಲವತ್ತು ತಂತಿಗಳ ಗೋಜಲಿನೊಳಗೆ ಸಿಕ್ಕಿಕೊಂಡು ಅಲ್ಲೇ ಸಾವಿಗೀಡಾಗಿದ್ದು, ಹಳೆಕೊಪ್ಪದ ಸುಬ್ಬಣ್ಣನ ಮನೆಯ ಹಿತ್ತಲಲ್ಲಿದ್ದ ಕೊಟ್ಟಿಗೆಯ ಮಾಡು ಕುಸಿದು ಬಿದ್ದುದು, ಶಿವೇಗೌಡರ ಸಾಮಿಲ್ಲಿಗೆ ಕಳ್ಳನಾಟ ಸಾಗಿಸುತ್ತಿದ್ದ ಅಬ್ಬಾಸನ ಲಾರಿ ರಸ್ತೆ ಪಕ್ಕದ ಗೋಣಿಮರಕ್ಕೆ ಢಿಕ್ಕಿ ಹೊಡೆದು ಅಪಘಾತಕ್ಕೀಡಾಗಿ ಡ್ರೈವರ್ ಅಬ್ಬಾಸ್, ಕ್ಲೀನರ್ ಕೃಷ್ಣ ಏಕಕಾಲಕ್ಕೆ ಅಪ್ಪಚ್ಚಿಯಾಗಿದ್ದು ಎಲ್ಲವೂ ಮೂಡಿಗೆರೆ ಜನರ ಅಸಹನೆಗೆ ಕಾರಣವಾಗುತ್ತದೆ.

ಇದಕ್ಕಿಂತಲೂ ಭಿನ್ನವಾದದ್ದೆಂದರೆ ಮುನ್ಸಿಪಾಲಿಟಿಯವರ ಹಾಗೂ ಸರ್ಕಾರಿ ಆಸ್ಪತ್ರೆಗಳ ಧೋರಣೆ ಹುಚ್ಚು ನಾಯಿ ಕಡಿದು ದನಗಳೂ ಹಾಗೂ ಜನಗಳಿಗೆ ತೊಂದರೆಯಾದರೂ ಔಷಧಿ ಇಲ್ಲ ಎಂದೋ ಅಥವಾ ಇನ್ನಾವುದೋ ಕಾರಣಗಳಿಂದ ನುಣುಚಿಕೊಳ್ಳುವ ಸ್ವಾಭಾವದ ಅಧಿಕಾರಿಗಳಲ್ಲಿ ಬದಲಾವಣೆಯ ಗಾಳಿ ಬೀಸದೆ ಇರುವುದು. ಮೊದಲೇ ಗೋಜಲು ಗೋಜಲುಮಯವಾಗಿರುವ ಮೂಡಿಗೆರೆಯ ಜನರ ಜೀವನ ಇಂಥ ಯಾವುದೇ ತೊಂದರೆಗಳನ್ನು ಅರ್ಥೈಸಿಕೊಳ್ಳಲು ಅಸಮರ್ಥರಾಗಿರುವುದು; ಆನೆಯ ಪರ ವಿರೋಧಿ ಬಣಗಳ ನಡುವೆ ಇರುವ ಭಿನ್ನಾಭಿಪ್ರಾಯಗಳೊಂದಿಗೆ ಅದು ಅನೆಯನ್ನು ಶೂಟ್ ಮಾಡಲು ಜನ ಸಾರ್ವಜನಿಕವಾಗಿ ತೆಗೆದುಕೊಳ್ಳುವ ನಿರ್ಣಯ–ಅದೂ ಫಾರೆಸ್ಟರ್ ನಾಜರಾಜನ ಇದಿರಲ್ಲಿ, ಸತ್ಯವೋ ಸುಳ್ಳೊ ಎಂದು ವಿಚಾರಿಸುವಷ್ಟೂ ಸ್ಥೈರಣೆಯೇ ಇಲ್ಲವೇ ಎಂಬುದು ಯೋಚಿಸಬೇಕಾದ ಅಂಶವಾಗಿದೆ. ಅಲ್ಲುಂಟಾದ ಸ್ಥಿತ್ಯಂತರಗಳಿಗೆ ಕೊಟ್ಟಿಗೆಯ ನಾಶ ಹಾಗೂ ವೇಲಾಯುಧನ ಸಾವಿಗೆ ಕಾರಣ ಆನೆಯಾಗಿರದಿದ್ದರೂ ಅದರ ಪೂರ್ವಾಪರ ವಿಚಾರಮಾಡದೇ ಸಾರ್ವಜನಿಕವಾಗಿ ಹಾಗೂ ಸಾರ್ವತ್ರಿಕವಾಗಿ ಆರೋಪಿಸುವಷ್ಟು ಮಾನವ ಸ್ಥೈರಣೆ ಕಳೆದುಕೊಂಡರೆ ಸ್ವಾರ್ಥಕ್ಕಾಗಿಯಾದರೂ ಚಿಂತನರಹಿತ ಮಾತುಗಳನ್ನೆಲ್ಲ ಅವನತಿಯೆಡೆಗಿನ ಸ್ಥಿತ್ಯಂತರವೆಂದೇ ಪರಿಗಣಿಸಬೇಕಾಗುತ್ತದೆ.

ಮಾನವರ ಸಾಧನಾ ಪಥದಲ್ಲಿ, ಹಾಗೂ ಕಥೆಯಲ್ಲಿ ಬರುವ ಮತ್ತೊಂದು ಮುಖ್ಯವಾಗಿ ಪರಿಗಣಿಸಬೇಕಾದ ಅಂಶವೆಂದರೆ, ಆನೆಗಳ ಧಾಳಿಗೆ ಲೇಖಕರು ಸೂಚಿಸಿರುವ ಕಾರಣಗಳು.

ಪ್ರತಿಯೊಂದೂ ಅಗತ್ಯವೇ! ಆದರೂ ಪ್ರಕೃತಿನಾಶಗೈದರೆ ದೇಶ ಮುಂದುವರಿಯುವುದಿರಲಿ ಸಂಘರ್ಷವನ್ನೇ ತಡೆದುಕೊಳ್ಳಲಾರದು. ಏಕೆಂದರೆ ಆನೆಗಳು ತಮ್ಮ ಪಥದಲ್ಲಿನ ಅಡೆತಡೆಗಳನ್ನು ದಾಟಿಹೋಗುವುದು ಅನಿವಾರ್ಯವಾದರೂ ಮಾನವನಿಗದನ್ನು ಭರಿಸಲಾಗದು ಹೀಗೆ ಸ್ಥಿತ್ಯಂತರದಿಂದ ಮತ್ತೆ ಪ್ರಕೃತಿಯ ಜೊತೆ ಸಮರ ಶುರುವಾಗುತ್ತದೆ. ಆದ್ದರಿಂದ ಆನೆಗಳ ಧಾಳಿಯಂಥ ಸ್ಥಿತ್ಯಂತರವು ಪ್ರಕೃತಿಯ ಜೊತೆಗಿನ ಸಂಘರ್ಷದ ಫಲಿತ, ಈ ಕಾರಣದಿಂದ ಇಡೀ ಮಾನವಪ್ರಪಂಚವು ಇಂಥ ಹಸಿರು ಪ್ರಪಂಚದ ಬಗ್ಗೆ ಗಂಭೀರವಾಗಿ ಯೋಚಿಸಿ ತಕ್ಕ ಕ್ರಮಕೈಗೊಂಡರೆ ಮತ್ತಿಂಥ ಅಪಾಯಕಾರೀ ಬೆಳವಣಿಗೆಗಳು ಕಂಡುಬರಲಾರವು. ವೇಲಾಯುಧನ ಮರಣದ ಜೊತೆಗೆ ಫಾರೆಸ್ಟರ್ ನಾಗರಾಜನ ಕಣ್ಮರೆ. ಕೃಷ್ಣೇಗೌಡನ ಆನೆಯನ್ನು ಕೊಲ್ಲಬೇಕೆಂಬ ಲಕ್ಷ್ಯದಲ್ಲಿ ತೋಟದ ಮೂಲೆಯಲ್ಲಿ ಕೂತ ನಾಗರಾಜ ಹಾಗೂ ರಾಮಪ್ಪರ ದುಡುಕು ನಿರ್ಣಯ ನಂತರ ನಾಗರಾಜನ ಕಣ್ಮರೆ. ಈ ಪ್ರಕರಣದಿಂದ ವೈಯಕ್ತಿಕವಾಗಿ ಯಾರಿಗೂ ಲಾಭವಿಲ್ಲವಾದರೂ ಆತನ ಬಗ್ಗೆ ತಮಗನ್ನಿಸಿದಂತೆ ಮಾತನಾಡಿದ್ದು. ಇದನ್ನೆಲ್ಲಾ ಗಮನಿಸಿದಾಗ ಜನತೆಗೆ ಸಾವಿನಿಂದ ಏನೂ ಲಾಭವಿಲ್ಲ. ಇವು ಜನರು ಬದುಕನ್ನು ದೂಡಲು ಮಾಡಿಕೊಂಡಿರುವ ಉಪಕ್ರಮಗಳು.

ಈ ಕಥನವು ಮನುಷ್ಯ ಮತ್ತು ಪ್ರಾಣಿಯ ನಡುವಿನ ಹೊಂದಾಣಿಕೆಯ ಬದುಕನ್ನು ಚಿತ್ರಿಸುತ್ತಲೇ ಪರಸ್ಪರಾವಂಲಬನೆಯ ಸಿಕ್ಕು ಮತ್ತು ಅದರ ಪರಿಣಾಮಗಳನ್ನು ಹೇಳುತ್ತದೆ. ಈ ಕಥೆಯಲ್ಲಿ ಜೀವನ ಸಂದರ್ಭಗಳು ಮತ್ತು ಸಮಸ್ಯೆಗಳು ಬೇರೆ ಬೇರೆ ದೃಷ್ಟಿಕೋನಗಳಿಂದ ಮಂಡಿತವಾಗುತ್ತದೆ. ಮೂಡಿಗೆರೆಯ ಸಮಾಜದ ಚಿತ್ರಣ ರಾಷ್ಟ್ರವ್ಯಾಪಿ ಸಾಂಸ್ಕೃತಿಕ, ಸಾಮಾಜಿಕ, ಆರ್ಥಿಕ ಸ್ಥಿತ್ಯಂತರಗಳಿಗೆ ಸಮರ್ಥ ರೂಪಕವಾಗಿ ಸೂಕ್ಷ್ಮತೆಯನ್ನು ಪಡೆದುಕೊಳ್ಳುತ್ತದೆ ಎಂಬುದು ಇಲ್ಲಿನ ಸಾಮಾಜಿಕ ಜನಜೀವನವನ್ನು ಅವಲೋಕಿಸಿದಾಗ ತಿಳಿದುಬರುತ್ತದೆ.

**ಜುಗಾರಿಕ್ರಾಸ್:** ಕುವೆಂಪು 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಚಿತ್ರಿತವಾಗಿರುವ ಅಂದಿನ ಮಲೆನಾಡಿನ ಕಾಡನ್ನು, ತೇಜಸ್ವಿಯವರ ಜುಗಾರಿಕ್ರಾಸ್ ಕಾದಂಬರಿಯಲ್ಲಿ ಚಿತ್ರಿತವಾಗಿರುವ ಇಂದಿನ ಮಲೆನಾಡಿನ ಕಾಡನ್ನು ತುಲನಾತ್ಮಕವಾಗಿ ನೋಡಿದಾಗ ಎರಡರ ನಡುವಿನ ಅದಮ್ಯ ವ್ಯತ್ಯಾಸ ಮಲೆನಾಡಿನ ಸ್ಥಿತಿಗತಿಯನ್ನೇ ತೆರೆದಿಡುತ್ತದೆ. ಕುವೆಂಪು ಕಾದಂಬರಿಗಳಲ್ಲಿ ದಟ್ಟವಾಗಿರುವ ವನ್ಯರಾಶಿ ಇನ್ನೊಂದು ಕಾಲಘಟ್ಟದಲ್ಲಿ ಕಳ್ಳಕಾಕರ ಕೈಗೆಸಿಕ್ಕು ಕರಗಿಹೋಗುತ್ತಿರುವುದನ್ನು ತೇಜಸ್ವಿ ಸಾಹಿತ್ಯ ಗುರುತಿಸುತ್ತದೆ. ನಾಗರೀಕತೆಯ ಹಿನ್ನೆಲೆಯಲ್ಲಿ ಅಡಗಿರುವ ಕೊಳ್ಳುಬಾಕ ಸಂಸ್ಕೃತಿಯು ಮನುಷ್ಯ ಮತ್ತು ಪರಿಸರಗಳ ಅವನತಿಗೆ ಕಾರಣವಾಗುತ್ತಿದೆ ಎಂಬ ಆಂಶಿಕ ಸತ್ಯ ತೇಜಸ್ವಿ ಸಾಹಿತ್ಯದಲ್ಲಿ ಗೋಚರವಾಗುತ್ತದೆ. ಈ ಹಿನ್ನೆಲೆಯಲ್ಲಿ ಸಹ್ಯಾದ್ರಿಯ ಕಾಡಿನೊಳಗೆ ನಡೆಯುವ ಭೀಕರ ಕಳ್ಳದಂಧೆಗಳು ಮತ್ತು ಅವ್ಯವಹಾರದಿಂದಾಗಿ ನಡೆಯುವ ಸಾಮಾಜಿಕ ಸ್ಥಿತ್ಯಂತರಗಳನ್ನು ಗುರುತಿಸಲು ಸಾಧ್ಯವಿದೆ.

> ಅಂಗೈಯಗಲ ಕಾಡನ್ನು ಗೆದ್ದುಕೊಳ್ಳುವ ಅಂದಿನ ಮನುಷ್ಯನ ಪ್ರಯತ್ನ ತುಂಬ ಸಹಜವೆಂಬಂತೆ ನಮಗೆ ತೋರುತ್ತದೆ. ಅಂದಿನ ಕಾಡು ಮನುಷ್ಯನನ್ನು ಕೂಡ ಇತರೆ ಪ್ರಾಣಿಗಳಂತೆಯೇ ಒಂದು ಜೀವಿಯಾಗಿ ಪರಿಗಣಿಸಿತ್ತು. ಸೃಷ್ಟಿಜಾಲದ ಎಲ್ಲರೂ ಅಂದು ಸಮಾನರೇ ಆಗಿದ್ದರು. ಅಂದರೆ, ಅಷ್ಟರಮಟ್ಟಿಗೆ ಸಹಜ ವ್ಯಾಪಾರವೆಂಬಂತೆ ಕಾಡೊಳಗಿನ ಬದುಕು ನಿರಂತರವಾಗಿ ಗದ್ದಲವಿಲ್ಲದೆ ಸಾಗಿತ್ತು. ಆದರೆ ಸದಾ ವಿಸ್ತಾರ ಹೊಂದುತ್ತಿರುವ ಮನುಷ್ಯನ ಬೃಹತ್ ಮೆದುಳು ಹಾಗೇ ಇರಲು ಸಾಧ್ಯವೇ? ಯಾವಾಗ ಈ ಚಾಣಾಕ್ಷ ಮೆದುಳಿನ ನಾಗರಿಕ ಜನ ಕಾಡಿನ ಕಡೆಗೆ ದೃಷ್ಟಿ ಹಾಯಿಸಿದರೋ ಅಥವಾ ದೇಶೋದ್ಧಾರದ ನೆಪದಲ್ಲಿ ಕಾಡಿಗೆ

ಮುಖಾಮುಖಿಯಾದರೋ ಅಂದಿನಿಂದ ಮನುಷ್ಯ ಕಾಡನ್ನು ಗೆಲ್ಲತೊಡಗಿದ. ಅರ್ಥಾತ್ ಕಾಡು ಕುರುಕ್ಷೇತ್ರವಾಗತೊಡಗಿತು. ಕೇವಲ ಒಂದೇ ತಲೆಮಾರಿನ ಅಂತರದಲ್ಲಿ ಕಾಡೊಳಗಿನ ಜೀವನ ಅವನತಿಯ ಹಾದಿ ಹಿಡಿದ ಪರಿಯನ್ನು ತೇಜಸ್ವಿ ತಮ್ಮ ಇತ್ತೀಚೆಗಿನ 'ಜುಗಾರಿ ಕ್ರಾಸ್' ಕಾದಂಬರಿಯ ಮುನ್ನುಡಿಯಲ್ಲಿ ಹೀಗೆ ವರ್ಣಿಸುತ್ತಾರೆ. 'ಕುವೆಂಪುರವರ ಕಾನೂರು ಹೆಗ್ಗಡತಿ, ಕಾರಂತರ ಮರಳಿ ಮಣ್ಣಿಗೆ ಕಾಲದ ಸಹ್ಯಾದ್ರಿಯ ಕಾಡುಗಳಿಗೂ ಇವತ್ತಿನ ಪರಿಸ್ಥಿತಿಗೂ ಇರುವ ಅಜಗಜಾಂತರ ವ್ಯತ್ಯಾಸಕ್ಕೆ ಈ ಕಾದಂಬರಿ (ಜುಗಾರಿ ಕ್ರಾಸ್)ಯೇ ಉದಾರಹರಣೆ. ಕಾಡುಗಳು ಇವತ್ತು ಬಾಗಿಲು ತೆರೆದಿಟ್ಟ ಖಜಾನೆಗಳಾಗಿವೆ. ಈ ಕಾಡುಗಳ ಒಂದೊಂದೇ ಮರ ಎರಡು ಮೂರು ಲಕ್ಷ ಬೆಲೆ ಬಾಳುತ್ತದೆ. ಕಲ್ಲುಕಳ್ಳರಿಗೆ, ಮರಗಳ್ಳರಿಗೆ, ಗಂಧ ಚಕ್ಕೆ ಸಾಗಣೆ ಮಾಡುವ ಖದೀಮರಿಗೆ ಕಣ್ಣು ಹರಿಸಿದಲ್ಲೆಲ್ಲಾ ಹಣ ರಾಶಿ ಬಿದ್ದಿರುವಂತೆ ಕಾಣುತ್ತದೆ. ದುಡ್ಡು ಈ ರೀತಿ ಕೋಡಿ ಬಿದ್ದಿರುವಲ್ಲೆಲ್ಲ ಏನೇನು ರೂಪುಗೊಳ್ಳುತ್ತದೋ ಅದೆಲ್ಲ ಸಹ್ಯಾದ್ರಿಯ ಕಾಡಿನೊಳಗೆ ಶುರುವಾಗಿದೆ. ಕಾಡು ಕಾಳದಂಧೆಗಳ ತವರು ಮನೆಯಾಗುತ್ತಿದೆ. ಕಾಡಿನಿಂದ ಉತ್ಪತ್ತಿಯಾಗುತ್ತಿರುವ ಕಾಳಧನ ನಮ್ಮ ದೇಶದ ಅತ್ಯುನ್ನತ ರಾಜಕೀಯವನ್ನು ಸಹ ನಿಯಂತ್ರಿಸುತ್ತಿದೆ. ಇಲ್ಲಿ ಕಟ್ಟುವ ಅಣೆಕಟ್ಟುಗಳಾಗಲಿ, ಮುಳುಗಡೆಯಾಗುವ ಕಾಡಾಗಲಿ, ಕಲ್ಲು ಅದುರುಗಳನ್ನು ತೆಗೆಯುವುದಾಗಲಿ, ಜನಗಳಿಗಿಂತ ಹೆಚ್ಚಾಗಿ ರಾಜಕಾರಿಣಿಗಳಿಗೂ ರಾಜಕೀಯಕ್ಕೂ ಅಗತ್ಯವಾಗತೊಡಗಿದೆ. ಕಾಲ ವ್ಯವಹಾರಗಳ ವಿಷವೃತ್ತ ಈ ಮಟ್ಟ ತಲುಪಿದ ಮೇಲೆ ಕಾನೂನು ಮತ್ತು ನ್ಯಾಯಾಲಯಗಳು ಇದನ್ನು ಪ್ರತಿರೋಧಿಸಲಾರವು. ಜನಸಮಷ್ಟಿಯ ಧೃಢನಿಶ್ಚಯ ಒಂದೇ ಇದಕ್ಕೆ ರಕ್ಷೆ. ಅನೇಕ ಪರಿಸರ ಆಂದೋಲನಗಳಲ್ಲಿ ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಭಾಗಿಯಾದ ಮೇಲೆ ಈ ಚಿಕ್ಕ ಚಿಕ್ಕ ಗುಂಪುಗಳು ಅನೇಕ ವೇಳೆ ಯಾವುದಕ್ಕೂ ಸಂಬಂಧಿಸಿದ ಮುಗ್ಧರೂ ಕೂಡ ಎಂತಹ ಪ್ರಾಣಾಪಾಯದ ಅಂಚಿನಲ್ಲಿ ಕಾಲ ಹಾಕಬೇಕಾಗುತ್ತದೆನ್ನುವುದು ನನ್ನ ಅನುಭವಕ್ಕೂ ಬಂತು.' ಕೇವಲ ಒಂದೇ ತಲೆಮಾರಿನ ಅಂತರದಲ್ಲಿ ಮಲೆನಾಡು ಏನಾಯಿತು ಎಂಬುವುದನ್ನು ನೋಡುವಾಗ ನಮ್ಮ ವ್ಯವಸ್ಥೆ ಎಷ್ಟು ಭೀಕರವಾದ ರೀತಿಯಲ್ಲಿ ಅಧಃಪತನದತ್ತ ಸಾಗುತ್ತಿದೆ ಎಂಬ ಅರಿವು ನಮ್ಮನ್ನು ದಿಗ್ಮೂಢರನ್ನಾಗಿಸುತ್ತದೆ.[೧೩]

ಮಲೆನಾಡಿನ ಸಹ್ಯಾದ್ರಿಯ ದಟ್ಟಡವಿಯೊಳಗೆ ಕಣ್ಣಿಗೆ ಕಾಣದಂತೆ ಅವ್ಯಾಹತವಾಗಿ ನಡೆಯುತ್ತಿರುವ ಕಾಳದಂಧೆ, ಕಳ್ಳಸಾಗಾಣಿಕೆ, ಅವ್ಯವಹಾರಗಳಿಂದ ಒಂದು ವಿಷವರ್ತುಲಗಳೊಳಗೆ ಸಿಲುಕಿಕೊಂಡು ಹೊರಬರಲಾರದೆ ಅದಕ್ಕೆ ದಾಸರಾಗುತ್ತಿರುವುದು ಇವೆಲ್ಲವೂ ಸಾಮಾಜಿಕ ಸ್ಥಿತ್ಯಂತರಗಳೇ, ಸಾಂಸ್ಕೃತಿಕವಾಗಿ ಸಮೃದ್ಧವಾಗಿದ್ದ ಮಲೆನಾಡು ಬಯಲಾಗುತ್ತಿರುವುದು ಮತ್ತು ಮೇದರ ಹಳ್ಳಿಯ ಅವಸಾನ, ಗ್ರಾಮ ಪರಿಸರದೊಳಕ್ಕೆ ಪ್ಲಾಸ್ಟಿಕ್ ಎಂಬ ರಾಕ್ಷಸಿ ಪ್ರವೃತ್ತಿಯ ವಸ್ತು ಕಾಲಿಟ್ಟು ಮೇದರಹಳ್ಳಿ ನಾಶವಾಗುವುದು ದೊಡ್ಡ ದುರಂತವಾಗಿದೆ. ಭೂಗತ ಜಗತ್ತಿನ ಕಾಳದಂಧೆ, ವಿಚಿತ್ರ ವ್ಯಾಪಾರ ವಹಿವಾಟುಗಳು ಅವುಗಳ ವ್ಯವಸ್ಥಿತ ಜಾಲ, ಅವುಗಳ ಕರಾಳ ಛಾಯೆ ದೇವಪುರವನ್ನು ಮಾತ್ರವಲ್ಲದೆ ನೆರೆಹೊರೆಯ ಅನೇಕ ಗ್ರಾಮಗಳನ್ನು ಅಡಿಯಾಳಾಗಿ ಮಾಡಿಕೊಳ್ಳುವ ಸ್ವರೂಪವನ್ನು ಕಾದಂಬರಿಯ ಮೊದಲ ಹಂತದಲ್ಲಿಯೇ ವಿವರಿಸಲಾಗಿದೆ. ಈ ಘಟನೆಯನ್ನು ಎತ್ತಿಕೊಂಡು ಅದರ ಹಿನ್ನೆಲೆಯಲ್ಲಿ ಆಧುನಿಕತೆ ಪ್ರವೇಶವಾಗಿರುವುದರ ಸೂಚನೆಯನ್ನು ಅದರಿಂದಾಗಿರುವ ಪರಿಣಾಮವನ್ನು ಅದರ ವಿಷವರ್ತುಲವನ್ನು ವಿಶಿಷ್ಟವಾಗಿ ವಿಶ್ಲೇಷಿಸಿದ್ದಾರೆ. ತೇಜಸ್ವಿಯವರ ಈ ಸೃಷ್ಟಿಯು ಕಾದಂಬರಿಯಲ್ಲಿ ಯಶಸ್ವಿಯಾಗಿರುವುದು ಮಾತ್ರವಲ್ಲದೆ, 'ಪರಿವರ್ತನೆ'ಯು ರಾಷ್ಟ್ರವ್ಯಾಪ್ತಿಯ ಸೈದ್ಧಾಂತಿಕ ಆಯಾಮವನ್ನು ಪಡೆದುಕೊಂಡಿರುವುದನ್ನು ಗುರುತಿಸಬಹುದು. ಇದಲ್ಲದೆ ಘನೀಭೂತ ಪ್ರಾಕೃತಿಕ ಸಂಪತ್ತು ದಿನೇ ದಿನೇ ವರ್ಚಸ್ಸನ್ನು ಕಳೆದುಕೊಳ್ಳುತ್ತಿರುವ ಕರಾಳ ಸ್ವರೂಪವನ್ನೂ ಬಯಲಿಗೆ ತರುತ್ತದೆ.

ಕಥಾಹಂದರವನ್ನು ಅವಲೋಕಿಸಿದಾಗ; ಅಮೂರ್ತ ಜಾಲದೊಳಗೆ ಆಕಸ್ಮಿಕವಾಗಿ ಸಿಲುಕಿಕೊಂಡ ದಂಪತಿಯರು ಅದರಿಂದ ತಪ್ಪಿಸಿಕೊಳ್ಳಲು ಹೋರಾಟ ನಡೆಸುವ ಸಾಹಸವೇ ಈ ಕಾದಂಬರಿಯ ವಸ್ತುವಿನ್ಯಾಸವಾಗಿದೆ. ಒಂದು ದಿನ ಗೌರಿ–ಸುರೇಶ ಏಲಕ್ಕಿ ಮಾರಲೆಂದು ಬಸ್ಸು

ಹತ್ತಲು ಜುಗಾರಿ ಕ್ರಾಸಿಗೆ ಬಂದು ಅಲ್ಲಿ ಸ್ವಲ್ಪ ಸಮಯ ಕುಳಿತುಕೊಂಡು ಬಸ್ಸಿಗಾಗಿ ಕಾಯುತ್ತಾರೆ. ಅಷ್ಟರಲ್ಲಿ 'ಖುದ್ದೂಸ್ ಎಕ್ಸ್‌ಪ್ರೆಸ್' ಬರುತ್ತದೆ. ಅವರು ಬಸ್ಸನ್ನು ಹತ್ತಿ ಪ್ರಯಾಣ ಮಾಡುತ್ತ ಮೇದರಹಳ್ಳಿ ದಾಟಿದಾಗ ಇಬ್ಬರು ಅಪರಿಚಿತ ಪ್ಯಾಂಟುಧಾರಿ ವ್ಯಕ್ತಿಗಳು ಬಸ್ಸಿಗೆ ಹತ್ತುತ್ತಾರೆ. 'ಪೋಲೀಸ್‌ರ ಕೈಗೆ ಸಿಕ್ಕಿಬಿದ್ದರೂ ಸತ್ತ ಹಾಗೆ; ಅಲ್ಲದೆ ನಮ್ಮವರಕೈಗೆ ಸಿಕ್ಕಿಬಿದ್ದರೂ ಸತ್ತ ಹಾಗೆ' ಎಂದು ಯೋಚಿಸುತ್ತಿದ್ದ ಅವರಿಗೆ ತಾವು ತಂದ ಪ್ಯಾಕೆಟಿನಲ್ಲಿ ನಿಜವಾಗಿ ಏನಿದೆ ಎಂಬ ಚಿಂತೆ ಕಾಡುತ್ತದೆ. ಪ್ಯಾಕೆಟನ್ನು ಸುರೇಶ ಗೌರಿ ತಂದಿದ್ದ ಏಲಕ್ಕಿ ಮೂಟೆಯಲ್ಲಿ ಹಾಕುತ್ತಾರೆ. ಅನಂತರ ಅದರ ಬಾಯಿಯನ್ನು ಬಿಗಿದು, ಯಾರಿಗೂ ಏನೂ ಗೊತ್ತಾಗದಂತೆ ಸ್ವತಂತ್ರರಾಗುತ್ತಾರೆ. ಪೋಲೀಸರಿಂದ ತಲೆತಪ್ಪಿಸಿಕೊಂಡು ಬರುವಷ್ಟರಲ್ಲಿ ಸುರೇಶ ಗೌರಿಯರು ಮೂಟೆಯೊಂದಿಗೆ ಮಂಡಿ ತಲುಪಿ ಹರಾಜಿಗಿಟ್ಟಿರುತ್ತಾರೆ. ದೌಲತರಾಮ ಮತ್ತು ಕುಟ್ಟಿಯ ಕಡೆಯವರು ಹರಾಜು ಕೂಗಿ ಐವತ್ತೊಮ್ರು ಸಾವಿರ ರೂಪಾಯಿಗೆ ಏಲಕ್ಕಿ ಪಡೆಯುತ್ತಾರೆ.

ಅಲ್ಲಿ ಸುರೇಶನಿಗೆ ಅರವತ್ತು ಸಾವಿರ ರೂಪಾಯಿಗೆ ಬರೆದ ಚೆಕ್ ದೊರಕುತ್ತದೆ. ಆದರೆ ಅದರಲ್ಲಿ ನಿಜವಾಗಿ ಬರೆದದ್ದು ಒಂದು ಲಕ್ಷ ಅರವತ್ತು ಸಾವಿರ. ಆದರೆ ಅದನ್ನು ಸುರೇಶ ಗಮನಿಸುವುದಿಲ್ಲ. ಗಮನಿಸಿದ್ದರೆ, ತನಗೆ ಅರಿವಿಲ್ಲದಂತೆ ತಾನು ಕಾಲಿಟ್ಟಿದ್ದ ಜಟಿಲ ರಹಸ್ಯ ಒಂದರ ಬಗ್ಗೆ ಅರಿವಾಗುತ್ತಿತ್ತು. ಚೆಕ್ ಮುರಿಸಲು ಕಮೀಷನ್ ಏಜಂಟರ ಬಳಿಗೆ ಹೋದ. ಇದುವರೆಗೂ ಜೀವನ ಲಾಲನಿಂದ ಚೆಕ್ಕು ಕ್ಯಾಷ್ ಮಾಡಿಸಿಕೊಂಡವರು ಮೂರು ನಾಲ್ಕು ಜನ ಪತ್ತೆ ಇರುವುದಿಲ್ಲ. ಈ ವಿಷಯವನ್ನೆ ಗೌರಿ ಸುರೇಶರು ಶೇಷಪ್ಪನಿಂದ ತಿಳಿದುಕೊಳ್ಳುತ್ತಾರೆ. ಜುಗಾರಿ ಕ್ರಾಸ್‌ಗಳ ಭೂಗತ ಪ್ರಪಂಚದ ಅರಿವೇ ಇರದ ಅವರಿಗೆ ತಾವು ಬೇರೆಯವರಿಗೆ ಮಾರಾಟವಾಗಿದ್ದೇವೆ ಎಂಬುದು ತಿಳಿದಿರುವುದಿಲ್ಲ. ಆದರೆ ತಮ್ಮಲ್ಲಿರುವ ದುಡ್ಡಿಗಾಗಿ ತಮ್ಮನ್ನು ಯಾರೋ ಹಿಂಬಾಲಿಸುತ್ತಿದ್ದಾರೆ ಎಂದು ತಿಳಿಯುತ್ತದೆ. ಕತ್ತಲಾದ ಕಾರಣ ಅವರಿಬ್ಬರೂ ತಮ್ಮನ್ನು ಈ ರೀತಿ ಬೆನ್ನು ಹತ್ತಿದವರನ್ನು ಗೊಂದಲಕ್ಕೆ ಸಿಲುಕಿಸುವ ದೃಷ್ಟಿಯಿಂದ, ಜುಗಾರಿ ಕ್ರಾಸ್‌ಗೆ ಹೋಗುವ ಬಸ್ಸನ್ನು ಬಿಟ್ಟು ರಾತ್ರಿಯೆಲ್ಲ ಸುತ್ತಿ ಊರು ಸೇರುವ ರೈಲಿಗೆ ಹೋಗುತ್ತಾರೆ. ದೇವಪುರದಿಂದ ರೈಲಿಗೆ ಹೋಗಿ, ಜುಗಾರಿಕ್ರಾಸ್‌ಗೆ ಒಳದಾರಿಯಲ್ಲಿ ಹೋಗಬೇಕಾಗಿರುತ್ತದೆ. ರೈಲಿನಲ್ಲಿ ಗುರುರಾಜ ಕವಿಯ ದ್ವಿಸಂಧಾನ ಕಾವ್ಯ ದೊರೆಯುತ್ತದೆ. ಆ ಕಾವ್ಯವನ್ನು ಓದುತ್ತಾ ಹೋದಂತೆ ಅದು ಕೇವಲ ಉತ್ತುಂಗ ರಾಜ, ಜೈನಮುನಿಯು ಕೈವಲ್ಯ ಪದವಿ ಪಡೆದ ಕಥೆಯಷ್ಟೇ ಅನಿಸದೆ, ಅದರೊಳಗೆ ಏನೋ ನಿಗೂಢ ಅರ್ಥ ಇದೆ ಅನಿಸುತ್ತದೆ; ಬಹಳಷ್ಟು ಯೋಚಿಸಿದ ಮೇಲೆ 'ರತ್ನಮಾಲಾ' ಎಂಬ ಎರಡು ಅರ್ಥವಿರುವ ಹೆಸರು ದೊರೆಯುತ್ತದೆ. 'ರತ್ನಮಾಲಾ' ದೋಣಿಹೊಳೆಯ ಮೂಲದಲ್ಲೆಲ್ಲೋ ಸಹ್ಯಾದ್ರಿಯ ಶೃಂಗ ಶಿಲೆಯಲ್ಲಿ ಕೆಂಪುರತ್ನ ಹೊಳೆಯುವ ಜಾಗವನ್ನು ನಿರ್ಧರಿಸುವ ನೀಲ ನಕ್ಷೆಯಾಗಿರುತ್ತದೆ. ರೈಲು ಚಲಿಸುತ್ತಾ ಕಮರಿ ಸ್ಟೇಷನ್ನಿಗೆ ಬಂದಾಗ ಕತ್ತಲಲ್ಲಿ ಇಳಿದು ಕಾಫಿ ಕುಡಿಯುತ್ತಿರುವಾಗ ತಮ್ಮನ್ನು ಯಾರೋ ಬೆನ್ನು ಹತ್ತಿ ಬರುತ್ತಿದ್ದಾರೆ ಎನಿಸತೊಡಗಿ ಅಲ್ಲಿಂದ ತಪ್ಪಿಸಿಕೊಂಡು ಸುರಂಗದಲ್ಲಿ ಹಳಿ ಹಿಡಿದು ನಡೆಯುತ್ತಿರುವಾಗ ಕುಂಟ ರಾಮನ ಭೇಟಿಯಾಗುತ್ತದೆ. ಅವನು ಭೂಗತ ಜಗತ್ತಿನಿಂದ ಪಾರಾಗಿ ಬಂದ ತನ್ನ ಅನುಭವವನ್ನು ಹೇಳುತ್ತಾನೆ. ಜುಗಾರಿ ಕ್ರಾಸ್‌ಗೆ ವಾಪಾಸು ಹಿಂತಿರುಗಿ ಬರುತ್ತಾರೆ. ಅವರ ಈ ಹೋರಾಟದಲ್ಲಿ ಸುರೇಶನ ಹಿಂದಿನ ಸಹಪಾಠಿ ರಾಜಪ್ಪ ಸಹಕರಿಸುತ್ತಾನೆ. ಮನುಷ್ಯ ಸಮಾಜದ ಅನೇಕಾನೇಕ ಚಟುವಟಿಕೆಗಳು ಪಡೆದುಕೊಳ್ಳುವ ಭೀಕರತೆಯ ಹಿಂದೆ ಇರಬಹುದಾದ

ಕರಾಳ ಕೈಗಳು, ಅವು ಸೃಷ್ಟಿಸಿಬಿಡಬಹುದಾದ ಜಾಲ, ಅರಿವಿಲ್ಲದೆ ಅಂತಹವರ ವಶವರ್ತಿಗಳಾಗುವ ಅಮಾಯಕರು ಹೀಗೆ ಪ್ರತಿಯೊಂದು ಪ್ರಕರಣದ ಪರಿಮಿತಿ ಸೀಮಾತೀತವಾಗಿಬಿಡುತ್ತವೆ. ಇವುಗಳ ಫಲಿತಾಂಶವೇನು ಎಂದು ಕೇಳಿಕೊಂಡರೆ

> ಸಮಾಜವಾದ ಪದದ ಅರ್ಥವೇ ಬದಲಾಗಿ ಸಮಾಜವಾದ ಎಂದರೆ ಬಡತನ, ಅದಕ್ಷತೆ, ಭ್ರಷ್ಟಾಚಾರ, ಕಾನೂನು ಕಟ್ಟಲೆಗಳ ಭಯಂಕರ ಜಾಲ, ಲೈಸನ್ಸ್ ಮತ್ತು ಇನ್ಸ್‌ಪೆಕ್ಟರುಗಳ ಕರಾಳ ನೃತ್ಯ[೪]

ಎಂದು ಅರ್ಥಪಲ್ಲಟಗೊಂಡಿದೆ ಎನ್ನುವ ಉತ್ತರವನ್ನು ನೀಡಬಹುದು ಅಷ್ಟೇ

ನವಿಲುಗುಂದ, ಗುರುವಳ್ಳಿ, ಮೇದರಹಳ್ಳಿ, ಭೈರಾಪುರ, ಮೂಡಿಗೆರೆ ಗ್ರಾಮೀಣ ಬದುಕಿನ ವಿಘಟನೆ, ಹಳ್ಳಿಯ ಕುಲಕಸುಬುಗಳ ನಾಶ, ಇವುಗಳ ವಿವರಣೆಯೊಂದಿಗೆ ತೇಜಸ್ವಿಯವರು ಹಳ್ಳಿಗಳ ಬದುಕಿನ ರೀತಿನೀತಿ ಬದಲಾಗುವುದಕ್ಕೆ ಹೊರಗಿನಿಂದ ಬಂದ ಆಧುನಿಕತೆಯ ಪ್ರಭಾವ ಮಾತ್ರವಲ್ಲದೆ ಒಳಗಿನ ಅಂತಃಸತ್ವದ ಕುಸಿತವೂ ಇಂತಹ ಸ್ಥಿತ್ಯಂತರಕ್ಕೆ ಕಾರಣವೆಂದು ಮನವರಿಕೆ ಮಾಡಿಸುತ್ತಾರೆ. ಅಂದರೆ ಆಧುನಿಕತೆಯು ಜನ್ಮತಾಳಿದ್ದು ಅನ್ಯ ಸಂಸ್ಕೃತಿಯ ಮುಖಾಮುಖಿಯಲ್ಲೇ ಆದರೂ ಸಂವೇದನೆಯ ಸ್ವರೂಪ ವ್ಯಕ್ತಿಗತ ನೆಲೆಯದ್ದು. ಅದು ಕಾಲಾನುಸರಣ ವಿವಿಧ ಹಂತಗಳಲ್ಲಿ ಬದಲಾಗುತ್ತದೆ. ವ್ಯಕ್ತಿ ಕೇಂದ್ರಿತ ಹಿನ್ನೆಲೆಯಲ್ಲಿ ಆಧುನಿಕ ಸಂವೇದನೆ ಸ್ವೀಕರಣ ಮತ್ತು ನಿರಾಕರಣದ ನಡುವಿನ ಗೊಂದಲದಿಂದ ಹೊರಬರುವ ಘಟ್ಟ ನಿರ್ಣಾಯಕ ಮಟ್ಟದ್ದು.

ಭೂತ-ವರ್ತಮಾನಗಳ ಹಿನ್ನೆಲೆಯಲ್ಲಿ ಸಂಸ್ಕೃತಿಯ ಚಲನೆಯ ದಿಕ್ಕುಗಳ ಶೋಧನೆ ಪ್ರಮುಖವಾಗಿದ್ದಂತೆ ಆಂತರಿಕ ದೌರ್ಬಲ್ಯಗಳಿಂದಲೇ ಪತನಗೊಳ್ಳುತ್ತಿರುವ ಸಾಂಪ್ರದಾಯಿಕ ಸಮಾಜವನ್ನು ಗುರುತಿಸಲಾಯಿತು. ಇದಕ್ಕೆ ಪ್ರತಿಯಾಗಿ ಆಧುನಿಕ ವ್ಯಕ್ತಿತ್ವಗಳ ಅಸ್ತಿತ್ವದ ಹಾಗೂ ಅಧಿಕೃತತೆಯ ಹುಡುಕಾಟಗಳನ್ನು ನಡೆಸಲಾಯಿತು. ಕ್ರಮೇಣ ಆಧುನಿಕ ತಂತ್ರಜ್ಞಾನ ಮತ್ತು ತತ್ವಪ್ರಣಾಲಿಗಳ ಆಧಾರದ ಹುಟ್ಟಿದ ರಾಷ್ಟ್ರಿಯತಾ ಸಿದ್ಧಾಂತಗಳಿಂದಾಗಿ ವೈಜ್ಞಾನಿಕ-ವೈಚಾರಿಕ ನೆಲೆಗಳಿಂದ ಹುಟ್ಟುವ ಹೊಸ ಪ್ರಣಾಲಿಗಳನ್ನು ಪ್ರಾಯೋಗಿಕವಾಗಿ ಕಂಡುಕೊಳ್ಳಲಾಯಿತು.

## ೪.೭ ಅವನತಿಯಿಂದ ನವಸಂಸ್ಕೃತಿಯ ಹುಟ್ಟು

ನಿರಂತರ ಸೃಷ್ಟಿಯ ಚಲನಶೀಲತೆಯಲ್ಲಿ ಯಾವುದೂ ಸ್ಥಿರವಲ್ಲ. ಹಣ್ಣೆಲೆ ಉದುರುತ್ತದೆ ಅತ್ತು ಚಿಗುರು ಮೂಡುತ್ತದೆಯೆಂಬ ಮಾತನ್ನು ಹೋಲುವ ಈ ಪ್ರಕಿಯೆಯು ಕೇವಲ ಮರಗಳಿಗಳಿಗಷ್ಟೇ ಸೀಮಿತವಾಗಿರದೇ ಸಕಲ ಚರಾಚರಗಳಿಗೂ ಅನ್ವಯವಾಗುತ್ತದೆ. ಇದು ಪ್ರಜ್ಞಾಪೂವಕವಾಗಿ ಮನುಷ್ಯರ ಕೈಯಿಂದ ನಡೆಯುವ ಪ್ರಕ್ರಿಯೆಯಲ್ಲ. ಮಾನವರ ಆಲೋಚನೆಗಳನ್ನೂ ಮೀರಿದ ಕ್ರಮ. ಪ್ರಕೃತಿಯಲ್ಲಿ ಅಂತರ್ಗತವಾಗಿರುವುದು. ಒಂದು ಸಮುದಾಯದ, ಸಂಸ್ಕೃತಿಯ ಅವನತಿಯೊಂದಿಗೆ ಅಲ್ಲಿಯೇ ಮೊದಲಿನಂತೆಯೇ ಇನ್ನೊಂದು ನವಪೀಳಿಗೆ ಬೆಳೆಯುತ್ತದೆಯಾದರೂ ಇದು ಸಮಾಧಿಯ ಮೇಲಿನ ಸೌಧನಿರ್ಮಾಣಕ್ಕಿಂತ ಸಂಪೂರ್ಣ ವಿರುದ್ಧವಾದ ಪ್ರಕ್ರಿಯೆಯಾಗಿದೆ. ಇಂಥ ವಿಶಿಷ್ಟ ರಚನಾಶೈಲಿಯನ್ನು ನಾವು ತೇಜಸ್ವಿಯವರಲ್ಲಿ ಗುರುತಿಸಬಹುದಾಗಿದೆ.

ಕೆಸರೂರನ್ನು ಕೇಂದ್ರವಾಗಿಟ್ಟುಕೊಂಡು ಸ್ವಲ್ಪ ಕಾಲಾವಧಿಯಲ್ಲಿ ನಡೆಯುವ ಊರ ವಿದ್ಯಮಾನಗಳನ್ನು **ಚಿದಂಬರರಹಸ್ಯ** ಕಾದಂಬರಿ ಚಿತ್ರಿಸುತ್ತದೆ. ಕೆಸರೂರಿನ ಹೊರ ಜಗತ್ತಿನಲ್ಲಿ ಆದ ಬದಲಾವಣೆ ಊರಿನ ಜನರ, ಸಂಸ್ಕೃತಿಯ ಅವನತಿಯ ಮುನ್ಸೂಚನೆಯೂ ಆಗುತ್ತದೆ. ಜ್ವಲಂತ ಸಮಸ್ಯೆಗಳಿಂದ ದಿನನಿತ್ಯ ನಡೆಯುವ ಕ್ರೌರ್ಯದಿಂದ, ಜನತೆಯ ಮೌಢ್ಯತೆಯಿಂದ, ಜಾತೀಯ ಸಣ್ಣತನದಿಂದ, ಮನುಷ್ಯನ ಸ್ವಾರ್ಥದಿಂದ, ಹುಟ್ಟುವ ವೈರತ್ವ–ದ್ವೇಷ ಹಿಂಸೆಯಿಂದ ಕೊನೆಗೆ ದುರಂತದಲ್ಲಿ ಕೊನೆಗೊಂಡು ಕೆಸರೂರು ಅವನತಿಯತ್ತ ಸಾಗುತ್ತದೆ. ಹಿಂದೂಮುಸ್ಲಿಂ ಕೋಮುದ್ವೇಷ ಕೆಸರೂರಿನ ವಿನಾಶಕ್ಕೆ ಒಂದು ಮುಖ್ಯ ಕಾರಣವಾಗುತ್ತದೆ. ಇಡೀ ಕಥೆ ಬದುಕಿನ ಗಂಭೀರ ಸಮಸ್ಯೆಗಳತ್ತ ಕೈಚಾಚಿ ಸಾಮಾಜಿಕ ವ್ಯವಸ್ಥೆಯು ನಿಷ್ಕ್ರಿಯಗೊಂಡು ಸಂಪೂರ್ಣ ನಾಶವಾಗುತ್ತದೆ.

ಮಲೆನಾಡಿನ ಒಂದು ಪುಟ್ಟ ಹಳ್ಳಿಯಾದ ಕೆಸರೂರು ಅವನತಿಹೊಂದಿ ನಾಶವಾಗುವುದಕ್ಕೆ ಯಾವುದೇ ಒಂದು ನಿರ್ದಿಷ್ಟ ಕಾರಣವನ್ನು ಸೂಚಿಸಲು ಸಾಧ್ಯವಿಲ್ಲ. ಕೆಸರೂರಿನ ಬಾಹ್ಯ ಪರಿಸರದಲ್ಲಾದ ಪರಿವರ್ತನೆಗಳೊಂದಿಗೆ ತೆರದುಕೊಳ್ಳುವ ಈ ಚರಿತ್ರೆ

> ಲೇಖಕರೇ ಸೂಚಿಸುವಂತೆ ಕತೆ ಬೆಳೆದಂತೆಲ್ಲಾ ಬೆಳೆದದ್ದು ಎಂಬುದಕ್ಕಿಂತ ಅದು ಕೆಸರೂರಿನ ಮಟ್ಟಿಗೆ ಶತಮಾನದಿಂದ ಇದ್ದದ್ದು ಒಂದು ಸಮಾಜದ ಸಾಂಸ್ಕೃತಿಕ ಔನತ್ಯ ಸಮಾಜವನ್ನು ಅವಲಂಬಿಸಿರುತ್ತದೆ. ಅಂತಹ ಸಮಾಜ ಅಸಾಧಾರಣ ಸಾಧನೆಗಳ ಶಿಖರವಾಗಿರಬೇಕು. ಆದರೆ ಶತಮಾನಗಳಿಂದ ಕೆಸರೂರಿನ ಸಮಾಜ ಸಾಂಸ್ಕೃತಿಕವಾಗಿ ನಿಷ್ಕ್ರಿಯಗೊಳ್ಳುತ್ತ ಅಪಾರ ಪ್ರಾಕೃತಿಕ ಸಂಪತ್ತನ್ನು ಲೂಟಿಹೊಡೆಯುತ್ತ ದಿನದಿನಕ್ಕೂ ಅಧಃಪತನದತ್ತ ಸರಿಯುವುದರ ವಿಶ್ಲೇಷಣೆ ಸಾಮಾಜಿಕ–ಸಾಂಸ್ಕೃತಿಕ ಅವನತಿಗೆ ಸಾಕ್ಷಿಯನ್ನೊದಗಿಸುತ್ತದೆ. ಕೆಸರೂರು ಪ್ರತಿನಿತ್ಯದ ಜಂಜಾಟದಿಂದ ಹೊರಲಾಗದೆ, ಜ್ವಲಂತ ಸಮಸ್ಯೆಗಳಿಂದಾಗಿ ವಿನಾಶದತ್ತ ಸರಿಯುತ್ತದೆ.[15]

ರಾಮನಂದನ ಅಂಗಾಡಿ ಏಲಕ್ಕಿ ಬೋರ್ಡಿನ ಇಂಟೆಲಿಜೆನ್ಸ್ ಆಫೀಸರ್ ಆಗಿದ್ದು ಏಲಕ್ಕಿ ಬೆಳೆಯ ಕುಸಿತಕ್ಕೆ ಕಾರಣವನ್ನು ತಿಳಿದು ಕೇಂದ್ರ ಸರ್ಕಾರಕ್ಕೆ ತನಿಖಾ ವರದಿ ಕಳಿಸಬೇಕೆಂದು ಕೆಸರೂರಿಗೆ ಬಂದವನು. ಕೆಸರೂರಿನ ಅವಲೋಕನದೊಂದಿಗೆ ಅಲ್ಲಿನ ಹಲವಾರು ಸಮಸ್ಯೆಗಳು ಒಂದರೊಳಗೊಂದು ಸೇರ್ಪಡೆಯಾಗಿರುವುದನ್ನು ಕಂಡು ತನ್ನಲ್ಲೇ ಪ್ರಶ್ನಿಸಿಕೊಳ್ಳುತ್ತಾನೆ.

ಈ ಜಿಲ್ಲೆಗೆ ಏನಯ್ಯ ಶಾಪ? ಇಷ್ಟೊಂದು ಸುಂದರವಾಗಿದೆ. ಕಾಡುಗಳಿದ್ದಾವೆ. ಮಳೆ ಇದೆ. ಬೆಳೆ ಇದೆ. ತಣ್ಣಗೆ ಜೀವನೋಪಾಯ ಸಾಗಿಸ್ತಾರೆ. ಆದರೆ ಯಾವುದೋ ಒಂದು ಭಯಾನಕ ಕೊರತೆ ಇದೆ ಇಲ್ಲಿ ಹೆಗ್ಡೆ. ಇಲ್ಲಿ ಹೊರಗಿನಿಂದ ಬಂದು ಬದುಕು ಆರಂಭಿಸದೊಡನೆ ಅದು ಅನುಭವಕ್ಕೆ ಬರ್ತದೆ.,[೧]

ಎನ್ನುವ ರಾಮಚಂದ್ರನ ಮಾತುಗಳಲ್ಲಿ ಆಳವಾಗಿ ಬೇರೂರಿರುವ ನಿರ್ಜೀವ ಅಂಶಗಳ ಬಗೆಗೆ ಖೇದವಿದ್ದರೂ ಸಂಸ್ಕೃತಿಯ ವಿನಾಶದ ಹಿಂದ ಬಿಕ್ಕಟ್ಟುಗಳನ್ನು ನಿಷ್ಪಕ್ಷಪಾತವಾಗಿ ವಿವೇಚಿಸಲಾಗುವುದಿಲ್ಲ. ಚಿಕ್ಕಮಗಳೂರು ಜಿಲ್ಲೆಯ ಸಾಹಿತ್ಯಿಕ-ಸಾಂಸ್ಕೃತಿಕ ಬಂಜರುತನಕ್ಕೆ ಪ್ರಬಲ ಕಾರಣಗಳನ್ನು ಊಹಿಸಿದರೂ ಅದು ತರ್ಕಕ್ಕೆ ನಿಲ್ಲುವುದಿಲ್ಲ. ಇದರಂತೆಯೇ ಕೆಸರೂರಿನ ಹೈಬ್ರಿಡ್ ತಳಿಯಾದ ಏಲಕ್ಕಿ ಗಿಡಕ್ಕೆ ತಗುಲಿದ ರೋಗದಂತೆ ಕೆಸರೂರಿನ ಸಂಸ್ಕೃತಿಗೆ ರೋಗ ಹತ್ತಿದೆಯೆಂದು ಚರ್ಚಿಸುವ ಅನೇಕರು (ಬದುಕಿನ ವಿವಿಧ ಸಾಧ್ಯತೆಗಳು ಅವನತಿಯ ಕೇಂದ್ರದೆಡೆಗೆ ಆಕರ್ಷಿತವಾಗುತ್ತಿವೆಯೋ ಏನೋ! ಅರ್ಥೈಸಿಕೊಳ್ಳಲು ಆಗದ ಸ್ಥಿತಿಯನ್ನು ಒಬ್ಬೊಬ್ಬರೂ ಎದುರಿಸುತ್ತಾರೆ) ಕೆಸರೂರಿನ ಸಾಮಾಜಿಕ ಸ್ಥಿತಿಯು ಹದಗೆಟ್ಟಿರುವುದನ್ನು, ಸಾಂಸ್ಕೃತಿಕವಾಗಿ ಆರ್ಥಿಕವಾಗಿ ಅಧಃಪತನದತ್ತ ಸರಿದಿರುವುದನ್ನು ತಾವು ಅರ್ಥೈಸಿಕೊಂಡ ರೀತಿಯಲ್ಲಿ ತಮ್ಮ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಾರೆ.

ಸುಲಭವಾಗಿ ಸಿಗುವ ಸವಲತ್ತುಗಳನ್ನು ಬಳಸಿಕೊಂಡು ವೈಯಕ್ತಿಕವಾಗಿ ಮತ್ತು ಸಾಮಾಜಿಕವಾಗಿ ಮುಂದುವರೆಯುವುದಕ್ಕೆ ಸಾಮಾಜಿಕ ಬದುಕಿನಲ್ಲಿ ಪ್ರಮುಖವಾಗುವುದು ಆರ್ಥಿಕ ಸ್ವಾವಲಂಬನೆ. ಮೀನಿನ ವ್ಯಾಪಾರಕ್ಕೆಂದು ಕೇರಳದಿಂದ ಕೆಸರೂರಿಗೆ ಬಂದ ಸುಲೇಮಾನ್ ಬ್ಯಾರಿ ಸ್ವಲ್ಪವೇ ದಿನಗಳಲ್ಲಿ ಕೋಟ್ಯಧಿಪತಿಯಾಗಿ ಬಿಡುತ್ತಾನೆ. ತನ್ನ ಭೂಗತ ಚಟುವಟಿಕೆಗಳ ಜೊತೆಯಲ್ಲಿ ಅಕ್ರಮವಾಗಿ ಕಾಡನ್ನು ಲೂಟಿಮಾಡಿ, ಕಳ್ಳದಂಧೆಯಿಂದ ಜನರನ್ನು ವಂಚಿಸಿ, ಅಧಿಕಾರಿ ಮಂತ್ರಿಗಳಿಗೆ ಲಂಚದ ರುಚಿ ತೋರಿಸಿ ತಾನೂ ಬೆಳೆವುದೇ ಅಲ್ಲದೆ ಊರಿನ ಮುಸಲ್ಮಾನರ ಸಂಖ್ಯೆ ಹೆಚ್ಚಿಸಿ ಅವರ ಮತೀಯ ಭಾವನೆ ಜಾಗೃತವಾಗಿರಿಸಲು ಬದ್ಧನಾಗುತ್ತಾನೆ. ಸುಲೇಮಾನ್ ಬ್ಯಾರಿಯಂತಹ ಮನುಷ್ಯನಿಂದಾಗಿ, ಗೋಸಾಯಿಗಳಂತಹ ತಲೆಹಿಡುಕರಿಂದಾಗಿ ಪರಿಸರ ಸಂಪೂರ್ಣ ನಾಶವಾಗುತ್ತದೆ.

ಕೆಸರೂರು ಸಾಮಾಜಿಕವಾಗಿ ಬದಲಾಗುವುದಕ್ಕೆ ಮನುಷ್ಯರ ಅನೇಕಾನೇಕ ವರ್ತನೆಗಳು ಕಾರಣವಾಗುತ್ತವೆ. ಸುಲೇಮಾನ್ ಬ್ಯಾರಿ ಕೋಟಿಗಟ್ಟಲೆ ಲಾಭಕ್ಕಾಗಿ ಕಾಡನ್ನು ಸೂರೆ ಹೊಡೆಯುತ್ತಿದ್ದರೆ, ಗೋಸಾಯಿಗಳು ಜೀವನಕ್ಕಾಗಿ ಕಾಡನ್ನು ನಾಶ ಮಾಡುತ್ತಾರೆ. ತಲೆ ಬಿಸಿ ಆಚಾರಿ ಜಾತಿ ಜಾತಿಗಳ ನಡುವೆ ವಿಷಬೀಜ ಬಿತ್ತುತ್ತಿದ್ದಾನೆ. ಶಾಮನಂದನ ಅಂಗಾಡಿಯ ಶಂಕಾಸ್ಪದ ಆಗಮನ, ಗೋಸಾಯಿಗಳ ವಿರುದ್ಧ ಸಿದ್ಧಪ್ಪ ಬಂಡೆದ್ದಿರುವುದು, ರಾಮಚಂದ್ರ ವಿದ್ಯಾರ್ಥಿಗಳನ್ನು ಸಂಘಟಿಸಿರುವುದು, ಹರಿಜನರು ಗೋಸಾಯಿಗಳ ವಿರುದ್ಧ ರೋಷಗೊಂಡಿರುವುದು, ಮುಂತಾದ ಹಲವು ಘಟನೆಗಳಿಂದ ಕೆಸರೂರಿನ ತುಂಬೆಲ್ಲಾ ಕ್ಲಿಷ್ಟ ಪರಿಸ್ಥಿತಿ ಹೊಗೆಯಾಡುತ್ತಾ, ಸಾಮಾಜಿಕ ಅತೃಪ್ತಿ ಮುಗಿಲು ಮುಟ್ಟಿದೆ.[೨] ಕೆಸರೂರಿನ ಬದುಕಿನ ಎಲ್ಲಾ ಕ್ರಿಯೆ ಪ್ರತಿಕ್ರಿಯೆಗಳೂ ಅಂದರೆ ಪ್ರಕೃತಿ ಮತ್ತು ಮನುಷ್ಯ ಸಂಬಂಧಗಳ ನಡುವಿನ ಅಮಾನವೀಯತೆ, ಕ್ರೌರ್ಯ, ಸಮಾಜವನ್ನು ಸುತ್ತುವರೆದಿರುವ ಜಾತೀಯತೆ, ವ್ಯಕ್ತಿಗತ ಹಿತಾಸಕ್ತಿ, ದ್ವೇಷಾಸೂಯೆ, ವೈರತ್ವ, ಮೌಢ್ಯ, ಕೊಳಕು ರಾಜಕಾರಣ, ಮತಾಂತರ, ಸಣ್ಣತನ, ಕ್ರಾಂತಿಯ ವೈಫಲ್ಯ, ಬೌದ್ಧಿಕ ದಿವಾಳಿತನ ಹೀಗೆ ಬೇರೆ ಬೇರೆಯಾದ ಘಟನೆಗಳ ಅಸಂಬದ್ಧ ಬೆಳವಣಿಗೆಯು

ತನ್ನ ಒಡಲಲ್ಲಿ ಹುದುಗಿಸಿಕೊಂಡಿದ್ದ ಹಲವು ವೈರುಧ್ಯಗಳೊಂದಿಗೆ ಪರಿಸರ ನಾಶಕ್ಕೂ, ಶತಶತಮಾನಗಳಿಂದ ಹಬ್ಬಿ ಹರಡಿದ್ದ ದಳ್ಳುರಿಯನ್ನು ಉಲ್ಬಣಗೊಳಿಸುತ್ತದೆ. ಏಲಕ್ಕಿಯ ಅವಸಾನದೊಂದಿಗೆ ಇಡೀ ಊರಿಗೆ ಊರೇ ಸುಟ್ಟು ಸರ್ವನಾಶವಾಗುತ್ತದೆ.

'ಒಟ್ಟಿನಲ್ಲಿ ಕಾಂತ್ರಿ ಆಗಬೇಕು' ಎಂದು ಪ್ರಾರಂಭವಾಗುವ ಕಥೆ ಕೆಸರೂರು ಉರಿದು ಹೋಗುವ ಸನ್ನಿವೇಶದೊಂದಿಗೆ ಮುಕ್ತಾಯಗೊಳ್ಳುತ್ತದೆ. ತಮ್ಮ ಹರೆಯದ ಸಾಮರ್ಥ್ಯವನ್ನು ತೋರಿಸುವ ಛಲ ಈ ಕ್ರಾಂತಿಕಾರರಲ್ಲಿ ಎದ್ದುಕಾಣುತ್ತದೆ. ವಯೋಸಹಜವಾದ ಆಸೆ, ಆಕಾಂಕ್ಷೆಗಳನ್ನು ವ್ಯಕ್ತಪಡಿಸಲು ತವಕಿಸಿದರೂ ಅದು ಯಾವುದೇ ರೀತಿಯ ಪರಿಣಾಮವನ್ನು ಬೀರುವುದಿಲ್ಲ. ಕಾದಂಬರಿಯ ಆರಂಭದಲ್ಲೇ ಅವನತಿಯ ಬೀಜ ಮೊಳಕೆಯೊಡೆದದ್ದು ಮುಕ್ತಾಯದ ಹಂತದಲ್ಲಿ ನಿಶ್ಚಿತವಾದ ರೂಪ ತಳೆದು ಬಿಡುತ್ತದೆ. ಜಾತ್ಯತೀತ ಪ್ರೇಮಿಗಳಾದ ರಫೀಕ್ ಮತ್ತು ಜಯಂತಿ ಸಾವಿನ ದವಡೆಯಿಂದ ಪಾರಾಗಿ ಎತ್ತರದ ಗುಡ್ಡದ ತುದಿಯನ್ನು ತಲುಪಿ ಹೊಸ ಸೃಷ್ಟಿಗೆ ಮುನ್ನುಡಿ ಹಾಡುತ್ತಾರೆ. ಕೆಸರೂರಿನ ಸಂಸ್ಕೃತಿ ಅವನತವಾದರೂ ನವಸಂಸ್ಕೃತಿಯ ಆಶಯದೊಂದಿಗೆ ಕಾದಂಬರಿ ಮುಕ್ತಾಯಗೊಳ್ಳುತ್ತದೆ.

ತಣ್ಣಗೆ ನಿದ್ರಿಸುತ್ತಿರುವಂತೆ ಕಾಣುತ್ತಿರುವ ಭಾರತದ ಹಳ್ಳಿಗಳಿಗೆ ಆಧುನೀಕರಣ ಪ್ರವೇಶದಿಂದುಂಟಾದ ತಲ್ಲಣಗಳನ್ನು ತೇಜಸ್ವಿ ಸೂಕ್ಷ್ಮವಾಗಿ ವಿಶ್ಲೇಷಿಸುತ್ತಾರೆ. ಇವು ಅಖಿಲಕರ್ನಾಟಕ, ಅಖಿಲಕರ್ನಾಟಕ ಅಷ್ಟೇ ಏಕೆ ಒಟ್ಟು ತೃತೀಯ ಜಗತ್ತಿನ ಸಾಮಾಜಿಕ ಸ್ಥಿತ್ಯಂತರಗಳ ಕೆಲವು ಮೌಲ್ಯಮಾದರಿಗಳನ್ನು ಸೂಕ್ಷ್ಮವಾಗಿ ಹೊಳೆಯಿಸುತ್ತವೆ. ಹೀಗೆ ಬದಲಾದ ಸಮಾಜದ ಅನೇಕ ಉದಾಹರಣೆಗಳು ಕಥನಗಳಲ್ಲಿ ನೋಡ ಸಿಗುತ್ತವೆ. ಬದಲಾಗುವ ವೈಯಕ್ತಿಕ ಚಿಂತನೆಗಳಿಗೂ, ಸಾಮಾಜಿಕ ಆರ್ಥಿಕ ಸಂಗತಿಗಳಿಗೂ ಇರುವ ಸಂಬಂಧಗಳ ವಿಶ್ಲೇಷಣೆಯಲ್ಲಿ ತೇಜಸ್ವಿಯವರು ತೋರುವ ಎಚ್ಚರ ಅಸಾಧಾರಣವಾದದ್ದು.

## ೪.೮ ಬಹುಮುಖಿ ಪ್ರಯತ್ನದ ಏಕರೂಪಿ ಫಲ

ವೈಜ್ಞಾನಿಕ ಸಂಶೋಧನೆಗಳು ವಿಶ್ವವ್ಯಾಪಿಯಾಗಿ ಬೆಳೆದಂತೆಲ್ಲ ಜೀವನವನ್ನು ಅರ್ಥಮಾಡಿಕೊಳ್ಳಬೇಕಾದರೆ ವೈಜ್ಞಾನಿಕ ದೃಷ್ಟಿಕೋನದಿಂದ ಮಾತ್ರ ಎಂಬ ನಂಬಿಕೆ ಬಲವಾಗಿ ಬೇರೂರಿತು. ಯಾವುದೇ ರೀತಿಯ ಸಮಸ್ಯೆಗಳಿದ್ದರೂ ತರ್ಕದ ಮೂಲಕವೇ ಸಾಧಿತವಾಗಬೇಕು, ಪ್ರಯೋಗಜನ್ಯ ತಿಳುವಳಿಕೆಯಿಂದ ಮಾತ್ರ ಪರಿಹಾರವಾಗಬಲ್ಲದು ಎಂಬಂತಹ ವಾದಗಳು ಮೇಲುಗೈ ಸಾಧಿಸಿದವು. ಆದರೆ ಕೆಲವೊಂದು ಸಂದರ್ಭಗಳು ತರ್ಕಾತೀತವಾಗಿ ವೈಜ್ಞಾನಿಕತೆಯ ಬೆಂಬಲವಿಲ್ಲದೆ ಘಟಿಸುವುದೂ ಇದೆ. ಸಾಮಾಜಿಕ ಸಮಸ್ಯೆಗಳು ಬೇರೂರಿರುವಾಗ ಅವುಗಳ ಬುಡಮಟ್ಟದ ನಾಶ ಯಾವುದೇ ವೈಜ್ಞಾನಿಕ ಪರಿಹಾರಗಳಿಂದ ಸಾಧ್ಯವಾಗದೆ ಹೋದಾಗ ಸಾಮಾಜಿಕ ಬದುಕು ಅರಣ್ಯರೋಧನವಾಗುತ್ತದೆ. ಇನ್ನು ಸಮಾಜವು ತನ್ನಲ್ಲಿ ಸಾಮರಸ್ಯವನ್ನು ಸ್ಥಾಪಿಸಿಕೊಳ್ಳಬೇಕೆಂದರೆ ಅದು ತನ್ನಲ್ಲಿರುವ ವಿಭಿನ್ನ ಘಟಕಗಳೊಂದಿಗೆ ಸಾಮರಸ್ಯವನ್ನು ಸ್ಥಾಪಿಸಿಕೊಳ್ಳಬೇಕಾಗುತ್ತದೆ. ಅಂಥ ಸಂದರ್ಭಗಳಲ್ಲಿ ತಲೆದೋರುವ ಬಿಕ್ಕಟ್ಟು, ಸಮಸ್ಯೆಗಳಿಗೆ ಜಾಗೃತರು ಕಂಡುಕೊಳ್ಳುವ ಉತ್ತರಗಳು ಆ ಸಮಾಜದ ಗತಿಯನ್ನೇ ಬದಲಾಯಿಸಿಬಿಡಬಲ್ಲವು. ಇದು ನಿರಂತರವಾಗಿ; ಪ್ರಜ್ಞಾಪೂರ್ವಕವಾಗಿ ಅಪ್ರಜ್ಞಾಪೂರ್ವಕವಾಗಿ ನಡೆದೇ ಇರುತ್ತದೆ.

ಕಿರುಗೂರಿನ ಗಯ್ಯಾಳಿಗಳು ಕಥೆಯ ಪ್ರಾರಂಭದಲ್ಲಿ ಬಹುಮೆಲ್ಲನೆ ತಂಗಾಳಿಯಂತೆ ಬೀಸುವ ಗಾಳಿ ನಂತರ ಪಡೆದುಕೊಳ್ಳುವ ರೌದ್ರಸ್ವರೂಪ ಇಡೀ ಕಥೆಯ ಕೇಂದ್ರಬಿಂದುವಾಗಿ ಪರಿವರ್ತಿತವಾಗುತ್ತದೆ. ಒಂದರ್ಥದಲ್ಲಿ ಈ ಗಾಳಿಯೂ ಕಿರುಗೂರಿನ ಹೆಣ್ಮಕ್ಕಳಂತೆ ಬದಲಾವಣೆಯ ಗರ್ಭವನ್ನೇ ತನ್ನ ಅಂತರಂಗದಲ್ಲಿ ಹುದುಗಿಸಿಕೊಂಡಿದ್ದು ತೋರಗೊಡದೆ ಅವರಂತೆಯೇ ಸುಂದರವಾಗಿ ಕಾಣಬರುತ್ತದೆ. ಪ್ರಾರಂಭದಲ್ಲಿ ಶಾಂತಸ್ವರೂಪಿಯಾಗಿದ್ದ ಗಾಳಿಯೇ ಕ್ರಮೇಣ ವಿಶ್ವರೂಪ ಹೊಂದಿ ಕಿರುಗೂರನ್ನು ಆವರಿಸಿಕೊಳ್ಳುವುದು ಆಕಸ್ಮಿಕವಾದರೂ ವಿಚಿತ್ರವೆನಿಸುತ್ತದೆ. 'ನಾ ಹುಟ್ಟಿದಲಾಗಾಯ್ತಿಂದ ಇಂಥ ಗಾಳಿ ನೋಡಿರಲಿಲ್ಲ. ಎಂತೆಂಥ ಮಳೆ ಗಾಳಿ ಕಂಡಿದ್ದೇನೆ. ಇಂಥ ಗಾಳಿ ನೋಡಿದ್ದು ಮಾತ್ರ ನೆನಪಿಲ್ಲ.' ಎಂಬ ಕಾಳೇಗೌಡನ ಹೇಳಿಕೆಯಲ್ಲಿ ಆತನ ಜೀವಮಾನದಲ್ಲಿ ಕಂಡರಿಯದ-ಕೇಳರಿಯದ ಘಟನೆ. ಕಥೆಯಲ್ಲಿ ಗಾಳಿ ಪಡೆದುಕೊಳ್ಳುವ ತಿರುವು-ಅದರ ಎಲ್ಲ ಅಸಾಧ್ಯತೆಗಳನ್ನು ಮೀರುತ್ತದೆ. ಗದ್ದೆಗಳಲ್ಲಿ ಕಿರುಗೂರಿನ ಹೆಣ್ಣುಮಕ್ಕಳು ನಡುಬಗ್ಗಿ ಕಳೇ ಕೀಳುತ್ತಿರಬೇಕಾದರೆ ಮೆಲ್ಲಗೆ ತಂಗಾಳಿಯಂತೆ ಶುರುವಾದ ಗಾಳಿ ಒಂದು ಗಂಟೆಯೊಳಗೇ ವಿಶ್ವರೂಪ ತಾಳಿ ಸುತ್ತಮುತ್ತ ಸುತ್ತುವರೆದಿದ್ದ ಪರ್ವತಗಳ ಮೇಲಿನ ಕಾಡನ್ನೆಲ್ಲಾ ಗೆಜ್ಜೆ ಗಿಲಗುಟ್ಟುವಂತೆ ಗಿಲಗುಟ್ಟಿಸುತ್ತಾ ಉರವಣಿಸಿ ಬೀಸಲಾರಂಭಿಸಿತು.' 'ಗಾಳಿ ಹೊಡೆತಕ್ಕೆ ಓಲಾಡಿ ಓಲಾಡಿ ಗಿಡಮರಗಳೆಲ್ಲ ಸಾಷ್ಟಾಂಗ ಬಿದ್ದಂತೆ ನೆಲಮುಟ್ಟಿ ಉಟ್ಟಿ ಏಳತೊಡಗಿದ್ದವು. ಆದರೆ ಈ ಸರ್ಕಸ್ಸನ್ನೂ ಎಷ್ಟು ಹೊತ್ತು ತಾನೇ ಮಾಡಿಯಾವು?[೯೮]

ಪ್ರತಿಯೊಂದು ವಾಕ್ಯದಲ್ಲಿಯೂ ಕಿರುಗೂರಿನ ಸಾಮ್ಯತೆಯನ್ನು ಕಾಣಬಹುದು. ನಿರೂಪಕರು ಹೇಳುವಂತೆ ಗಾಳಿ ಒಂದೇ ದಿಕ್ಕಿನಿಂದ ಬೀಸಿದ್ದರೆ ಗಿಡಗಳು ಹೇಗೂ ಬಗ್ಗಿ ಎದ್ದು ನಿಭಾಯಿಸುತ್ತಿದ್ದವೇನೋ! ಕಿರುಗೂರಿನ ಯಾರೋ ಒಬ್ಬಳೇ ಹೆಂಗಸು ಇಲ್ಲ ಅವರೆಲ್ಲರೂ ಅವರವರಲ್ಲಿಯೇ ಜಗಳವಾಡಿ ಕೋಪಿಸಿಕೊಂಡಿದ್ದರೆ ಪರಿಸ್ಥಿತಿ ಶಾಂತವಾಗಿ ಇರುತ್ತಿತ್ತೇನೋ ಆದರೆ ಆಗಿದ್ದು ಬೇರೆ, ಇಲ್ಲಿಯ ಗಾಳಿ ಸನ್ನಿವೇಶವೇ ಮುಂದಿನ ಕಥೆಯ ವಸ್ತು ನಿರ್ದೇಶಾತ್ಮಕ ರೂಪದಂತೆ ಕಂಡುಬರುತ್ತದೆ. ಲೇಖಕನ ಅಭಿಪ್ರಾಯದಂತೆ ಗಾಳಿ ಹೆಂಗಸರ ಮೇಲೇಕೋ ಹೆಚ್ಚು ಪ್ರಭಾವ ಬೀರಿದಂತೆ ತೋರುತ್ತಿತ್ತೆಂದು; ನಿಜ! ಈ ಗಾಳಿಯಿಂದ ಜಾಗೃತರಾಗಿದ್ದು ಮಹಿಳೆಯರೇ.

ಗಾಳಿಯ ಹೊಡೆತಕ್ಕೆ ಬಿದ್ದ ಬೃಹತ್ ಹಲಸಿನ ಮರದ ಬಗ್ಗೆ ಹೇಳುವುದಾದರೆ ಅದೊಂದು ಕೇಳಲಾಗದ, ಅಂತಹ ಬಿರುಗಾಳಿಗೂ ಅಲ್ಲಾಡಿಸುವುದು ದುಃಸ್ಸಾಧ್ಯವಾಗಬಹುದಾದ ಎಷ್ಟೋ ವರ್ಷಗಳಿಂದ ಬಾಗದೇ ಉಳಿದ ವ್ಯವಸ್ಥೆ. ಅದು ಜಟಿಲವಾದದ್ದು, ಸಡಿಲಿಸಲಾಗದ್ದು! ಒಂದಕ್ಕೊಂದು ಹೆಣೆದಿರುವ, ಒಂದರ ಮೇಲೊಂದರಂತೆ ಪದರಪದರದಂತೆ ಬೆಳೆದ ವ್ಯವಸ್ಥೆ. ಅಂಥ ವ್ಯವಸ್ಥೆಯೊಂದು ಬುಡಸಹಿತ ಕಳಚಿ ಬೀಳಬೇಕಾದರೆ ಅದೆಷ್ಟೋ ಮನೆಗಳು ಅಡಿಪಾಯದ ಸಮೇತವಾಗಿ ಬೀಳಬಹುದು ಎಂಬ ಆಲೋಚನೆಗೆ ಪ್ರೇರೇಪಿಸುತ್ತದೆ.

ಕಥೆಯ ಪ್ರಾರಂಭದಲ್ಲೇ ಬಿರುಗಾಳಿಯ ಪೀಠಿಕೆಯ ನಂತರ ನಿರೂಪಕರು ಕಥನದ ಶೀರ್ಷಿಕೆಯತ್ತ ಜಾರುತ್ತಾರೆ. ಕಿರುಗೂರಿನ ಹೆಣ್ಣುಮಕ್ಕಳ ಸ್ವಭಾವದ ಬಗ್ಗೆ ವ್ಯಾಖ್ಯಾನಿಸುತ್ತಾ, ಕಿರುಗೂರಿಗೆ ಹೋದವರಿಗೆ ಮಾನಸಿಕವಾಗಿ ದೇಶಾಂತರಕ್ಕೆ ಹೋದ ಅನುಭವವಾಗುತ್ತಿತ್ತು ಎಂದು ಹೇಳುತ್ತಾರೆ. ಕಿರುಗೂರಿನ ಪ್ರತ್ಯೇಕತೆಗೆ ರೂಪ, ಆಕಾರ, ನಡೆನುಡಿಗಳು ಮಾತ್ರ ಕಾರಣವಾಗದೆ ಗಂಡಸರ ಸೌಮ್ಯ ಸ್ವಭಾವವೂ ಹೆಂಗಸರ ಗಯ್ಯಾಳಿತನವೂ ಸೇರಿ ಸುತ್ತಳ್ಳಿಯ ನಾಲ್ಕಾರು ಗ್ರಾಮದವರಿಂದ ಅವರನ್ನು ಬೇರ್ಪಡಿಸಿತ್ತು. ಉಜ್ವಲ ಸೌಂದರ್ಯದ ಖಣಿಗಳಾಗಿದ್ದ ಕಿರುಗೂರಿನ ಹೆಣ್ಣುಮಕ್ಕಳು ತಮ್ಮ ಸ್ವಭಾವ ಮತ್ತು ವ್ಯವಹಾರದಿಂದಾಗಿ ಇತರರ ಕಣ್ಣುಕ್ಕುವುದು ಸಹಜವೇ ಆಗಿತ್ತು. ಅವರ ನಡತೆ ವ್ಯವಹಾರದ ಪ್ರತ್ಯೇಕತೆಗೆ ಸೌಂದರ್ಯವೇ ಕಾರಣವಾಗಿದ್ದು ಗಾಂಚಾಲಿ ಮುಂಡೇರು ಎಂಬ ಟೀಕೆಗೆ ಗುರಿಯಾಗಿತ್ತು. ಇದು ವ್ಯಕ್ತಿ–ವ್ಯಕ್ತಿಗಳ ನಡುವಿನ ಮಾನಸಿಕ ಘರ್ಷಣೆಗೆ ಸಂಬಂಧಿಸಿದುದು.

ಕಿರುಗೂರಿನ ಗಯ್ಯಾಳಿಗಳು ಕಥೆಯ ಎರಡನೇ ಭಾಗದಲ್ಲಿ ಬಿರುಗಾಳಿಯ ಪರಿಣಾಮ, ಅವಸ್ಥೆಗಳನ್ನು ನಿರೂಪಿಸಿದ್ದಾರೆ. ಗಾಳಿಯ ಪರಿಣಾಮದಿಂದ ಪ್ರಕೃತಿಯ ಮೇಲಾದ ಪರಿಣಾಮ ಅಂತೆಯೇ ಸೀಗೇಗೌಡರ ಸೊಸೆ ದಾನಮ್ಮನ ಮೂಲಕ ಮಾನವರ ಮೇಲಾದ ಪರಿಣಾಮವನ್ನು ಸಶಕ್ತವಾಗಿ ಹಿಡಿದಿಡುತ್ತಾರೆ. ಹೆಬ್ಬಲಸಿನ ಮರದ ಕಾಯಿಗಳು ಮನೆಯ ಮೇಲೆ ಬಿದ್ದು ಹೆಂಚುಗಳನ್ನು ಒಡೆಯುವುದು ಹೆಬ್ಬಲಸಿನಮರದ ಮೇಲಿನ ದಾನಮ್ಮನ ಕೋಪಕ್ಕೆ ಮೂಲ ಕಾರಣವೆಂದರೂ ಬೀಸಿದ ಗಾಳಿಗೆ ಆ ಮರ ತತ್ತರಿಸಿ ಅದರ ಬೇರುಗಳು ಸೀಗೇಗೌಡರ ಮನೆಯ ಗೋಡೆಯನ್ನು ಸೀಳಿ ಬಿರುಕುಬಿಡುವುದು ಕೋಪೋದ್ರಿಕ್ತತೆಗೆ ಕಾರಣವಾಗಿ ಆಕೆ ಸೈರಣೆ ಕಳೆದುಕೊಳ್ಳುವಂತಾಗುವುದು ಕಾರ್ಯ–ಕಾರಣಭಾವ ಸೂಚಿಯಾಗಿದೆ. ಬಿರುಗಾಳಿಯಿಂದಾಗಿ ಹೆಬ್ಬಲಸಿನ ಮರದ ಬೇರು ಅಲ್ಲಾಡಿಸಿದ್ದು ದಾನಮ್ಮನ ಕೋಪ ಪ್ರವೃತ್ತಿಯನ್ನು ಮಾತ್ರವಲ್ಲ, ಬದಲಿಗೆ ಸೀಗೇಗೌಡನ ಮನೆಯ ಮೂಲಕ, ಕಿರುಗೂರಿನ ಮನೆ ಮನೆಯಲ್ಲೂ ಸುಪ್ತವಾಗಿ ಅಡಗಿದ್ದ ಆಂತರಿಕ ಸಂಘರ್ಷವನ್ನು, ನಿರೂಪಕರು ಹೇಳುವಂತೆ '.. ಗೋಡೆ ಹತ್ತಿ ಸೂರಿನವರೆಗೂ ಮುಟ್ಟಿತು. ಕ್ಷಣಾರ್ಧದಲ್ಲಿ ಹೊರಗಿನ ಬೆಳಕು ಒಳಗೆ ಕಾಣುವಷ್ಟು ಬಿರುಕು ಗೋಡೆಯಲ್ಲಿ ಕಾಣಿಸಿಕೊಂಡಿತು' ಎನ್ನುವ ಮಾತು ಕಿರುಗೂರಿನ ಮನುಷ್ಯ ಸಂಬಂಧಗಳಲ್ಲಾದ ಬಿರುಕು ಸ್ವಲ್ಪ ಸ್ವಲ್ಪವಾಗಿ ಉಲ್ಬಣಗೊಳ್ಳುತ್ತಿರುವುದರ ಸೂಚನೆಯ ಜೊತೆಗೆ ಇಡೀ ಕಥೆಯ ಮಹತ್ತರ ತಿರುವಿಗೆ ಕಾರಣವಾಗುವ ಸಂದರ್ಭವು ಪೂರ್ವಭಾವಿಯಾಗಿ ಸೂಚಿತವಾಗುತ್ತದೆ.

ಈ ಕಥೆಯುದ್ದಕ್ಕೂ ಹಾಸುಹೊಕ್ಕಾಗಿರುವ ಬಿರುಗಾಳಿಯ ಆರ್ಭಟ ಪ್ರಕೃತಿ ಮಾನವರ ನಡುವಣ ಘರ್ಷಣೆಗೆ ಸಾಕ್ಷಿಯೆಂಬಂತೆ ಮೇಲ್ನೋಟಕ್ಕೆ ಕಂಡುಬಂದರೂ ಅಂತರಾಳದಲ್ಲಿ ಹುದುಗಿದ ಸಾಮಾಜಿಕ ಸಂಘರ್ಷಗಳು ಒಂದರ ಹಿಂದೊಂದರಂತೆ ತರ್ಕಬದ್ಧವಾದ

ಬದಲಾವಣೆಗಳನ್ನು ಪಡೆದುಕೊಳ್ಳುವುದಕ್ಕೆ ಕಾರಣವಾಗುತ್ತದೆ. ಅಂತೆಯೇ ಸಾಮಾಜಿಕ-ಸಾಂಸ್ಕೃತಿಕ ಸಂಘರ್ಷದ ತಳಹದಿಯಲ್ಲಿ ಬದುಕನ್ನು ಮುತ್ತಿಕೊಂಡಿರುವ ಗಂಭೀರ ಸಮಸ್ಯೆಗಳತ್ತ ವಾಸ್ತವವಾದಿ ನೆಲೆಯಲ್ಲಿ ವಿಶ್ಲೇಷಣೆಗೆ ಒಳಪಡುವ ಕಿರುಗೂರು 'ಬಿರುಗಾಳಿ'ಯ ದೆಸೆಯಲ್ಲಿ ಸಾಮಾಜಿಕ ಪರಿವರ್ತನೆಗೆ ಒಳಪಡುತ್ತದೆ.

ಕಿರಗೂರಿನ ಗಯ್ಯಾಳಿಗಳು ಕಥೆಯ ಉದ್ದಕ್ಕೂ ಇಂಥ ಅನೇಕಾನೇಕ ಸ್ಥಿತ್ಯಂತರಗಳ ಸರಮಾಲೆಗಳನ್ನೇ ಕಾಣಬಹುದು. ಕಥೆಯ ಪ್ರಾರಂಭದಲ್ಲಿಯೇ ಪರಿಸರ ಹಾಗೂ ಮಾನವರ ನಡುವಿನ ಸಂಬಂಧದಲ್ಲಿ ಇರುವ ಸಾಮರಸ್ಯ ಸ್ಥಿತಿಯು ಕಥಾಪ್ರಾರಂಭದಲ್ಲಿ ಬೀಸುವ ಬಿರುಗಾಳಿಯಿಂದ ಬೇರೆಗೊಳ್ಳುತ್ತದೆ. ಅದು ಪರಸ್ಪರಲ್ಲಿದ್ದ ಸಾಮರಸ್ಯವನ್ನು ಅಳಿಸಿ ಹಾಕಿ ಅವರ ನಡುವೆ 'ಈ ಗಾಳಿ ಯಾಕಾಗಿ ಬೀಸುವುದೋ' ಎಂದೆಂಬ ರೀತಿಯ ರೇಜಿಗೆಯನ್ನು ಹುಟ್ಟಿಸಿಬಿಡುತ್ತದೆ. ಮಾನವ ಮತ್ತು ಪ್ರಕೃತಿಯ ನಡುವಿನ ಸಂಘರ್ಷದ ಫಲಿತಾರ್ಥ ಎಂಬಂತೆ ಗಾಳೀರೂಪವು ಅನಂತ ಬದಲಾವಣೆಯನ್ನು ತನ್ನಲ್ಲಿ ಹುದುಗಿಸಿಕೊಂಡಿರುತ್ತದೆ. ಇದು ಮುಂದೆ ಇಡೀ ಕಥೆಯಲ್ಲಿ ಸಂಘರ್ಷಕ್ಕೆ ಕಾರಣವಾಗಿ ಅನೇಕಾನೇಕ ಸ್ಥಿತ್ಯಂತರಗಳನ್ನುಂಟು ಮಾಡಿರುವುದನ್ನು ಕಾಣುತ್ತೇವೆ. ಇನ್ನು ಭೌಗೋಳಿಕವಾಗಿ ಕಿರಗೂರು ಯಾವುದೇ ಬದಲಾವಣೆಗೆ ಒಳಗಾಗದಿದ್ದರೂ ಪ್ರತ್ಯೇಕತೆಯನ್ನು, ವಿಭಿನ್ನತೆಯನ್ನು ಕಾಯ್ದುಕೊಂಡಿದ್ದನ್ನು ಅಂತರವೆಂದೇ ಹೇಳಬಹುದು. ಗಾಳಿಯಿಂದಾದ ಅವಸ್ಥಾಂತರಗಳಂತೂ ಅನೇಕ. ಬಿರುಗಾಳಿಯಂತೆ ಬೀಸಿ ಬರುವ ಗಾಳಿಯು ದಾನಮ್ಮನಂತಹ ಹುಣ್ಣಿಮೆಗೋ ಅಮವಾಸ್ಯೆಗೋ ಸಿಟ್ಟುಕೊಳ್ಳುವ ಹೆಂಗಸನ್ನು ಸಿಟ್ಟುಗೊಳ್ಳುವಂತೆ ಪ್ರೇರೇಪಿಸಿದ್ದೂ ಕೂಡಾ ಶಾಂತಿಯ ಸ್ಥಿತಿಯಿಂದ ಸಿಟ್ಟಿಗೆ ಬದಲಾದ ಸ್ಥಿತ್ಯಂತರವೇ. ಮಾನವರು ಪ್ರತಿಯೊಂದು ತಮ್ಮಿಚ್ಛೆಯಂತೆಯೇ ನಡೆಯಲೆಂದು ಬಯಸುತ್ತಾರೆ. ಅವರಿಚ್ಛೆಗೆ ವಿರುದ್ಧವಾದ ಯಾವುದೇ ಕಾರ್ಯ ನಡೆದರೂ ಸಿಡುಕು-ಮಿಡುಕುಗಳು ಅವರನ್ನು ಆವರಿಸಿಕೊಳ್ಳುತ್ತವೆ. ಇದೊಂದು ಮನೋವೈಜ್ಞಾನಿಕ ಸತ್ಯವೂ ಹೌದು. ತಾವು ಬಯಸಿದ ಕಾರ್ಯ ನಡೆಯದೇ ಹೋದಾಗ ಅನುಭವಿಸುತ್ತಿರುವ ಹತಾಶೆ, ನೋವು ಹಾಗೂ ಆಗದ ಆ ಕಾರ್ಯದ ಬಗೆಗೆ ಅವರು ಕಂಡಿದ್ದ ಕನಸಿನ ಅವಶೇಷರೂಪದ ಸಿಟ್ಟನ್ನು ಇನ್ಯಾವುದರ ಮೇಲೆಯೋ ಪ್ರದರ್ಶಿಸುತ್ತಾ ಕಾಲಹಾಕಿ ಮನಸ್ಸಿನ ದುಗುಡಗಳನ್ನು ಇಳಿಸಿಕೊಂಡು ನಿರಾಳವಾಗಬಯಸುತ್ತಾರೆ.

ಇಲ್ಲಿಯೂ ಹಾಗೆಯೇ. ದಾಳಮ್ಮಳ ಶಾಂತ, ಸುಂದರ ರೂಪ ಅವಳ ಸ್ಥಿತಿಯಾದರೆ ಗಾಳಿಯೆಂಬ ಕಾರಣದಿಂದ ಆಸ್ಫೋಟನೆಗೊಂಡ ಅವಳ ಸಿಟ್ಟಿನರೂಪವೇ ಸ್ಥಿತ್ಯಂತರ. ಹಾಗೆಯೇ ಅವರ ಮನೆಯ ಮೇಲ್ಗಡೆಯಿರುವ ದೈತ್ಯ ಹೆಬ್ಬಲಸಿನಮರದ್ದು. ಆ ಮರ ಇಷ್ಟು ದಿನ ಹೇಗಿತ್ತು ಎಂಬುದು ಸ್ಥಿತಿಯಾದರೆ ಗಾಳಿಯಿಂದ ಆ ಮರದ ಮೇಲಾದ ಪರಿಣಾಮವು ಸ್ಥಿತ್ಯಂತರವೇ ಆಗಿದೆ. ಮೊದಮೊದಲು ಅಲ್ಲಾಡದೆ ನಿಂತ ಸ್ಥಿತಿಯಿಂದ ನಂತರ ಅಲ್ಲಾಡಲು ಶುರುವಾಗುವ ಹಾಗೆ ಸ್ಥಿತ್ಯಂತರಗೊಂಡು ಮುಂದೆ ಅಲ್ಲಾಡಿ ನಂತರ ಬಿದ್ದು, ತುಂಡಾಗಿದ್ದು ಇಡೀ ಊರಿನ ಮನಸ್ಥಿತಿಯನ್ನೇ ಕದಡಿಬಿಡುತ್ತದೆ. ಈ ಹೆಬ್ಬಲಸಿನ ಮರವನ್ನು ಕಡಿಸುವ ಪ್ರಯತ್ನದ ಹಲವು ವಿದ್ಯಮಾನಗಳು ಸೇರಿಕೊಂಡು ಕಥೆ ಬೇರೆಯದೇ ತಿರುವನ್ನು ಪಡೆದುಕೊಳ್ಳುತ್ತದೆ. ಸೋಸ್ಸ್ ಆದಿಯಾಗಿ ಅನೇಕರು ಸೇರಿಕೊಂಡು ಹಲಸಿನ ದಿಮ್ಮಿಯನ್ನು ಉರುಳಿಸಲು ಪ್ರಯತ್ನ ಪಡುತ್ತಿರುವಾಗ ಹಲಸಿನ ದಿಮ್ಮಿ ಇದ್ದಕ್ಕಿದ್ದಂತೆ ಉರುಳಿಹೋಗಿ ಎಲ್ಲೋ ಮಾಯವಾದದ್ದು ಇವೆಲ್ಲ ಆ ಹೆಬ್ಬಲಸಿನಮರದಿಂದಾದ ಕಿರುಗೂರಿನಲ್ಲಾದ ಬಹು ದೊಡ್ಡ ಸ್ಥಿತ್ಯಂತರ.

ಪ್ರತಿಘಟ್ಟದಲ್ಲಿಯು ತನ್ನ ಅಗಾಧತೆ ಹಾಗೂ ಅಖಂಡತೆಯನ್ನು ಕಳೆದುಕೊಂಡು ತುಂಡು ತುಂಡಾಗಲ್ಪಡುತ್ತಾ ಮುಂದೆ ಎಲ್ಲಿಯೋ ನಾಶವಾಗುವ ಬಗೆ ಮನುಷ್ಯರ ಬದುಕಿನ ಸ್ಥಿತಿಯನ್ನು ಪ್ರತಿಬಿಂಬಿಸುತ್ತದೆ. ಇದು ಯಾವುದೋ ಒಂದು ರೀತಿಯಲ್ಲಿ ಮನುಷ್ಯರನ್ನು ಅವರ ಮನಸ್ಸನ್ನು ಹೋಲುವುದು ಸತ್ಯ. ಜನ್ಮಜಾತ ದೇಹದಂತೆಯೇ ಬಂದ ಮನಸ್ಸು ಕೂಡಾ, ಹುಟ್ಟಿದಾಗ ಯಾವ ಸುಖ ದುಃಖಗಳ ಜ್ಞಾನವಿಲ್ಲದೇ ಸಂಬಂಧಗಳ ಅರಿವಿಲ್ಲದೆಯೇ ಬೆಳೆಯುವಾಗ ಅಖಂಡತೆಯನ್ನುಳಿಸಿಕೊಳ್ಳುತ್ತದೆ. ನಂತರ 'ನಾನು' 'ತಾನು' ಎನ್ನುವ ಅಹಂಕಾರವನ್ನೆಲ್ಲ ಬೆಳೆಸಿಕೊಂಡು ಮುಂದೆ ಅದೆಷ್ಟೋ ಸಂಬಂಧಗಳನ್ನು ಮೈಮೇಲೆಳೆದುಕೊಂಡು ತನ್ನ ಸಮಗ್ರತೆ ಅಖಂಡತೆಯನ್ನು ಉಳಿಸಿಕೊಂಡಿದ್ದೇನೆ ಎಂದುಕೊಂಡರೂ ಮುಂದೆ ಅವೇ ಸಂಬಂಧಗಳು ಮನದ ಏಕತೆ, ಸಮಗ್ರತೆಗೆ ಧಕ್ಕೆ ತಂದಾಗ ಖಂಡತುಂಡಾಗಿ ಮಾರ್ಪಾಡಾಗುತ್ತದೆ. ಕೊರಗಿ ಉರುಳುತ್ತಾ ತಿರುಗುತ್ತಾ ಮತ್ತೆಲ್ಲೋ ಮಾಯವಾಗಬೇಕಾದರೆ ಇದ್ಯಾವುದರ ಜ್ಞಾನವಿಲ್ಲದೇ ಪದೇ ಪದೇ ಪಲ್ಲಟಗೊಳ್ಳುತ್ತಾ ಹೋಗುವುದು ಮನುಷ್ಯರ ಸ್ಥಿತಿ. ಹಾಗೆಯೇ ಮರದ ಹಾಗೂ ಗಾಳಿಯಿಂದಾದ ಅಖಂಡಮನೆಯ ಮಧ್ಯದಲ್ಲಿನ ಬಿರುಕೂಕೂಡಾ ಒಂದು ಸ್ಥಿತ್ಯಂತರವೇ. ಇಲ್ಲಿ ಅಖಂಡಮನೆಯು ಪೂರ್ವದ ಸ್ಥಿತಿಯಾದರೆ ಅದರಲ್ಲಿ ಉಂಟಾದ ಬಿರುಕೇ ಸ್ಥಿತ್ಯಂತರ.

ಇನ್ನು ಕಿರಗೂರಿನ ಹೆಂಗಸರ ತಟಸ್ಥ ಮನಸ್ಸು (ಗಾಳಿಯ ಬಗೆಗೆ) ಒಂದು ಸ್ಥಿತಿಯನ್ನು ಬಿಂಬಿಸಿದರೆ ಅದು ದಾನಮ್ಮನ ಸಿಟ್ಟನ್ನು ಕಂಡು ಹೆಂಗಸರಿಗೆ ಸಿಟ್ಟು ಬರಬಾರದು ಎನ್ನುವ ಮನೋಸ್ಥಿತಿಯನ್ನು ಹೊಂದಿದರೆಂದರೆ; ಆ ಸ್ಥಿತಿಗೆ ತಲುಪಿದ ಅದು ಬಹುಶಃ ದಾನಮ್ಮನ ಅಂಥ ಮಿತಿಮೀರಿದ ಮಾತಿನ ಓಘದ ಪರಿಣಾಮವೇ ಆಗಿದ್ದರೂ ಮುಂದೆ ದಾನಮ್ಮನ ಹಿಗಾಮುಗ್ಗಾ ಬೈಗುಳದಿಂದ ಗಾಳಿ ನಿಂತಿತೆಂದರೆ ಅದು ಇನ್ನೊಂದು ರೀತಿಯ ಸ್ಥಿತ್ಯಂತರವೂ ಹೌದು. ಆ ಸ್ಥಿತ್ಯಂತರದಿಂದ ಹೆಂಗಸರ ಮನಸ್ಸಿಗೆ 'ಮಾತಿಗೂ ಶಕ್ತಿಯಿದೆ' ಎಂಬುವ ಒಂದಂಶ ಮತ್ತೆ ಅರ್ಥವಾಯಿತೆಂದರೆ ಅದೂ ಒಂದು ಸ್ಥಿತ್ಯಂತರವೇ. ಇಲ್ಲಿ ಮಾತಿನಿಂದ ಬಯ್ಗುಳದಿಂದ ಗಾಳಿ ನಿಂತೀತು ಎಂಬ ವಿಚಾರ ನಿಷ್ಕಾರಣವೇ ಆದರೂ ಕಾಕತಾಳೀಯ ಸಂಬಂಧವನ್ನು ಇಲ್ಲಿ ಕಲ್ಪಿಸಬಹುದುದಷ್ಟೇ! ಇವಿಷ್ಟು ಒಂದು ಕಡೆಯಾದರೆ ನಾವೇ ನಿರ್ಮಿಸದ ವ್ಯವಸ್ಥೆಯಲ್ಲಿ ನಮ್ಮವರಿಂದಲೇ ನಮಗುಂಟಾಗುವ ಕಿರಿಕಿರಿಗಳು, ವ್ಯಂಗ್ಯದ ಧಾಟಿಯಲ್ಲಿದ್ದರೂ ಅದು ಮನುಷ್ಯನಿರ್ಮಿತ ಅವ್ಯವಸ್ಥೆಯ ನಿರರ್ಥಕತೆಯನ್ನು ಪ್ರತಿಪಾದಿಸುತ್ತದೆ. ಇಲ್ಲಿ ಒಂದೇ ಮಾತಿನಲ್ಲಿ ಹೇಳಬೇಕಾದರೆ ಊರವರ ಸಹಾಯಕ್ಕೆ ನಿಲ್ಲಬೇಕಾದ ಶಂಕ್ರಪ್ಪನ ಕರ್ತವ್ಯ ಸ್ಥಿತಿಯಾದರೆ ಆತನಿಂದಾದ ಅವಾಂತರಗಳು ಕಿರುಗೂರಿನ ಸಾಮಾಜಿಕ ಸ್ಥಿತಿಯ ಚಾಲನೆಗೆ ಮುನ್ನುಡಿಯಾಗಬಲ್ಲವು. ಆತನ ಬೋರ್ಡಿನ ವ್ಯವಹಾರದಿಂದ ಉದ್ಭವಿಸಿದ ಲಾಕಪ್ಪಿನ ಪ್ರಸಂಗವೂ, ಅಲ್ಲಿನ ಪೋಲೀಸ್ ಪೇದೆ ನಾರಾಯಣನ ನಾಟಕೀಯ ವರ್ತನೆ ಹಾಗೂ ಅದರಲ್ಲಿನ ಬದಲಾವಣೆಗಳೂ ಕಿರುಗೂರಿನ ಒಕ್ಕಲಿಗ ಗಂಡಸರ ಅಸ್ತಿತ್ವ ಪ್ರಜ್ಞೆಯನ್ನು ಕೆಣಕಿದಂತಹವು.

ತನ್ನ ಕಾರ್ಯಸಾಧನೆಗಾಗಿ ಎಂಥ ಕೆಸಲವನ್ನೂ ಮಾನವರು ಮಾಡುತ್ತಾರೆ. ಅವರಿಗೆ ಯಾವ ಆತ್ಮವಂಚನೆ ಅಥವಾ ಪರರಿಗೆ ಅಪಕಾರ ಮಾಡಿತ್ತಿದ್ದೇವೆ ಎನ್ನುವ ಭಾವನೆ ಕಾಡಲಾರದು. ತಮಗಾಗಿ, ತಮ್ಮ ಸ್ಥಾನಕ್ಕಾಗಿ, ದುಡ್ಡಿಗಾಗಿ ಎಂಥ ಸಮಯಸಾಧಕ ಕೆಲಸಗಳನ್ನು ನಿರ್ವಹಿಸಬಲ್ಲರು ಎಂಬುದಕ್ಕೆ ಈ ಸಂದರ್ಭ ಸಾಕ್ಷಿಯಾಗುತ್ತದೆ. ಈ ಪರಿಸ್ಥಿತಿ ಎಂದಿನಿಂದಲೂ ನಡೆದುಕೊಂಡು ಬಂದಿರುವುದೇ ಆಗಿರುವುದರಿಂದ ಅನ್ಯಾಯವಾಗಿ ನಿರಪರಾಧಿಗಳಿಗೆ ಏನನ್ನೂ ಶಿಕ್ಷೆ

ವಿಧಿಸಬಾರದೆಂಬುದನ್ನು ಊಹಿಸಲೂ ಅಸಾಧ್ಯ. ಈ ವಿಚಾರದಲ್ಲಿ ಮನುಷ್ಯ ನಿರ್ಮಿತ ಸಂಸ್ಥೆಗಳ ಅಸಂಬದ್ಧತೆ ಎದ್ದು ತೋರುತ್ತದೆ. ಪರಸ್ಪರರ ನಡುವೆ ಇಲ್ಲದ ಸರಿಯಾದ ಅರ್ಥೈಸಿಕೊಳ್ಳುವಿಕೆಯು ಅಂದಿನ ವಾಸ್ತವವಾದರೆ ಅದರಿಂದಾಚೆಗಿನ ವಾಸ್ತವದಲ್ಲಿ ತರ್ಕಾತೀತವಾದದ್ದು. ಗೌಡರು ಹಾಗೂ ಹರಿಜನರ ನಡುವೆ ಉಂಟಾದ ಜಾತಿಜಗಳ, ಜಗಳವೊಂದಾದರೂ ಸಾಕು ಆದರಿಂದ ಅನೇಕ ರೀತಿಯಲ್ಲಿ ಪರಿಕಲ್ಪಿಸಿಕೊಂಡು ಜಗಳವನ್ನು ತೆಗೆಯುವುದು ಹಾಗೂ ಬೆಳೆಸುವುದು ಹಾಗೂ ಅಂತರ ಕಾಪಾಡಿಕೊಳ್ಳುವುದು ಮನುಷ್ಯ ಸಹಜ ಗುಣವಾಗಿ ಮಾರ್ಪಟ್ಟಿದೆ. ಇದೇ ಕಾರಣದಿಂದಲೇ ವಿಜ್ಞಾನ, ತಾಂತ್ರಿಕತೆ ಇತ್ಯಾದಿಗಳು ಎಷ್ಟೇ ಬೆಳೆದಿದ್ದರೂ ವೈಷಮ್ಯ ಹಾಗೂ ಜಗಳಗಳು ತಾರಕಕ್ಕೇರಿರುವುದು. ಇಂಥ ವಿಷಯಗಳನ್ನು ಕೆದುಕುತ್ತಾ ಹೋಗುತ್ತಿದ್ದಂತೆ ಕಥೆಯು ತಾತ್ತ್ವಿಕತೆಯ ಕಡೆಗೆ ವಾಲಿದ್ದು ಕಂಡುಬರುತ್ತದೆ. ಇದನ್ನು ಕಥೆಯ ಭೌತಿಕವಸ್ತುವಿನ ವಿಚಾರದಲ್ಲಿ ಉಂಟಾದ ಸ್ಥಿತ್ಯಂತರವೆನ್ನಬಹುದು.

ಕಿರುಗೂರಿನ ಸಮಸ್ಯೆಗಳ ಬಗೆಗೆ ಹಾಗೂ ಸ್ಥಿತಿಗತಿಗಳ ಬಗೆಗೆ ಇದುವರೆಗೆ ಸರಾಗವಾಗಿ ಸಾಗಿದ್ದ ಕಥೆಯು ಇದ್ದಕ್ಕಿದ್ದಂತೆಯೇ 'ಹಿಂದೆಯೂ ಹೀಗೆಯೇ ಇತ್ತು. ಮುಂದೆಯೂ ಹೀಗೆಯೇ' ಎಂಬ ಅರ್ಥದಲ್ಲಿ ತಿರುವು ಪಡೆದುಕೊಳ್ಳುವುದು ಕಥಾವಸ್ತುವಿನಲ್ಲಾದ ಭೌತಿಕ ಹಾಗೂ ಬೌದ್ಧಿಕ ಸ್ಥಿತ್ಯಂತರವಾಗಿದೆ. ಇನ್ನು ಹೆಬ್ಬಲಸಿನ ಮರದ ದಿಮ್ಮಿಯನ್ನುರುಳಿಸಿವ ಸಮಯದಲ್ಲಿ ಗೌಡರ ಸೊಂಟ ಉಳುಕಿ ಎದ್ದೇಳಲಾರದಂತೆ ಆಗಿದ್ದು, ಎಷ್ಟೋಜನ ಉಳುಕು ತೆಗೆಯಲು ಹೋಗಿ ಉಳುಕು ಬಿಡುವುದರ ಬದಲು ಇನ್ನೂ ಹೆಚ್ಚಾಗಿರುವುದು ಎಲ್ಲವುಗಳೂ ಕಿರುಗೂರಿನ ದೈನಂದಿನ ಚಿಲ್ಲರೆ ಜಗಳಗಳಿಗೆ ಬೇರೆಯದೇ ಅರ್ಥ ಕಲ್ಪಿಸುತ್ತದೆ. ಈ ಮಧ್ಯೆ ಕಥೆಯಲ್ಲಿ ಕಾಣಬರುವ ದೊಡ್ಡ ಬೆಳವಣಿಗೆಯೆಂದರೆ ದಾನಮ್ಮ ಪಾತ್ರದ ತದ್ವಿರುದ್ಧ ನೆಲೆಯ ಕಿರುಗೂರಿನದೇ ಹೆಣ್ಣುಮಗಳು ನಾಗಮ್ಮ ನಂಬೂದರಿ ಪಂಡಿತನ ಜೊತೆ ಓಡಿಹೋದದ್ದು; ಅಲ್ಲಿನ ಪಂಚಾಯ್ತಿ, ಪ್ರತಿಯೊಂದಕ್ಕೂ ಮೌಢ್ಯತೆಯ ಬಣ್ಣಹಚ್ಚುವ ತಿಳಿದಜನ, ಇವರ ನಡುವೆ ಹೆಂಗಸರಲ್ಲಿ ಸುಪ್ತವಾಗಿದ್ದ ರೋಷ ಪ್ರತೀಕಾರ, ತಿರಸ್ಕಾರಗಳು ಎಲ್ಲವೂ ಹೊರಬಂದದ್ದು.

ಹೆಂಗಸರಿಗೆ, ಗಯ್ಯಾಳಿಯರಿಗೆ ಬುದ್ಧಿಕಲಿಸಬೇಕು ಎಂದು ಸೇರಿದ್ದ ಪಂಚಾಯ್ತಿ ಇವೆಲ್ಲವನ್ನು ಕಂಡಾಗ ಮಾನವನೆಷ್ಟೇ ಬುದ್ಧಿಜೀವಿಯಾದರೂ, ಮುಂದುವರೆದರೂ ಆತ ಮುಂದುವರೆಯಲಾರ. ಎಲ್ಲಿತಪ್ಪಿದೆಯೋ ಅದನ್ನೊಪ್ಪಿ ತಿದ್ದಿಕೊಳ್ಳುವುದರ ಬದಲಾಗಿ ತಪ್ಪಿದೆಯೆಂದು ಹೇಳಿದವರ ಮೇಲೆಯೇ ಸೇಡು ತೀರಿಸಿಕೊಳುವುದರತ್ತ ಗಮನ ನೀಡುವುದು ಅತಿದೊಡ್ಡ ಕ್ರೌರ್ಯ. ಇಂಥ ವಿಚಾರಗಳನ್ನೆಲ್ಲಾ ಗಮನಿಸಿದಾಗ ಮನುಕುಲ ಮಾನವೀಯತೆಯ ಶಿಖರದತ್ತ ಸಾಗಿ ಅಲ್ಲಿ ಶಿರೋಮುಕುಟಪ್ರಾಯವಾಗಿ ಭೂಷಿಸುವುದರ ಬದಲಾಗಿ ಇನ್ನೂ ಅವನತಿಯತ್ತಲೇ ಸಾಗುತ್ತಿರುವುದನ್ನು ನೋಡಿದಾಗ ಇದರ ಅಂತ್ಯದ ಬಗ್ಗೆ ಖೇದವಾಗುತ್ತದೆ. ಆದರೆ ಅವನತಿಯೆಡೆಗೆ ಅಲ್ಲಿ ಸೇರಿದ್ದ ಪಂಚಾಯ್ತಿಯಲ್ಲಿ ಊರಳ್ಳಿಹೆಗ್ಡೆ ಹಾಗೂ ಶಂಕ್ರಪ್ಪನ ಕುತಂತ್ರದಲ್ಲಿ ಬಲಿಪಶುಗಳಾಗಬೇಕಿದ್ದ ಹೆಂಗಸರು ತಮ್ಮ ರಕ್ಷಣೆಗಾಗಿ ದನಿ ಎತ್ತಿದ್ದು ಸ್ವಾತಂತ್ರ್ಯಕ್ಕಾಗಿ, ಸ್ವಾತಂತ್ರ್ಯದ ನಂತರವೂ ಮಹಿಳೆಯ ದನಿಯೆಂದೆನ್ನಿಸದೆ ಇರಲಾರದು. ಇದು ಆರೋಗ್ಯಪೂರ್ಣ ಸ್ಥಿತ್ಯಂತರ. ಆದರೆ ನಾಗಮ್ಮ ಓಡಿಹೋದಳೆಂಬ ಏಕೈಕ ಕಾರಣಕ್ಕಾಗಿ ಆಕೆಯ ಮೇಲೆ ಕೈಮಾಡಿದ್ದು ಮನುಕುಲದ ಸ್ತ್ರೀಯರು ದಿನನಿತ್ಯವೂ ಯಾವ್ಯಾವ ರಾಕ್ಷಸೀ, ಪಾಶವೀಕೃತ್ಯಗಳನ್ನು ಸಹಿಸಿಕೊಂಡಿರುತ್ತಾರೆ ಎಂಬುದರ ಜಾಜ್ವಲ್ಯಮಾನವಾದ ಉದಾಹರಣೆ. ಖಂಡಿತವಾಗಿಯೂ ಅದು

ಮಾನವ ಮಾನವೀಯತೆಯನ್ನು ಮರೆತು ದಾನವನಾಗುವ, ಮನುಷ್ಯನಿಗೂ ಪಶುವಿಗೂ ವ್ಯತ್ಯಾಸದ ರೇಖೆಯಾದ ಮನುಷ್ಯತ್ವ ಸಂಪೂರ್ಣ ನಾಶವಾಗುವತ್ತ ಸರಿದಿರುವುದು. ಮಾನವ ತಪ್ಪೆಸಗುತ್ತಿದ್ದಾಗ ವಿವೇಕ ಹೇಳಿ ಆತನನ್ನು ತಪ್ಪಿನ ದಾರಿಯಿಂದ ಸರಿದಾರಿಗೆಳೆಯಬೇಕಾದ ಬುದ್ಧಿಯು ನಿಷ್ಕ್ರಿಯವಾಗಿ ಲಡ್ಡು ಹಿಡಿಯುವಿಕೆ, ಜನಸೇವೆಯ ಹೆಸರಿನಲ್ಲಿ ಶಂಕ್ರಪ್ಪನಂಥ ಜನರು ಸರ್ಕಾರ ಹಾಗೂ ಆಡಳಿತಶಾಹಿಯ ಹೆಸರಿನಲ್ಲಿ ಸಮಕಾಲಿನತೆಯನ್ನು, ಅವರ ಹಕ್ಕು ಸ್ವಾತಂತ್ರ್ಯಗಳನ್ನು ಕಸಿದುಕೊಳ್ಳುತ್ತಿರುವುದು, ಇಂಥ ದುಷ್ಕೃತ್ಯಗಳಿಂದ ವ್ಯವಸ್ಥೆಯೆಡೆಗೆ ಭೀತಿಯನ್ನು ಹುಟ್ಟಿಸಿ ಅವೆರಡರ ಪರಸ್ಪರ ಹೊಂದಾಣಿಕೆಯನ್ನು ದೂರಮಾಡಿ ಆಳವಾದ ಕಂದಕವನ್ನು ಉಂಟುಮಾಡುವ, ಅಜ್ಞಾನದಿಂದ ತಾವು ಹಾಗೂ ತಮ್ಮತನದ ಅರಿವನ್ನು ಕಳೆದುಕೊಂಡ ನಿರಪರಾಧಿ ಜನಗಳ ಮೇಲೆ ಸವಾರಿ ಮಾಡುವುದು, ಎಂದೆಂದೂ ವಾಸಿಯಾಗಲಾರದ ಮಾನಸಿಕ ಅಘಾತವನ್ನು ನೀಡಿ ತನ್ನ ಹಕ್ಕುಗಳನ್ನು ಪ್ರಶ್ನಿಸುವ, ವ್ಯಕ್ತಿಯ ಬಾಯಿಮುಚ್ಚಿಸುವ ಷಡ್ಯಂತ್ರರೂಪ, ಹೆಣ್ಣು ಎಂದೆಂದಿಗೂ ಗಂಡಿನ ಕೈಕೆಳಗೇ ಉಳಿಯಬೇಕೆಂದು ಸ್ವಾಂತಂತ್ರ್ಯಹರಣಗೈಯುವದರಿಂದ ಜೀವನಪರ್ಯಂತ ನಲುಗಿ ನರಳುವಂಥದು, ಹಕ್ಕು ಬಾಧ್ಯತೆಗಳ ಅರಿವಿಲ್ಲದ ಜನ ಅದರ ಕಡೆಗೆ ತಿರುಗಿಯೂ ನೋಡಲಾರದಂಥ ಆಲಸ್ಯ, ನಂಬಿಕೆಗ ದ್ರೋಹವಾದನಂತರ ಮತ್ತೆಂದೂ ನಂಬಿಕೆಯ ಮೇಲೆ ನಂಬಿಕೆ ಇಡಲಾರದಂಥದು, ದಾನಮ್ಮನ ಸಿಟ್ಟು ಬರೇ ಸಿಟ್ಟಲ್ಲ ತರ್ಕಬದ್ಧವಾದದ್ದೆಂಬ ನಿರ್ಣಯಕ್ಕೆ ಬರಬಹುದಾದಂಥದು, ಇದರಿಂದ ಪ್ರೇರಿತರಾದ ಮಹಿಳೆಯರು ಸಂಸಾರವನ್ನೆಲ್ಲ ಹಾಳುಮಾಡುವ ಶೇಂದಿ ಅಂಗಡಿಯನ್ನು ನಾಶಾಮಾಡಿದ್ದು, ಮಹಿಳಾಸಂಘಟನೆಯಿಂದ ರಾಜ್ಯದೆಲ್ಲೆಡೆ ಉಂಟಾದ ಸಂಚಲನವು ರೈತ ಚಳುವಳಿಗೆ, ಜಾತಿವಿನಾಶಕ್ಕೆ ನೈತಿಕ ಶಕ್ತಿಯಾಗಿ ನಿಲ್ಲುವುದು, ಹೀಗೆ ಸ್ಥಿತ್ಯಂತರಗಳ ಸಾಲು ಸಾಲನ್ನೇ ಈ ಕಥೆಯಲ್ಲಿ ಗುರುತಿಸಬಹುದು.

ಬದಲಾವಣೆ ಆಗಬೇಕೆಂದರೆ ಬದಲಾವಣೆಯ ಸ್ವರೂಪ, ಪರಿಣಾಮಗಳನ್ನು ತಿಳಿದಿರಬೇಕಾಗುತ್ತದೆ. ಅದು ವಾಸ್ತವದಷ್ಟೇ ಸತ್ಯ. ಗೋಡೆಯಲ್ಲಿ ಉಂಟಾದ ಬಿರುಕು, ಅದರಿಂದ ಒಳಬಂದ ಬೆಳಕು ಎರಡೂ ಸ್ಥಿತ್ಯಂತರ ನಡುವಿನ ಅವಸ್ಥೆ. ಅದೊಂದು ಸಂಘರ್ಷದ ಪರಿಣಾಮ. ವಾಸ್ತವ; ಕೃತಕವಾಗಿ ನಿರ್ಮಿಸಲ್ಪಟ್ಟ ಮನೆ ಮತ್ತು ನಿಸರ್ಗದ ಮರ. ಅದರ ಮೇಲೆ ಬದಲಾವಣೆಯನ್ನು ಉಂಟುಮಾಡಿದ್ದು ಬಿರುಗಾಳಿ.ಮನೆ ಮತ್ತು ವಾಸ್ತವಗಳನ್ನು ಬೇರ್ಪಡಿಸುವುದು ಬಿರುಗಾಳಿ. ಬಿರುಗಾಳಿಯೇ ಬದಲಾವಣೆಯಲ್ಲ; ಬದಲಾವಣೆಯ ಪ್ರಚೋದಕ. ಮನೆ ಮತ್ತು ಮರ ಈ ವಾಸ್ತವಗಳ ಮಧ್ಯೆ ಸಿಕ್ಕು ಸಂಘರ್ಷಕ್ಕೆ ಈಡಾಗುವುದು ಮಾನವ. ಸಂಘರ್ಷವಾಗಲಿ, ಸ್ಥಿತ್ಯಂತರವಾಗಲೀ ಪರಿಣಾಮ ಬೀರುವುದು ವಾಸ್ತವದ ಮೇಲೆಯೇ. ಅಂಥ ವಾಸ್ತವದಲ್ಲಿ ನಡುವೆ ಮೂಡಿದ ಬಿರುಕು ಒಳಬಂದ ಬೆಳಕು ಎರಡೂ ಇಲ್ಲಿ ಬದಲಾವಣೆಯ ಮೂಲಕ ಕಿಡಿ ಹಚ್ಚುವಂಥವುಗಳು.

ಬದುಕಿನ ಸ್ಥಾವರ ಘಟಕಗಳನ್ನು ಪಲ್ಲಟಗೊಳಿಸುವ ಸಂದರ್ಭದಲ್ಲಿ ಹಲವಾರು ಗೊಂದಲಗಳು ಎದುರಾಗುತ್ತವೆ. ಈ ಗೊಂದಲಗಳು ಒಂದು ಸಂಸ್ಕೃತಿಯು ಪ್ರಥಮವಾಗಿ ಅಭಿವ್ಯಕ್ತಿ ಪಡೆಯುವ ಸಂದರ್ಭದಲ್ಲಿ ಅನಿವಾರ್ಯವಾದ್ದರಿಂದ, ಅದು ಖಚಿತವಾದ ಅರ್ಥದಲ್ಲಿ ದೋಷವಾಗುವುದಕ್ಕಿಂತ ಸಂಸ್ಕೃತಿಯನ್ನು ಅರ್ಥೈಸುವ ಆಶಯವಾಗಿ ಬದುಕಿನೊಡನೆ ಮುಖಾಮುಖಿಯಾಗುತ್ತದೆ.

## ೪.೯ ಪ್ರಾಚೀನತೆಯ ಪಳೆಯುಳಿಕೆಯಿಂದ ಹೊಸದಿಗಂತದತ್ತ

ಸಮಾಜವು ಒಳಗೊಂಡ ಗುಂಪು ಮತ್ತು ಆ ಗುಂಪು ನಡೆಸುವ ಎಲ್ಲಾ ರೀತಿಯ ಚಟುವಟಿಕೆಗಳು ಅಂದರೆ ಅದು ರಾಜಕೀಯವಾಗಿರಬಹುದು, ಧಾರ್ಮಿಕವಾಗಿರಬಹುದು, ಆರ್ಥಿಕವಾಗಿರಬಹುದು ಇಲ್ಲವೆ ಎಲ್ಲವನ್ನೂ ಒಳಗೊಂಡಿರಲೂಬಹುದು. ಬದುಕಿನ ಅವಗಡಗಳಿಗೆ ಕಾರ್ಯಕಾರಣ ಸಂಬಂಧವನ್ನು ಕಲ್ಪಿಸುತ್ತಾ ಸಮಾಕಾಲೀನ ಬದುಕಿನಲ್ಲಿ ಬೇರು ಬಿಟ್ಟಿರುವ ಹತ್ತು ಹಲವು ಸಂಗತಿಗಳನ್ನು ಒಂದೆಡೆ ಕೇಂದ್ರೀಕರಿಸಿದಾಗ ವಸ್ತುಸ್ಥಿತಿ ನೀಡುವ ಉತ್ತರವೇ ಪ್ರಮುಖವಾಗಿರುತ್ತದೆ. ಆ ವಸ್ತುಸ್ಥಿತಿಯೇ ಸಮಾಜದ ಪ್ರತಿಬಿಂಬವಾಗಿರುತ್ತದೆ. ಹೊಸ ಹೊಸ ಆವಿಷ್ಕಾರಗಳು, ತಂತ್ರಜ್ಞಾನದ ಪ್ರಗತಿ ಹೊಸ ಭಾಷೆ, ಹೊಸ ನೀತಿ, ಹೊಸದೃಷ್ಟಿಕೋನ ಎಲ್ಲಾ ಸಾಮಾಜಿಕ ಬದಲಾವಣೆಯನ್ನು ಮಾಡುತ್ತವೆ ಎಂಬುದು ನಿಜ. ಆದರೆ ಅದಕ್ಕಿಂತಲೂ ಹೆಚ್ಚಾಗಿ ಯಾವುದೇ ಸಿದ್ಧಾಂತಗಳಿಂದ ಆಗುವ ಬದಲಾವಣೆಗಿಂತ ಪ್ರಮುಖವಾಗಿ ಆಗಬೇಕಾದದ್ದು ವೈಯಕ್ತಿಕ ಬದಲಾವಣೆ. ಮನುಷ್ಯನ ಸಾಧ್ಯತೆ ಮತ್ತು ಆತನ ಕ್ರಿಯಾಶಕ್ತಿ ಏನೆಲ್ಲವನ್ನು ಸೃಷ್ಟಿಸಲೂಬಹುದು ನಾಶಪಡಿಸಲೂಬಹುದು. ಅದರಿಂದಾಗಿ ತಾನೇ ಸಾಮಾಜಿಕ ಚಿಂತಕನಾಗಿ, ದಿಕ್ಕೆಟ್ಟ ಸಮಾಜಕ್ಕೆ ಹೊಸ ದಿಕ್ಕನ್ನು ಹುಡುಕುವ ಮಾರ್ಗದರ್ಶಿಯಾಗಿ, ಸಮಾಜದ ಚಲನೆಗಳನ್ನು ದಾಖಲಿಸಬೇಕಾದ ಸಮಾಜ ವಿಜ್ಞಾನಿಯಾಗಿ ಕಾರ್ಯ ನಿರ್ವಹಿಸಬೇಕಾಗುತ್ತದೆ.

ಇಂದಿನ ಹೊಸವಸ್ತುವು ಮುಂದೆ ಹಳೆಯದಾಗುತ್ತದೆ. ಇದು ಕೇವಲ ವಸ್ತು ಪ್ರಪಂಚಕ್ಕೇ ಸೀಮಿತವಾದ ನಿಯಮವಲ್ಲ; ಸಕಲ ಸೃಷ್ಟಿಗೂ ಅನ್ವಯವಾಗುವಂತದ್ದು. ಇಂದು ಬರಲಿರುವ ಹೊಸತನವು ಅದರ ಆಗಮನದ ಕುತೂಹಲ, ಕೌತುಕವನ್ನೂ, ಬಂದ ನಂತರ ಅನುಭವವನ್ನೂ, ಅದು ನಿನ್ನೆಯಾದಾಗ ನೆನಪನ್ನೂ ನೀಡುತ್ತದೆ. ಈ ಇಂದು ನಿನ್ನೆಗಳ ಆಟದಲ್ಲಿ ಅದು ಪ್ರಾಚೀನವಾದಂತೆಲ್ಲಾ, ಅದರ ವರ್ತಮಾನ ಅತೀ ಕಡಿಮೆಯಾದಂತೆಯೂ ಅದರ ಬಗೆಗಿನ ಕುತೂಹಲ-ಚಿಂತನಕ್ರಮವೂ ಭಿನ್ನವಾಗುತ್ತದೆ. ಆ ವಸ್ತು ಇನ್ನೂ ಹಳೆಯದಾಗಿ ಅಸ್ತಿತ್ವದಲ್ಲಿದ್ದು ವರ್ತಮಾನದ ಜಗತ್ತಿಗೆ ತಿಳಿಯದಿದ್ದಾಗ ಅದರ ಬಗೆಗೆ ಕಟ್ಟು ಕಥೆಗಳೂ, ಊಹಾಪೋಹಗಳೂ, ನಂಬಿಕೆ ಅಪನಂಬಿಕೆಗಳೂ, ಸಿದ್ಧಮಾದರಿಯ ಉತ್ತರಗಳಾಗಿ ರೂಪಾಂತರಗೊಳ್ಳುತ್ತದೆ. ಅಂತಹ ಸಂದರ್ಭಗಳಲ್ಲಿ ಅದರ ಬಗೆಗೆ ಅನ್ವೇಷಣೆ, ಚರ್ಚೆಗಳು ಕೆಲವೊಮ್ಮೆ ನಡೆದರೆ ಮತ್ತೆ ಕೆಲವೊಮ್ಮೆ ಅದು ತ್ಯಕ್ತವಸ್ತುವಾಗುತ್ತದೆ. ಇಂತದ್ದೇ ವಸ್ತುವನ್ನೊಳಗೊಂಡ ತೇಜಸ್ವಿಯವರ ವಿಭಿನ್ನ ಕಾದಂಬರಿ ಕರ್ವಾಲೋ. ಸಾಂಸ್ಕೃತಿಕವಾಗಿ ಪಡೆದುಕೊಳ್ಳುವ ಮಹತ್ವ 'ಕರ್ವಾಲೋ' ಕೃತಿಯಲ್ಲಿ ಗೋಚರವಾಗುತ್ತದೆ. ಬದುಕಿಗೆ-ಅನ್ವೇಷಣೆಗೆ ಕೊನೆ ಎಂಬುದು ಅದರ ಜಾಡು ಹಿಡಿದು ಹೊರಡದೆ ನಿಂತು ಬಿಟ್ಟಾಗ. ಹಿಡಿದ ಗಮ್ಯ ಗೋಚರವಾಗದೆ ಹೋದರೂ ಅರಿವಿಗೆ ಇನ್ನೂ ನಿಲುಕದೆ ಇರುವ ಮತ್ತೊಂದು ಸತ್ಯಕ್ಕೆ, ನಿಗೂಢತೆಗೆ ಮುಖಾಮುಖಿಯಾಗುವುದು ಮುಂದುವರೆಯುತ್ತದೆ.

ದಿನನಿತ್ಯದ ಬದುಕು ಒಂದೇ ಮಗ್ಗುಲಿನೆಡೆಗೆ ತಿರುಗಿದ್ದರೆ ನಾವು ಹೇಳಿದ್ದೇ ತರ್ಕ ಮತ್ತು ವಾಸ್ತವ ಸತ್ಯ ಎಂಬ ಅರೆಬರೆ ತಿಳಿವಿನಿಂದಾಗಿ ಸಾಮಾಜಿಕ ಬದುಕಿನ ಪ್ರಕ್ರಿಯೆಗಳಲ್ಲಿ

ಹೊರಹೊಮ್ಮುವ ಸೂಕ್ಷ್ಮಗಳಿಗೆ ಪ್ರತಿಸ್ಪಂದಿಸುವ ಮನಸ್ಥಿತಿಯನ್ನು ಕಳೆದುಕೊಂಡುಬಿಟ್ಟಿದ್ದೇವೆ. ಆದ್ದರಿಂದಲೇ ಹಾರುವ ಓತಿಯ ಹುಡುಕಾಟಕ್ಕೆಂದು ಹೊರಡುವ ನಿರೂಪಕರು ಎಷ್ಟೊಂದನ್ನು ನಾವು ಕಣ್ಣಿಗೆ ಕಂಡೂ ನೋಡದೆ ಬಿಟ್ಟಿದ್ದೇವೆಯೋ ಏನೋ ಎನ್ನುವ ಮಾತನ್ನು ಇದಕ್ಕೆ ಪ್ರತಿರೋಧವಾಗಿ ಒಡ್ಡುತ್ತಾರೆ. ಸಾಮಾಜಿಕ ಸೂಕ್ಷ್ಮಗಳಲ್ಲಿ ತೊಡಸಿಕೊಳ್ಳುವ ವ್ಯಕ್ತಿಗೆ ಅಲ್ಲಿನ ಸಣ್ಣ ಸಣ್ಣ ವಿಷಯಗಳು, ಚರ್ಚೆಯ ವಿಚಾರ ವಿಮರ್ಶೆಯ ವಸ್ತುಗಳೂ ಕೂಡಾ; ಜೀವ ವಿಕಾಸದ ಅವಸ್ಥಾಂತರಗಳ ಶೋಧನೆಯಷ್ಟೇ ಮುಖ್ಯವಾದುದು. ಪ್ರಜ್ಞೆಯ ವಿಸ್ತಾರಕ್ಕೆ ಹೊಸತನ್ನು ಅನ್ವೇಷಿಸುವ ಸಂಭ್ರಮಕ್ಕೆ ಓತಿಯ ಹುಡುಕಾಟ ಪ್ರಧಾನವಾದರೂ ಜೀವನದ ಅರ್ಥಗಳ ಬೆಳವಣಿಗೆಯ ಸಾಧ್ಯತೆಗಳಿಗೆ, ಅದರಿಂದ ದೊರೆಯುವ ಜೀವನಾನುಭವಗಳಿಗೆ ಇವು ಕೂಡ ಪ್ರಮುಖ ಆಕರವಾಗುತ್ತವೆ. ಖ್ಯಾತ ವಿಜ್ಞಾನಿ ಕರ್ವಾಲೋರೊಂದಿಗೆ ಹಾರುವ ಓತಿಯ ಹುಡುಕಾಟದಲ್ಲಿ ತೊಡಗುವ ನಿರೂಪಕರು ಇಂತಹ ಜೀವನಾನುಭವಗಳಿಗೆ ಪಕ್ಕಾಗುತ್ತಾರೆ.

ಒಂದು ಅರ್ಥದಲ್ಲಿ ಈ ಹಾರುವ ಓತಿ ಇಡೀ ಕಾದಂಬರಿಯನ್ನು ಆವರಿಸಿ ಕುಳಿತಿದೆ. ಈ ಓತಿಯ ಹುಡುಕಾಟವೇ ಈ ಕಾದಂಬರಿಯಲ್ಲಿ ಪ್ರಸ್ತಾಪಗೊಳ್ಳುವ...ಕಥೆಯ ಹಂದರ, ಕರ್ವಾಲೋ ನೇತೃತ್ವದ ಇಡೀ ಗುಂಪು ಬೆನ್ನು ಹತ್ತಿರುವುದು ಈ ಓತಿಯನ್ನೇ.......... ಇದು ಪ್ರಾಚೀನತೆಯ ಪಳೆಯುಳಿಕೆ. ಕಾಲ ಪ್ರವಾಹದಲ್ಲಿ ಉಳಿದು ಬಂದ ಜೀವತಂತುವಿನ ಸಂಕೇತನವೂ ಹೌದು. ಹಲವು ರಹಸ್ಯಗಳ ಕೇಂದ್ರದಂತೆ, ವಿಜ್ಞಾನದ ಅನೇಕ ವರ್ಷಗಳ ಸಾಧನೆಯನ್ನು ತಟಕ್ಕನೆ ಏರುಪೇರು ಮಾಡಬಲ್ಲ ಶಕ್ತಿಯನ್ನು ರಹಸ್ಯಗಳನ್ನು ಸಂಗತಿಗಳನ್ನು ಪಡೆದುಕೊಂಡಿರುವ ಜೀವಚರ. ಇದು ನಮ್ಮ ಪ್ರಜ್ಞೆ; ನಮ್ಮ ಕುತೂಹಲ; ನಮ್ಮ ದಿಗ್ಭಮೆಯೂ ಹೌದು; ನಮ್ಮ ತಿಳಿವಳಿಕೆಯ ದಿಕ್ಸೂಚಿಯೂ ಹೌದು. ನಮ್ಮನ್ನು ಒಂದೇ ಜಿಗಿತಕ್ಕೆ ಕೋಟ್ಯಂತರ ವರ್ಷಗಳ ಹಿಂದಕ್ಕೆ ಒಯ್ಯುವ ಸಾಧನವೂ ಹೌದು. ಜೀವ ವಿಕಾಸದ ಹಾದಿಯಲ್ಲಿನ ಅನೇಕ ಸಂಗತಿಗಳನ್ನು ಬಿಚ್ಚುವ ಕಾಲಕೋಶವೂ ಹೌದು. ಅದು ನಮ್ಮ ವಿಜ್ಞಾನ; ನಮ್ಮ ಅಧ್ಯಾತ್ಮ ಕೂಡಾ. ಕುತೂಹಲವಾಗಿ ಕಾಣಿಸಿಕೊಂಡು ಬಿಡಿಸಲಾಗದ ನಿಗೂಢವಾಗಿ ಸಂಕೇತವಾಗುತ್ತ ಪ್ರತಿಮೆಯಾಗುತ್ತ ನಮ್ಮ ಪ್ರಜ್ಞೆಯೇ ಆಗುತ್ತ ನಮ್ಮ ವ್ಯಕ್ತಿತ್ವವನ್ನೇ ಆವರಿಸಿಬಿಡುವ, ನಿಯಂತ್ರಿಸಿಬಿಡುವ ಈ ಹಾರುವ ಓತಿ ಯಾವುದು ಹೌದು. ಯಾವುದು ಅಲ್ಲ ಎಂಬ ಸಂದಿಗ್ಧಕ್ಕೆ ನಮ್ಮನ್ನು ತಳ್ಳಿ, ಸಹ್ಯಾದ್ರಿಯ ಕೊಟ್ಟ ಕೊನೆಯ ಅಂಚಿನಿಂದ ಪ್ರಪಾತದ ಕಡೆಗೆ ಕುಪ್ಪಳಿಸಿ ನೀಲಿಯ ಅಸ್ಪಷ್ಟ ಶೂನ್ಯದಲ್ಲಿ ಲೀನವಾಗಿಬಿಡುತ್ತದೆ.[೯] ಆ ಶೂನ್ಯತೆ ಅಲ್ಲಿರುವವರನ್ನು ವ್ಯಾಪಿಸಿಕೊಳ್ಳದೆ ಹೊಸ ಸಂಶೋಧನೆಗೆ ಪ್ರೇರಣೆಯಾಗುತ್ತದೆ.

ಹಾರುವ ಓತಿಯ ಅನ್ವೇಷಣೆಯೊಂದಿಗೆ ವಿಸ್ತರಣಗೊಳ್ಳುವ ಕಥನ ಜೀವ ವಿಕಾಸದ ಅವಸ್ಥಾಂತರಗಳನ್ನು ಶೋಧಿಸುತ್ತ ವಿವಿಧ ಜೀವ ಸಂಕುಲಗಳ ವಿನಾಶ ಮತ್ತು ಅವುಗಳನ್ನು ತನ್ನ ಹಿಡಿತದಲ್ಲಿಟ್ಟುಕೊಳ್ಳುವ ಆಕಾಂಕ್ಷೆಯಿಂದ ಬೆನ್ನುಹತ್ತುವ ಮಾನವನ ಸೋಲಿನ ಉಪಕ್ರಮವನ್ನು ಎಳೆ ಎಳೆಯಾಗಿ ಚಿತ್ರಿಸುತ್ತದೆ. ಪ್ರಕೃತಿ ಮತ್ತು ಮಾನವನ ಸಂಘರ್ಷದ ಧಾತುಗಳಲ್ಲಿ ಮುಖಾಮುಖಿಯಾಗುವ ಹಲವು ವೈರುಧ್ಯಗಳು ಮಾನವಾತೀತ ನೆಲೆಯಲ್ಲಿ ಬೌದ್ಧಿಕ ಗ್ರಹಿಕೆಗಳನ್ನು ಹೆಚ್ಚು ಹೆಚ್ಚು ಆಳವಾಗಿ ಕಾಡುತ್ತದೆ ಮತ್ತು ತರ್ಕಾತೀತವಾದ ಮೀಮಾಂಸೆಯಲ್ಲಿ ಪರ್ಯಾವಸಾನಗೊಳ್ಳುತ್ತದೆ.

ಪ್ರತಿಷ್ಠಿತ ಸಮಾಜದಿಂದ ತುಚ್ಛವೆಂದು ಕಡೆಗಣಿಸಲ್ಪಡುವ ಪುಂಗಿ ಎಂಗ್ಟ, ಮಂದಣ್ಣ, ಕರಿಯಣ್ಣನಂತಹ ಅನೇಕ ವ್ಯಕ್ತಿಗಳು ಇಲ್ಲಿ ಪ್ರಧಾನಪಾತ್ರಗಳಾಗಿವೆ. ಸಹಜವಾಗಿ ಇವರು ದುರ್ಬಲರಂತೆ ಕಂಡುಬಂದರೂ ಅಸಾಧಾರಣ ಶಕ್ತಿಯನ್ನೂ, ಜಾಣ್ಮೆಯನ್ನು ಹೊಂದಿದವರು. ಇವರುಗಳ ಚಿತ್ರಣದೊಂದಿಗೆ ತೆರೆದುಕೊಳ್ಳುವ ಪ್ರಾಕೃತಿಕ ಲೋಕ ವಿಭಿನ್ನವಾದ ಜಗತ್ತನ್ನು ಪರಿಚಯಿಸುತ್ತದೆ. ನಿರೂಪಕರ ಅನುಭವದ ದೃಷ್ಟಿಯಿಂದಲೂ, ವಸ್ತುವಿನ ದೃಷ್ಟಿಯಿಂದಲೂ ಇಲ್ಲಿನ ದಟ್ಟವಾದ ವಿವರಗಳು ಪ್ರಕೃತಿಯ ಜೊತೆಗೆ ಓದುಗರಿಗೂ ಅವಿನಾಭಾವ ಸಂಬಂಧವನ್ನು ಉಂಟುಮಾಡುತ್ತವೆ. ಒಟ್ಟಿನಲ್ಲಿ ಕಾಲನ ಪ್ರಜ್ಞೆಯೊಳಗೆ ಕಳೆದು ಹೋಗಿರುವ ಮನುಷ್ಯ ಖಗ, ಮೃಗ, ಕೀಟ, ಜೀವ–ಜಂತು ಮರಗಿಡಗಳಿಗೆಲ್ಲಾ ಈ ವಿಶ್ವದಲ್ಲಿ ಅಧಿಕಾರವಿದೆ ಎಂಬ ಸಮಾನ ತತ್ವವನ್ನು ಅರಿತು ಅಳವಡಿಸಿಕೊಂಡು, ಅರ್ಥಪೂರ್ಣವಾಗಿ ಸ್ಪಂದಿಸಬೇಕಾದ ಮಹತ್ವವನ್ನು ಈ ಕತೆಯು ಸಾದರಗೊಳಿಸುತ್ತದೆ. ಸಂಘ ಜೀವಿಯಾದ ಮನುಷ್ಯ ಪ್ರಕೃತಿಯೊಡನೆ ತನ್ನ ಬದುಕಿನ ಅರ್ಥವನ್ನು ಕಂಡುಕೊಳ್ಳಬೇಕಾದದ್ದು ಮಹತ್ವಪೂರ್ಣವೆನಿಸುತ್ತದೆ.

ವ್ಯಕ್ತಿಯ ಆಲೋಚನೆಗಳು ಏಕಮುಖವಾಗಿದ್ದು ಜೀವನವನ್ನು ನೋಡುವ ದೃಷ್ಟಿಕೋನ ಸತ್ಯಕ್ಕೆ ದೂರವಾಗಿರುತ್ತದೆ. ಸತ್ಯ ಯಾವುದೇ ಒಂದು ನಿರ್ದಿಷ್ಟ ಆಕಾರಕ್ಕೆ ಬಂಧಿಯಾದುದಲ್ಲ. ಅದು ನೋಡುವ ನೋಟಕ್ಕೆ ತಕ್ಕಂತೆ ರೂಪುಗೊಳ್ಳುತ್ತದೆ. ಅಂದಾಗ ಸತ್ಯ ಏಕಮುಖವಾದುದಲ್ಲ ಬಹುಮುಖವನ್ನು ಒಳಗೊಂಡದ್ದು ಎಂಬ ಅರಿವು ಸಾಮಾಜಿಕನಲ್ಲಿ ಉದ್ಭವಿಸಿದಾಗ ಆತನ ಅನ್ವೇಷಣೆಯ ನೋಟವೂ ಬದಲಾಗುತ್ತದೆ ಮತ್ತು ಬದುಕಿನ ಅರ್ಥವೂ ಬದಲಾಗುತ್ತದೆ. ವ್ಯಕ್ತಿತ್ವ ವಿಕಾಸವೇ ತೇಜಸ್ವಿ ಕಥನಗಳ ಬಹುಮುಖ್ಯ ಮೌಲ್ಯ. ನಮ್ಮ ಸಮಾಜದಲ್ಲಿ ಅಲ್ಪಸ್ವಲ್ಪ ಬದಲಾವಣೆಯಾಗುವುದಿದ್ದರೂ ಅದು ವ್ಯಕ್ತಿಗಳು ಬದಲಾಗುವುದರಿಂದ ಆಗುತ್ತದೆಯೋ ಹೊರತು ವ್ಯವಸ್ಥೆಯೇ ಬದಲಾಗುವುದರಿಂದ ಅಲ್ಲ. ವ್ಯವಸ್ಥೆಯನ್ನು ಮೀರಬಲ್ಲ ಸಾಧ್ಯತೆಯುಳ್ಳ ವ್ಯಕ್ತಿತ್ವಗಳು ಇದ್ದೇ ಇರುತ್ತವೆ. ಹೊಸ ಸೀಮೆಯನ್ನು ಶೋಧಿಸಬಲ್ಲ, ಕನಸುಗಳನ್ನು ಕಾಣಬಲ್ಲ, ಅದನ್ನು ಕ್ರಿಯೆಯಲ್ಲಿ ಹರಳುಗೊಳಿಸಬಲ್ಲ ಶಕ್ತಿಯನ್ನು ಮನುಷ್ಯರು ತಮ್ಮ ಮನಸ್ಸನ್ನು ಪಕ್ವಗೊಳಿಸುವುದರ ಮೂಲಕ ಪಡೆಯುತ್ತಾರೆ. ಈ ಅಂಶಗಳೆಲ್ಲಾ ತುಂಬಾ ಪ್ರಭಾವಶಾಲಿಯಾಗಿ 'ಕರ್ವಾಲೋ' ಕಾದಂಬರಿಯಲ್ಲಿ ವ್ಯಕ್ತವಾಗಿದೆ.

ಗ್ರಾಮೀಣ ಬದುಕಿನಲ್ಲಿರುವ ವಾಸ್ತವಾಂಶಗಳು ತೇಜಸ್ವಿ ಕಥನಗಳಲ್ಲಿ ಕಳೆಗಟ್ಟುತ್ತವೆ. ಮಲೆನಾಡಿನ ಜನಜೀವನದ ಚಿತ್ರಣ ದಟ್ಟವಾಗಿ ತೀವ್ರವಾಗಿ ಅರಳಿದ್ದು ಬದುಕಿನ ವಿವಿಧ ಅನುಭವಗಳನ್ನು ಸಂಕೀರ್ಣತೆಯ ರೂಪದಲ್ಲಿ ತೆರೆದಿಡುತ್ತದೆ. ಆರ್ಥಿಕ ಅಸಮಾನತೆ, ಸಾಮಾಜಿಕ ಅಸಮಾನತೆ, ಬೌದ್ಧಿಕ–ಭೌತಿಕ ಅಸಮಾನತೆಯ ನಡುವೆಯೂ ಮನುಷ್ಯ ಮತ್ತು ಪರಿಸರ ಸಂಬಂಧಗಳ ಮೂಲಕ ನಿಜವಾದ ಸಾಮಾಜಿಕ ಮಾನವನ ಹುಡುಕಾಟವಿದೆ, [ಸಾಮಾನ್ಯ ಕಥೆ ಕಾದಂಬರಿಗಳಲ್ಲಿರುವಂತೆ ಏಕರೀತಿಯ ಚಿತ್ರಣ ಇರದೆ ಸಂಕೀರ್ಣ ಅನುಭವಗಳ ಹಿನ್ನೆಲೆಯಲ್ಲೇ ತೆರೆದುಕೊಂಡ ಸಾಹಿತ್ಯ ಓದುಗನ ಅನುಭವವನ್ನು ತೀವ್ರಗೊಳಿಸುತ್ತದೆ] ಈ ಹುಡುಕಾಟದಲ್ಲಿ ಸಾಮಾಜಿಕ ಮಾನವನ ವಿವಿಧ ಚಹರೆಗಳು ಕಾಣಸಿಗುತ್ತವೆ. ಗ್ರಾಮೀಣ ಪರಿಸರದ ಜನಸಾಮಾನ್ಯನ ಜೀವನಕ್ರಮದ ವಿಶ್ಲೇಷಣೆ ಒಂದು ರೀತಿಯಲ್ಲಿ ಹಿಂದೂ ಸಂಸ್ಕೃತಿಯ ಸಫಲತೆ ವಿಫಲತೆಗಳ ವಿಶ್ಲೇಷಣೆಯಾಗುತ್ತದೆ. ಹೊಸದಿಗಂತದೆಡೆಗೆ ಹೊರಳಿದ ಅಬಚೂರಿನ ಪೋಸ್ಟಾಫೀಸಿನಿಂದ–ಮಾಯಾಲೋಕದವರೆಗಿನ ಜೀವನಗಾಥೆಯಲ್ಲಿ ಗ್ರಾಮೀಣ ಮನಸ್ಸುಗಳ

ತುಡಿತ ಹೃದಯ ವೈಶಾಲ್ಯತೆ, ಕಟ್ಟುವಿಕೆಯ ಬಂಧ ಏಕರೀತಿಯಲ್ಲಿದ್ದರೂ ಅಲ್ಲಿಂದ ಹೊರಡುವ ತಾತ್ವಿಕ–ಸಾಂಸ್ಕೃತಿಕ ಅರ್ಥ ಮಾತ್ರ ಒಂದರಿಂದ ಮತ್ತೊಂದು ಕೃತಿಯಲ್ಲಿ ಹಿರಿದಾಗುತ್ತಾ ಸಾಗಿದೆ. ಸಾಮಾಜಿಕ ಪರಿಸರದಲ್ಲಿ ಗ್ರಾಮೀಣ ಮನಸ್ಸುಗಳು ತಮ್ಮ ಬದುಕನ್ನು ಸಮಗ್ರತೆಯೊಂದಿಗೆ ಕಟ್ಟಿಕೊಳ್ಳಲು ಪ್ರಯತ್ನಿಸುತ್ತಿರುವುದನ್ನು ಕ್ರಮೇಣವಾಗಿ ಪರಸ್ಪರ ಅವಲಂಬನೆಗೆ ಪಕ್ಕಾಗುವ ವಸ್ತುಸ್ಥಿತಿಯನ್ನು ಅವಗತಮಾಡಿಸುತ್ತದೆ.

## ೪.೧೦ ಪರಿಧಿಯಿಂದ ಕೇಂದ್ರದೆಡೆಗೆ ನಿಷ್ಕ್ರಮಣ

ಜೀವಿಗಳಲ್ಲಿಯೇ ಬುದ್ಧಿಜೀವಿಗಳಾದ ಮಾನವರು ಇರುವಷ್ಟರಲ್ಲಿಯೇ ಬದುಕದೇ ಕೇಂದ್ರವಾಗಿರುವ ಜೀವನದಿಂದ, ಜೀವನದ ಪರಿಧಿಯವರೆಗೂ ತಮ್ಮ ಅಸ್ತಿತ್ವವನ್ನು ನೋಡಬಯಸುತ್ತಾರೆ. ಇದು ಭೌತಿಕವಾಗಿರಬಹುದು, ಬೌದ್ಧಿಕವಾಗಿರಬಹುದು ಅಥವಾ ತಾತ್ವಿಕವಾಗಿಯಾದರೂ ಇರಬಹುದು. ಇರುವ ಸೀಮಿತತೆಯನ್ನು ದಾಟುವುದನ್ನು ಮಾನವರು ಹಂಬಲಿಸುತ್ತಾರಾದರೂ, ಪರಿಧಿಯನ್ನು ದಾಟಿದ ನಂತರದ ಅರಿವು ತಮ್ಮ ಹಾಗೂ ತಮ್ಮತನದಿಂದ ಅತಿಯಾಗಿ ದೂರವಾಗಿರುತ್ತದೆ. ಆಗ ಮತ್ತೆ ಮೊದಲಿನಂತೆಯೇ ಕೇಂದ್ರದೆಡೆಗೆ ಬರಲು ಹಂಬಲಿಸುತ್ತಾರೆ. ಇನ್ನೊಂದರ್ಥದಲ್ಲಿ ಕೇಂದ್ರವೆನ್ನುವುದು ಒಂದು ವ್ಯಕ್ತಿಗೆ ಸಂಬಂಧಿಸದೇ ವಿಭಿನ್ನ ಆಯಾಮಗಳು ಎಂದಾಗುತ್ತದೆ. ಹೀಗೆ ವ್ಯಕ್ತಿಕೇಂದ್ರಿತ, ಜೀವನ ಕೇಂದ್ರಿತ, ಸಮಾಜಕೇಂದ್ರಿತ ಪರಿಸರಕೇಂದ್ರಿತ ನಿಲುವುಗಳು ಉಂಟಾಗುತ್ತವೆ. ಇಲ್ಲಿಯೂ ವಿಸ್ತೃತ ಪರಿಧಿಯಿಂದ, ವಿಶಾಲ ವಿಷಯಗಳಿಂದ ಇಂತಹ ಕೇಂದ್ರಾಭಿಮುಖಿಗಳಾಗಿ ಮಾನವರು ಶ್ರಮಿಸುತ್ತಾರೆ. ಇಂತಹುದೇ ಧೋರಣೆಗಳನ್ನು ಹೊಂದಿರುವ ಕೃತಿ ಮಾಯಾಲೋಕ. ಇಲ್ಲಿ ಪರಿಸರಕೇಂದ್ರಿತ, ವ್ಯಕ್ತಿಕೇಂದ್ರಿತ, ಜೀವನಕೇಂದ್ರಿತ, ಸಮಾಜಕೇಂದ್ರಿತ ಘಟನೆಗಳ ಚಿತ್ರಣವಿದ್ದು, ಬೇರೆ ಬೇರೆ ಮುಖಾಮುಖಿಗಳಲ್ಲಿ ಬೇರೆ ಬೇರೆ ಅರ್ಥಗಳು ಸ್ಫುರಣೆಯಾದರೂ ಒಂದೇ ಕೇಂದ್ರಕ್ಕೆ ಬಂಧಿಯಾಗಿ ಜೀವನಾನುಭವಗಳ ರಹಸ್ಯ ಶೋಧದ ಕೊನೆಯಿಲ್ಲದ ಹುಡುಕಾಟವನ್ನು ಈ ಕಾದಂಬರಿ ಧ್ವನಿಸುತ್ತದೆ. ಉಳಿದ ವಿಭಿನ್ನ ಆಯಾಮಗಳಿಂದ ನಿರೂಪಕರಾದಿಯಾಗಿ ಎಲ್ಲರೂ ಇಂತಹ ಕೇಂದ್ರಗಳಿಗೆ ಅಭಿಮುಖವಾಗಿ ಬರುತ್ತಾರೆ.

**ಮಾಯಾಲೋಕ**ದ ವಿನ್ಯಾಸ, ವಿಸ್ತಾರ, ಹರವೂ ಕೂಡಾ ಮಾಯಾಲೋಕದ ಅಗತ್ಯ ಅನಿವಾರ್ಯ ಸ್ಥಿತಿಯೇ ಎನ್ನಿಸುತ್ತದೆ. ಮೊದಲ ಓದಿನಲ್ಲಿ ಕೇವಲ ಮಾಯಾಲೋಕವಾಗಿ ಉಳಿಯುವ ಕಾದಂಬರಿಯು ಅದನ್ನು ಅರ್ಥೈಸಿಕೊಳ್ಳುವತ್ತ ಓದುಗರನ್ನು ಸೆಳೆಯುತ್ತದೆ. ಈ ಕಥನಲ್ಲಿನ ಪ್ರತಿಯೊಂದು ಸನ್ನಿವೇಶವೂ ಮಾನವರ ಇಛ್ಛಾಶಕ್ತಿ ಮತ್ತು ಕ್ರಿಯಾಶಕ್ತಿಯೆಡೆಗೆ ಬೆರಳು ತೋರಿಸಿ ವಾಸ್ತವವನ್ನು ತೆರೆದಿಡುತ್ತದೆ. ಇದು ಸಹಜವೆನಿಸಿದರೂ ಇತರ ಕೃತಿಗಳಿಗಿಂತ ಭಿನ್ನವಾಗಿ ಪ್ರತ್ಯೇಕವಾಗಿ ಈ ಕಥನವು ನಿಲ್ಲುತ್ತದೆ. ತೇಜಸ್ವಿಯವರ ಗ್ರಹಣ ಶಕ್ತಿ ಮತ್ತು ಸೂಕ್ಷ್ಮ ಪ್ರಜ್ಞೆಯ ಸ್ಥಿತ್ಯಂತರವು ಅದರ ಬೌದ್ಧಿಕ ಹಾಗೂ ಸೃಜನಾತ್ಮಕ ಸ್ಥಿತ್ಯಂತರಗಳಿಗೆ ಪರೋಕ್ಷ ಕಾರಣವೆಂದೇನೂ ಹೇಳಬೇಕಾಗಿಲ್ಲ. ಕಾಲದಿಂದ ಕಾಲಕ್ಕೆ, ಕಥೆಯಿಂದ ಕಥೆಗೆ ತೇಜಸ್ವಿ ವಿಚಾರಲಹರಿಗಳು ಭಿನ್ನವಾದಂತೆ ಇನ್ನು ಕೆಲವು ಸಾಮ್ಯತೆಗಳೂ ಇವೆ. ಅವುಗಳಲ್ಲಿ ಒಂದು ಅವರ ಅನೇಕ ಕಥೆಗಳು ಮತ್ತು ಇತರ ಘಟನೆಗಳು ಮೂಡಿಗೆರೆ ಮತ್ತು ಅದರ ಸುತ್ತಮುತ್ತಲಿನ ಪರಿಸರದಲ್ಲಿ ಚಿತ್ರಿತಗೊಂಡಿರುವುದು. ಹೆಸರಿನ ಸಾಮ್ಯತೆಗಳು ಸೋಮ, ಲಿಂಗ ಇತ್ಯಾದಿ. ಬದಲಾದ ಕಾಲ ಮತ್ತು ಬದಲಾಗದ ಶ್ರೀ ಸಾಮಾನ್ಯನ ನಡುವಿನ ಅಂತರ ಮತ್ತು ಸೂಕ್ಷ್ಮತೆಗಳನ್ನು ಅರ್ಥೈಸಿಕೊಂಡು ಅವುಗಳನ್ನು ಏಕತ್ರ ಕೇಂದ್ರೀಕರಿಸುವುದು ತೇಜಸ್ವಿಯವರ ಬೌದ್ಧಿಕ 'ಸ್ಥಿತಿ' ಅಥವಾ 'ಇರುವಿಕೆ'ಯ 'ಅರಿಯುವಿಕೆ'ಯನ್ನೂ ಸೂಚಿಸುತ್ತದೆ. ಸಮಕಾಲೀನ ಸಾಹಿತಿಗಳಿಗೆ ಹೋಲಿಸಿದಾಗ ಇವರ ವಿಭಿನ್ನತೆಗೆ ವೈಶಿಷ್ಟ್ಯದ ಗರಿ ಮೂಡುತ್ತದೆ. ಅಂತೆಯೇ ಮಾಯಾಲೋಕದ ರಚನಾವಿನ್ಯಾಸ ಹಾಗು ಅದನ್ನು ಹೆಣೆದಿರುವ ತಂತ್ರಗಾರಿಕೆಯನ್ನು ನೋಡಿದಾಗ ಇದು ಅವರ ಕೃತಿಗಳ ವಿಭಿನ್ನ ಪ್ರಯತ್ನವೂ, ಸೃಜನಶೀಲತೆಗೆ ಶಿರೋಮಣಿಪ್ರಾಯದದ್ದೂ ಆಗಿದೆ.

ಮಾಯಾಲೋಕ ಸ್ಥಿತ್ಯಂತರದ ವಿವಿಧ ಆಯಾಮಗಳನ್ನು ತನ್ನೊಳಗೆ ಅಡಗಿಸಿಟ್ಟುಕೊಂಡು ಕಾಲಾಂತರದಲ್ಲಿ ಇತಿಹಾಸದ ಪುಟಗಳಲ್ಲಿ ಸೇರಿಹೋಗುವ ಅದೃಶ್ಯ ಶಕ್ತಿಯಾಗಿದೆ.

ಇದರಲ್ಲಿ ಬರುವ ಅಸಂಖ್ಯಾತ ಹುಂಡುಕೋಳಿಗಳು ಮತ್ತು ಅವುಗಳ ನಾಶ ಹಾಗೂ ಅವು ಮತ್ತೆ ಎಂದೆಂದಿಗೂ ಮರಳದ ಚಿತ್ರಣ ಪರಿಸರದ ಅತೀ ದೊಡ್ಡ ದುರಂತ ಹಾಗೂ ಸ್ಥಿತ್ಯಂತರಕ್ಕೆ ಸಾಕ್ಷಿಯಾಗಿದೆ. ಪರಿಸರದ ಸಮತೋಲನ ಕಾಪಾಡುವಲ್ಲಿ ಪ್ರತಿಯೊಂದೂ ಪ್ರಾಣಿಯದ್ದೂ ಮಹತ್ವದ ಪಾತ್ರ ಇದ್ದೇ ಇರುತ್ತದೆ ಎಂಬುದನ್ನು ಸೂಚಿಸುವುದಲ್ಲದೆ ಅವುಗಳನ್ನು ಉಳಿಸಬೇಕಾದ ಅನಿವಾರ್ಯತೆಯನ್ನು ಕಥನ ಪುಷ್ಟೀಕರಿಸುತ್ತದೆ. ಬೋಧನೆಗಿಂತ ಮುಖ್ಯವಾಗಿ ತಮ್ಮ ತೋಟದಲ್ಲಿ ಓಡಾಡಿಕೊಂಡಿದ್ದ ಅವುಗಳನ್ನು ಹಿಡಿಯದೇ ಅವುಗಳ ಉಳಿಯುವಿಕೆಗೆ ನಿರೂಪಕರು ಪ್ರಯತ್ನಿಸಿರುವುದು ಇತರರಿಗೆ ಕಾರ್ಯಸೂಚಿಯಾಗಿದೆ. ಮಾನವ ಹೊಟ್ಟೆಪಾಡಿಗಾಗಿ ಮಾಡುವ ಕೆಲವೊಂದು ವೃತ್ತಿ ಪರಿಸರದ ಮೇಲೆ ಅಗಾಧ ಪರಿಣಾಮ ಬೀರುತಿದ್ದುದನ್ನು ತಿಳಿದೋ ತಿಳಿಯದೆಯೋ ಅತ್ತಲೇ ಹೆಜ್ಜೆ ಹಾಕುತ್ತಿರುವುದು ಸಮಾಜ ವಿನಾಶಕಾರಿಯಾಗಿ ಪಲ್ಲಟಗೊಳ್ಳುತ್ತಿರುವುಕ್ಕೆ ನಿದರ್ಶನವಾಗಿದೆ. ತನಗೆ ತಾನೇ ಮುಳ್ಳಾಗಿ ಮಾರ್ಪಡುತ್ತಿರುವುದು ಅವನತಿಯತ್ತ ಮುಖಮಾಡಿದ ಸಾಮಾಜಿಕ ಸ್ಥಿತ್ಯಂತರದ ಸೂಚನೆಯಾಗಿದೆ. ಇಲ್ಲಿ ಹುಂಡುಕೋಳಿಗಳು ಇದ್ದವು ಎಂಬುದು ಸ್ಥಿತಿಯಾದರೆ ಅವುಗಳ ನಾಶ ವಿನಾಶಕಾರಿ ಸ್ಥಿತ್ಯಂತರವೇ ಆಗಿದೆ.

ಇದನ್ನುಳಿದು ಬೇಸಿಗೆ ಹಾಗೂ ಬರ ಇವುಗಳ ಮಧ್ಯದಲ್ಲಿ ಬೆಳೆದಿರುವ ಪ್ರಾಕೃತಿಕ ವಸ್ತುಗಳ ನಾಮಾವಶೇಷ ಇದೂ ಕೂಡಾ ಅಧೋಮುಖ ಪ್ರಗತಿಯತ್ತ ದೃಷ್ಟಿನೆಟ್ಟ ಸ್ಥಿತ್ಯಂತರಗಳೇ ಆಗಿದೆ. ಬಯಲುಸೀಮೆಯಲ್ಲಿ ಮಳೆಯಾಗದೆ ಇದ್ದುದರಿಂದ ಮಾನವರು ಬಯಲುಸೀಮೆಯ ಬರದ ಬೇಗೆಯಲ್ಲಿ ಬೆಂದು, ಉರಿಯುವ ಮೊದಲು ಹೊಟ್ಟೆಪಾಡಿಗೆ ಕೆಲಸಹುಡುಕಿ ಹೊರಡುವುದು ಮಲೆನಾಡಿಗೆ: ಮಲೆನಾಡಿನ ಗದ್ದೆಗಳಲ್ಲಿ ಬೆಳೆದ ಜೊಂಡನ್ನು ಕೊಯ್ದು ಚಾಪೆ ಮಾಡುವ ವ್ಯಕ್ತಿಗಳ ಚಿತ್ರಣದ ಜೊತೆಗೆ ಜೊಂಡಿನ ಆಶ್ರಯ ಪಡೆಯುವ ಹುಂಡುಕೋಳಿಗಳ ದಾರುಣ ಹತ್ಯೆ, ಇವು ಪರಿಸರ ಪ್ರಜ್ಞೆಯ ಜೊತೆಜೊತೆಯಲ್ಲಿ ಮಾನವೀಯತೆಯಂಬ ಛತ್ರಿಯ ಅಡಿಯಲ್ಲಿ ನೆರಳು ಪಡೆಯುವ ವರ್ಗದ ಚಿತ್ರಣವಿದೆ. ಮಾನವೀಯತೆ ಹಾಗೂ ಪರಿಸರ ಪ್ರಜ್ಞೆಗಳ ನಡುವಿನ ಸಂಘರ್ಷ ಒಂದೆಡೆಯಾದರೆ ಬಯಲುಸೀಮೆಯ ಸುಡುವಬಿಸಿಲು ಹಾಗೂ ಆ ಬೇಗೆಯಲ್ಲಿ ಬೇಯುವ ಮಾನವರ ನಡುವಿನ ಸಂಘರ್ಷ ಮತ್ತೊಂದೆಡೆಗೆ, ಅದರ ಪರಿಣಾಮ ರೂಪದಲ್ಲಿ ತಲೆಯೆತ್ತುವ ಸ್ಥಿತ್ಯಂತರವೂ ಕೂಡಾ ಬೆನ್ನಹಿಂದೆ ತನ್ನ ಬೆಂಬಲಕ್ಕಾಗಿ ಮಾನವೀಯತೆಯನ್ನು ಇಟ್ಟುಕೊಂಡೇ ಇರುವುದಾಗಿದೆ.

ಲೇಖಕರೇ ಹೇಳುವಂತೆ ಹಕ್ಕಿಪಿಕ್ಕಿಯವರ ವಿಚಾರದಲ್ಲಿ "ಅವರ ದೈನ್ಯಾವಸ್ಥೆ, ಕೃಶಶರೀರ, ಹರಕಲು ಬಟ್ಟೆ....... ಸಂಪೂರ್ಣ ಇಳಿದುಹೋಯ್ತು.'[20] ಪರಿಸರದಲ್ಲಿನ ಪ್ರಾಕೃತಿಕ ಸ್ಥಿತ್ಯಂತರದ ಅವಗಡಗಳೂ ಮನುಷ್ಯನ ಜೀವನದ ಮೇಲೆ ಎಂಥ ಗಾಢ ಪರಿಣಾಮವನ್ನು ಉಂಟು ಮಾಡುತ್ತವೆ ಎಂಬುದನ್ನು ಗ್ರಹಿಸುವುದರ ಜೊತೆಗೆ ಸೂಕ್ಷ್ಮವಾದ ಅಂಶವನ್ನೂ, ಸಾಮ್ಯತೆ ಹೋಲಿಕೆಗಳನ್ನೂ ಕಾಣಬಹುದು. ಅದೇನೆಂದರೆ ಮನುಷ್ಯರು ಕಾಲದಿಂದ ಕಾಲಕ್ಕೆ ಸನ್ನಿವೇಶಗಳಿಗೆ ಅನುಗುಣವಾಗಿ ಅತಿರೇಕವೋ ಒಟ್ಟೂ ತಮ್ಮತನಕ್ಕಾಗಿ, ಜೀವನಕ್ಕಾಗಿ ಕೆಲವು ತತ್ವ ಸಿದ್ಧಾಂತಗಳನ್ನು

ಬದಲಿಸಿಕೊಂಡರೂ, ಕೆಲವು ವಿಚಾರಗಳಲ್ಲಿ ಬದಲಾದರೂ ಭಾವನಾತ್ಮಕವಾಗಿ ಅವರು ಹೆಚ್ಚಿಗೆ ಸ್ಥಿತ್ಯಂತರಗೊಂಡಿರಲಾರರು ಅಥವಾ ಒತ್ತಯಪೂರ್ವಕವಾಗಿ ಹೇರಿಕೊಂಡಿರಲಾರರು. ಆ ಭಾವನೆ ಸ್ವಭಾವ ಸಿದ್ಧವಾದುದು. ಹಾಗಾಗಿ ಮನಷ್ಯರೆಷ್ಟೇ ಸ್ಥಿತ್ಯಂತರಗೊಂಡರೂ ಅವರಲ್ಲಿ ಅಡಗಿರುವ ಮೂಲಪ್ರಕೃತಿಯ ಅನೇಕಾನೇಕ ಗುಣಗಳಲ್ಲಿ ಸಾಮ್ಯತೆಯನ್ನು ಕಾಣುತ್ತೇವೆ. ಇದಕ್ಕೆ ದೃಷ್ಟಾಂತವೆಂಬಂತೆ ನಿಗೂಢ ಮನುಷ್ಯರು ಮತ್ತು ಮಾಯಾಲೋಕದಲ್ಲಿನ ಕೆಲವು ಘಟನೆಗಳು ನಿಗೂಢ ಮನುಷ್ಯರಲ್ಲಿನ ಮೂರುದಿನಗಳ ಮಳೆ ಹಾಗೂ ಮಾಯಾಲೋಕದಲ್ಲಿನ ರುದ್ರಮಳೆ, ಗಾಳಿ, ಹಾಗೂ ಸ್ವರೂಪದ ಶ್ರೀನಿವಾಸ ಮತ್ತು ಮಾಯಾಲೋಕದಲ್ಲಿನ ಪ್ರಕಾಶವಾಣಿ ಪತ್ರಿಕೆಯ ಸಂಪಾದಕ ಪ್ರಕಾಶನ ಮಿತ್ರ ಡೆಲ್ಫಿ. ಯಾಂತ್ರಿಕ ಬದುಕಿನ ಅನಿವಾರ್ಯತೆಗಳಲ್ಲಿ ಒಂದು ಹಣ. ಇದರ ಗಳಿಕೆಗಾಗಿ, ನೀತಿ ನಿಯತ್ತುಗಳನ್ನು ಗಾಳಿಗೆ ತೂರುವ ವ್ಯಕ್ತಿಯ ಸ್ವಭಾವವು ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನವಾದರೂ ಪರಿಸ್ಥಿತಿಯು ಮನುಷ್ಯರಲ್ಲಿ ಉಂಟು ಮಾಡುವ ಸ್ಥಿತ್ಯಂತರ ಅವನತ ಮುಖವಾಗಿದ್ದು ಸಮಾಜದ ಎಂದೂ ವಾಸಿಯಾಗದ ಹುಣ್ಣಿಗೆ ಕನ್ನಡಿ ಹಿಡಿದಂತೆ ಅನಿಸುತ್ತದೆ.

ಆದ್ದರಿಂದ ಇದು ಕೇವಲ ಸಂಘರ್ಷ ಅಥವಾ ಸ್ಥಿತ್ಯಂತರ, ಮಾನವೀಯತೆಗಳಿಗಷ್ಟೇ ಸರಕಲ್ಲದೇ ಮಾನವರ ಮನದ ಒಳತೋಟ, ತುಮುಲಗಳು ಹಾಗೂ ದ್ವಂದ್ವ ಪ್ರತಿದ್ವಂದ್ವಗಳ ಮನುಕುಲದ ಜೀವನ ವೃತ್ತಾಂತಗಳೂ ಆಗಿದೆ. ಮನುಷ್ಯನೆಷ್ಟೇ ತಲೆಯೆತ್ತಿ ನಡೆದರೂ ಪ್ರಾಕೃತಿಕ ಹೊಡೆತ ಹಾಗೂ ತಿರುವುಗಳಲ್ಲಿ ತಲೆಬಾಗಲೇಬೇಕು ಎಂಬ ಚಿರಂತನ ಸೃಷ್ಟಿತತ್ತ್ವದ ಪ್ರತಿಪಾದನೆಯೂ, ಅಂತೆಯೇ ಮಾನವೀಯತೆಯ ಪ್ರತಿಬಿಂಬವೂ ಆಗಿದೆ. ಪರಿಸರ ಪ್ರಜ್ಞೆ ಹಾಗೂ ಮಾನವೀಯತೆಯ ಸಂಘರ್ಷದ ಉತ್ತರೂಪವೆಂಬಂತೆ ಉಂಟಾದ ಸ್ಥಿತ್ಯಂತರವು ಮಾನವೀಯತೆಯ ಕಡೆಗೇ ವಾಲಿದ್ದು ಪರಿಸರ ಪ್ರಜ್ಞೆ ನೆಲಕಚ್ಚಿದೆ. ತತ್ಪರಿಣಾಮವಾಗಿ ಪ್ರಾಕೃತಿಕವಾದ ಹುಂಡುಕೋಳಿಗಳ ನಾಶದ ಸ್ಥಿತ್ಯಂತರ ಹಾಗೂ ಮಾನವೀಯತೆಯ ಅಂತಃಕರಣದಲ್ಲಿ ಅಂಥ ಸ್ಥಿತಿಕರ್ತರಿಗೆ ಆಗದ ಶಿಕ್ಷೆ ಈ ರೂಪದ ಸ್ಥಿತ್ಯಂತರವು ಮಾನವನ ಅಸಹಾಯಕತೆಯನ್ನೂ ಪರಿಸರದ ಪ್ರಜ್ಞೆಯಿಂದ ಅವಲೋಕಿಸಿದಾಗ ಕಾನೂನಿನ ಜಡತ್ವವನ್ನೂ ಸೂಚಿಸುತ್ತದೆ. ಇನ್ನು ಬರದ ಬಿಸಿಲು ಹಾಗೂ ಬೇಗೆಸಹಿಸದ ಮಾನವರ ಘರ್ಷಣೆಯ ತತ್ಪರಿಣಾಮ ರೂಪೀ ಸ್ಥಿತ್ಯಂತರವು ಇಡೀ ಕಥಾ ಹಂದರದಲ್ಲಿ ಲಂಟಾನ ಜೆಗ್ಗಿನಂತೆ ದಟ್ಟವಾಗಿ ಹರಡಿದೆ. ಪ್ರಕೃತಿ ಮತ್ತು ಮಾನವರ ಸಂಘರ್ಷದ ಪರಿಣಾಮ ರೂಪದ ಬರವೆಂಬ ಸ್ಥಿತ್ಯಂತರವು ಬಯಲುಸೀಮೆಯಲ್ಲಿ ಉಂಟುಮಾಡಿದ್ದ ಪರಿಣಾಮವನ್ನು ಈ ಕಾದಂಬರಿಯಲ್ಲಿ ಕಾಣಬಹುದು.

ಮಾಯಾಲೋಕ ಕಾದಂಬರಿಯಲ್ಲಿನ ಅಣ್ಣಪ್ಪಣ್ಣ, ಭಂಡಾರಿ ಬಾಬುವಿನಂಥ ವ್ಯಕ್ತಿತ್ವದ ಜನ ಒಂದರ್ಥದಲ್ಲಿ ಹೇಳಹೋದರೆ ಪ್ರಜ್ಞಾ ಶೂನ್ಯರಲ್ಲ. ಅವರು ಊರಳ್ಳಿ, ಮಕ್ಕಿಗದ್ದೆಯಂಥ ಊರಿನಲ್ಲಿ ಸಂಘರ್ಷವನ್ನೋ ಸ್ಥಿತ್ಯಂತರವನ್ನೊ ಹುಟ್ಟುಹಾಕಬಲ್ಲವರು. ಅವರಿಗಂತಹ ಸಾಮರ್ಥ್ಯವಿದೆ. ಇದೇ ಕಾರಣದಿಂದಲೇ ಇರಬಹುದು ಅಪ್ಪಣ್ಣಪ್ಪನಂತಹ ಪಾತ್ರಚಿತ್ರ ಕೊನೆವರೆಗೂ ಉಳಿಯುವುದು. ಇವರು ಕೇವಲ ಕೈಲಾಗದವರಲ್ಲ. ಕೈಲಾಗದವರಾಗಿದ್ದರೆ, ಸಂಘರ್ಷ, ಸ್ಥಿತ್ಯಂತರಗಳನ್ನುಂಟು ಮಾಡುವ ಶಕ್ತಿಯಿಲ್ಲದವರಾಗಿದ್ದರೆ ಅಂಥ ಬಿರು ಬೇಸಿಗೆಯಲ್ಲಿ ಅಲ್ಲಿ ಎಲ್ಲರೂ ತಲೆಮೇಲೆ ಕೈಹೊತ್ತು ಕುಳಿತಿರುವಾಗ ಇರುವ ಸೆಲೆಯ ನೀರನ್ನೇ ಬಳಸಿಕೊಂಡು ಎರಡು ಎಕರೆ ಗದ್ದೆಗೆ ಮೆಣಸಿನ ಸಸಿನೆಡುತ್ತಿರಲಿಲ್ಲ ಇದನ್ನೂ ಒಂದು ಸ್ಥಿತ್ಯಂತರವೆಂದರೆ ತಪ್ಪೇನಿಲ್ಲ. ಏಕೆಂದರೆ ಕುಡಿಯಲು ನೀರಿಲ್ಲದೇ ಎಲ್ಲರೂ ಒದ್ದಾಡುವ ಸಮಯದಲ್ಲಿ ಇವರಿಬ್ಬರೂ ಮೆಣಸಿನಕಾಯಿ

ಗಿಡನೆಡುವ ಯೋಜನೆ ಹಾಕಿದ್ದು ಉಳಿದೆಲ್ಲರಿಗಿಂತಲೂ ಭಿನ್ನವಾದ, ಬರದ ನಡುವೆಯೂ ಜೀವ, ಹೊಟ್ಟೆ ಬರಡಾಗದಂತೆ ಬದುಕಬೇಕೆನ್ನವ ಛಲ ಹಾಗೂ ಬರದ ಸಂಘರ್ಷದಲ್ಲಿ ಸೆಣೆಸಿ ಸ್ಥಿತ್ಯಂತರವೆಂಬ ಒಂದು ಜೀವಸೆಲೆಯ ಮೊಟ್ಟೆಗೆ ಕಾವಿಟ್ಟಂತೆ ದಿನದಿನವೂ ಮೆಣಸಿನ ಮಡಿಗೆ ನೀರೆರೆಯುವುದು ಇಂಥ ವರ್ತಮಾನದ ಕಣ್ಣಿನಲ್ಲಿ ಮತ್ತೊಂದು ವರ್ತಮಾನದಲ್ಲಿ ಲೀನವಾಗೋಣ, ಬರದ ಬಡತನದ ಸ್ಥಿತಿಯಿಂದ ದೂರವಾಗೋಣ, ಸ್ಥಿತ್ಯಂತರ ಹೊಂದೋಣವೆಂಬ ಕನಸಿದ್ದಾಗ, ಆಸೆ-ಬಯಕೆ ಮೊಳೆತು ಚಿಗುರಿ ಚಿಗಿತಾಗ ಮಾತ್ರ ಸಾಧ್ಯ. ಎಂಥ ವಿಷವರ್ತುಳದಲ್ಲಿಯೂ ಮನುಷ್ಯನ ಅಸಂಖ್ಯಾತ ಬಯಕೆಗಳು ಮೊಳೆಯುವ ಅಪಾರ ಸಾಧ್ಯತೆಗಳನ್ನು ಬಿಂಬಿಸುವ, ಮನುಷ್ಯನ ಇಚ್ಛಾಶಕ್ತಿ ಹಾಗೂ ಕ್ರಿಯಾಶಕ್ತಿ ಪ್ರಕೃತಿಯ ಅಪಾರ ಕ್ರಿಯಾಶಕ್ತಿಯೆದುರಿಗೆ ತಲೆಯೆತ್ತಿ ನಿಲ್ಲಲಾಗದಿದ್ದರೂ ಹಾಗೆ ಅದಕ್ಕಿರುವ ಸಾಧ್ಯತೆಗಳ ಪ್ರಸ್ತುತಿ ಹಾಗೂ ಹಿಂದಿನ ಕಥೆಗಳಿಗಿಂತ ಸಂಪೂರ್ಣಭಿನ್ನವಾದ, ಕಲಾಕೃತಿಯಂತಿರುವ, ಕಥೆಗಳು ಕೇವಲ ಸಾಹಿತ್ಯಕಕ್ಷೆಗೇ ಮೀಸಲಾಗದೇ ಜನಸಾಮಾನ್ಯರ ಬದುಕು, ಬವಣೆ ಹಾಗೂ ತತ್ಕಾಲೀನ ಸಾಮಾಜಿಕ, ರಾಜಕೀಯ ವಿಚಾರಗಳನ್ನು ಒಳಗೊಂಡ ಹೊಸಹೊಸ ಆಯಾಮಗಳ ಸಾಧ್ಯತೆಯೆಡೆಗೆ ಮುಖಮಾಡಿರುವ, ಸ್ಥಿತ್ಯಂತರದತ್ತ ದಾಪುಗಾಲಿಕ್ಕುತ್ತಿರುವ ಈ ಮಾಯಾಲೋಕ ಎಂಬ ಮಾಯಾಲೋಕವು ಸ್ಥಿತ್ಯಂತರಕ್ಕೆ ಸಂಪೂರ್ಣ ನಿದರ್ಶನವಾಗಿದೆ.

ಇನ್ನು ಈ ಮಾಯಾಲೋಕದ ಚಿತ್ರಗಳು ಹಾಗೂ ಅದರೊಳಗಿನ ಜೀವಹಂದರದ ಕಥೆ ಇಂದು ನಿನ್ನೆಯದಲ್ಲ. ಜಾಜ್ವಲ್ಯಮಾನವಾದ ನಿಸ್ತಬ್ಧ ಸತ್ಯದ ಜಗತ್ತದು. ಮಲೆನಾಡಿನ ನಿತ್ಯನಿರಂತನ ಹಸುರು ಜಗತ್ತಿನ ಹೇಳಲಾರದ ಅನೇಕ ನೋವಿನ ಹಾಗೂ ಸಂತೋಷದ ಮಡುವುಗಳವು. ನಿರಂತರ ಒಳಹರಿವಿನ ಮಲೆನಾಡಿನ ನದಿಗಳಂತೆ ಮಲೆನಾಡಿಗರ ಜೀವನವೂ ಅನೇಕ ಒಳತಿರುವು ಹರಿವುಗಳಿಂದ ಕೂಡಿರುವುದನ್ನು ಇಲ್ಲಿ ಕಾಣಬಹುದು. ಹಳ್ಳಿಗರೀಗೇನೂ ತಿಳಿಯದು ಎಂದು ಹೇಳುವ ಜನರಿಂದ ದೂರವುಳಿದು ಕೂಡಾ ತಮ್ಮಲ್ಲಿ ಏಕತೆಯನ್ನು ಕಾಯ್ದುಕೊಳ್ಳುತ್ತಾ ಬಿರುಕುಗಳನ್ನು ಮಳೆಗಳೊಂದಿಗೆ ಮರೆಯುತ್ತಾ ವಿಭಿನ್ನತೆಯನ್ನು ಉಳಸಿಕೊಂಡು ಹೋಗುವುದು ಇವರ ವಿಶಿಷ್ಟತೆ ಎನಿಸುತ್ತದೆ. ಪ್ರತಿಯೊಂದೂ ಇವರಿಗೆ ಮುಖ್ಯವಾಗಬಲ್ಲದು, ಪ್ರತಿಯೊಂದೂ ಮುಖ್ಯವಾಗದಿರಬಹುದು. ಕುಂಟರಾಮ ನಂಥವರ ಉದಾಹರಣೆಯಲ್ಲಿ ಜೀವನದ ಸ್ಥಿತ್ಯಂತರಗಳನ್ನು ಕಾಣುತ್ತೇವೆ. ಹೊಟ್ಟೆಪಾಡಿಗಾಗಿ ಮನುಕುಲ ಎಂಥ ಕಸುಬನ್ನೂ ಮಾಡುತ್ತದೆ. ಅದು ಬೌದ್ಧಿಕ ವ್ಯಾಪಾರೀಕರಣವಾಗಿರಲಿ, ದೈಹಿಕವಾಗಿರಲಿ, ಯಾವುದನ್ನೂ ಮಾಡಬಲ್ಲದು ಎಂಬುದಕ್ಕೆ ನಿದರ್ಶನಗಳು ಕೂಡಾ ಈ ಕಥೆಗಳಲ್ಲಿ ತುಂಬಾ ಸಿಗುತ್ತವೆ. ಲಂಬಾಣಿಯವಳಾದ ಯಾಡಿ ದೈಹಿಕ ವ್ಯಾಪಾರೀಕರಣಕ್ಕಿಳಿದರೆ ಪ್ರಕಾಶವಾಣೀ ಪತ್ರಿಕಾ ಸಂಪಾದಕ ಪ್ರಕಾಶ ಬೌದ್ಧಿಕ ವ್ಯಾಪಾರೀಕರಣಕ್ಕಿಳಿದಿದ್ದಾನೆ. ಎರಡರ ಹಿಂದಿನ ಉದ್ದೇಶವೂ ದುಡ್ಡು ಮತ್ತು ಹೊಟ್ಟೆಪಾಡೇ ಆಗಿದೆ. ನಾವು ಕಾಲದಿಂದ ಕಾಲಕ್ಕೆ ಮನೋಧರ್ಮದಲ್ಲಾದ ಸ್ಥಿತ್ಯಂತರವನ್ನು ಕಾಣುತ್ತೇವೆ. ಮುಂಚೆ ಮೂಟೆ ಹೊರುವ ಕೆಲಸ ಮಾಡುತ್ತಿದ್ದ ರಾಮು; ಸತ್ತನೆಂದು ಸುದ್ದಿಯಾಗಿತ್ತು. ವಾಸ್ತವದಲ್ಲಿ ಬದುಕಿ ನಂತರ ವಿದ್ಯುತ್ತಂತಿ ಹತ್ತಿ ಹುಚ್ಚು ಹಿಡಿದು ಹುಚ್ಚನಾಗಿ ಮಾರ್ಪಾಡಾಗಿದ್ದು. ನಂತರ ಗೌರ್ಮೆಂಟ್ ಬಸ್ಸಿನ ಆಕ್ಸಿಡೆಂಟ್‌ನಿಂದ ಹುಚ್ಚಾನಾದರೂ ಹುಚ್ಚನಲ್ಲದವನಾದ. ಆದರೆ ಆ ಆಕ್ಸಿಡೆಂಟಿನಲ್ಲಿ ಆತನಲ್ಲುಂಟಾದ ಎರಡು ಬದಲಾವಣೆಗಳೆಂದರೆ ಒಂದು ಬದುಕಿನ ಶೈಲಿ ಬದಲಾದದ್ದು, ಮತ್ತೊಂದು ಆತ ಕುಂಟನಾದದ್ದು. ಇವುಗಳೆಲ್ಲಾ ನಿಜವಾಗಿಯೂ ನಡೆದದ್ದೋ ಅಥವಾ

ದುಡಿತದಿಂದ ತಪ್ಪಿಸಿಕೊಳ್ಳಬೇಕೆಂದು ಮೈಗಳ್ಳನಾಗಿ ಸ್ಥಿತ್ಯಂತರಗೊಂಡಾಗಿನಿಂದ ಕಟ್ಟಿಕೊಂಡ ಸ್ಥಿತ್ಯಂತರಗಳೋ ಯಾರಿಗೂ ಗೊತ್ತಿಲ್ಲವಾದರೂ ಆಗಿದ್ದು ಸತ್ಯವಿರಲಿ, ಅಸತ್ಯವಿರಲಿ ಆತ ಸ್ಥಿತ್ಯಂತರಗೊಂಡಿದ್ದಂತೂ ನಿಜ. ಆತನ ಮಾತು ನಿಜವಾದರೆ ಆತನೇ ಹೇಳುವಂತೆ ಅನೇಕ ಸ್ಥಿತ್ಯಂತರಗಳನ್ನು ಹೊಂದಿರುತ್ತಾನೆ. ಇಲ್ಲವಾದಲ್ಲಿ ಆತ ದುಡಿತದಿಂದ ಆಲಸ್ಯಕ್ಕೆ ಸಿಲುಕಿರುತ್ತಾನೆ.

ಇನ್ನು ಆ ಕಥಾನಕದಲ್ಲಿ ಸ್ಥಿತ್ಯಂತರಕ್ಕೆ ಮತ್ತೊಂದು ಉದಾಹರಣೆಯೆಂದರೆ ಕರಾಟೆ ಮಂಜಣ್ಣ. ಪ್ರತಿಯೊಂದು ಹಂತದಲ್ಲಿಯೂ ಸ್ಥಿತ್ಯಂತರಗೊಳ್ಳುತ್ತ ಹರಿಯುವ ನೀರಿನಂಥ ವ್ಯಕ್ತಿತ್ವ ಆತನದ್ದು. ಮಾಡುವ ಕೆಲಸವನ್ನು ಅಚ್ಚುಕಟ್ಟಾಗಿ ಮಾಡಿದರೂ ತುಂಬಾ ದಿನ ಅದನ್ನೇ ಮಾಡಲಾಗದಂತವನು. ಮೊದಲು ಬೀಡಾ ಮಾರಿಕೊಂಡು ನಂತರ ಕರಾಟೆ ಕಲಿತು, ಅದರಿಂದಲೂ ಹೊರಬಂದು ಪಾನಿಪೂರಿ ಮಾರುತ್ತಾ ಅದನ್ನು ಕೈಬಿಟ್ಟು ಸೈಕಲ್ಲಿನಮೇಲೆ ಎಳನೀರುಮಾರುತ್ತಾ ಸ್ವಲ್ಪದಿನಗಳಲ್ಲಿಯೇ ಅದರಿಂದಲೂ ಮುಕ್ತಿ ಬಯಸಿ ರಿಕ್ಷಾ ಬಾಡಿಗೆಗೆ ಹೊಡೆಯುತ್ತಾ ಮುಂದಿನ ದಿನಗಳಲ್ಲಿ ಅದನ್ನೂ ಬಿಟ್ಟು ಫೋಟೋಗ್ರಫಿ ಮಾಡುತ್ತಾ ಸಂತೆಯಲ್ಲಿ ಜನರಿಗೆಲ್ಲಾ ಎರಡು ನಿಮಿಷದಲ್ಲಿ ಫೋಟೋ ತೆಗೆದು ಕೊಡುತ್ತಾ, ಕಥಾಹಂದರದ ಕೊನೆಯಲ್ಲಿ ಪ್ರಕಶವಾಣಿ ಪತ್ರಿಕೆಗೆ ವರದಿಗಾರನಾದ ಆತನ ರೂಪ ನಮಗೆ ದೊರೆಯುತ್ತದೆ. ಬಹುಶಃ ಈ ಮಾಯಾಲೋಕದಲ್ಲಿ ನಮಗೆ ಸ್ಥಿತ್ಯಂತರವನ್ನು ಉದಾಹರಿಸಲು ಈತನಿಗಿಂತ ಒಳ್ಳೆ ದೃಷ್ಟಾಂತ ಸಿಗಲಾರದು.

ಈ ಸ್ಥಿತ್ಯಂತರಗಳಿಂದ ತಿಳಿದುಬರುವ ಮತ್ತೊಂದು ಅಂಶವೆಂದರೆ ಮಾನವರು ಸದಾ ಹೊಸತನ್ನು ಹುಡುಕುತ್ತಾ ಹಳೆಯದೆಲ್ಲವನ್ನೂ ತೊರೆಯುತ್ತಾ ಮೆಟ್ಟಿಲುಗಳಂತೆ ಒಂದನ್ನು ಬಿಟ್ಟು ಮತ್ತೊಂದರೆಡೆಗೆ ಹೊಸತರೆಡೆಗೆ ಸದಾ ತುಡಿಯುತ್ತಿರುತ್ತಾರೆ. ಮನೋಗತ, ಮನೋರಥಗಳ ಈಡೇರಿಕೆಗಾಗಿ ಮೊಟ್ಟೆಗೆ ಕಾವು ಕೊಡುವ ಹಕ್ಕಿಯಂತೆ ಕಾಯುತ್ತಾ ಇರುತ್ತಾರೆ. ತೃಪ್ತಿ, ಶಾಂತಿಗಾಗಿ ವಲಸೆ ಹೋಗುವ ಹಕ್ಕಿಗಳಂತೆ ಬೇರೆ ಬೇರೆ ಮಾರ್ಗಗಳನ್ನು ಅರಸುತ್ತಲೇ ಇರುತ್ತಾರೆ. ಹೊಸ ಹೊಸ ಸೃಷ್ಟಿ ಅನ್ವೇಷಣೆಗಳನ್ನು ಮಾಡುತ್ತಾರೆ. ಸ್ಥಿತ್ಯಂತರಕ್ಕೆ ಸಂಘರ್ಷ ದ್ವಂದ್ವಗಳು ಕಾರಣವಾದಂತೆ ಇಂಥ ಅನ್ವೇಷಣೆಗಳಿಗೂ ಹೊಸ ಸ್ಥಿತಿಯ ಆಶಯದ ಮರೀಚಿಕೆ ಕಾರಣವಾಗುತ್ತದೆ. ಸ್ಥಿತ್ಯಂತರವಾದೀತೆಂಬ ಆಸೆ ಹೊತ್ತೇ ಇಂಥ ಹೊಸ ಹೊಸ ಅನ್ವೇಷಣೆಗಳು ನಡೆಯುವುದು. ಇಲ್ಲಿಯೂ ಮಂಜಣ್ಣನ ಆ ಚಿತ್ರಣ ಸಮಾಜದಲ್ಲಿರುವ ಸ್ವಸ್ಥ ಹಾಗೂ ಶಾಂತಮನಸ್ಸಿನ ವ್ಯಕ್ತಿಗಳ ಪ್ರತಿನಿಧಿಯಂತೆ ಭಾಸವಾಗುತ್ತದೆ.

ಇನ್ನುಳಿದಂತೆ ಡಿಪಾರ್ಟ್‌ಮೆಂಟುಗಳ ಕಿತ್ತಾಟ, ಜನರೊಂದಿಗಿನ ವಾಕ್ಸಮರ, ಕಾದಾಟ ಇವೆಲ್ಲಾ ಸಂಘರ್ಷಗಳು ಸಾಮುದಾಯಿಕ ಸಂಘರ್ಷಗಳು. ಯಾವುದೇ ಸ್ಥಿತ್ಯಂತರಗಳಾದರೂ ಇಂಥ ಸಂಘರ್ಷಗಳು ಮತ್ತು ಘರ್ಷಣೆಗಳಿಗೆ ಮುಕ್ತಾಯ ಎಂಬುದು ಇಲ್ಲ. ಏಕೆಂದರೆ ಅದೊಂದು ಮಾನವ ನಿರ್ಮಿತವ್ಯವಸ್ಥೆ. ಅದರ ಆಳವಾದ ಒಳಸುಳಿಗೆ ಸಿಕ್ಕು ಅದನ್ನು ಬಿಟ್ಟು ಬದುಕಲಾಗದವರೂ ಮಾನವರೇ. ಅದನ್ನು ಬದಲಾಯಿಸಬೇಕೆಂದು ಹೊರಡುವವರೂ ಅವರೇ. ಹೀಗೆಯೇ ವಿದ್ಯುತ್ ಇಲಾಖೆ, ಟೆಲೀಫೋನ್ ಇಲಾಖೆ ಇತ್ಯಾದಿಗಳಿರುವುದು ಮಾನವರ ಹಿತಸಾಧನೆಗಾಗಿಯೇ ಆದರೂ ಮತ್ತದು ಉಂಟು ಮಾಡುವುದು ಸಮಸ್ಯೆ ಹಾಗೂ ದ್ವೇಷಗಳನ್ನೇ. ಇದಕ್ಕೆ ಕೈಕೊಟ್ಟು ಬೆನ್ನುಮಾಡಿ ಮುಖತಿರುಗಿಸಿ ಹೊರಬರಲು ಸ್ವತಃ ಮಾನವರಿಗೇ ಇಷ್ಟವಿದ್ದಂತೆ

ಕಾಣದು. ತಮ್ಮ ನಾಲಿಗೆಯ ಚಪಲ ತೀರಿಸಿಕೊಳ್ಳಲು ತಾವೇ ಇನ್ನೊಂದಿಷ್ಟು ಸಮಸ್ಯೆಗಳನ್ನು ಹುಟ್ಟು ಹಾಕಿ ನಂತರ ವ್ಯವಸ್ಥೆಯನ್ನೋ ಇನ್ಯಾರನ್ನೋ ದೂಷಿಸುವುದು ಹಿಂದಿನಿಂದಲೂ ನಡೆದೇ ಇದೆ. ಅದಕ್ಕೆಂದೂ ಬೀಗಮುದ್ರೆಯನ್ನು ಒತ್ತಲು ಸಾಧ್ಯವಾಗದು.

ಮಾಯಾಲೋಕದ ಜಗಳಪ್ರಿಯ ಅಣ್ಣಪ್ಪಣ್ಣ, ಯಾಡಿ, ಉಗ್ರಣ್ಣ, ವಿದ್ಯುತ್ ಇಲಾಖೆಯ ಮಲ್ಲಿಕಾರ್ಜುನ, ಪ್ರಕಾಶವಾಣಿಯ ಪ್ರಕಾಶ ಮತ್ತು ಆತನ ಮಿತ್ರ ಡೆಲ್ಫಿ ಹಾಗೂ ರೈತಸಂಘದ ಇನ್ನಿತರ ಯುವಕರೂ, ಆ ಇಕ್ಬಲ್ ಸಾಬಿ, ಊರಳ್ಳಿ ಮತ್ತು ಮಕ್ಕಿಗದ್ದೆಯ ನಡುವಿನ ಜಗಳ, ರೈತಸಂಘ ಮತ್ತು ವಿದ್ಯುತ್ ಇಲಾಖೆಯ ನಡುವಿನ ಜಗಳ ಇವೆಲ್ಲ ಇಂದಿಗೂ ಬಗೆಹರಿಯದ ಕೋಳಿ ಜಗಳಗಳು. ಪ್ರತಿಯೊಂದು ಕೆಲಸಕ್ಕೂ ಕಾರಣ ಹುಡುಕುತ್ತಾ ಹೋಗುವ ಮಾನವರು ತಮ್ಮ ಸಮಾಧಾನಕ್ಕೋಸ್ಕರ ಆ ಕಾರಣವನ್ನೇ ಕರೆದುಕೆರೆದು ದೊಡ್ಡ ಹುಣ್ಣಗಿಸಿಕೊಳ್ಳುತ್ತಿದ್ದಾರೆಯೇ ವಿನಃ ಅವರಿಗೆ ಆ ಕಾರ್ಯದ ಪರಿಸಮಾಪ್ತಿ ಬೇಕಾಗಿಯೇ ಇಲ್ಲ. ಆದುದರಿಂದಲೇ ಕುಟುಕು ಕುಂಟು ನೆವ ಹುಡುಕುತ್ತಾರೆ. ಹೀಗಾಗಿ ಸಂಘರ್ಷ ಹಾಗೂ ಸ್ಥಿತ್ಯಂತರಗಳು ಕೊನೆಗಾಣದಂತೆ ನಡೆಯುತ್ತಲೇ ಇರುತ್ತವೆ. ಮುಂದೆ ಬಾಯಮ್ಮ ಮತ್ತವಳ ಹಂದಿ ಪ್ರಸಂಗದಲ್ಲಿಯೂ ಸುಳ್ಳಿನಕಂತೆಯೊಂದಿಗೆ ಕಾದಾಟಕ್ಕಿಳಿದರೆ ಸತ್ಯಹೊರಬಂದು ಮುಂದೆ ಬಾಯಮ್ಮಳ ಸೀರೆಕಿತ್ತು ಆಕೆ ಅರೆನಗ್ನಳಾಗಿ ನಿಲ್ಲುವಂತಾಗುತ್ತದೆ. ಸತ್ಯವೂ ಕೂಡಾ ಒಂದು ನಿರಂತರ ಹಾಲಾಹಲವೇ. ಅದರ ರೂಪ ಹಲವಾದರೂ ಸತ್ಯವೊಂದೇ. ಗ್ರಹಿಕೆ ಬೇರೆ ಬೇರೆ ಎಂಬಂತೆ. ಇಂಥ ಅರೆನಗ್ನತೆ ಸುಳ್ಳು ಹಾಗೂ ಸತ್ಯದ ಸಂಘರ್ಷದ ಒಂದು ಅವಸ್ಥಾಂತರಿತ ರೂಪ ಈ ನಿದರ್ಶನದೊಳಗಷ್ಟೇ ಅಲ್ಲದೇ ಸುಳ್ಳು ಮತ್ತು ಸತ್ಯದ ಸಂಘರ್ಷವುಂಟಾಗಿ ಸತ್ಯಹೊರಬಂದಾಗ ಅದು ಸುಳ್ಳಿನ ಕವಚವನ್ನು ಆಚೆ ಸರಿಸಿಯೇ ಬಂದಿರುತ್ತದೆ. ಅದುವರೆಗೆ ಸುಳ್ಳಿನ ಕವಚಹೊದ್ದ ಸತ್ಯದ ವಸ್ತ್ರ ಸರಿದಾಗ ಅಲ್ಲಿಂದ ಪಲಾಯನ ಮಾಡಲೂ ಆಗದ ಅಲ್ಲಿ ನಿಲ್ಲಲೂ ಆಗದ ಅರೆನಗ್ನತೆಯೆಂಬ ಸ್ಥಿತ್ಯಂತರ, ಇಕ್ಕಟ್ಟು, ಬಿಕ್ಕಟ್ಟು ಉಂಟಾಗುವುದು ಸುಳ್ಳೇನಲ್ಲ.

ಇನ್ನು ಉಳಿದಂತೆ ಮೌಢ್ಯ ಅಥವಾ ಅಜ್ಞಾನ /ವಿಜ್ಞಾನ ಮತ್ತು ಜ್ಞಾನ ಎಂಬ ಎರಡು ವಿಚಾರಗಳ ಸಂಘರ್ಷವನ್ನು ಇಲ್ಲಿ ಕರೆಂಟಿನ ಮೂಲಕ ಯಾವುದೋ ಯಾರದ್ದೋ ಕೋಣ ಸತ್ತ ವಿಚಾರದಲ್ಲೂ ಕಾಣುತ್ತೇವೆ. ಹಂದಿಯನ್ನು ಹಿಡಿಯಲು ಹಾಕಿದ ಕರೆಂಟಿಗೆ ಕೋಣ ಸತ್ತು ಉಂಟಾದ ಸ್ಥಿತ್ಯಂತರದಲ್ಲಿ ಬಲಿಯಾದದ್ದು ಯಾವುದೋ ಕೋಣದ ಜೀವ. ಇನ್ನು ತರ್ಕ ಮತ್ತು ವಾಸ್ತವದ ವಿಚಾರದಲ್ಲಿ ಘರ್ಷಣೆಯನ್ನು ಪ್ರಕಾಶನ ವಿಚಾರದಲ್ಲಿ ಕಾಣುತ್ತೇವೆ. ಟಿ.ಬಿ ಯ ಗಲಾಟೆಯ ವಿಚಾರವನ್ನು ಪತ್ರಿಕೆಯಲ್ಲಿ ಬರೆದಾಗ ಪತ್ರಿಕೆ ಖಾಲಿಯಾದೀತೆಂಬ ತರ್ಕವು ವಾಸ್ತವದಲ್ಲಿ ಉಲ್ಟಾ ಆಗಿ ಖಾಲಿಯಾಗದೆ ಉಳಿದುಬಿಡುವುದನ್ನು ಕಾಣಬಹುದು. ಇನ್ನು ಊರಳ್ಳಿಯವರ ತರಕಾರಿಗಿಡಗಳನ್ನು ಕಿತ್ತೆಸೆದ ಗೂಂಡಾಗಳು, ಮತ್ತಲ್ಲುಂಟಾದ ಸ್ಥಿತ್ಯಂತರಗಳು, ಮುಷ್ಕರ ಹಾಗೂ ರಸ್ತೆರೋಕೋ ಕಾರ್ಯಕ್ರಮಗಳು ಅದರಿಂದ ಸಾರ್ವಜನಿಕರಿಗೆ ಉಂಟಾದ ತೊಂದರೆ ರೂಪದ ಸ್ಥಿತ್ಯಂತರಗಳು, ಮುನ್ಸಿಪಾಲಿಟಿಯ ಚಿಕ್ಬೀರೂ ಕಡೆಯವರ ಗತ್ತು, ಆದರೆ ಊರಳ್ಳಿ ರೈತಸಂಘದವರಿಂದ ಉಂಟಾದ ಪ್ರತಿಕ್ರಿಯೆ ಸ್ಥಿತ್ಯಂತರಗಳು, ಗಾಳಿ ಹಾಗೂ ಅದರಿಂದುಂಟಾದ ಅವಾಂತರಗಳೂ ಹಾಗೂ ಬೆಟ್ಟದ ಕುಸಿತ ಹಾಗೂ ಮರಗಳುರುಳಿದ್ದರಿಂದ ಆದ ರಸ್ತೆಯಲ್ಲಿ ಅಡೆತಡೆಗಳ ರೂಪದ ಸ್ಥಿತ್ಯಂತರಗಳು, ಪ್ರಕೃತಿ ಮತ್ತು ಮಾನವನ ಅನಂತ ಸಂಘರ್ಷಗಳು ಮತ್ತು ಅದರಿಂದ ಪ್ರಕೃತಿಗೂ ನಷ್ಟ ಹಾಗೂ ಮಾನವನಿಗೂ ನಷ್ಟದರೂಪದ

ಅವಸ್ಥಾಂತರಗಳು ಇವು ಈ ನೈರಂತರ್ಯದ ಸೃಷ್ಟಿಪ್ರಕ್ರಿಯೆಯ ಶಾಶ್ವತತೆಯನ್ನು ಕಾಯ್ದುಕೊಳ್ಳಬೇಕಾದರೆ ಪ್ರಕೃತಿಗೆ ಅನಿವಾರ್ಯವೇ? ಎಂಬುದೂ ಕೂಡಾ ರಹಸ್ಯವಾಗಿಯೇ ಉಳಿಯುತ್ತದೆ.

ಪ್ರಾಕೃತಿಕ ವ್ಯೂಹದಲ್ಲಿ ಮಾನವ ನಿಂತು ನೋಡಿದರೆ ಆತನಿಗೆ ಕಾಣುವುದು ಬರೀ ಪ್ರಕೃತಿಯ ಕೋಟೆಯಷ್ಟೇ. ಅದರಲ್ಲಿ ಆತನ ಬುದ್ಧಿಶಕ್ತಿಯ ಪರಿಧಿಗೆ ನಿಲುಕುವುದು ಬರೀ ಕೇವಲಗಳ ಕೇವಲವಷ್ಟೇ. ಸೃಷ್ಟಿ ಪ್ರಕ್ರಿಯೆಯನ್ನೇ ನಿಯಂತ್ರಿಸುವ ಪ್ರಕೃತಿಗೆ ಮಾನವನ ಉಪಟಳ ಕಿರುಕುಳಗಳನ್ನು ನಿಯಂತ್ರಿಸುವುದು ಸಾಧ್ಯವಿಲ್ಲವೇ ಎಂಬ ಪ್ರಶ್ನೆಯೂ ಉಳಿದುಕೊಳ್ಳುವುದಂತೂ ಸತ್ಯ. ಸುತ್ತಲೂ ಎಷ್ಟೇ ಭದ್ರವಾದ ಕೋಟೆಯನ್ನು ಕಟ್ಟಿಕೊಂಡಿದ್ದೇನೆಂದು ತಿಳಿದರೂ ಅದು ಕೇವಲ ಭ್ರಮೆಯಷ್ಟೇ. ಪ್ರತಿಯೊಂದು ಘಟ್ಟದಲ್ಲಿಯೂ ಅವಿಭಾಜ್ಯ ಅಂಗದಂತೆ ಜೀವನದಲ್ಲಿ ಹಾಸುಹೊಕ್ಕಾಗಿರುವ ಪ್ರಕೃತಿಯಲ್ಲಿಯೇ ಮನುಷ್ಯ ಜೀವಸೆಲೆಯನ್ನು ಕಂಡುಕೊಳ್ಳಬೇಕಾಗಿತ್ತು. ಅದನ್ನು ಬಿಟ್ಟು ಪ್ರಕೃತಿಯನ್ನು ನಾಶಮಾಡ ಹೊರಟ ಮಾನವನಿಗೆ ಸರಿಯಾದ ಆಘಾತವನ್ನು ನೀಡಿದ ಪ್ರಕೃತಿಯ ಚಿತ್ರಣದೊಂದಿಗೆ ಮಾಯಾಲೋಕವನ್ನು ಮುಕ್ತಾಯಗೊಳಿಸುತ್ತಾರೆ.

ಬದುಕಿನ ಬಗ್ಗೆ ಹೊಸ ನೋಟವನ್ನು ಬೆಳೆಸಿಕೊಳ್ಳುತ್ತಿದ್ದಂತೆ ತೇಜಸ್ವಿ ತಾತ್ವಿಕವಾಗಿಯೂ ಬೆಳದು ಅವರು ಕೇಳುವ ವೈಚಾರಿಕ ಪ್ರಶ್ನೆಗಳು ಬದಲಾದ ಬೌದ್ಧಿಕತೆಗೆ ಮೆರಗು ನೀಡುತ್ತವೆ. ಅಂದರೆ 'ಬದಲಾಗುತ್ತಿರುವ ವಿಶ್ವದಲ್ಲಿ ಹಳೆಯ ಸಾಮ್ರಾಜ್ಯಶಾಹಿ ಶೋಷಣೆ, ವಸಾಹತುಶಾಹಿ ಇತ್ಯಾದಿ ಪರಿಕಲ್ಪನೆಗಳನ್ನೇ ಇಟ್ಟುಕೊಂಡು ಸಮಾಜವನ್ನು ವಿಶ್ಲೇಷಿಸುವುದು ಸರಿಯೇ?'[20] ಎಂಬ ಪ್ರಶ್ನೆಯೊಂದಿಗೆ ಬದಲಾಗುತ್ತಿರುವ ಜಾಗತಿಕ ಪರಿಸ್ಥಿತಿಯೊಂದಿಗೆ ರಾಜಿಯಾಗಿರುವ ಸಮಾಜವನ್ನು ಹೊಸ ಅರ್ಥದಲ್ಲಿ ಅವಲೋಕಿಸಬೇಕಾದ, ಹೊಸ ಚಿಂತನೆಯುಕ್ತ ಗ್ರಹಿಕೆಗಳಲ್ಲಿ ಅಭಿವ್ಯಕ್ತಿಸುವ ಮಾರ್ಗವನ್ನು ಅರಹುತ್ತಾರೆ.

## ಕೊನೆ ಟಿಪ್ಪಣಿಗಳು

೧ ಮೈಸೂರು ವಿ.ವಿ ಯ ಇಂಗ್ಲಿಷ್ ಕನ್ನಡ ನಿಘಂಟು ೧೯೮೯: ಪು ಸಂ.೫೬೭೯

೨ ಡಾ. ಕೇಶವ ಶರ್ಮ. ಕೆ : ಮಾರ್ಕ್ಸ್‌ವಾದಿ ಸಾಹಿತ್ಯ ವಿಮರ್ಶೆ : ಪು.ಸಂ ೩೫

೩ ಕನ್ನಡ ಕಥಾಸಾಹಿತ್ಯದಲ್ಲಿ ಸಾಂಸ್ಕೃತಿಕ ಸಂಘರ್ಷ ಪು ಸಂ ೬

೪ ಅಸ್ತಿತ್ವವಾದ-ವಿಷಯಪ್ರವೇಶ, ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು ೧೯೮೯ ಪು.೧೧ 'ಅಸ್ತಿತ್ವವಾದ ನಿರಾಶಾವಾದವೇನಲ್ಲ; ಅದು ಆಶಾವಾದವೂ ಅಲ್ಲ. ಆಶೆ-ನಿರಾಶೆಗಳ ದ್ವಂದ್ವದಿಂದ ಬಿಡುಗಡೆ ಪಡೆದ ಚಿಂತನಕ್ರಮವನ್ನು ನಾವಿಲ್ಲಿ ಕಾಣುತ್ತೇವೆ. ಪರಮಸತ್ಯದಲ್ಲಿ ದೌರ್ಜನ್ಯವಿದೆಯೆಂದು ಅದು ನಂಬುವುದಿಲ್ಲ. ಕಾರಣ, ಪರಮಸತ್ಯವು ಸೌಜನ್ಯ-ದೌರ್ಜನ್ಯ ಎರಡನ್ನೂ ಮೀರಿದುದು. ಕೊನೆಯಲ್ಲಿ ಎಲ್ಲವೂ ಲಯವಾಗುವುದೆಂದು ತಿಳಿದಿದ್ದೂ, ವ್ಯಕ್ತಿ ತನ್ನ ಹೋರಾಟವನ್ನು ನಡೆಸುತ್ತಲೇ ಇರುತ್ತಾನೆ. ಇಂಥ ಹೋರಾಟದಲ್ಲೇ ಅವನಿಗೆ ತೃಪ್ತಿಯಿರುವುದು-ಇರಬೇಕಾದುದು.'

೫ ಹುಲಿಯೂರಿನ ಸರಹದ್ದು ಆರನೆಯ ಮುದ್ರಣ ೨೦೦೭ ಪೂ.ಚಂ.ತೇ ಪು.ಸಂ ೪೪

೬ ಏಕ ಅನೇಕ ಶಶಿಕಲಾ ಎಚ್: ಸಿ ವಿ ಜಿ ಪಬ್ಲಿಕೇಷನ್ಸ್ ಬೆಂಗಳೂರು

೭ ತೇಜಸ್ವಿಕಥನ, ಅಶೋಕ ಟಿ.ಪಿ, ಅಕ್ಷರಪ್ರಕಾಶನ, ಹೆಗ್ಗೋಡು ೨೦೦೪

೮ ಕಾಡು ಮತ್ತು ಕ್ರೌರ್ಯ ಮುನ್ನುಡಿ ಎರಡನೆಯ ಮುದ್ರಣ ೨೦೧೩ ಪೂ.ಚಂ.ತೇ ಪು.ಸಂ ೮

೯ ಅದೇ ಮುನ್ನುಡಿ

೧೦ ಕರೀಗೌಡ ಬೀಚನಹಳ್ಳಿ ಕೆ.ಪಿ. ಪೂರ್ಣಚಂದ್ರ ತೇಜಸ್ವಿ ಬದುಕುಬರಹ ಪು.ಸಂಖ್ಯೆ ೬೬

೧೧ ಅಬಚೂರಿನ ಪೋಸ್ಟಾಫೀಸು ತುಕ್ಕೋಜಿ ಪೂ.ಚಂ.ತೇ ಎಂಟನೆಯ ಮುದ್ರಣ ೨೦೦೯, ಪು.ಸಂ ೬೯

೧೨ ಕಿರುಗೂರಿನ ಗಯ್ಯಾಳಿಗಳು ಕೃಷ್ಣೇಗೌಡನ ಆನೆ ಪೂ.ಚಂ.ತೇ ಪು.ಸಂ ೭೭

೧೩ ಕಾಡು ಕಾಂಕ್ರೀಟ್ ಮತ್ತು ಜಾನಪದ ಹಿ.ಚಿ.ಬೋರಲಿಂಗಯ್ಯ ಅಕ್ಷರ ಪ್ರಕಾಶನ ಸಾಗರ ೧೯೯೫ ಪು.ಸಂ ೨೮

೧೪ ಹೊಸವಿಚಾರಗಳು ಪೂ.ಚಂ.ತೇ ಮೊದಲನೆಯ ಮುದ್ರಣ ೨೦೧೩, ಪು.ಸಂ.೪

೧೫ ತೇಜಸ್ವಿ ಲೋಕ, ಪ್ರಹ್ಲಾದ್ ಡಿ.ವಿ, ಸಂಚಯ ಬನಶಂಕರಿ ಬೆಂಗಳೂರು-೮೫:೨೦೦೭ ಪು.ಸಂ ೧೪

೧೬ ಚಿದಂಬರ ರಹಸ್ಯ ಆರನೆಯ ಮುದ್ರಣ ೧೯೯೮ ಪೂ.ಚಂ.ತೇ ಪು.ಸಂ ೬೧

೧೭ ತೇಜಸ್ವಿ ಲೋಕ, ಸಂ: ಪ್ರಹ್ಲಾದ್ ಡಿ.ವಿ, ಸಂಚಯ ಬನಶಂಕರಿ ಬೆಂಗಳೂರು-೮೫:೨೦೦೭ ಪು.ಸಂ ೨೦

೧೮ ಕಿರುಗೂರಿನ ಗಯ್ಯಾಳಿಗಳು ಪೂ.ಚಂ.ತೇ ಪು.ಸಂ ೨

೧೯ ತೇಜಸ್ವಿ ಲೋಕ, ಸಂ: ಪ್ರಹ್ಲಾದ್ ಡಿ.ವಿ, ಸಂಚಯ ಬನಶಂಕರಿ ಬೆಂಗಳೂರು-೮೫:೨೦೦೭ ಪು.ಸಂ ೧೪

೨೦ ಮಾಯಾಲೋಕ-೧ ಮೂರನೆಯ ಮುದ್ರಣ ೨೦೦೮, ಪೂ.ಚಂ.ತೇ ಪು.ಸಂ ೮

೨೧ ಹೊಸವಿಚಾರಗಳು ಪೂ.ಚಂ.ತೇ ಮೊದಲನೆಯ ಮುದ್ರಣ ೨೦೧೩, ಪು.ಸಂ.೩೪

# ಅಧ್ಯಾಯ ೫

## ಪೂರ್ಣಚಂದ್ರತೇಜಸ್ವಿ ಕಥನಗಳ ವಿಭಿನ್ನ ನೆಲೆಗಳು

ಒಂದು: ಮನುಷ್ಯ ತನ್ನ ಬದುಕಿನ ಬಗೆಗೆ ಕೆಲವು ಮಹತ್ವದ ಪ್ರಶ್ನೆಗಳನ್ನು ಕೇಳಿಕೊಂಡು ಅದಕ್ಕೆ ಉತ್ತರ ಕಂಡುಕೊಳ್ಳಲು ಪ್ರಯತ್ನಿಸುವಿಕೆ. ಎರಡು:ಮನುಷ್ಯ ಸಂಬಂಧಗಳ ಅರ್ಥಶೂನ್ಯತೆ, ಜೀವನದ ಅರ್ಥಶೂನ್ಯತೆ, ಬದಲಾವಣೆಯ ಬಗೆಗಿನ ಭ್ರಮನಿರಸನ ಒಟ್ಟಾರೆ ಅನುಭವ ಮಾದರಿಗಳ ಶೋಧನೆಯ ಪ್ರಾಮುಖ್ಯತೆ. ಮೂರು: ಮನುಷ್ಯನನ್ನು ಪರಿವರ್ತನೆಯ ಸಮಾಜದ ಅನುಭವದೊಳಗಿಟ್ಟು ಬದುಕನ್ನು ಕಟ್ಟುವ ಮೌಲ್ಯದ ಮಾದರಿಯ ಹುಡುಕಾಟ. ನಾಲ್ಕು: ಹುಡುಕಾಟದ ಅಂತರಾಳದಲ್ಲಿ ಬಂಡವಾಳ ಗಳಿಕೆಯ ಜಗತ್ತು ಮತ್ತು ಅದಕ್ಕಾಗಿ ಬದುಕನ್ನು ಮೀಸಲಾಗಿಡುವ ಮನುಷ್ಯನ ಕುರಿತು ಅಪಾರವಾದ ನಿರ್ಲಕ್ಷ್ಯತೆ. ಇವು ತಾತ್ವಿಕತೆಯ ನಿಜವಾದ ಅರ್ಥವನ್ನು ಸೂಚಿಸುತ್ತವೆ.

ಯಾವುದೇ ಲೇಖಕನ ಧೋರಣೆ, ದೃಷ್ಟಿಕೋನ, ಚಿಂತನೆಗಳು, ಸಾಮಾಜಿಕ ಕಾಳಜಿಗಳು ಕಲಾಕೃತಿಯ ಮುಖೇನ ಹೊರಹೊಮ್ಮುತ್ತವೆ. ಅವುಗಳನ್ನು ಅರಿತುಕೊಳ್ಳಲು ಆತನ ಸಾಮಾಜಿಕ ಸಂಬಂಧಗಳ ನಿರ್ವಹಣೆಯ ಅಧ್ಯಯನ ತುಂಬಾ ಮುಖ್ಯವಾದ ಮೂಲಭೂತವಾದ ಸೂಚನೆಗಳನ್ನು ನೀಡಬಲ್ಲುದು. ಏಕೆಂದರೆ ಸಾಮಾಜಿಕ ಸಂಬಂಧ ವ್ಯಕ್ತಿ–ವ್ಯಕ್ತಿಗಳ ನಡುವಣ ಸಂಬಂಧ ಮಾತ್ರವಾಗಿರದೆ ಅದರ ಜೊತೆಗಿನ ಪರಿಸರ, ಮನುಷ್ಯರ ನಡವಳಿಕೆಗಳು, ಸಾಹಿತ್ಯೇತರ ಆಸಕ್ತಿಗಳು ಇನ್ನಿತರ ಹವ್ಯಾಸಗಳನ್ನು ಏಕತ್ರಗೊಳಿಸುವಂತಹುದು ಆಗಿರುತ್ತದೆ. ಈ ಸಾಮಾಜಿಕ ಸಂದರ್ಭಗಳಿಂದ ಹೊರಡುವ ತಾತ್ವಿಕ ಧೋರಣೆಗಳು ಒಂದು ಧರ್ಮ, ಪರಂಪರೆ, ಸಂಸ್ಕೃತಿ ಇವೆಲ್ಲವುಗಳನ್ನು ಒಳಗೊಂದ ಚಾರಿತ್ರಿಕ ಉಲ್ಲೇಖವೂ ಆಗುವ ಸಂಭವವಿರುತ್ತದೆ.

ಈ ಅಧ್ಯಾಯದಲ್ಲಿ ಒಂದು ವಾಸ್ತವದಿಂದ ಮತ್ತೊಂದು ವಾಸ್ತವಕ್ಕೆ ತೆರೆದುಕೊಳ್ಳುವಾಗ ಮಾನವರ ತಾರ್ಕಿಕ ಮನಸ್ಸು ಯಾವ ಯಾವ ಸಂದರ್ಭಗಳಿಗೆ ಅಣಿಯಾಗಬೇಕಾಗುತ್ತದೆ? ಸ್ಥಿತ್ಯಂತರದ ಅನುಭೂತಿ ಅರಿವಿಗೆ ಬಾರದೆ ಅವರು ಎದುರಿಸುವ ಸವಾಲುಗಳೇನು? ಸ್ಥಿತ್ಯಂತರದ ನಂತರದ ತೊಡಕುಗಳು ಯಾವ ರೀತಿಯವು? ಭೌತಿಕವಾಗಿ, ಬೌದ್ಧಿಕವಾಗಿ ಅವರು ಸ್ಥಿತ್ಯಂತರ ಹೊಂದಿದಾಗ ವೈಯಕ್ತಿಕ ಮತ್ತು ಸಾಮೂದಾಯಿಕ ಪ್ರತಿಕ್ರಿಯೆಗಳು ಹೇಗಿರುತ್ತವೆ? ಇಂಥ ಅನೇಕ ಪ್ರಶ್ನೆಗಳಿಗೆ ಸಾಹಿತ್ಯದ ಮುಖೇನ ಉತ್ತರ ಕಂಡುಕೊಳ್ಳಬೇಕಿದೆ. ಈ ಪ್ರಶ್ನೆಗಳಿಗೆ ಉತ್ತರಿಸಿಕೊಳ್ಳುವ ಪರಿಯೇ, ಪ್ರಾಯಶಃ ತೇಜಸ್ವಿ ಕಥನಗಳ ವಿಶ್ಲೇಷಣೆಯ ಸ್ವರೂಪವನ್ನೂ ನಿರ್ಧರಿಸುತ್ತದೆ.

## ೫.೧ ಅಮೂರ್ತ ಅಲೆಗಳ ಕೇಂದ್ರ

ಮೂರ್ತರೂಪದ ಕಣ್ಣಿಗೆ ಕಾಣುವ ವಿಷಯಗಳು ಸ್ವಯಂ ಸಿದ್ಧಗೊಳ್ಳುತ್ತವೆ. ಆದರೆ ಕಣ್ಣಿಗೆ ಕಾಣದ ಅಮೂರ್ತ ಅಂಶಗಳು ಪ್ರಜ್ಞೆಯ ಮಿತಿಗೆ ಒಳಪಡದೆ ದೂರ ಸರಿಯುತ್ತವೆ. ಅವುಗಳನ್ನು ಅರ್ಥೈಸಿಕೊಳ್ಳಲು ಪ್ರಯತ್ನಿಸಿದಷ್ಟೂ ಪ್ರಜ್ಞೆಯನ್ನು ಮೀರಿ ಬೆಳೆಯುತ್ತವೆ. ಇದರಿಂದ ಪ್ರಜ್ಞೆಯಾಚೆಯ ಅನೇಕ ಆಯಾಮಗಳು ಇವೆ ಎಂಬ ಅಂಶ ಸ್ಥಿರಗೊಳ್ಳುತ್ತದೆ. ಪ್ರಜ್ಞೆಯ ಮಿತಿಗೆ ಒಳಪಡದೆ, ಅರಿವಿಗೆ ಬಾರದ ಎಷ್ಟೋ ಅಂಶಗಳನ್ನು ಪ್ರಯತ್ನಪೂರ್ವಕವಾಗಿ ದಕ್ಕಿಸಿಕೊಳ್ಳುವ ಸಾಧ್ಯತೆಗಳು ಇವೆ. ಅಂತಹ ಪ್ರಯತ್ನದಲ್ಲಿ ಉಂಟಾಗುವ ಸಂದಿಗ್ಧತೆಯಿಂದ ಹೊರಬರುವುದು ಎಂದರೆ ರೂಪವಿಲ್ಲದೆ ಕಣ್ಣಿಗೆ ಮಾತ್ರ ಗೋಚರವಾಗುತ್ತಿರುವುದನ್ನು ಒಂದು ಕೇಂದ್ರ ನೆಲೆಗೆ ಸೀಮಿತಗೊಳಿಸಿಕೊಳ್ಳದೆ ವಿಶಾಲವಾದ ವಿಶ್ಲೇಷಣೆಗೆ ಒಳಪಡಿಸುವುದು. ಆಗ ನೋಡುವ ನೋಟಕ್ರಮದಲ್ಲಿ ಬದಲಾವಣೆಯಾಗುತ್ತದೆ. ತಾವಿರುವ ಸ್ಥಳಗಳಲ್ಲಿಯೇ ವಿಶಿಷ್ಟತೆಗಳನ್ನು ಸೂಕ್ಷ್ಮಾತಿಸೂಕ್ಷ್ಮ ಅಂಶಗಳನ್ನು ಗ್ರಹಿಸುವುದಕ್ಕೆ ಸಾಧ್ಯ ಎಂಬ ತಿಳಿವಿನಿಂದ ನಿರ್ಲಿಪ್ತತೆಯೆಡೆಗೆ ಸರಿಯುವುದಕ್ಕೆ ಸಾಧ್ಯವಾಗುತ್ತದೆ.

ತೇಜಸ್ವಿಯವರು, ಲೋಹಿಯಾರವರ ತತ್ವಚಿಂತನೆ, ಕುವೆಂಪುರವರ ಕಲಾಸೃಷ್ಟಿ, ಕಾರಂತರ ಜೀವನ ದೃಷ್ಟಿ ಇವು ತಮ್ಮ ಮೇಲೆ ಬೀರಿರುವ ಗಾಢಪ್ರಭಾವಗಳೆಂದು ಅದರಿಂದ ಹೊಸ ಪ್ರಯೋಗಶೀಲತೆಯಲ್ಲಿ ತೊಡಗಿಸಿಕೊಂಡೆನೆಂದು ಹೇಳಿಕೊಂಡರೂ ಈ ಕಾರಣಗಳು ಎಲ್ಲಾ ಕಡೆಗಳಲ್ಲೂ ಕಂಡು ಬರುವುದಿಲ್ಲ. ಒಂದೇ ರೀತಿಯ ಬರವಣಿಗೆಗೆ ಅಂಟಿಕೊಳ್ಳದೆ ಇರುವ ಮಾರ್ಗವನ್ನು ತೊರೆದು ಮತ್ತೊಂದು ಮಾರ್ಗದ ಅನ್ವೇಷಣೆಗೆ ಹೊರಟಿರುವುದಕ್ಕೆ ಸೂಚಕವಾಗಿ ಹೊಸದಿಗಂತದೆಡೆಗೆ ಎಂಬ ಮುನ್ನುಡಿ ಸೂಚಿಸುತ್ತದೆ. ಅಬಚೂರಿನ ಕಥಾಸಂಕಲನದ ಅವನತಿ ಕಥೆಯ ಮೂಲಕ ನವ್ಯ ಮಾರ್ಗದಿಂದ ಹೊರಬರುವ ಪ್ರಯತ್ನ ನಡೆಸಿದ್ದಾರೆ. ತಬರನ ಕಥೆಯಲ್ಲಿ ಹೊಸತನಕ್ಕೆ ತೆರೆದುಕೊಂಡಿರುವುದರ ಸೂಚನೆಯಿದೆ. ವೀಕ್ಷಕನಾಗಿ ಎದುರುಗೊಂಡ ಮಾನವ ಸಮಾಜ, ಹೊಸ ಪರಿಸ್ಥಿತಿಗಳು ಹೊಸ ಶ್ರದ್ಧೆಯನ್ನು ತಂದಿತ್ತವು ಎಂದು ಹೇಳುತ್ತಲೇ ಸಾಹಿತ್ಯದಿಂದ ದೊರೆತ ವಿವೇಕ-ಜ್ಞಾನ ಈ ದೇಸಿಯ ತಿಳುವಳಿಕೆಯ ಮುಂದೆ ನಿಷ್ಪ್ರಯೋಜಕವೆನಿಸಿ ಗೊಂದಲಕ್ಕೆ ಒಳಗಾಗಿದ್ದರ ಅರಿಕೆ ಇದೆ. ಆನಂತರ ಇಲ್ಲಿನ ಬದುಕನ್ನು ಅರ್ಥೈಸಿಕೊಳ್ಳುತ್ತಿದ್ದ ಬಗೆಯು ಕ್ರಮೇಣ ಆಳಕ್ಕಿಳಿದುದರಿಂದಾಗಿ ಸಂಕೇತದ ಮೂಲಕ ಅಭಿವ್ಯಕ್ತಗೊಳ್ಳುತ್ತಿದ್ದ ಕಥನಗಳು ಕ್ರಮೇಣ ನೇರವಾದ, ಸರಳವಾದ ಬರವಣಿಗೆಯ ರೂಪ ತಳೆದಿರುವುದನ್ನು ಅನೇಕ ವಿಮರ್ಶಕರು ಗುರುತಿಸಿದ್ದಾರೆ.

### ಸ್ವರೂಪದ ಶ್ರೀನಿವಾಸನ ಮೂಲಕ ಅಭಿವ್ಯಕ್ತಗೊಳ್ಳುವ ಸಾಹಿತ್ಯಕ ವಿಚಾರಗಳು

> ಒಂದನ್ನು ಆರಂಭಿಸುವುದು ಎಂದರೆ ಎಂಥ ಕಷ್ಟದ ಕೆಲಸ ಎನ್ನುತ್ತೀ. ಅರಂಭ, ಅಂತ್ಯ, ಅರ್ಥ, ತಾತ್ಪರ್ಯ, ಎಂಥೆಂಥವೋ ನುಗ್ಗಿ ಕಚ್ಚುತ್ತವೆ. ನಾನು ಹೆದರಿ ಈ ಅನುಭವದ ಛಿದ್ರಗಳನ್ನೆಲ್ಲ ಒಟ್ಟು ಹಾಕಿ ಒಂದು ವಿಕಾರ ಸ್ವರೂಪವನ್ನು ಮಾಡುತ್ತೇನೆ. ಆಮೇಲೆ ಇನ್ನೂ ಭಯಂಕರ ರೂಪದ ಆ ಕಾದಂಬರಿಯೋ ಕಥೆಯೋ ಕವನವೋ ನನ್ನನ್ನು ಇನ್ನೂ ಗಾಢವಾಗಿ ಕಾಡತೊಡಗುತ್ತದೆ.[೧]

ಬದುಕನ್ನು ಅಖಂಡವಾಗಿ ಗ್ರಹಿಸಬೇಕು ಎಂದಾಗ ಸೃಜನಶೀಲತೆಗೆ ಎದುರಾಗುವ ತೊಡಕುಗಳೇ ಹೆಚ್ಚು. ಗ್ರಹಿಕೆಗೆ ನಿಲುಕಿದವುಗಳನ್ನು ಒಂದು ಚೌಕಟ್ಟಿಗೆ ಬಂಧಿಸಲಾಗದ ಸಂದಿಗ್ಧತೆ, ರಚನೆಯ ಕೌಶಲ್ಯ ಅನುಭವ ವಲಯದಲ್ಲಿ ತೆರೆದುಕೊಳ್ಳಬಹುದಾದ ಬೇರೆ ಬೇರೆಯ ಅರ್ಥಗಳು, ಕಲಾವಿದ ಮತ್ತು ಸಮಾಜದ ನಡುವಿನ ಬಿರುಕಿನ ದೆಸೆಯಿಂದ ಸಂಘರ್ಷಾತ್ಮಕ ನೆಲೆಗಳು ಕಲಾತ್ಮಕತೆಯ ಆಚೆಗೂ ಬೆಳೆದಾಗ ಅದರ ನಿವಾರಣೆ ತನ್ನ ಸಾಮರ್ಥ್ಯವನ್ನು ಮೀರಿದ್ದು ಎನಿಸುತ್ತದೆ.

> ಯುನಿವರ್ಸಿಟಿ ಕತೆ, ಯುನಿರ್ವಸಿಟಿ ಕವನ ಬರೆದುಕೊಂಡು ಇರಲಾರೆ. ನೀನೊಬ್ಬ ನರಸತ್ತ ಹಾರುವ, ಮಡಿ, ಮೈಲಿಗೆ, ಮುಟ್ಟು, ಒಬ್ಬಟ್ಟು, ಇವುಗಳ ಬಗೆಯೇ ಬರಿದುಕೊಂಡಿರು ಎಂದು ನಿಮಗೆಲ್ಲಾ ಬಯ್ದು ಅನುಭವವನ್ನು ಹುಡುಕಿಕೊಂಡು ಹೊರಟವನು ಇಲ್ಲಿ ಬಂದು, ಗಳಿಕೆಗೆ ಹಣಕ್ಕೆ ಶರಣಾಗಿದ್ದೇನೆ ಎಂದು ಭಾವಿಸಬೇಡ.

> ನಾನು ಉತ್ತಮ ಬರಹಗಾರ. ತನ್ನ ಅನುಭವವನ್ನು ವ್ಯಕ್ತ ಪಡಿಸುವ ಸಮರ್ಥ ಮಾಧ್ಯಮಕ್ಕಾಗಿ, ಹಾಗೂ ತನ್ನ ಪ್ರತಿಭೆಯನ್ನು ಎರಕ ಹುಯ್ಯಲು ತಕ್ಕ ಅನುಭವ ಒಂದಕ್ಕಾಗಿ ಶ್ರಮಿಸುತ್ತಿರುವ ಲೇಖಕ, ಅನುಭವಕ್ಕಾಗಿ ನಾಗರೀಕ ಜಗತ್ತಿನ ಕೇವಲ ಮಾನಸಿಕ ರೋಗಗ್ರಸ್ತ ಅನುಭವ ಪರಿಸರವನ್ನು ತೊರೆದು–ಅಲ್ಲಾ ನಾನು ನಿನ್ನ ಕಲ್ಪನೆಯನ್ನು ಸರಿಯಾಗಿ ತಿಳಿಸುತ್ತಿಲ್ಲ ಎನ್ನುವುದನ್ನು ಒಪ್ಪುತ್ತೇನೆ. ಅಂತೂ ಅದರ ದಿಕ್ಕನ್ನಾರೂ ತೋರಿಸುತ್ತಿದ್ದೇನೆಯೊ? ಗವಿಗುಡ್ಡಕ್ಕೆ ಸ್ವಂತ ಆಸ್ತಿಪಾಸ್ತಿಗಳನ್ನು ವಶಪಡಿಸಿಕೊಳ್ಳಲು ಬಂದು, ಧನ, ಅಧಿಕಾರಾದಿಗಳ ಸಹವಾಸದಿಂದ ತಾನು ಸತ್ಯಾರ್ಥಿಯಾದ ಸಾಹಿತಿ ಅನ್ನುವ ಮೂಲ ವಿಷಯವನ್ನು ಮರೆತು–ತಡಿ, ತಡಿ, ನೀನು ಹಾಗೆ ತಿಳಿದಿದ್ದೀ ಎಂದು ನಾನು ಹೇಳುತ್ತಿಲ್ಲ.[3]

ಅನುಭವದಿಂದ ಅರ್ಥ ಪಡೆಯುವ ಶಕ್ತಿಯನ್ನು ಕಳೆದುಕೊಂಡಿರುವುದಕ್ಕೆ ತನ್ನನ್ನು ಸೃಜನಾತ್ಮಕವಾಗಿ ತೊಡಗಿಸಿಕೊಳ್ಳುವುದಕ್ಕೆ ಆಗದಿರುವುದರ ಬಗ್ಗೆ ವಿಷಾದವಿದ್ದರೂ, ತಮ್ಮ ಗ್ರಹಿಕೆಯಾಚೆಗಿನ ವಾಸ್ತವವನ್ನು ರಚನೆಯಲ್ಲಿ ಚೌಕಟ್ಟಿಗೆ ಬಂಧಿಸಲಾಗದೆ ಕಲಾವಿದನ ಮಿತಿಯಾಚೆ ಬೆಳೆಯುತ್ತಿರುವುದು ಸಾಹಿತಿಯನ್ನು ಕಾಡುತ್ತದೆ.

> ನನ್ನ ಬಗ್ಗೆ ನಾನು ಇನ್ನೂ ವಿಮರ್ಶಾತ್ಮಕವಾಗೆ ಉಳಿದಿದ್ದೇನೆ. ನಿನ್ನ ಸಾನ್ನಿಧ್ಯ ನನ್ನನ್ನು ನಾನು ಚಿತ್ರಿಸುವುದರಲ್ಲಿ ಎಷ್ಟೊಂದು ಉಪಕಾರಿಯಾಗಿದೆ. ಸೃಷ್ಟಿಗೆ ಏಕಾಂತ ಬೇಕು. ತಾಯಿ ಮಗುವನ್ನು ತನ್ನ ಗರ್ಭದ ಏಕಾಂತದಲ್ಲಿ ಸೃಷ್ಟಿಸುವಂತೆ ಸಾಹಿತಿ ತನ್ನ ಕಲ್ಪನೆಗಳನ್ನು ಸೃಜಿಸುತ್ತಾನೆ.[4]

ಬದುಕಿನ ಸುತ್ತಲ ಪರಿಸರ ಕಲುಷಿತವಾಗಿದೆಯೆಂದು ಅದರಿಂದ ಹೊರಬಂದರೆ, ತನ್ನ ವೈಚಾರಿಕ ಅನುಭವಗಳ ಮೂಲಕ ಎಲ್ಲವನ್ನೂ ಅರ್ಥೈಸಿಕೊಂಡು ಬಿಡಬಹುದು ಎನ್ನುವ ಆಶಯ ಕಾಣಿಸಿಕೊಳ್ಳುತ್ತದೆ. ಆಶಯವಿದ್ದರೂ ಅದು ಸಮರ್ಪಕವಾಗಿ ಅನುಸಂಧಾನವಾಗದ ಬಗ್ಗೆ ಅನುಮಾನ ಕಾಡುತ್ತದೆ. ತನ್ನ ಉದ್ದೇಶ ಇತರರಿಗೆ ಅಸಂಗತವೆನಿಸಬಹುದು ಇಲ್ಲವೆ ನಿರುಪಯುಕ್ತವೆನಿಸಬಹುದು ಎನಿಸಿದಾಗ ಈ ಮಾತುಗಳು ಹೊರಹೊಮ್ಮುತ್ತವೆ.

> ಗಭೀರ ಮೌನಕ್ಕೆ ಎಂದಿನಿಂದ ದಿಗಿಲು ಬೀಳಲು ಆರಂಭಿಸಿದೆ ಎಂದು ಆಲೋಚಿಸಿದಾಗೆಲ್ಲಾ ಈ ಘಟನೆ ಜ್ಞಾಪಕ್ಕೆ ಬರುತ್ತದೆ. ನಾವು ಸಾಹಿತಿಗಳ ಗೋತ್ರಕ್ಕೆ ಸೇರಿದ ತಪ್ಪಿಗೆ ಸದಾ ಮಾತಿಗೆರಡು ಬಾರಿ ನಂಜಿಕೊಳ್ಳುತ್ತಿದ್ದ ಆಧ್ಯಾತ್ಮಿಕ ಏಕಾಕಿತನದ ಬಗ್ಗೆ ಹೇಳಿದೆನಲ್ಲಾ.

> ಆರೇಳು ಕಾದಂಬರಿಗಳನ್ನು ಬರೆದಿದ್ದೇನೆ. ಆದರೆ ಕೊನೆಯ ಕಾದಂಬರಿಯನ್ನು ಬರೆಯುವ ಹೊತ್ತಿಗೆ ನಾನೊಂದು ತೀರ್ಮಾನಕ್ಕೆ ಬಂದೆ. ಇಲ್ಲಾ ದೇಶಾಂತರಗತನಾಗಿ ಬಿಡಬೇಕು, ಇಲ್ಲಾ ಆತ್ಮಹತ್ಯೆ ಮಾಡಿಕೊಳ್ಳಬೇಕು.

ನಾನು ಬರೆದುದೆಲ್ಲಾ ನಿಸ್ಸಾರ, ನಿರುಪಯುಕ್ತ ಎಂದೆನ್ನಿಸತೊಡಗಿತು, ಆಗಲೇ ನನಗೆ ಆತ್ಮಹತ್ಯೆಯಂಥ ಭಯಾನಕ ಆಲೋಚನೆ ಬಂದುದು.... ತನ್ನ ಬರವಣಿಗೆಯಿಂದ ಬದುಕ ಹೊರಟವನು, ಸಾಹಿತಿ ಎಂದು ಹೆಸರುವಾಸಿಯಾದವನು, ತಾನಿನ್ನು ಬರೆಯಲಾರೆ ಎಂದೆನ್ನಿಸಿದರೆ ಹೇಗಾಗಬಹುದು ಯೋಚಿಸಿ, ಆ ದುರಂತದ ಘೋರತೆಯನ್ನು ಹೇಗೆ ತಿಳಿಸಲಿ ಹೇಳಿ.[9]

ತನ್ನ ಕಾಲದ ಸಾಹಿತ್ಯದ ಬಗೆಗಿನ ಅತೃಪ್ತಿಯಿದೆ. ಅವು ಆತನ ಈ ಮಾತುಗಳಲ್ಲಿ ಗೋಚರವಾಗುತ್ತವೆ. ಸಾಹಿತ್ಯಿಕ ಅನುಭವದ ಪಿಪಾಸೆ ಹಾಸ್ಯಾಸ್ಪದ ಎನ್ನಿಸಿದರೂ ಅನುಭವ ನಿರರ್ಥಕತೆಯ ನಿದರ್ಶನಕ್ಕೆ ತನ್ನದೇ ಗತ ಜೀವನವನ್ನು ವರ್ತಮಾನದ ಬದುಕಿನ ಅಸ್ಥಿರತೆಯನ್ನು ಅನಾವರಣಗೊಳಿಸುತ್ತಾನೆ.

ಅಸಂಖ್ಯಾತ ಅನುಭವಗಳು ಎದ್ದೆದ್ದು ಮುಳುಗುವ ಕಡಲು ಈ ಪ್ರಜ್ಞೆ, ನಾನೆಂದರೆ ಇದನ್ನೆಲ್ಲ ಸೇರಿಸಿದ ಜ್ಞಾಪಕ, ಒಂದಕ್ಕೂ ಒಂದರ್ಥವೂ ಇಲ್ಲ. ಜಾಧವ್, ಕಾಮತ್, ನರೋನ, ರಾಯಪ್ಪ, ಹೀಗೆ ನೂರಾರು ಮಂದಿ ಆಗಿಹೋಗಿದ್ದಾರೆ ಈ ದೇಹದಲ್ಲಿ! ಇವರೆಲ್ಲರಿಂದ ಅರ್ಥ ಹೊರಡಿಸಬಲ್ಲ ಇನ್ನೊಬ್ಬ ಈ ದೇಹದಲ್ಲಿದ್ದಿದ್ದರೆ ಆಗ ನನ್ನ ವ್ಯಕ್ತಿತ್ವ ನನಗೆ ಇರುತ್ತಿತ್ತು. ಈಗ ನನ್ನ ಗುರುತು ನನಗೇ ಇಲ್ಲ. ಅನುಭವದ ಅಳಕ್ಕೆ ಇಳಿಯುತ್ತಾ ಬುದ್ಧಿ ಅದರ ಅರ್ಥ ತಿಳಿಯುವ ಸಾಮರ್ಥ್ಯ ಕಳೆದುಕೊಂಡು ಬಿಡುತ್ತದೆ. ಅನುಭವ ಎಂಬುದು ನರಮಂಡಲದ ಮೇಲೆ ಹರಿದಾಡುವ ವಿದ್ಯುತ್ತಾಗಿ ಬಿಡುತ್ತದೆ.[10]

ಭೌತಿಕವಾದ ಅಥವಾ ಸಾಮಾಜಿಕ ನೆಲೆಯಲ್ಲಿ ಯಾವ ಅರ್ಥಪೂರ್ಣ ವ್ಯಕ್ತಿತ್ವದ ಸಾಧನೆಗಳು, ಪರಿಪೂರ್ಣತೆಗಳು ಸಾಧ್ಯವಿಲ್ಲ. ಗುರಿಯಿಲ್ಲದ ಪ್ರಯಾಣದ ಹಿನ್ನೆಲೆಯಲ್ಲಿ ಬದುಕಿನ ರೀತಿಯನ್ನು ಮಾರ್ಪಡಿಸಬೇಕು ಎನ್ನುವ ಆಶಯ ತೀವ್ರವಾಗಿದ್ದರೂ ಮನುಷ್ಯರಲ್ಲಿ ಬೆಳೆಯಬೇಕಾದ ಮೌಲ್ಯಗಳನ್ನು ವಿವರಿಸುವಂತಹವುಗಳೇ ಆಗಿವೆ.

'ಕೆಸರೂರಿನ ಏಲಕ್ಕಿ ಸಮಸ್ಯೆ ಇಡೀ ಕೆಸರೂರಿನ ಸಂಸ್ಕೃತಿಯೊಂದಿಗೆ ಅರ್ಥಮಾಡಿ ಕೊಳ್ಳಬೇಕೆ? ಈ ಸಾವಿರಾರು ಸಮಸ್ಯೆಗಳ ಶರಧಿಯ ತಳಕ್ಕೆ ಮುಳುಗಿ ಇದರ ಮೂಲ ಸಮಸ್ಯೆ ಏನೆಂದು ನೋಡಲಿಕ್ಕೆ ನಾನೇನು ಅವತಾರ ಪುರುಷನೆ? ನನ್ನನ್ನು ಏನು ಕೆಲಸಕ್ಕೆ ಸಂಬಳ ಕೊಟ್ಟು ಕಳಿಸಿದ್ದಾರೋ ಅಷ್ಟು ಮಾಡಿದರೆ ಸಾಕು! ಆದರೂ ಇವೆಲ್ಲಾ ಸಮಸ್ಯೆಗಳೂ ಒಂದರೊಳಗೊಂದು ಸಂಯೋಜನೆಗೊಂಡಂತೆ ಸೇರಿ ಹೋಗಿದ್ದರೇನಪ್ಪಾ ಮಾಡೋದು? ಎಲ್ಲಾ ಸಮಸ್ಯೆಗಳೂ ಒಂದು ಮಾನವೀಯ ಸನ್ನಿವೇಶದ ತುಣುಕುಗಳು!.'[11]

ರಾಮಚಂದ್ರ ಜಯರಾಮನತ್ತ ತಿರುಗಿ–ನಿನ್ನ ಉದ್ದೇಶ ಏನಯ್ಯಾ, ಈ ನಿನ್ನ ಕಥೆ ಹೇಳಿ ಗಾಬರಿಗೊಳಿಸುತ್ತಿರುವ–ಕಾರುಬಾರಿನ ಹಿಂದೆ? 'ಕ್ವೆಸ್ಟ್ ಫಾರ್ ಟ್ರೂತ್, ಸತ್ಯಾನ್ವೇಷಣೆ ನನ್ನ ಉದ್ದೇಶ,' ನಿಜವಾದ ಅರ್ಥದಲ್ಲಿ ಚಿದಂಬರಹಸ್ಯವನ್ನು ಭೇದಿಸುವುದು ಜೋಗಿಹಾಳರು ಖೂನಿಯಾದರೋ ಅನ್ನುವ ಅಂಗಾಡಿಯ ಸತ್ಯಾನ್ವೇಷಣೆಗಿಂತ ಮುಖ್ಯವಾಗುತ್ತದೆ. ಚಿದಂಬರವೆಂದರೆ ಚಿತ್+ಅಂಬರ=ಮನಸ್ಸು ಮತ್ತು ಆಕಾಶ ಎಂಬರ್ಥವನ್ನು ಕೊಡುವಂತಹುದು. ಮನಸ್ಸು ಮತ್ತು ಆಕಾಶ ಈ ಎರಡೂ ತತ್ವವನ್ನು ಅರ್ಥಮಾಡಿಕೊಳ್ಳಲು ಕಷ್ಟಸಾಧ್ಯ. ಅಂದರೆ ರಹಸ್ಯವಾದುದು, ಅಮೂರ್ತವಾದುದು. ಬ್ರಹ್ಮಾಂಡವೂ ಅಷ್ಟೇ ಶೋಧಿಸಿದಷ್ಟೂ ಅಗಾಧವಾಗುತ್ತಾ ವಿಸ್ಮಯಗಳ ಆಗರವಾಗಿಬಿಡುತ್ತದೆ. ಹಾಗೆಂದು ಅರ್ಥೈಸುವುದೂ ಅಷ್ಟೇ ಕಷ್ಟ. ಜೀವನದರ್ಶನವನ್ನು ಮನಗಾಣಿಸುವ ಈ ಪದವೇ ಕಾದಂಬರಿಯ ಜೀವಾಳ.

'ಮನುಷ್ಯನ ಪ್ರಜ್ಞೆ ನಿಜವಾಗಿ ಸ್ವತಂತ್ರವೋ? ಅಥವಾ ಅದೊಂದು ಭ್ರಮೆಯೋ? ಇಡೀ ಗ್ರಹತಾರೆ ನಿಹಾರಿಕೆಗಳ ಈ ವಿಶ್ವವೆಲ್ಲಾ ತಮ್ಮ ತಮ್ಮ ನಿಯಮಕ್ಕೆ ಬದ್ಧವಾಗಿ ವರ್ತಿಸುತ್ತವೆ. ಪ್ರತಿಯೊಂದು ಅಣು ಪರಮಾಣುವಿನಲ್ಲೂ ಎಲೆಕ್ಟ್ರಾನುಗಳು ಫ್ರೋಟಾನ್ ತಮ್ಮ ನಿಯಮಗಳ ಸರಹದ್ದಿನಲ್ಲಿ ಸುತ್ತುತ್ತಿವೆ. ಅಂಥದರಲ್ಲಿ ಇದರಿಂದ ಹೊಮ್ಮಿದ ಈ ಪ್ರಜ್ಞೆ ನಿಯಾಮಾತೀತವೇ? ನಿಜವಾಗಿಯೂ ಸ್ವತಂತ್ರವೆ? ಇದು ನಿಜಕ್ಕೂ ನನ್ನನ್ನು ಚಕಿತಗೊಳಿಸುವ ಚಿದಂಬರ ರಹಸ್ಯ'.[೭]

'ಸರ್ವ ಚರಾಚರ ವಸ್ತುವಿನಲ್ಲಿಯೂ ಇರುವ ಸರ್ವಾಂತರ್ಯಾಮಿಯಾದ, ಸರ್ವಗುಣ ಸಂಪನ್ನ, ಸರ್ವಶಕ್ತ ಆ ಬಾಸ್ಗೆ ಗೊತ್ತಾದರೆ!

ಇವರೆಲ್ಲರ ಮಾತಿನ ಅಂತಿಮ ವ್ಯಕ್ತಿ ಅಥವಾ ಶಕ್ತಿ ಅಥವಾ ಅಮೂರ್ತ ಮೂರ್ತಿ ಯಾರಿರಬಹುದು? ಯಾರಾದರೂ ಆಗಿರಲಿ! ಎಲ್ಲರ ಎಲ್ಲ ದೇವರೂ ಒಂದೇ ಅಲ್ಲವೇ? ಸಾಬರೋ ಬ್ರಾಹ್ಮಣರೋ, ಲಿಂಗಾಯ್ತರೋ ಒಕ್ಕಲಿಗರೋ ಕಳ್ಳರೋ ಖದೀಮರೋ ಎಲ್ಲರ ಬಾಸ್ ಕೊನೆಗೆ ಒಬ್ಬನೇ. ಎಲ್ಲಾ ಧರ್ಮಗಳೂ ಸೇರುವುದು ಕೊನೆಯ ಒಂದೇ ಬಾಸ್ ಹತ್ತಿರ. ಯಾರು ಕೊಲೆ ಖೂನಿ ದಾನ ಧರ್ಮ ಇತ್ಯಾದಿ ಯಾವ ಕಾರ್ಯಕ್ಕೂ ಯಾರಿಗೂ ಸಮಜಾಯಿಷಿ ಕೊಡಬೇಕಾಗಿಲ್ಲವೋ ಅವನೇ ನಿಜವಾದ ಬಾಸ್! ಅವನ ಪ್ರೀತ್ಯರ್ಥ ಕೆಲವರು ಉರುಳು ಸೇವೆ, ಕೆಲವರು ಕೊರಳು ಸೇವೆ, ಕೆಲವರು ರಕ್ತ ಬಲಿ, ಕೆಲವರು ನರಬಲಿ, ಹೀಗೇ ನೂರೆಂಟು ತರದ ನೈವೇದ್ಯ ನೀಡಬಹುದು. ಎಲ್ಲಾ ಅವರವರ ನಂಬಿಕೆ, ನಿಷ್ಠೇ ಅಷ್ಟೇ! ನಂಬಿಕೆ, ಬಾಸ್‌ಗಿಂತ ಮುಖ್ಯ. ಏಕೆಂದರೆ ನಂಬಿಕೆ ಬಾಸ್‌ನ ಸೃಷ್ಟಿಸುತ್ತದೆ, ರೂಪಿಸುತ್ತದೆ.' [೮]

ಸಂಸ್ಕೃತಿಯಲ್ಲಿ ಅಡಗಿರುವ ಅದೃಷ್ಟವಾದ (Fatalism) ಮತ್ತು ಮೂಢನಂಬಿಕೆಗಳನ್ನು ಬಿಟ್ಟು ಬುದ್ಧಿಶಕ್ತಿ ಮತ್ತು ತರ್ಕಗಳಿಂದ ಆಲೋಚಿಸುವಂತೆ ಪ್ರೇರಣೆಯನ್ನು ಉಂಟುಮಾಡುವುದು

ವಿಶ್ವವನ್ನು ಲೀಲೆಯಾಗಿ ಗ್ರಹಿಸುವ ಅವರ ಪರಿ ತಾತ್ವಿಕತೆಯನ್ನು ಮೀರಿ ಸಾಗುತ್ತದೆ. ಆಧ್ಯಾತ್ಮಿಕವಲಯದಿಂದ ಸಾಗಿ ತಾತ್ವಿಕತೆಯನ್ನು ದಾಟಿ ಅರಿವಿಗೂ ನಿಲುಕದ ಹಂತಕ್ಕೆ ತಲುಪಿ ನಿಗೂಢತೆಯನ್ನು ಉಳಿಸಿಕೊಳ್ಳುವುದರ ಬಗ್ಗೆ ಆಶ್ಚರ್ಯವೆನಿಸುತ್ತದೆ. ಹೌದು! ಶೋಧನೆಯ ಅಂತಿಮ ಹಂತದವರೆಗೂ ಹೋಗುವ ಮತ್ತು ಅನುಭವಾತೀತವಾದುದನ್ನು ಗ್ರಹಿಕೆಯ ಒಳಪದರದಿಂದ ಹೊರಹೊಮ್ಮಿಸುವ ಎದೆಗಾರಿಕೆ ಯಾರಿಗಿದೆ! ಪ್ರತಿಯೊಂದು ಪ್ರಕರಣಗಳ ಹಿಂದೆ ಅಡಗಿರುವ ನಿಗೂಢತೆಯನ್ನ ಆಳವಾಗಿ ಪರಿವೀಕ್ಷಿಸುವ ಇಂತಹ ಕಾಯಕ ಮಹತ್ವದ್ದು ಮತ್ತು ಸೃಜನಶೀಲವಾದದ್ದು.

ಇಂತಹ ಸೃಜನಶೀಲ ಕಾಯಕದಲ್ಲಿ ಒಂದು ವೇಳೆ ಅಹಂ ನುಸುಳಿದ್ದೇ ಆದರೆ ಅದರ ಅರಿವಿದ್ದಾಗ ಇದು ಸರಿಯೇ? ಇದು ತಪ್ಪೆ? ಇವೆಲ್ಲದರ ಸ್ವಸ್ವರೂಪವೇನು? ಎನ್ನುವ ತೀವ್ರ ಅನ್ವೇಷಣೆ. ಆದರೆ ಇದೇ ಕೊರಗಾದರೆ? ವ್ಯಸನವಾದರೆ? ಅನ್ವೇಷಣೆ ಅನುಭವವನ್ನೇ ತಿರಸ್ಕರಿಸುವ ಅಹಂ ಆದರೆ?' ಎಂಬ ಆತ್ಮಾವಲೋಕನ ಅನ್ವೇಷಣೆಯನ್ನು ಚಿರಾಯುವಾಗಿ ಇರಿಸುತ್ತದೆ. ಪ್ರಾಕೃತಿಕವಾದ ಅನಂತಾನಂತ ಘಟನೆಗಳು ವಿಸ್ಮಯವನ್ನು ಕೌತುಕವನ್ನು ಉಳಿಸಿಕೊಳ್ಳಲು ಸಾಧ್ಯವಾಗುವುದು ಇದರಿಂದಲೇ. ಕಲಿಕೆಗೆ ಅವಕಾಶವನ್ನು ಕಲ್ಪಿಸುತ್ತದೆ.

ಬೌದ್ಧಿಕ ದಾಸ್ಯಕ್ಕೆ ಈಡಾಗಿ ತನ್ನನ್ನು ತಾನು ವಂಚಿಸಿಕೊಳ್ಳುತ್ತಿರುವುದು ಬುದ್ಧಿ ಬಲದಿಂದಲೇ. ಎಲ್ಲವನ್ನು ಅರ್ಥೈಸಿಕೊಳ್ಳಬಲ್ಲೆವು ಎಂಬ ಭ್ರಾಮಕ ಸ್ಥಿತಿಯಲ್ಲಿ ವಸ್ತುಸ್ಥಿತಿಯನ್ನು ಅರಿಯದೆ ಬದುಕಿನಿಂದ ದೂರ ಸರಿದು ಹೋಗುವುದು ತನ್ನ ಜ್ಞಾನದ ಪರಿಮಿತಿಯಿಂದಲೇ! ಕಾರ್ಯ-ಕಾರಣ ವಿಚಾರ ತರ್ಕಗಳು ನಿರ್ಮಾಣ ಮಾಡುವ ತತ್ವಗಳು; ಬದುಕನ್ನು ಅರಿಯಲು

ಒಡ್ಡುವ ಮಿತಿಯನ್ನು ಗ್ರಹಿಸಿದಾಗ ಸಾಮಾಜಿಕ ಬದುಕಿನ ವಿವಿಧ ಆಯಾಮಗಳು ತೆರೆದುಕೊಳ್ಳುತ್ತವೆ.

> 'ನಾನು ಪ್ರೊಪೆಸರು, ಮಂದಣ್ಣ, ಹಳ್ಳಿಗಮಾರ, ಇವೆಲ್ಲಾ ಹೆಬುಬ್ಬೆ ನೀನು ನಿಜಾಂತ ತಿಳಿದರೆ ಏನಪ್ಪಾ ಕಲಿತಂತೆ ಆಯ್ತು? ಇದರಲ್ಲೇ ನಿನ್ನ ಆಯಸ್ಸು ಮುಗಿದುಹೋಗುತ್ತೆ. ಸತ್ಯದ ಕಿಂಚಿತ್ ದರ್ಶನಾನೂ ಆಗೋಲ್ಲ ನಿನಗೆ. ಈ ಮಾಯೇನೆಲ್ಲಾ ಮೀರಬೇಕು ನಾವು. ಆಗಲೇ ನಿಮಗೆ ಬೇರೆಬೇರೆ ಜಗತ್ತು ಪ್ರಪಂಚ ಕಾಣ್ತದೆ.'[೧೦]

ವಿದ್ಯಾವಂತನೂ, ಪ್ರಜ್ಞಾವಂತನೂ ಆದ ಮನುಷ್ಯ ತನ್ನ ಪ್ರವೃತ್ತಿಗಳ ಮೂಲಕವಾಗಿ ಬೆಳೆಸಿಕೊಂಡಿರುವ ಸಿನಿಕತನವನ್ನು ಮತ್ತು ಕಲಿಕೆಯ ಮೂಲಭೂತವಾದ ದೋಷಗಳ ವ್ಯಾಪಕತೆಯನ್ನು ಎತ್ತಿ ತೋರುತ್ತದೆ. ಈ ಎಚ್ಚರಿಕೆಯು ಮಾಯೆಯೊಳಗಣ ಜಗತ್ತನ್ನು ತಾಳ್ಮೆಯಿಂದ ಸಾವಧಾನವಾಗಿ ಪರಿಶೀಲಿಸುವ ಗುಣವನ್ನು ಕಲಿಸುತ್ತದೆ.

ಮಾನಸಿಕ ಘರ್ಷಣೆ ಕ್ಲೇಶ ಇವುಗಳ ನಂತರ ಗ್ರಹಿಕೆಗೆ ನಿಲುಕುವ ಆಲೋಚನೆಗಳು ವಿಶಿಷ್ಟಾರ್ಥವನ್ನು ಒಳಗೊಂಡಿರುತ್ತದೆ. ಸ್ವರೂಪ, ನಿಗೂಢಮನುಷ್ಯರು, ಪರಿಸರದ ಕಥೆ, ಜುಗಾರಿಕ್ರಾಸ್, ಚಿದಂಬರರಹಸ್ಯ, ಕರ್ವಾಲೋ, ಮಾಯಾಲೋಕ ಇಲ್ಲಿನ ಚಿತ್ರಣಗಳು ಜೀವನ ದೃಷ್ಟಿಗೆ ಸಂಬಂಧಪಟ್ಟವು ಚಿಂತನಪರ ಕಾಳಜಿಯುಳ್ಳವು. ಜೀವನಾನುಭವದ ಕಾರ್ಯಕಾರಣ ಸಂಬಂಧಗಳ ಸೂಕ್ಷ್ಮಾತಿಸೂಕ್ಷ್ಮ ತರ್ಕದ ಎಲ್ಲ ತಂತ್ರಗಳನ್ನು ಬಳಸಿಯೂ ಸಮಕಾಲೀನ ಮನುಷ್ಯ ನಾಗರೀಕತೆಯ ಸಂಕೀರ್ಣ ವ್ಯಾಪಾರಗಳ ಬಗ್ಗೆ ಓದುಗನನ್ನು ಜಾಗೃತಗೊಳಿಸಿಯೂ ತೇಜಸ್ವಿ ಬರವಣಿಗೆ ಮನುಷ್ಯನ ಎಲ್ಲ ಬೌದ್ಧಿಕ ಅಹಂಕಾರ ಮತ್ತು ಬೌದ್ಧಿಕ ವಿಶ್ಲೇಷಣೆಗಳ ಮಿತಿಯನ್ನು ವಿನಯಪೂರ್ವಕ ಮಂಡಿಸುತ್ತದೆ. ಆದರೆ ಕ್ರಿಯಾಹೀನತೆ ಮತ್ತು ಜೀವನ ವಿಮುಖತೆ ಇದಕ್ಕೆ ಮದ್ದಲ್ಲ ಎಂಬುದನ್ನು ಮಾತ್ರ ಒತ್ತಿ ಹೇಳುತ್ತದೆ.[೧೧] ಈ ಮಾತುಗಳಲ್ಲಿ ಅಡಕವಾಗಿರುವ ವಿಶಿಷ್ಟತೆಯ ಛಾಪು ತೇಜಸ್ವಿ ಬರವಣಿಗೆಯ ಮೌಲ್ಯವನ್ನು ಎತ್ತರಕ್ಕೇರಿಸುತ್ತದೆ.

ಸಾಮಾಜಿಕ ಸಂಬಂಧಗಳ ಹಿನ್ನೆಲೆಯಲ್ಲಿ ವ್ಯಕ್ತಿಯ ಸ್ಥಾನಮಾನವನ್ನು ನಿರ್ದೇಶಿಸುವ ಸಾಮಾಜಿಕ ಪರಿಸರದಲ್ಲಿ ಜನ್ಮ ತಾಳಿದ ವ್ಯಕ್ತಿಯ ಬದುಕನ್ನು ವಿಶ್ಲೇಷಿಸುವ ತೇಜಸ್ವಿಯವರ ಬರವಣಿಗೆ ಒಂದು ಮಹತ್ವಪೂರ್ಣ ಸಾಮಾಜಿಕ-ಸಾಂಸ್ಕೃತಿಕ ದಾಖಲೆಯೂ ಆಗುವುದು ಈ ಕಾರಣದಿಂದಲೇ. ನಿಗೂಢ ಮನುಷ್ಯರು ಕಥೆಯಲ್ಲಿನ ಬಹುಮುಖ ವ್ಯಕ್ತಿತ್ವದ ಗೋಪಾಲಯ್ಯನ ಮನುಷ್ಯ ಸಂಬಂಧಗಳ ಬಗೆಗಿನ ವ್ಯಾಖ್ಯಾನವಾಗಲೀ ಲೋಕಾನುಭವಕ್ಕಾಗಿ ಹಾತೊರೆದು ಬಂದ ಜಗನ್ನಾಥನಂತಹ ವ್ಯಕ್ತಿಯ ಪ್ರಜ್ಞೆಯನ್ನು ಕಾಡುವ ಗೋಪಾಲಯ್ಯನ ಸಂಗತಿಗಳಾಗಲೀ ಎಲ್ಲವೂ ಅನನ್ಯ (ದರ್ಶನ) ದಾರ್ಶನಿಕತೆಯತ್ತಲೆ ಮುಖಮಾಡುತ್ತವೆ.

> ಯಾವ ಕಲಾಕೃತಿಯಲ್ಲಿ ಈ ತನ್ನ ಅಂತಃಸತ್ವವನ್ನು ಕಂಡುಕೊಳ್ಳುವ ಮತ್ತು ಅಭಿವ್ಯಕ್ತಿಗೊಳಿಸುವ ಜೀವಂತ ಪ್ರಯತ್ನ ಇರುವುದಿಲ್ಲವೇ ಅದು ತಾನು ಹತ್ತಿನಿಂತ ಗೊಬ್ಬರದ ಗುಂಡಿಯನ್ನೇ ಕೆದಕಿ ಕೆದಕುವ ಕೋಳಿಯಂತೆ. ನಿರ್ಜೀವ ಭೂತ ಕಾಲವನ್ನು ಬೆದಕುವ ಪ್ರಯತ್ನ. ಆದುದರಿಂದ ಕಲಾಕೃತಿಯಲ್ಲಿ ವ್ಯಕ್ತವಾಗುವ ಅನುಭವ ಕೇವಲ ಆತ್ಮ ಚಾರಿತ್ರ್ಯ ರೂಪದ ಘಟನಾವಳಿಯೂ ಅಲ್ಲ. ನನ್ನ ಅಂತಃಸ್ಸತ್ವವನ್ನು ಕಂಡುಕೊಳ್ಳಲು ನನ್ನನ್ನು ನಾನೇ ಬಹಿರಂಗಗೊಳಿಸಿಕೊಳ್ಳುವ ಮತ್ತು ತನ್ಮೂಲಕ ನನ್ನ ಸ್ವಸ್ವರೂಪವನ್ನು ಅರಿಯುವ ಕ್ರಿಯೆ.[೧೨]

ಇತರ ಕೃತಿಗಳಿಗಿಂತ ಪೂರ್ವದಲ್ಲೇ ರಚನೆಯಾದ ಕಾಡು ಮತ್ತು ಕ್ರೌರ್ಯ ನವ್ಯದ ಜೊತೆಗೆ ತಳುಕು ಹಾಕಿಕೊಂಡರೂ ಕಥನದ ಅಂತಸತ್ವವನ್ನು ಸಾರಭೂತವಾಗಿ ಕಡೆದಿಟ್ಟಿರುವುದು ಮುನ್ನುಡಿಯಲ್ಲಿ. ಅಲ್ಲಿ ವ್ಯಕ್ತವಾಗಿರುವ ಸಾಹಿತ್ಯಕ ಮೌಲ್ಯಗಳು ಅಂದಿಗೂ ಇಂದಿಗೂ ಪ್ರಸ್ತುತವೆನಿಸುತ್ತದೆ.

ಸಾಹಿತ್ಯದೊಳಗೆ ಹಾಸುಹೊಕ್ಕಾಗಿ ಬರುವ ಸಂಘರ್ಷಗಳು, ಅವು ಸೃಷ್ಟಿಸಿರುವ ಬಿಕ್ಕಟ್ಟುಗಳನ್ನು ಓಸರಿಸಿ ಕೇವಲ ಸಾಮಾಜಿಕತೆಯನ್ನು ಕೇಂದ್ರ ಕಾಳಜಿಯಾಗಿ–ಸಾಂಸ್ಕೃತಿಕ ಉದ್ದೇಶವಾಗಿ, ಪರಿಸರ ವಿಜ್ಞಾನದ ಒಂದಂಶವಾಗಿ ಅನಾವರಣಗೊಳ್ಳುವುದು ಸಾಹಿತ್ಯ ಸಂವೇದನೆಯ ಪ್ರಮುಖ ಭಾಗವಾಗಿದೆ. ವ್ಯಕ್ತಿ ವಿಶಿಷ್ಟ ಸಿದ್ಧಾಂತ ಅಂತೆಯೇ ವಿಭಿನ್ನ ಸಂದರ್ಭಗಳಲ್ಲಿ ವ್ಯಕ್ತವಾದ ಅಭಿಪ್ರಾಯಗಳು ಮತ್ತು ಎಪ್ಪತ್ತರ ದಶಕದ ನಂತರ ಪ್ರಕಟವಾದ ಹಲವಾರು ಕೃತಿಗಳಲ್ಲಿ ಹೊರಹೊಮ್ಮುವ ಆಶಯಗಳು ಈ ಕೇಂದ್ರಕ್ಕೆ ಬದ್ಧವಾಗಿವೆ. ಮೂಲಭೂತವಾದ ಪ್ರಶ್ನೆಗಳನ್ನು ಎತ್ತಿ ಕೃತಿಯ ಬಂಧವನ್ನು ಗಟ್ಟಿಗೊಳಿಸುವ ಮೂಲಕ ಸಾಮಾಜಿಕ ರಚನೆಯಲ್ಲಿ ನಡೆಯುತ್ತಿರುವ ಪಲ್ಲಟಗಳನ್ನು, ಅಲ್ಲಿನ ಬದುಕಿನೊಂದಿಗೆ ಅರ್ಥಮಾಡಿಕೊಳ್ಳುವತ್ತ ಸಾಗಿರುವುದು ಸಾಹಿತ್ಯಕ ಘಟ್ಟದಲ್ಲಿ ಮುಖ್ಯವೆನಿಸುತ್ತದೆ. ಆನಂತರದ ದಶಕಗಳಲ್ಲಿ ಬದಲಾಗುತ್ತಿರುವ ಜಾಗತಿಕ ಪರಿಸ್ಥಿತಿಯನ್ನು ಅವಲೋಕಿಸಿಯೇ ತೇಜಸ್ವಿಯವರು ಸಂಶ್ಲೇಷಣಾತ್ಮಕ ಮನಸ್ಥಿಯನ್ನು ತಾಳುತ್ತಾರೆ ಇದು ಇಡೀ ಜೀವಪರಿಸರವನ್ನು ಒಂದೇ ಕೇಂದ್ರನೆಲೆಯಲ್ಲಿ ಗ್ರಹಿಸುವುದಕ್ಕೆ ಆಸ್ಪದ ಮಾಡಿಕೊಟ್ಟಿದೆ.

## ೫.೨ ಅನಿಶ್ಚಿತತೆಯ ಜಾಲ

ಹುಟ್ಟು ಸಾವುಗಳ ನಡುವಿನ ಜೀವನದಲ್ಲಿ ಸಕಲ ಚರಾಚರಗಳು ತಮಗೆ ಅರಿವಿಲ್ಲದಂತೆಯೇ ಯಾವುದೋ ಒಂದು ಸೂತ್ರಕ್ಕೆ ಒಳಪಟ್ಟಂತೆ ಜೀವಿಸುತ್ತವೆ. ಹುಟ್ಟು ಸಾವುಗಳೂ ಕೂಡಾ ಯಾರ ನಿಯಂತ್ರಣಕ್ಕೂ ಒಳಪಡದೆ ಅವಿರತವಾಗಿ ನಡೆದಿರುತ್ತದೆ. ಆದಾಗ್ಯೂ ವಿಕಸಿತ ಬುದ್ಧಿಯಿರುವ ಮಾನವರು ಇದೆಲ್ಲವನ್ನು ತಿಳಿದೂ ಕೂಡಾ ತಮ್ಮಿಚ್ಛೆಯಂತೆ ಬದುಕನ್ನು ನಿರ್ಮಿಸಿಕೊಳ್ಳಲು ಹೊರಟಾಗ ಬರುವ ಅಡೆತಡೆಗಳು ಸವಾಲೊಡ್ಡುತ್ತವೆ. ಆಗ ಪರಿಸ್ಥಿತಿಯೊಂದಿಗೆ ರಾಜಿಯಾಗಲೂ ಆಗದ, ಇದ್ದುದನ್ನು ಒಪ್ಪಿಕೊಳ್ಳಲಾಗದ, ಹೊಸದನ್ನು ನಿರ್ಮಿಸಿಕೊಳ್ಳಲೂ ಆಗದ ಅನಿಶ್ಚಿತತೆ ಮಾನವರನ್ನು ಕಾಡುತ್ತದೆ. ಕ್ಷಣಕ್ಷಣದಲ್ಲೂ ಅನಿಶ್ಚಿತವಾದ ಬದುಕಿನೊಳಗೆ ಅಂದುಕೊಂಡದ್ದು ಒಂದಾದರೆ ಆಗುವುದೇ ಬೇರೆ. ಆಗುವದೂ ಕೂಡಾ ಆಕಸ್ಮಿಕ ಹಾಗೂ ಅನಿಶ್ಚಿತವೇ. ಹೀಗೆ ಒಂದಕ್ಕೊಂದು ಸಂಬಂಧಪಟ್ಟಂತೆ ಇರುವ ಈ ಅನಿಶ್ಚಿತತೆಯ ಸುಳಿಯೊಳಗೆ ಸಿಕ್ಕಿದರೆ ಗಾಢವಾದ ಅನಿಶ್ಚಿತತೆಯ ಸುಳಿಯೊಳಗೇ ಸಿಲುಕಿಕೊಳ್ಳಬೇಕಾಗುತ್ತದೆ. ಪ್ರಾಣಿಗಳಿಗೂ ಕೂಡಾ ಇದು ಸಹಜವೇ ಆದರೂ ಅದನ್ನು ಅವು ಸ್ವೀಕರಿಸುವ ರೀತಿಯೇ ಭಿನ್ನ ಏಕೆಂದರೆ ವಿಕಸಿತ ಬುದ್ಧಿಯಿಲ್ಲದ ಅವುಗಳಿಗೆ ಪ್ರತಿಯೊಂದೂ ಅನಿಶ್ಚಿತವೇ; ಆದರೆ ಪ್ರಾಣಿಗಳು ಆ ಅನಿಶ್ಚಿತತೆಯಿಂದ, ಜೀವಕ್ಕೆ ಆಪತ್ತು ಒದಗಿದಾಗ ಮಾತ್ರ ಜೀವನದೊಂದಿಗೆ ಸಂಘರ್ಷಕ್ಕಿಳಿಯುವುದನ್ನು ನಾವು ಕಾಣಬಹುದು. ಮನುಷ್ಯ ಮಾತ್ರರಿಗೆ ಇಂತಹ ಅನಿಶ್ಚಿತತೆಯು ಎಲ್ಲಿಲ್ಲದ ಸಂಘರ್ಷವನ್ನು ಪ್ರತಿಯೊಂದು ಕಡೆಗಳಿಂದಲೂ ತರುತ್ತದೆ. ಸಂಘರ್ಷವನ್ನು ಮತ್ತು ಅದರ ಮತ್ತೊಂದು ರೂಪವಾದ ಸ್ಥಿತ್ಯಂತರವನ್ನೂ ಎದುರುಗೊಳ್ಳಬೇಕಾಗುತ್ತದೆ. ಜನಸಾಮಾನ್ಯರ ಜೀವನದಲ್ಲಿ ನಡೆಯುವ ಇಂತಹ ಘಟನೆಗಳೂ ತೇಜಸ್ವಿಯವರ ಕಥನಗಳಲ್ಲಿ ಜೀವಂತವಾಗಿವೆ. ಅಂತಹ ಸಂದರ್ಭಗಳನ್ನು ವಿಭಿನ್ನ ಬುದ್ಧಿಮತ್ತೆಯಿರುವ ಜನರು ಹೇಗೆ ಸ್ವೀಕರಿಸುತ್ತಾರೆ ಎಂಬುದನ್ನು ತೇಜಸ್ವಿಯವರು ತಮ್ಮ ಕಥನಗಳಲ್ಲಿ ವಸ್ತೂಕರಿಸಿರುವುದನ್ನು ನಾವು ಕಾಣಬಹುದು.

ವ್ಯಕ್ತಿ ಅಸ್ತಿತ್ವವಾದಿ ಹಿನ್ನೆಲೆಯಲ್ಲಿ ವ್ಯಕ್ತಿಗತವಾದ ದೃಷ್ಟಿಕೋನದಿಂದ ಸಾಮಾಜಿಕ ಬದುಕನ್ನು ಗ್ರಹಿಸಿಕೊಳ್ಳಲು ಹೊರಟು ಸಾಧ್ಯವಾಗದೆ ನಂತರದ ಕಾಲಘಟ್ಟದಲ್ಲಿ ಅನುಭವದ ಮುಖೇನ ಅಸ್ತಿತ್ವವನ್ನು ಕಂಡುಕೊಳ್ಳಲು ಹರಸಾಹಸ ಪಡುತ್ತಾನೆ. ಅನುಭವವೂ ಸಾಮಾಜಿಕ ಪರಿಧಿಯೊಳಗೆ ಸೀಮಿತವಾಗಿಬಿಟ್ಟಾಗ ಮನುಷ್ಯರ ಪ್ರಯತ್ನ ವ್ಯರ್ಥವೆನಿಸಿ ತಮ್ಮ ಮತ್ತು ಸಮಾಜದ ನಡುವಿನ ಸಂಘರ್ಷದಿಂದ ಹೊರಬರುವ ದಾರಿಗಳನ್ನು ಅನ್ವೇಷಿಸುತ್ತಾರೆ. ಸಮಾಜ ಮತ್ತು ವ್ಯಕ್ತಿಗತ ತಾಕಲಾಟಗಳಲ್ಲಿ ಬದುಕಿನ ಆಯ್ಕೆ ತಮ್ಮದೇ ಆಗಿದ್ದರೂ ಆಯ್ಕೆಯೂ ಮುಗ್ಗರಿಸಿ ಸಂದಿಗ್ಧತೆಯಲ್ಲಿ ತೊಳಲಾಡುತ್ತದೆ ಮತ್ತು ಇದುವರೆಗಿನ ಆದರ್ಶ ಸಿದ್ಧಾಂತಗಳು ಬದುಕಿನ ವಾಸ್ತವದೆದುರು ತಲೆಕೆಳಗಾಗಿ ಕಳಚಿಬೀಳುತ್ತದೆ.

> ಈ ಜೀವನಾನ ದುರಂತ ಹೌದೋ ಅಲ್ವೋ ನಿರ್ಧರಿಸ ಹೊರಟಾಗ ಜೀವನಾನುಭವ ಎಲ್ಲಿ ಕೈಕೊಟ್ಟು ಬಿಡುತ್ತೆ, ಏನನ್ನೂ ನಿರ್ಧರಿಸೋದಕ್ಕೆ ಆಗೋಲ್ಲ, ನಿಜವಾದ ದುರಂತ ಅವತ್ತಿನಿಂದ ಆರಂಭವಾಗುತ್ತೆ.[೧೩]

ಜೀವನಾನುಭವಗಳ ಕುರಿತಾದ ಈ ಚರ್ಚೆ ಬೌದ್ಧಿಕತೆಯನ್ನು ನಂಬಿರುವ ಮನುಷ್ಯ ಬದುಕಿನ ನಿರರ್ಥಕತೆಯನ್ನು ಉದ್ದೇಶಪೂರ್ವಕವಾಗಿ ಮಂಡಿಸುತ್ತದೆ. ಮನುಷ್ಯನ ಅನುಭವ

ಒಂದೇ ನೆಲೆಗಟ್ಟಿನ ಮೇಲೆ ಪುನರಾವರ್ತನೆಗೊಳ್ಳುತ್ತಿರುವುದು ಅನುಭವದ ಒಳ ಅರಿವಿನ ಸ್ಥಗಿತತೆಯನ್ನು-ಯಾವುದೇ ತಾತ್ವಿಕ ನಿರ್ಣಯಕ್ಕೂ ಬರಲಾರದ ಬಿಕ್ಕಟ್ಟನ್ನು ಪ್ರಸ್ತಾಪಿಸುತ್ತದೆ.

ಒಂದು ಕಾಲಾಕೃತಿ ಒಂದರ್ಥದಲ್ಲಿ ಸಾಹಿತಿಯ ಆತ್ಮಕಥೆ. ಏಕೆಂದರೆ ಅದರ ಮಹತ್ತು ಕಲಾವಿದನ ಜೀವನಾನುಭವಕ್ಕೆ ಸಂಬಂಧಿಸಿದುದಾದುದರಿಂದ. ಇನ್ನೊಂದರ್ಥದಲ್ಲಿ ಆತನಿಗೂ ಆ ಕಲಾಕೃತಿಗೂ ಇರುವ ಚಾರಿತ್ರಿಕ ಸಾಮ್ಯ ನಿರ್ಲಕ್ಷಿಸಬಹುದಾದಂಥದು. ಏಕೆಂದರೆ ಕಾಲಾತೀತವೂ ವ್ಯಕ್ತಿತ್ವಕ್ಕೆ ಅತೀತವೂ ಆದ ಕಲಾಕೃತಿಯಲ್ಲಿ ಆತನ ಜೀವನಾನುಭವ ಪುನರ್ನಿರ್ಮಾಣಗೊಳ್ಳುವುದರಿಂದ. ಆದರೆ ಈ ಎರಡರ ನಡುವೆ ಇನ್ನೊಂದು ವಿಷಯವನ್ನು ನಾವು ವಿಚಾರಿಸಬೇಕಾಗುತ್ತದೆ. ಅದಾವುದೆಂದರೆ ಒಂದು ಕಲಾಕೃತಿಯ ಪರಿಪೂರ್ಣತೆಯು ಅದು ತನ್ನ ಕರ್ತೃವಿನ ಆತ್ಮಕಥೆಯ ಎಷ್ಟೆಷ್ಟು ಅಂಶಗಳನ್ನು ಆಕ್ರಮಿಸಿತು ಎನ್ನುವುದರ ಮೇಲೂ ನಿರ್ಧಾರವಾಗುತ್ತದೆ ಎಂದು. ಎಂದರೆ ಒಂದು ಕಲಾಕೃತಿಯಲ್ಲಿ ಅದರ ಕರ್ತೃ ಎಷ್ಟೆಷ್ಟು ತನ್ನ ಅಂತಃಸ್ಸತ್ವವನ್ನು ಪ್ರಕಟಿಸಿದ ಎನ್ನುವುದೇ ಅದು.

ಓರ್ವ ಕೃತಿಕಾರನ ಅಂತಃಸ್ಸತ್ವ ಎಂದರೆ ಅದು ಆತನ ಜೀವನದ ಪ್ರಮುಖ ಹೋರಾಟ, ವೇದನೆ, ಕ್ಲೇಷ, ಆನಂದ ಇತ್ಯಾದಿಗಳನ್ನೆಲ್ಲ ಒಳಗೊಳ್ಳುತ್ತದೆ. ಆತನ ಕಲಾಕೃತಿ ಶ್ರೇಷ್ಠವಾದುದಾಗಬೇಕಾದರೆ ಮೇಲೆ ಹೇಳಿದವುಗಳಲ್ಲಿ ಎಷ್ಟು ಸಾರ್ವತ್ರಿಕವಾದವಾಗಿದ್ದವು ಎಂಬುದನ್ನೂ ಅವಲಂಬಿಸುತ್ತದೆ. ಆದರೆ ಇದು ಕಲಾವಿದನ ಜವಾಬ್ದಾರಿಯಲ್ಲ. ಕಲಾವಿದ ಸಾರ್ವಜನಿಕ ಹಾಗೂ ಸಾರ್ವತ್ರಿಕವಾದುದು ಯಾವುದೆಂದು ಹುಡುಕುತ್ತ ಕಲಾಕೃತಿ ರಚಿಸುವುದು ಅವನ ಕೆಲಸವಲ್ಲ. ಅವನದು ಕೇವಲ ತನ್ನ ಜೀವನಾನುಭವದ ಕೇಂದ್ರ ಸತ್ವವನ್ನಷ್ಟೆ ಕಂಡುಕೊಂಡು ಅಭಿವ್ಯಕ್ತಿಕೊಡಲು ಯತ್ನಿಸುವುದು.[೧೪]

ಈ ಬಿಕ್ಕಟ್ಟು ಇಂದು ನೆನೆಯದಲ್ಲ. ಕಲಾವಿದನ ಅಭಿವ್ಯಕ್ತಿಯ ಹರಿತವನ್ನು ಸದಾ ಪರೀಕ್ಷೆಗೆ ಒಳಪಡಿಸುತ್ತಾ ಅವನಿಂದ ಮೌಲ್ಯಯುತವಾದವುಗಳನ್ನು ಪಡೆಯುವುದಕ್ಕೆ, ಸೃಜನಾತ್ಮಕ ಬರವಣಿಗೆಯನ್ನು ರೂಢಿಸಿಕೊಳ್ಳುವುದಕ್ಕೆ ಇವು ಸಹಕಾರಿಯಾದಂತಹವು.

ಓದಿನ ಜ್ಞಾನ, ವಿವೇಕ, ಶಿಕ್ಷಣದಿಂದ ಪಡೆದ ಸ್ವಪ್ರಜ್ಞೆ, ಇದುವರೆಗೂ ಬೌದ್ಧಿಕ ಗ್ರಹಿಕೆಗೆ ಬಾರದೆ ಉಳಿದ ವಾಸ್ತವತೆಯ ದರ್ಶನದತ್ತ ಹೊರಳಿತು. ಅದು ವ್ಯಕ್ತಿ ವಿಶಿಷ್ಟತೆಯ ಹಿನ್ನೆಲೆಯಲ್ಲಿ ಬದುಕಿನ ಮತ್ತೊಂದು ನೆಲೆಯನ್ನು ಕಂಡುಕೊಳ್ಳುವ ಪ್ರಯತ್ನವಾಯಿತು. ಇದರ ಪರಿಣಾಮವಾಗಿ ವ್ಯಕ್ತಿ ಸಮಾಜವನ್ನು ಗ್ರಹಿಸುವ ರೀತಿ ಪಲ್ಲಟಗೊಂಡಿತು. ಅಂತೆಯೇ ಹಲವು ಮನೋವಿಕಾರಗಳಿಗೆ ಮುಕ್ತಿ ದೊರೆಯಿತು. ಅಬಚೂರಿನ ಪೋಸ್ಟಾಫೀಸು ಸಂಕಲನದ ಕಥೆಗಳು ಮತ್ತು ಕರ್ವಾಲೋ, ಕಿರುಗೂರಿನ ಗಯ್ಯಾಳಿಗಳು, ಜುಗಾರಿ ಕ್ರಾಸ್ ಕಾಡು ಮತ್ತು ಕ್ರೌರ್ಯ ಇಲ್ಲೆಲ್ಲಾ ತನ್ನನ್ನು ತಾನೇ ಮೀರುವುದರ ಮೂಲಕ ವ್ಯಕ್ತಿ ಸಾಮಾಜಿಕ ಸಂಬಂಧವನ್ನು ಸಾಧಿಸುವುದು ಪ್ರಮುಖವಾಗುತ್ತದೆ.

'ಹೇಮಂತನನ್ನು ಶ್ರೋತ್ರವಾಗಿಟ್ಟುಕೊಂಡು ಶ್ರೀನಿವಾಸ ತನ್ನಲ್ಲಿ ನಡೆದ ಸ್ಥಿತ್ಯಂತರಗಳನ್ನು ಒಂದರ ಹಿಂದೊಂದರಂತೆ ಗಮನಿಸುತ್ತಾ ಹೋಗುತ್ತಾನೆ. ಈ ಅನುಭವ ಛಿದ್ರಗಳು ವಿಸಂಗತ ಎಂದು ತೋರಬಹುದುದಾದರೂ ಅವುಗಳಲ್ಲಿ ಒಂದು 'ತರ್ಕ' ಸಾಂಗತ್ಯ ಇವೆ ಎನ್ನುವುದು ಶ್ರೀನಿವಾಸನ ಗಮನಕ್ಕೆ ಬಾರದೇ ಹೋಗಿರುವುದಿಲ್ಲ. ಅಂಗಾಡಿಗೆ ಬಂದ ಮೇಲೆ ಶ್ರೀನಿವಾಸನಲ್ಲಿ ನಡೆದ ಅತ್ಯಂತ ಮಹತ್ವದ ಬದಲಾವಣೆಯೆಂದರೆ ವಾಸ್ತವದ ಹಾಗೂ ತನ್ನ ಬಗ್ಗೆ ಹೊಸ ತಿರುಳು ಮೂಡಿರುವುದು, ಅವಾಸ್ತವದ 'ಅನ್ಯರೂಪ' ಗಳನ್ನು ಗುರುತಿಸಿ ವಾಸ್ತವವಾದ 'ಸ್ವರೂಪ'ಗಳನ್ನು ಸ್ವೀಕರಿಸುವತ್ತ ನಡೆದ ಪ್ರಗತಿ[೧೫] ಎನ್ನುವ ಅಭಿಪ್ರಾಯವು ಅವಾಸ್ತವದಿಂದ ವಾಸ್ತವದತ್ತ ಸರಿದ ಪ್ರಜ್ಞೆಯ ಬಗ್ಗೆಯೇ ಆದರೂ ಅದೂ ಸ್ಥಿರವಲ್ಲ. ಮತ್ತೊಂದು ಸ್ಥಿತಿ ವಾಸ್ತವವೆಂದು ತೋರಿದಾಗ ಈಗಿನ ವಾಸ್ತವ ಬಗ್ಗೆ ಸಂಶಯವೇಳುತ್ತದೆ. ಅನಿಶ್ಚತತೆ ಕಾಡುತ್ತದೆ.

ಇಂತಹ ಸ್ಥಿತ್ಯಂತರಗಳನ್ನು ಹೊಂದಬೇಕಾದರೆ ಆತನೇನು ಸಾಕ್ಷರನೇ ಆಗಿರಬೇಕು, ಬುದ್ಧಿಜೀವಿಯೇ ಆಗಿರಬೇಕು ಎಂದೇನೂ ಇಲ್ಲ. ಕೆಲವೊಂದು ಬದಲಾವಣೆಗಳನ್ನು, ಅವಸ್ಥಾಂತರಗಳನ್ನು ಪ್ರಕೃತಿ ಸಹಜವಾಗಿ/ಸ್ವಭಾವ ಸಹಜವಾಗಿಯೇ ಇರುವುದನ್ನು ಕಾಣುತ್ತೇವೆ. ಆದರೆ 'ಹೌದು ಇಂತಹ ಬದಲಾವಣೆಗಳಾಗುತ್ತಿವೆ' ಎಂದು ಸ್ಥಿತ್ಯಂತರಗಳನ್ನು ಗಮನಿಸುವಾತ ಬುದ್ಧಿವಂತನೆನಿಸಿಕೊಂಡ ಮಾನವ. ಮಾನವರಲ್ಲಿಯೂ ಪ್ರತಿಯೊಂದು ಸೂಕ್ಷ್ಮಬದಲಾವಣೆಗಳನ್ನು ಗಮನಿಸುವಾತ ಬುದ್ಧಿಜೀವಿ ಎನಿಸಿಕೊಳ್ಳುತ್ತಾನೆ. ಅದರಲ್ಲಿಯೂ ಆ ಬದಲಾವಣೆಗಳನ್ನೂ, ಅದರ ಪರಿಣಾಮಗಳನ್ನೂ ಪ್ರಖರವಾಗಿ ಪ್ರಚುರಪಡಿಸುವ ಸಾಹಿತಿಯ ಬೌದ್ಧಿಕ ಮಟ್ಟ ಮತ್ತು ವಿಚಾರಲಹರಿಗಳು ಅದೇ ಆತನ ಸಾಹಿತ್ಯದಲ್ಲಿ ನಮಗೆ ಕಂಡುಬರುವುದು. ಇದೇ ಕಾರಣಕ್ಕೆ ಲೇಖಕ ಅಥವಾ ಸಾಹಿತಿ ಮತ್ತೊಂದು ವಾಸ್ತವಕ್ಕೆ ತೆರೆದುಕೊಳ್ಳುತ್ತಾ, ಕಾಲಕಾಲಕ್ಕೆ ಬುದ್ಧಿಮತ್ತೆಗೆ ತಕ್ಕಂತೆ ಸ್ಥಿತ್ಯಂತರಗಳನ್ನು ಹೊಂದುತ್ತಾ, ಅದನ್ನು ಪ್ರಚುರಪಡಿಸುತ್ತಾ ಅದೇ ಸಮಯಕ್ಕೆ ಓದುಗನಿಗೆ ಆಪ್ತನೆನಿಸುತ್ತಾನೆ. ಹೀಗೆ ಆತನ ಬೌದ್ಧಿಕ ಸ್ಥಿತ್ಯಂತರಗಳನ್ನು ಆತನ ರಚನೆಗಳಲ್ಲಿ ಕಾಣಬಹುದಾದರೆ ಆತ ಇನ್ನೂ ಯಾವ ಯಾವ ಸ್ಥಿತಿಗಳನ್ನು ಪಡೆದುಕೊಳ್ಳಲು ಇಚ್ಚಿಸುತ್ತಿದ್ದಾನೆ, ಸಾಮಾಜಿಕ ಸ್ಥಿತ್ಯಂತರಗಳ ಬಗ್ಗೆ ಉಳಿದ ಸ್ಥಿತ್ಯಂತಗಳ ಬಗ್ಗೆ ಆತನ ಅಭಿಪ್ರಾಯಗಳೇನು? ಏನನ್ನಾತ ಹೇಳ ಹೊರಟಿದ್ದಾನೆ? ಆತ ಬಯಸುತ್ತಿರುವ ಸ್ಥಿತ್ಯಂತರಗಳು ಉದಯೋನ್ಮುಖವೇ? ಬದಲಾವಣೆಗಳನ್ನು ಇನ್ನೂ ತರಬಲ್ಲವೇ? ಅಥವಾ ಅಧೋಮುಖವಾಗುತ್ತಿವೆಯೇ ಎಂಬುದನ್ನು ಆತನ ಪ್ರಾಯೋಗಿಕ ಅಂಶಗಳು ಸ್ಪಷ್ಟವಾಗಿ ಹೇಳುತ್ತವೆ.

> ನೆನ್ನೆ ಪರಿಣಾಮ ಇಂದು. ಈವತ್ತಿನ ಪರಿಣಾಮ ನಾಳೆ ಜಗತ್ತಿನ ಆಗುಹೋಗುಗಳೆಲ್ಲ ಯಾಂತ್ರಿಕ ಕ್ರಿಯವೆ? ಹಲ್ಲಿಗೆ ಹಲ್ಲು ಕೊಟ್ಟು ತಿರುಗುವ ಚಕ್ರಗಳ ಗುಂಪೆ? ನಾಳೆಯು ನಾನೆಣಿಸಿದಂತೆ ಆಗುವುದು. ಇವತ್ತನ್ನು ಅರ್ಥ ಮಾಡಿಕೊಂಡ ರೀತಿ ತಪ್ಪಾಗುವುದರಿಂದಲೇ? ಕೈಮೇಲೆ ಬಿದ್ದಿರುವ ಗೀರು ನಾಳಿನದನ್ನು ಸೂಚಿಸುವಂತಿದ್ದರೆ ದೂರದ ಆ ಡೊಂಕು ರಂಜದ ಗಿಡ? ಆ ಉರುಳಿ ಬಿದ್ದಿರುವ ಬಂಡೆ? .......ಆದುದನ್ನು ಅರ್ಥಮಾಡಿಕೊಳ್ಳುವ ನೆವದಲ್ಲಿ ಅನಿರೀಕ್ಷಿತವಾದಕ್ಕೆಲ್ಲ ಒಂದು ಕಾರಣ ಹುಡುಕುತ್ತೇವೆ ಅಷ್ಟೆ. ತ್ರಿಕಾಲ ಜ್ಞಾನ ಎಂದರೆ ಹಿಂದಾಗಿದ್ದರ ಮೂಲಕ ಮುಂದಾಗುವುದನ್ನು ಲೆಕ್ಕ ಹಾಕುವುದಲ್ಲ. ತ್ರಿಕಾಲ ಜ್ಞಾನಿಗೆ ಭೂತ ಭವಿಷ್ಯಗಳೆಲ್ಲ ನಿರಂತರ ವರ್ತಮಾನಗಳು. ಅಲ್ಲದಿದರೆ ಯಾವ ಬುದ್ಧಿವಂತಿಕೆ ಉಪಯೋಗಿಸಿ ಆದುದ್ದನ್ನು ಯೋಚಿಸಿ ಮುಂದಾಗುವುದನ್ನು ಊಹಿಸಲು.[೧೬]

ನಿಗೂಢಮನುಷ್ಯರು ಕಥೆಯ ಆಕಸ್ಮಿಕಕ್ಕೂ, ಚಿದಂಬರ ರಹಸ್ಯದ ದುರಂತಕ್ಕೂ ವೈರುಧ್ಯವಿದೆ. ಚಿದಂಬರ ರಹಸ್ಯದ ದುರಂತ ಅಘೋಷಿತವಾದರೂ ಶೋಕದ ಸಂಗತಿ ಎಂದೆನಿಸುವುದಿಲ್ಲ. ಅದೇ ನಿಗೂಢ ಮನುಷ್ಯರು ಕಾದಂಬರಿಯಲ್ಲಿಯ ಕೊನೆಯಲ್ಲಿ ದೂಜ ಪರ್ಬುವಿನೊಂದಿಗೆ ಗೋಪಾಲಯ್ಯ, ಶಾರಿ ಆದಿಯಾಗಿ ಪ್ರಕೃತಿಯೊಂದಿಗೆ ತಮ್ಮ ತಮ್ಮ ಶಕ್ತಿಗನುಗುಣವಾಗಿ ಹೋರಾಟ ಮಾಡುವಂತಹುದನ್ನು ಕಾಣಬಹುದು. ಅನ್ವೇಷಣೆ ಅಪೂರ್ಣವೆನಿಸಿದಾಗ ಇಲ್ಲವೇ ವ್ಯಕ್ತಿತ್ವ ಸೋಲನ್ನು ಒಪ್ಪಿಕೊಂಡಾಗ ಇಂತಹ ಸತ್ಯಾನ್ವೇಷಣೆಯ ಪ್ರವೃತ್ತಿ ನಿರಂತರವಾಗಿ ಸಾಗುತ್ತದೆ. ವ್ಯಕ್ತಿ ಮತ್ತು ಪರಿಸರದ ಮಧ್ಯೆ ಅಮೂರ್ತವಾದ ಸ್ಪಷ್ಟವಾದ ಸಂಬಂಧ ಮುಂದುವರಿಯುತ್ತದೆ. ನಿಗೂಢ ಮನುಷ್ಯರಲ್ಲಿ ರಂಗನಾಥ, ಗೋಪಾಲಯ್ಯ, ಚಿದಂಬರ ರಹಸ್ಯದ ಅಂಗಾಡಿ, ಜಯರಾಂ ಇವರು ಈ ಸಾಲಿನಲ್ಲಿ ನಿಲ್ಲುತ್ತಾರೆ.

ಹೌದು......ನಾನು ಮೈನೆಸ್ ಗೋಪಾಲಯ್ಯ, ಮೈನೆಸ್ ಜಾಧವ್, ಮೈನೆಸ್-ಗೋವಿಯಸ್- ಹೀಗೆ ಹೋದರೆ ಕೊನೆಗೇನಾಗುತ್ತೇನೆ? ಈ ಗಿರಿ, ಈ ಮಳೆ, ಈ ಬಿರುಗಾಳಿ, ಆಗೇನೆಂದು ಕರೆಯುತ್ತೀರಿ? ಈ ಕಾದಂಬರಿಗೆ ಪಾತ್ರವಿಲ್ಲ. ಈ ತೀರ್ಥಕ್ಕೆ ಪಾತ್ರೆ ಇಲ್ಲ[೧೭]

ಮನುಷ್ಯ ಯಾವಾಗಲೂ ಸಮಾಜದ ಜೊತೆ ಬೆಸೆದುಕೊಂಡಿರುತ್ತಾನೆ. ಸಾಮಾಜಿಕ ಅನುಭವ ಸ್ತರವಂತೂ ಪ್ರಕೃತಿಯಿಂದಲೇ ಮೂರ್ತರೂಪ ಪಡೆದುಕೊಂಡಿರುವಾಗ ಮನುಷ್ಯ ಮತ್ತು ಪ್ರಕೃತಿ ಸಂಬಂಧಗಳು ಬೇರೆಯಾಗಿರಲು ಸಾಧ್ಯವಿಲ್ಲ. ಯಾವುದೇ ಜೀವಿಯ ಆರಂಭ ಹುಟ್ಟಿನಿಂದಾದರೆ ಅಂತ್ಯ ಅದರ ಸಾವಿನಿಂದಲೇ. ಹಾಗೆಂದ ಮಾತ್ರ ಎಲ್ಲಕ್ಕೂ ಕೊನೆ ಎಂದೇನಲ್ಲ. ಸಾವಿನ ನಂತರದ ಪಳೆಯುಳಿಕೆಗಳು ಅಸೀಮವಾದ ಅಮೂರ್ತವಾದ ಕೊಂಡಿಯನ್ನು ಉಳಿಸಿ ಬಿಡುತ್ತವೆ. ಅವು ಮನುಷ್ಯ ಪ್ರಜ್ಞೆಯನ್ನು ಮೀರಿ ಅನಂತದೆಡೆಗೆ ಸಾಗುತ್ತವೆ. ಹುಟ್ಟು-ಸಾವು ಇವೆರಡರ ನಡುವಿನ ಅವಧಿಯಲ್ಲಿ ಮನುಷ್ಯ ತಾನು ಪಡೆಯುವ ಅನುಭವಗಳ ಅರ್ಥದಲ್ಲಿ ಬದುಕನ್ನು ಸಾಗಿಸುತ್ತಾನಾದರೂ ಕಟ್ಟಕಡೆಯ ಸ್ಥಿತಿಯಲ್ಲಿ ಅನುಭವವೂ; ಉತ್ತರವೀಯದ ಕಳೇಬರವಾಗಿ ಬಿಡುತ್ತದೆ. ಅನುಭವದ ರೂಪದಲ್ಲಿ ಬದುಕನ್ನು, ವಿಶ್ವವನ್ನೂ ಅರ್ಥೈಸಿಕೊಳ್ಳಲು ಹೊರಟಂತೆಲ್ಲಾ ಅದು ದೂರ ಸರಿಯುತ್ತದೆ.

ತಾವು ಯಾರು? ಯಾಕೆ ಹೀಗಾಡುತ್ತಿದ್ದೇವೆ ತಾವು ಹಿಡಿದಿರುವ ದಾರಿಯ ಕೊನೆ ಯಾವುದು? ಗೌತಮ ಬುದ್ಧನ ರೀತಿ ಒಂದೇ ಒಂದು ಕ್ಷಣ ಚಿಂತಾಕ್ರಾಂತರಾಗುತ್ತಿದ್ದರು! ಆದರೆ ಅವರಾರಿಗೂ ತಮ್ಮ ಮನದಲ್ಲಿ ಒಂದು ಕ್ಷಣ ಮಿಂಚುವ ಕಳವಳಕ್ಕೆ ಸಮಾಧಾನ ಹುಡುಕಿ ಹೊರಡುವ ಎದೆಗಾರಿಕೆ ಇರಲಿಲ್ಲ. ಸಾವನ್ನೋ ಅಥವಾ ಸಾವಿನಷ್ಟೇ ಕಠೋರ ಸತ್ಯವನ್ನೋ ದಿಟ್ಟಿಸಿ ನೋಡಲು ಪ್ರಾಣದ ಮೇಲಿನ ಆಸೆ ಸಂಪೂರ್ಣ ಬಿಡಬೇಕೋ ಏನೋ![೧೮]

ಇಲ್ಲಿ ಮನುಷ್ಯ ತನ್ನ ಅಸ್ತಿತ್ವವನ್ನು ಯಾವುದರಿಂದ ಮತ್ತು ಹೇಗೆ ಸಾಬೀತುಗೊಳಿಸಬೇಕು ಎಂಬ ಪ್ರಶ್ನೆ ಪ್ರಶ್ನೆಯಾಗಿಯೇ ಉಳಿದುಬಿಡುತ್ತದೆ. ಏಕೆಂದರೆ ಬದುಕಿನ ಪ್ರತಿಯೊಂದು ಕಾಲಘಟ್ಟದಲ್ಲಿ ಎಚ್ಚೆತ್ತುಕೊಳ್ಳುತ್ತಾ ಒಂದರಿಂದ ಮತ್ತೊಂದಕ್ಕೆ ಜಿಗಿಯುತ್ತಾ ತನ್ಮಯತೆ ಸಾಧಿಸದೆ ಬಳಲುವುದು. ಸೋಮುವಿನಂದ ಆರಂಭವಾಗುವ ಬದುಕಿನ ಆಯ್ಕೆ, ಶ್ರೀನಿವಾಸನ ಮೂಲಕ ಸಾಮಾಜಿಕ ಜವಾಬ್ದಾರಿಗಳನ್ನು ಹಾಯ್ದು, ಅನೇಕ ದೇಹಗಳನ್ನು ಧರಿಸಿ, ಗೋಪಾಲಯ್ಯನಂತೆ ಹಲವು ಅನುಭವಗಳಿಗೆ ಪಕ್ಕಾಗಿಯೂ ಮನುಷ್ಯ ಸ್ಥಿತಿಯನ್ನೂ ಗುರುತಿಸಲಾಗದ ಹಂತಕ್ಕೆ ಒಯ್ಯುತ್ತದೆ ಅಂತೆಯೇ ಇರುವಿಕೆಯಿಂದ-ಆಗುವಿಕೆಯ ನಡುವಿನ ಅನುದ್ದೇಶಿತ ಪಯಣವನ್ನು, ತಮಗೇ ಅರಿವಿಲ್ಲದೆ ಅದರಲ್ಲಿಯೇ ಹುದುಗಿ ಹೊರಬರಲು ಒದ್ದಾಡುವ ಸ್ಥಿತಿಯನ್ನು ನಿಗೂಢಮನುಷ್ಯರಲ್ಲಿ ಕಾಣುತ್ತೇವೆ.

ಎಷ್ಟೋ ತಾತ್ವಿಕ ವಿಷಯಗಳನ್ನು ವಾಸ್ತವವಾದೀ ಅಸ್ತಿತ್ವವಾದೀ ಹಿನ್ನೆಲೆಯಲ್ಲಿ, ಇನ್ನಾವುದೋ ವಿಷಯವನ್ನು ಅತೀ ಪೋಲಿಯಾಗಿ ಯೋಚನೆ ಮಾಡಿದರೂ ಯಾವುದಕ್ಕೂ ನಿಶ್ಚಿತವಾದ ಉತ್ತರ ಸೋಮುವಿಗೆ ದೊರೆಯಲಿಲ್ಲ. ನಿರ್ಣಯದಾಯಕ ಉತ್ತರ ಯಾವುದೂ ಆತನಿಗೆ ಸಿಗಲಿಲ್ಲ. ಸುಭದ್ರಳ ನಡತೆಯೂ ಯೋಚಿಸುತ್ತ ಹೋದಂತೆ ಇನ್ನು ನಿಗೂಢತೆಯ ಜಾಲದೊಳಗೇ ಜಾರಿಕೊಂಡಂತೆ ಭಾಸವಾಗುತ್ತದೆ. ಹೀಗೆಯೇ ಪ್ರತಿಯೊಂದೂ ಅನಿಶ್ಚಿತವಾಗಿರುವ ಕಲ್ಮನೆಯಲ್ಲಿ ಮೌಢ್ಯ, ಕ್ರೌರ್ಯ, ಹಿಂಸೆ ಹಾಗೂ ಕಾಡು ಇವೆಲ್ಲ ಸುಳಿಸುಳಿಯಾಗಿ ಸುತ್ತಮುತ್ತಲಿನ ಜೀವಜಾಲವನ್ನೆಲ್ಲ ಅಲ್ಲೋಲಕಲ್ಲೋಲ ಮಾಡುವಂತೆ ಭಾಸವಾಗುತ್ತದೆ. ಯಾವುದಕ್ಕೂ ಪ್ರೇಮ,

ಮೌಢ್ಯ, ಜೀವನ, ಸಾವು, ಬೆಳೆ, ಮಳೆ, ಹೀಗೆ ಯಾವುದಕ್ಕೂ ಒಂದು ನಿರ್ಣಯವಿಲ್ಲದ ಅನಿಶ್ಚಿತ ಬದುಕನ್ನು ನೋಡಿದಾಗ ಸೋಮುಗೆ ಅನ್ನಿಸುವುದು –

> ಹೀಗೆಲ್ಲ ಯೋಚಿಸುವುದೇಕೆ? ವಾದಿಸುವುದೇಕೆ ಅಗುವುದು ತನ್ನ ಪಾಡಿಗೆ ತಾನು ಆಗಿಯೇ ಆಗುತ್ತದೆ. ಯೋಚನೆ ಎಲ್ಲ ಸುಮ್ಮನೆ. ಜೀವನದೊಡನೆ ನೇರ ಸಂಬಂಧವಿರದ ವಿಚಾರವಾದ ನಿರರ್ಥಕ. ಹೊತ್ತುಗಳೆಯಲು ಬುದ್ಧಿಜೀವಿ ಮಾಡಿಕೊಂಡ ತಂತ್ರ. ನನ್ನ ಯೋಚನೆ ಎಲ್ಲ ಈ ಹಲಸಿನ ಮರದಡಿ ಬಿದ್ದಿರುವ ಶುಷ್ಕ ತರಗೆಲೆ'[೧೯]

ಎಂದು ತಾತ್ವಿಕವಾದ ಒಂದರ್ಥ ಸೋಮುವಿನಲ್ಲಿ ಹೊಮ್ಮುತ್ತದೆ. ಹಾಡಲಕ್ಕಿಯನ್ನು ಹೊಡೆಯಲು ಹೋದಾಗ, ಅದು ಸಿಗುವುದೋ ಇಲ್ಲವೋ ಎಂಬುದೂ ಅನಿಶ್ಚಿತವೇ ಆದಾಗ ಸೋಮು ಗಿರಿಯರು ಮಾನಸಿಕವಾಗಿಯೂ, ಲಿಂಗನು ಭೌತಿಕವಾಗಿಯೂ ಅಂತಹ ಅನಿಶ್ಚಿತ ಸುಳಿಯಲ್ಲಿ ಸಿಲುಕಿರುತ್ತಾರೆ. ಹೀಗೆ ಕಾಡು ಮತ್ತು ಕ್ರೌರ್ಯ ಕೇವಲ ಅಮೂರ್ತವಾದ ನಿಶ್ಚಿತತೆಯನ್ನಷ್ಟೇ ತಿಳಿಸುವುದು. ಅದರಾಚೆಗಿನ, ತರ್ಕಕ್ಕೆ ನಿಲುಕದ, ತಾತ್ವಿಕ ವಿಚಾರಗಳನ್ನು, ಪ್ರಶ್ನೆಗಳನ್ನು ಬಿತ್ತಿ ಓದುಗರನ್ನು ಆಲೋಚಿಸುವಂತೆ ಮಾಡುತ್ತದೆ.

'ನಮ್ಮ ಸಂಸ್ಕೃತಿಯಲ್ಲಿ ಯಾವುದು ಅಗತ್ಯವೋ ಅದು ಉಳಿದುಕೊಳ್ಳುತ್ತದೆ. ಯಾವುದು ಅನಗತ್ಯವೋ ಅದು ಮಾಯವಾಗುತ್ತದೆ. ಹಿಂದಿನಿಂದಲೂ ಅದೇ ಆಗುತ್ತಾ ಬಂದಿರುವುದು. ಕಾಲದೊಂದಿಗೆ ಸಂಸ್ಕೃತಿ ಬದಲಾಗುತ್ತಾ ಇರುತ್ತದೆ. ಬೇಕಾದ್ದನ್ನು ಇಟ್ಟುಕೊಳ್ಳುತ್ತದೆ. ಬೇಡವಾದದ್ದನ್ನು ಬಿಡುತ್ತದೆ.'[೨೦] ಇದು ಅಂತಿಮವಾಗಿ ತೇಜಸ್ವಿಯವರು ಕಂಡುಕೊಳ್ಳುವ ದರ್ಶನವಾಗಿದೆ.

## ೫.೩ ಅಸಂಗತ ಬದುಕಿನಲ್ಲಿ ನಿಶ್ಚಿತತೆಯ ಹುಡುಕಾಟ

ಒಂದೇ ವಿಷಯದಲ್ಲಿ ತೊಡಗಿಸಿಕೊಳ್ಳುವ ಇಚ್ಚೆ ಇಲ್ಲದೇ ಹೋದಾಗ ಮನುಷ್ಯರು ತಾವು ನಂಬಿದ ಯೋಜನೆಗಳಿಗೆ ಬದ್ದರಾಗಿ ಅದರಂತೆ ವರ್ತಿಸುತ್ತಾರೆ. ಒಂದು ವಿಷಯಕ್ಕೆ ಸಂಬಂಧಿಸಿದಂತೆ ತಾದ್ಯಾತ್ಮ ಇಲ್ಲದೇ ಹೋದಾಗ ಮನುಷ್ಯರ ಗುಣ ಸ್ವಭಾವಗಳು ವೈಪರೀತ್ಯಕ್ಕೆ ಎಡೆಮಾಡಿಕೊಟ್ಟು ಅಸಂಗತವೆನಿಸುತ್ತವೆ.

ವೈಯಕ್ತಿಕ ನೆಲೆಯಲ್ಲಿ ಹೊಸ ಅಸ್ತಿತ್ವವನ್ನು ರೂಪಿಸುವ ಆಶಯವು ಇಲ್ಲಿ ಪ್ರಮುಖವಾಗಿದೆ. ಅಂದರೆ ಬದುಕಿನ ಕ್ರಮ ಮತ್ತು ಆಲೋಚನೆಯ ನಡುವಿನ ಸಾಮರಸ್ಯವನ್ನು ಎಲ್ಲ ಶ್ರೇಷ್ಠ ತಾತ್ವಿಕ ಚಿಂತನೆಗಳು ಮಾಡಿವೆ. ಇದರಿಂದಾಗಿ ಒಂದು ಕೃತಿಯ ವಸ್ತು ಮತ್ತು ಅದರ ಆಕೃತಿಗೂ, ಜೀವನ ಕ್ರಮದ ಬೆಳವಣಿಗೆ, ಬದಲಾವಣೆಗಳಿಗೂ ಇರುವ ಅನಿವಾರ್ಯ ಸಂಬಂಧಗಳು ಅನಾವರಣಗೊಳ್ಳುತ್ತವೆ.

ಅಸಂಗತ ಬದುಕಿನಲ್ಲಿ ನಿಶ್ಚಿತತೆಯ ಹುಡುಕಾಟ ಮತ್ತು ಅದರ ನೆಲೆಗಳನ್ನು ಕುರಿತ ದರ್ಶನ ತೇಜಸ್ವಿಯವರ ನಿಗೂಢ ಮನುಷ್ಯರು, ಸ್ವರೂಪ ಮತ್ತು ಹುಲಿಯೂರಿನ ಸರಹದ್ದು, ಯಮಳ ಪ್ರಶ್ನೆ, ಕಾಡು ಮತ್ತು ಕ್ರೌರ್ಯ ಮೊದಲಾದ ಪ್ರಥಮ ಹಂತದ ಬರವಣಿಗೆಗಳಲ್ಲಿ ಸ್ಪಷ್ಟವಾಗಿ ರೂಪುಗೊಂಡಿದೆ. ತಮ್ಮ ತಮ್ಮ ವರ್ತುಲಗಳ ಸೀಮಿತತೆಯ ಅರಿವು ಇಲ್ಲಿನ ಎಲ್ಲ ಮುಖ್ಯ ಪಾತ್ರಗಳಿಗೆ ಇದೆ ಅಂದರೆ ಪ್ರಕೃತಿ ಮತ್ತು ಮಾನವರ ನಡುವಿನ ನಿರಂತರ ಸಂಘರ್ಷದಲ್ಲಿ ಹೊಮ್ಮುವ ತತ್ವಗಳ ಹಿನ್ನೆಲೆಯಲ್ಲಿ ವಿವೇಚಿಸಲಾಗಿರುವ ಇದರಲ್ಲಿನ ವಿವರಗಳು ಅತ್ಯಂತ ಕುತೂಹಲಕರವಾದ ಬೆಳವಣಿಗೆಯ ವಿಚಾರಗಳನ್ನು ನೀಡುತ್ತವೆ. ಬದಲಾವಣೆಗೆ, ನಶ್ವರತೆಗೆ ಕಾರಣವಾದ ಪ್ರಕೃತಿಯನ್ನು ನಿರಾಕರಿಸಿ ಮಾನವರಿಗಷ್ಟೇ ಸೀಮಿತಗೊಂಡಿರುವ ಪುರುಷ ತತ್ವವು ಶಾಶ್ವತವೆನಿಸುವ ಹೊಸ ನೆಲೆಯನ್ನು ಬಯಸುತ್ತದೆ. ಒಂದರ್ಥದಲ್ಲಿ ತನ್ನನ್ನು ತಾನು ಅರಿಯುವ ನೆಲೆಯೇ ಅಂತಿಮವಾದದ್ದು ಎಂದುಕೊಂಡು ತನ್ನ ಹೊಸ ಹುಡುಕಾಟವನ್ನು ಅಲ್ಲಿಗೇ ಸೀಮಿತಗೊಳಿಸಿಕೊಳ್ಳುವುದು ನಡೆಯುತ್ತದೆ.

> ನನ್ನ ಕ್ಷುಲ್ಲಕ ಜೀವನದ ಯಃಕಶ್ಚಿತ್ ಘಟನೆಗಳನ್ನೆಲ್ಲಾ ಹೇಳುತ್ತಾ ಬ್ರಹ್ಮಾಂಡದ ಸತ್ಯವನ್ನು ಹೊರಗೆಡಹುವವನಂತೆ ಆಡುವುದು. ಅದನ್ನು ಉದಾಹರಿಸಿ ಕತೆ ಬರೆಯುವುದು ಇವುಗಳೆಲ್ಲಾ ಶುದ್ಧ ಬೇಜಾರಿನ ತಲೆ ಬೇನೆ ತರಿಸುವ ವಿಷಯ. ಅಸಂಬದ್ಧ ವಿಷಯಗಳನ್ನೆಲ್ಲಾ ನಿನ್ನ ತಲೆಗೆ ತುರುಕಿ ಬೇಜಾರು..........[೨೧]

> ನಾನು ನುಡಿಯುತ್ತಿರುವ ಕತೆಯ ಮೂಲ ರಸವೇ ಬೇಜಾರು. ವಿಸಂಗತವಾದ ಅಸಂಗತವಾದ ವಿಷಯಗಳನ್ನೆತ್ತಿ ಅರ್ಥದ ಕಾಮನಬಿಲ್ಲನ್ನು ಕಟ್ಟಬೇಕು. ಸಾವನ್ನು ಬಲಾತ್ಕಾರದಿಂದಲಾದರೂ ಮರೆತು ಜೀವನಕ್ಕೊಂದು ಅರ್ಥ ರೂಪಿಸಬೇಕು. ಈ ಬ್ರಹ್ಮಾಂಡದ ಘೋರ ನಿರರ್ಥಕತೆಯಲ್ಲಿ ಕಲಾವಿದ ಅರ್ಥಪೂರ್ಣ ಕಲಾಕೃತಿಗಳನ್ನು ನಿರ್ಮಿಸಬೇಕೆನ್ನುವುದು ಕಠೋರ ದುರಂತ. [೨೨]

> ಆಕೆಯ ಕನ್ಯಾತನವನ್ನು ಈವರೆಗೂ ಕೆಡಿಸದೆ ಉಳಿಸಿದ್ದನ್ನು ನೆನೆದಾಗ, ಆಕೆಯನ್ನು ಇನ್ನಾವನೋ ತೋಳತೆಕ್ಕೆಯಲ್ಲಿ ಕಲ್ಪಿಸಿಕೊಂಡಾಗ, ನನ್ನ ದುಃಖ ಮಿಗಿಲಾಗುತ್ತಿದ್ದಿತು. [೨೩]

ಇನ್ನೂ ನೀನು ನಾನೇಕೆ ಕತೆ ಬರೆಯುತ್ತಿಲ್ಲ ನಿನ್ನ ಹಾಗೆ, ಕಾದಂಬರಿ ಬರೆಯುತ್ತಿಲ್ಲ. ಎಂದು ಯೋಚಿಸುತ್ತಿದ್ದರೆ ನಾನೇನು ಹೇಳಲಿ. ಹೋಗು. ನಾಲ್ಕಾರು ಪದ, ಸಂಗತಿಗಳನ್ನು ಬದಲಿಸಿ ಈ ಕತೆಯನ್ನು ನಿನ್ನದೇ ಮಾಡಿ ತಿಳಿಸು. ಸಾಹಿತಿ ಅನ್ನಿಸಿಕೊಂಡಿದ್ದಕ್ಕೆ ನೀವೆಲ್ಲಾ ನಿಮ್ಮದನ್ನೇ ಅನ್ಯರ ನಾಮಧೇಯ ತೊಡಿಸಿ ತಿಳಿಸುವ ಹವ್ಯಾಸ ಬೆಳೆಸಿಕೊಂಡಿದ್ದೀರಿ.[೨೪]

ಗೆಳೆಯರೆದುರು ಹೇಗೆ ಕನ್ನಡದಲ್ಲಿ ನನ್ನನ್ನು ನಾನು ಅಭಿವ್ಯಕ್ತಗೊಳಿಸಲು ಕಷ್ಟ. ಅದೇ ಆಂಗ್ಲ ಭಾಷೆಯಲ್ಲಾದರೆ ಆ ಭಾಷೆಯ ಬರಹಗಾರರು ಎಷ್ಟು ಸುಲಭವಾಗಿ ಎಷ್ಟೊಂದು ಸೂಕ್ಷ್ಮ ಭಾವನೆಗಳನ್ನೆಲ್ಲಾ ವ್ಯಕ್ತಪಡಿಸುತ್ತಾರೆ, ಎಂದು ಕನ್ನಡ ಭಾಷಾ ಮಾಧ್ಯಮದ ದೌರ್ಬಲ್ಯಕ್ಕಾಗಿ ಕೊರಗಬೇಕೆಂದುಕೊಂಡಿದ್ದೆ. ಕೇವಲ ಅಭಿವ್ಯಕ್ತಿ ಮಾಧ್ಯಮದ ದೆಸೆಯಿಂದ ನನ್ನ ಮಹತ್ವದ ಅರ್ಥವೆಲ್ಲಾ ನನ್ನೊಳಗೇ ಉಳಿದುಕೊಂಡಿದೆ ಎಂದು ನನ್ನ ನಂಬಿಕೆ.[೨೫]

ತನ್ನಲ್ಲಿ ಉದ್ಭವವಾಗುತ್ತಿದ್ದ ಅನೇಕ ಪ್ರಶ್ನೆಗಳನ್ನು ಹೇಮಂತನೆದುರಿಗೆ ಪ್ರಸ್ತಾಪಿಸುವ ಶ್ರೀನಿವಾಸ ಇಡೀ ಮಾನವ ಸಮೂದಾಯವೇ ಮೌಲ್ಯಗಳನ್ನು ಸೃಷ್ಟಿಸಿಕೊಂಡು ಯಾವ ನಿಶ್ಚಿತ ತೀರ್ಮಾನಕ್ಕೂ ಬರಲಾಗದೆ ಒದ್ದಾಡುತ್ತಿರುವುದರ ಬಗ್ಗೆ ತಾತ್ವಿಕವಾದ (ಉತ್ತರವನ್ನು) ಅರ್ಥವನ್ನು ಬಯಸುತ್ತಿದ್ದಾನೆ. ವೈಯಕ್ತಿಕ ಬದುಕಿನ ಘಟನೆಗಳನ್ನು ಹಲವು ವೈರುಧ್ಯಗಳೊಂದಿಗೆ ಶ್ರುತಪಡಿಸುತ್ತ ಕಣ್ಣಿಗೆ ಕಾಣುವ ಭಿನ್ನತೆಗಳನ್ನು ಗುರುತಿಸುತ್ತಾ ಜೀವನದ ಅರ್ಥ ಶೋಧನೆಯನ್ನು ಮಾಡುತ್ತಾನೆ. ಸತ್ವಯುತವಾದ ಮೌಲ್ಯ ಪರಿವೀಕ್ಷಣೆಯ ಜೊತೆಗೆ ಅರ್ಥಹೀನ ಮೌಲ್ಯಗಳನ್ನು ಮುಖಾಮುಖಿಯಾಗಿಸಿ ಅನುಭವ ನಿಕಷಕ್ಕೆ ಸಿಗುವ ಮೌಲ್ಯಗಳನ್ನು ಚಾಚೂ ತಪ್ಪದೆ ಅನುಸರಿಸುವುದಕ್ಕಿಂತ ಅವುಗಳನ್ನು ತನ್ನ ಸಾಧ್ಯತೆಯ ಮಿತಿಯಲ್ಲಿ ಎದುರುಗೊಳ್ಳುವುದು ಸರಿ ಎಂಬ ತೀರ್ಮಾನಕ್ಕೆ ಬರುತ್ತಾನೆ.

ಮನುಷ್ಯನ ಜೀವನದ ಅವಿಭಾಜ್ಯ ಅಂಗವಾದ ಭಾಷೆ ಮತ್ತು ಸಮರ್ಥ ಸಂವಹನ ಮಾಧ್ಯಮ ಹಾಗೂ ಕಲಾಮಾಧ್ಯಮವಾದ ಸಾಹಿತ್ಯ ಸೃಷ್ಟಿಯಲ್ಲಿಯೂ, ಸಾಹಿತಿಯ ಸೃಜನಶೀಲತೆ, ಕಲಾತ್ಮಕತೆ ಹಾಗೂ ಬೌದ್ಧಿಕತೆ, ಭಾವಾಭಿವ್ಯಕ್ತಿಯ ಪ್ರಕಾರಗಳು ಬೆಳೆಯುತ್ತಾ ಹೋಗುತ್ತವೆ. ವಾತಾವರಣ ಹಾಗೂ ಪರಿಸರದಲ್ಲಿನ ಬದಲಾವಣೆಗಳಂತೆಯೇ ಸಾಹಿತಿಯ ಬುದ್ಧಿಮತ್ತೆ ಮತ್ತು ಯೋಚನಾಲಹರಿಯಲ್ಲಿಯೂ, ಬರವಣಿಗೆ ಹಾಗೂ ಅಭಿವ್ಯಕ್ತಿಯ ಗತಿಗಳಲ್ಲಿಯೂ, ಬದಲಾವಣೆಗಳಾಗುತ್ತವೆ. ಸಾಹಿತ್ಯ ಮಾಧ್ಯಮ ಕಲಾಪ್ರಕಾರವಾದರೂ ಅದರ ಕರ್ತೃವಿನ ಬೌದ್ಧಿಕ ಸ್ಥಿತಿಗತಿಗಳನ್ನು ಅಥವಾ ಯೋಚನಾಲಹರಿಗಳ ಮಟ್ಟವನ್ನೂ ಆತನ ಕ್ರಿಯೆಗಳಲ್ಲಿ, ಸೃಷ್ಟಿಗಳಲ್ಲಿ, ಅಭಿವ್ಯಕ್ತಿಗಳಲ್ಲಿ ಆದ ಬದಲಾವಣೆಗಳನ್ನು ಪ್ರಾಯೋಗಿಕವಾಗಿ ಪ್ರಸ್ತುತ ಪಡಿಸುತ್ತದೆ.

ಮನುಷ್ಯನ ಮಾತು, ಭಾಷೆ, ನ್ಯಾಯ ಧರ್ಮ ಇದೆಲ್ಲಾ ಬಹಳ ಮೇಲಿನ ತಿಳಿ ಕಣಯ್ಯ. ಈ ತಿಳಿಯಿಂದ ಕೊಂಚ ಕೊಂಚವೇ ಕೆಳಗಿಳೀತಾ ಬಂದಂತೆಲ್ಲಾ ನಿನ್ನ ಇತ್ಯರ್ಥಶಕ್ತಿ ಉಡುಗಿ ನಡುಗತೊಡಗುತ್ತದಯ್ಯಾ, ಒಂದೊಂದೂ ಪರಸ್ಪರ ತದ್ವಿರುದ್ಧಗಳ ಮೊಟ್ಟೆ ಎಲ್ಲ ಹೀಗೂ ಅಲ್ಲ, ಹಾಗೂ ಅಲ್ಲ, ಅನ್ನೋದು ಅಲ್ಲ[೨೬]

ಮಾನವ ಸಮಾಜ ತನ್ನ ನಾಗರಿಕತೆಯ ಉಛ್ರಾಯ ಸ್ಥಿತಿಗೆ ತಲುಪುತ್ತಿದ್ದರೂ ಮನದ ಯಾವುದೋ ಮೂಲೆಯಲ್ಲಿನ ತನ್ನತನದ, ತನ್ನ ಅಸ್ತಿತ್ವದ ಬಗೆಗಿನ ನಿರುತ್ತರದಾಯಕ ಎಷ್ಟೋ ಪ್ರಶ್ನೆಗಳನ್ನು, ಹಿಂಜರಿಕೆಗಳನ್ನ ಯಾವುದೋ ಒಂದು ರೀತಿಯಲ್ಲಿ ಭಾವಾಭಿವ್ಯಕ್ತಿ ಗೊಳಿಸತೊಡಗುತ್ತಾನೆ. ತನ್ನ ಬಗೆಗೆಗಿನ ಕುತೂಹಲಗಳನ್ನ, ಸಮಾಧಾನಗಳನ್ನ, ಪ್ರಶಂಸೆಗಳನ್ನ,

ಅಮೂರ್ತವಾದ ಭಾವಕಲ್ಪನೆಗಳಿಂದ ಎತ್ತಿ ಮತ್ತೊಬ್ಬ ಮಾನವ ತನ್ನನ್ನು ಕೇಳಲೆಂದು, ಅರ್ಥೈಸಿಕೊಳ್ಳಲೆಂದು ಬಯಸುತ್ತಾನೆ ಕೂಡಾ. ಅದಕ್ಕೆ ವ್ಯಕ್ತರೂಪದ ಮಾತಿನ ಲೇಪ ಹಚ್ಚಬೇಕಾಗುತ್ತದೆ. ಸಮಾಜದ ಸೀಮಿತ ಪರಿಧಿಯೊಳಗೆ ನಿರ್ದಿಷ್ಟ ಮಾತಿನಲ್ಲಿ ಅಭಿವ್ಯಕ್ತಗೊಳಿಸಬೇಕಾದರೆ ಬಹುಶಃ ಎಲ್ಲೋ ಆ ವ್ಯಕ್ತಿ ಹೇಳಹೊರಟಿರುವ ಅರ್ಥ ಆ ಭಾಷೆಯರೂಪದಲ್ಲೇ ಉಳಿದು ಶ್ರೋತೃ ಅಥವ ಓದುಗನನ್ನು ತಲುಪಲಾರದೇ ಹೋದಾಗ ತಾವೇ/ತಮ್ಮ ನಾಗರಿಕತೆಯೇ ಸೃಷ್ಟಿಸಿದ ಆ ಭಾಷೆಯ ಮೇಲೆ ದಿವ್ಯ ವೈರಾಗ್ಯ ಮೂಡಬಹುದು. ಅಸ್ತಿತ್ವಕ್ಕೆ ಒಂದು ಅರ್ಥ ಹುಡುಕ ಹೊರಟರೆ ಅದು ಎಂದೋ ಕೊನೆಕಂಡೇ ಕಾಣುತ್ತದೆ ಎಂಬ ವಿಚಾರ ತಿಳಿದಾಗ, ಆ ಸೃಜನಶೀಲತೆ ಅಂದೇ ಮುಗಿಯದಂತೆ ಕೊನೆಯವರೆಗೂ ಉಳಿಯಲೆಂಬ ಭಾವನೆ ಸೃಜಿಸುತ್ತದೆ. ನಾವೆಷ್ಟೇ ಸೃಷ್ಟಿಸಿದರೂ ಸಾಧಿಸಿದರೂ ಏನೇ ಮಾಡಿದರೂ ಚಿರಸ್ಥಾಯಿಯಾಗಿ ಉಳಿಯಲಾರದು ಎಂದ ಮೇಲೆ ನಾವು ಬಯಸಿದ ಅರ್ಥ ಬೇರೆಯವರನ್ನು ತಲುಪಲಾರದು ಎಂದ ಮೇಲೆ ಏನು ಹೇಳಿದರೇನು ಎಂಬ ಭಾವನೆಯನ್ನು ಕೇವಲ ದಿಗಂತದ ಮೌನ ಆವರಿಸಲೂಬಹುದು. ವ್ಯಕ್ತವಾಗಲಾರದ ಆ ಕೊನೆಯೇ ಭೌತವಸ್ತುವಿನ ಅಸ್ತಿತ್ವದ ಅಂತ್ಯ. ಅನುಭವಗಳೆಲ್ಲವನ್ನು ಒಟ್ಟುಗೂಡಿಸ ಬಯಸುವ, ಅಸ್ತಿತ್ವವನ್ನು ಹುಡುಕ ಹೊರಟ ಸೃಜನಶೀಲ ಬುದ್ಧಿವಂತ ವ್ಯಕ್ತಿಯನ್ನು ಎರಡು ರೀತಿಯಲ್ಲಿ ವರ್ಗೀಕರಿಸಬಹುದು. ಮಾತಿನಲ್ಲಿ ಹೇಳಬಹುದಾದ್ದೆಲ್ಲವನ್ನೂ ಹೇಳುವಂತೆ ಪ್ರೇರೇಪಿಸುವ ಹಾಗೂ ಎಲ್ಲದರಿಂದ-ಮಾತಿನಿಂದಲೂ ಹಿಂದೆ ಸರಿಸಬಹುದಾದ ಎರಡು ಆಯ್ಕೆಗಳನ್ನು ನೀಡಬಲ್ಲುದಾದರೆ ಅನಂತ ಭಾವಗಳ ತಿಳಿಎಳೆಯನ್ನು ಪರಿಚಯಿಸಬಹುದಾದ, ಮೂರ್ತರೂಪಕ್ಕೆ ತರಬಹುದಾದ ಭಾಷೆ\ಮಾತು ಅಪರಾವತಾರ ತಾಳಿಬಿಡುತ್ತದೆ.

ತನ್ನದೇ ಭಾಷೆಯನ್ನು ತನ್ನ ಹಿಡಿತದಲ್ಲಿ ಇರಿಸಿಕೊಳ್ಳಲಾಗದ ಅಸಹಾಯಕತೆ ಮತ್ತು ಸರಿಯಾದ ಅರ್ಥವನ್ನು ಸಂವಹನ ಮಾಡದೇ ಅರ್ಥಪಲ್ಲಟಗೊಳ್ಳುವ ಸಂದಿಗ್ಧತೆ ಇವು ತೇಜಸ್ವಿಯವರನ್ನು ಕಾಡಿದ್ದು ನಿಜ. ಇದನ್ನು ಪರಿಹರಿಸಲು ಭಾಷೆಯ ಸಂವಹನ ಸಾಧ್ಯತೆಗಳನ್ನು ಹುಡುಕುವ ಪ್ರಯತ್ನ ಮೊದಲಾಯಿತು ಎಂದು ಹೇಳಬಹುದು. 'ಭಾಷೆಯನ್ನು ನಾವೆಲ್ಲ ದಿನನಿತ್ಯ ಬಳಸುವುದರಿಂದ ತಕ್ಷಣ ಸ್ಫುರಿಸುವ ಸಾಕಷ್ಟು ನಿರ್ದಿಷ್ಟವಾದ ಅರ್ಥ. ಇನ್ನೊಂದು ಭಾಷೆಗೂ ಒಂದು ಚರಿತ್ರೆ ಮತ್ತು ಭೂಗೋಲ ಇರುವುದರಿಂದ ಭಾಷೆಯನ್ನು ಜನ ನಾನಾ ಸಂದರ್ಭಗಳಲ್ಲಿ, ನಾನಾ ಕಡೆಗಳಲ್ಲಿ ಉಪಯೋಗಿಸಿರುವುದರಿಂದ ಅದಕ್ಕೆ ಉಂಟಾಗುವ ಅನೇಕ ಸ್ಥರಗಳ ಅರ್ಥ'[22]

ಇರುವುದನ್ನು ಇದ್ದಂತೆ ಹೇಳಲು, ಇದ್ದದ್ದನ್ನು ಇದ್ದಂತೆ ಅರ್ಥೈಸಿಕೊಳ್ಳಲು ಸಾಧ್ಯವಾಗದ ಭಾಷೆ ಮಾತಿನಾಚೆಗಿನ ಸತ್ಯ, ಮಾತಿನೀಚಿನ ವಾಸ್ತವ ಎರಡನ್ನೂ ಮೂರ್ತವಾಗಿಸಲಾಗದ ಸಮಸ್ಯೆಯತ್ತ ಬಾಗುತ್ತದೆ. ಭಾಷೆಯೆನ್ನುವುದು ಸಂವಹನ ಮಾಧ್ಯಮ ಅಂತೆಯೇ ಸಂವಹನ ವ್ಯಕ್ತಿ-ವ್ಯಕ್ತಿಗಳ ನಡುವೆ ವ್ಯಕ್ತಿ-ಸಮಾಜದ ನಡುವೆ ನಡೆಯುವಾಗ್ಗೆ ಭಾಷೆ ಸೀಮಿತಾರ್ಥದಲ್ಲೇ ಸಂವಹನಗೊಂಡಾಗ ವಿರೋಧಾಭಾಸಗಳಿರುವುದಿಲ್ಲ. ನುಡಿಯುವ ನುಡಿಯನ್ನು ಆಧರಿಸಿ ಅರ್ಥ ಹುಡುಕಿ ಇತ್ಯರ್ಥಕ್ಕೆ ತೊಡಗಿದರೆ ಎಲ್ಲವೂ ಗೋಜಲು-ಗೊಂದಲ. ವ್ಯಕ್ತಿಯ ಅಪರಿಮಿತ ಬೌದ್ಧಿಕ ಶ್ರಮದ ಜೊತೆಗೆ ಮಾತಿನ ಕಸರತ್ತು ಗೊಂದಲವನ್ನೇ ಸೃಷ್ಟಿ ಮಾಡುತ್ತದೆ.

ಭಾಷೆ ಸರಿಯಾದ ಅರ್ಥವನ್ನು ಸಂವಹನ ಮಾಡುವುದೇ ಇಲ್ಲ. ಮಾತು ಹೇಳಬೇಕು ಎಂಬುದನ್ನು ಬಿಟ್ಟು ಇನ್ನೊಂದನ್ನು ಹೇಳುತ್ತದೆ ಎಂದರೆ, ಆ ಇನ್ನೊಂದಾದರೂ ನಿಜವಿರಬೇಕಲ್ಲ

ಆದರೆ ಅದೂ ನಿಜವಲ್ಲ ಎನ್ನುತ್ತದೆ ತಾತ್ವಿಕ ಚಿಂತನೆ. ಪ್ರತಿಯೊಂದನ್ನೂ ತೀವ್ರವಾಗಿ ಸಂದೇಹಿಸುವ ಮನೋವೃತ್ತಿ ಭಾಷೆಗೆ ಮಾತ್ರ ಸೀಮಿತವಾಗದೆ ಎಲ್ಲ ವಲಯವನ್ನೂ ಆಕ್ರಮಿಸಿ ಇತ್ಯರ್ಥಕ್ಕೆ ಬರಲಾಗದೆ ಉಳಿದುಬಿಡುತ್ತದೆ. ಒಟ್ಟಿನಲ್ಲಿ ಇದೊಂದು ಅಮೂರ್ತವಾದ ವಿತಂಡವಾದವಾಗಿ ಕಾಣುತ್ತದೆ.

ವಿಭಿನ್ನ ನೆಲೆಗಳಲ್ಲಿ ಬೌದ್ಧಿಕ ನೆಲೆಗೆ ಮಾಯಾಮೃಗ ಕಥೆಯೇ ಹಲವು ನಿದರ್ಶನಗಳನ್ನು ಹೊರಹೊಮ್ಮಿಸುತ್ತದೆ. ಮಾಯಮೃಗ ಕಥೆಯ ಪ್ರಾರಂಭವೇ ಗೆಳೆಯರಿಬ್ಬರ ತೀವ್ರಕುತೂಹಲಕ್ಕೆ ತೆರೆದುಕೊಳ್ಳುವ ದೆವ್ವದ ಅಸ್ತಿತ್ವದ ಶೋಧ. ಈ ಹುಡುಕಾಟ ಕೇವಲ ದೆವ್ವದ ಅಸ್ತಿತ್ವವೇ ಅಲ್ಲದೇ ವ್ಯಕ್ತಿಯ ಅಸ್ತಿತ್ವವನ್ನೂ ಹುಡುಕ ಹೊರಟಿರುವುದರತ್ತ ಕೇಂದ್ರೀಕೃತವಾಗಿದೆ.

> ಮಾಯಾಮೃಗ ನಮ್ಮೆಲ್ಲರ ಮನಸ್ಸಿನೊಳಗಿನ ಆತಂಕ, ಭ್ರಮೆ ಮತ್ತು ಅಸ್ಥಿರತೆಯ ಕನ್ನಡಿ. ನಂಬಿಕೆ ಮತ್ತು ಸತ್ಯಗಳ ನಡುವೆ ನಡೆಯಬಹುದಾದ ಗಂಭೀರ, ದ್ವಂದ್ವ ಮತ್ತು ಸಂಘರ್ಷಗಳ ಆಯಾಮ ಮಯಾಮೃಗದಲ್ಲಿ ತೆರೆದುಕೊಳ್ಳುತ್ತಲೇ ಚಿಂತನೆಗೆ ಹಚ್ಚುತ್ತದೆ. ನಮ್ಮೊಳಗಿನ ಪ್ರಜ್ಞೆಯ ಪರಿಧಿ ಒಂದಿಲ್ಲೊಂದು ರೂಪದಲ್ಲಿ ಭಯವಾಗಿ ಕಾಡುವ ಮತ್ತು ಆ ಕಾರಣಕ್ಕೆ ಎಲ್ಲ ವಿಕಾರ, ದುಷ್ಟತೆಗಳಿಗೂ ನಾವೇ ಮಾದರಿಯಾಗುವ ವಿಪರ್ಯಾಸವನ್ನು ಕತೆ ರೂಪಕದ ಮೂಲಕವೇ ಬಿಚ್ಚಿಡುತ್ತದೆ.[೨೮]

ಈ ಮಾತುಗಳು ಸಂಘರ್ಷಗಳಿಗೆ ಎದೆಯೊಡ್ಡುವ ಮನಸ್ಸು ಅಪರಿಮಿತವಾದ ಶಕ್ತಿಯನ್ನು ಹೊಂದಿದ್ದಾಗ ಮಾತ್ರ ಬೇರೆ ಬೇರೆ ರೀತಿಯ ಸ್ಥಿತ್ಯಂತರಗಳಿಗೆ ಸ್ಪಂದಿಸಲು ಸಾಧ್ಯ ಎಂಬುದನ್ನು ಸೂಕ್ಷ್ಮವಾಗಿ ಅವಗತಮಾಡಿಸುತ್ತದೆ.

ಸುಭದ್ರಾಳ ವಿವಾಹವಾದ ನಂತರ ಭಗ್ನ ಪ್ರೇಮಿಯಾದ ಸೋಮುವಿನ ಬದುಕು ತೀರಾ ಅಸಂಗತವಾಗಿತ್ತೆಂದೇನೂ ಅರ್ಥವಲ್ಲ. ಆದರೂ ಅವಳಿದ್ದಾಗಿನ ಸಂತೋಷ ಇರಲಿಲ್ಲವೆಂದಷ್ಟೇ ಅರ್ಥ. ಇದರಿಂದ ಆತ ತನ್ನ ಪ್ರೇಮರಹಿತ ಬದುಕಿನಲ್ಲಿ ನಳಿನಿಯ ಪ್ರೇಮವನ್ನು ಹುಡುಕುತ್ತಿದ್ದ, ಬಯಸುತ್ತಿದ್ದ. ತಂದೆಯ ಮರಣಾನಂತರ ನಳಿನಿಯೂ ಮೌನವಾಗಿದ್ದಳು. ಆಕೆಯೂ ಅಂತಹ ನೀರಸ ಬದುಕಿನಲ್ಲಿ ಅಸಂಗತ ಮತ್ತು ಅಸಾಂದರ್ಭಿಕ ಪ್ರೇಮವನ್ನು ಸೋಮು ಒಪ್ಪಬಹುದೇ ಎಂಬ ಅನುಮಾನ, ಕೌತುಕ, ಡೋಲಾಯಮಾನ ಮನಸ್ಸಿನಿಂದದ್ದಳು. ಇನ್ನು ಲಿಂಗನಿಗೂ ರಂಗಪ್ಪನಿರದ ಬದುಕು ಅಸಂಗತವೇ ಎಂದೆನಿಸಿ (ಬಯಲುಸೀಮೆಗೆ ಹೋಗಿಬಿಡುವ) ಮನದ ನಿಚ್ಚಳ ಬಯಕೆಯಾದ ಬಯಲುಸೀಮೆಯಕಡೆಗೆ ಹೊರಟು ಬಿಡುವ ಯೋಚನೆಯನ್ನು ಹಾಕಿದ್ದು, ಜೀವನವೇ ಅಸಂಗತವಾಗಿರುವ ಕಲ್ಪನೆಯಲ್ಲಿ ಪ್ರತಿಯೊಬ್ಬರೂ ಒಂದೊಂದು ನಿಚ್ಚಳಸ್ಥಿತಿಯನ್ನು ಬಯಸಿಯೇ ಇದ್ದರು. ಅಸಂಗತ ಸಮಾಜದ ವಿಕಲ ಮನಸ್ಥಿತಿಯ ಜನರನ್ನು ಮಾಟ-ಮಂತ್ರ, ದೆಯ್ಯಗಳೆಂದು ಹಿಡಿತದಲ್ಲಿಟ್ಟುಕೊಳ್ಳಲಾಗದ್ದಕ್ಕಾಗಿ ಜೀವನದ ಬಗೆಗೆ ನಿಶ್ಚಿತವಾದ ಒಂದೇ ಒಂದು ನಿರ್ಣಯ ತಾಳಲು ಆಗುವುದಿಲ್ಲ. ಆತನಿಗೂ ಪ್ರತಿಯೊಂದೂ ತಳಮಳಕಾರಿಯೇ. ಹಾಗೆಂದು ಒಂದು ಜೀವನಕ್ರಮಕ್ಕೆ ಹೊಂದಿಕೊಂಡ ಇವರುಗಳ ಬದುಕು ಎಲ್ಲಿ ಹೋದರೂ ನಿಶ್ಚಿಂತತೆಯಿಂದ ಇರಬಹುದುದೆಂದಲ್ಲ. ಸಮಸ್ಯೆಗಳು ಎಲ್ಲಕಡೆಗೂ ಇರುತ್ತವೆ. ಹಾಗಿದ್ದು ಅಂತಹ ವಾತಾವರಣದಲ್ಲಿಯೇ ತಮ್ಮ ಬದುಕಿನ ನಿಶ್ಚಿತತೆಯನ್ನು ಹುಡುಕಿಕೊಳ್ಳ ಹೊರಟವರು ನಳಿನಿ-ಸೋಮು ಎಂದು ಹೇಳಬಹುದು. ಮಾನವರು ಎಷ್ಟೇ ಅವಕಾಶವಾದಿಗಳಾದರೂ, ಪಲಾಯನವಾದಿಗಳಾದರೂ ಸಮಸ್ಯೆಗಳ ಸುಳಿ ಮಾನವರನ್ನು ಎಲ್ಲೇ ಹೋದರೂ ಆವರಿಸಿರುತ್ತದೆ.

ಆದುದರಿಂದ ಇದ್ದುದರಲ್ಲೇ ನಿಶ್ಚಿತತೆಯನ್ನು ಹುಡುಕುವ ಪ್ರಯತ್ನವು ಅಸಂಗತತೆಯನ್ನು ದೂರಮಾಡಬಹುದು.

'ಈಗ್ಗೆ ಬಹುದಿನಗಳ ಹಿಂದೆ ಎಂದರೆ ಸುಮಾರು ನಾಲ್ಕು ವರ್ಷಗಳ ಹಿಂದೆ ಈ ಕಾದಂಬರಿಯನ್ನು ನಾನು ಬರೆದೆ. ಇದನ್ನು ಆಗಿಂದಾಗ್ಗೆ ಓದಿ, ತಿದ್ದಿ, ಈಗ ನನಗೆ ಈ ಕಾದಂಬರಿಯ ಪ್ರತಿ ವಾಕ್ಯಗಳೂ ಬೇಜಾರು ತರಿಸುವಷ್ಟು ಚಿರಪರಿಚಿತವಾಗಿ ಹೋಗಿದೆ. ಆದುದರಿಂದ ಈಗ ಇದರ ಮೇಲೆ ನನಗೆ ಯಾವ ಆರೋಗ್ಯಕರವಲ್ಲದ ಆಸಕ್ತಿಯೇ ಆಗಲೀ ವ್ಯಾಮೊಹವೇ ಆಗಲೀ ಇಲ್ಲ. ಆದುದರಿಂದ ಈ ಕಾದಂಬರಿಯ ಬಗ್ಗೆಗಿಂತ ಈ ಕಾದಂಬರಿಯ ನಿರ್ಮಾಣ ಕಾಲದ ನನ್ನ ಜೀವನ ಸಂದರ್ಭ ಹಾಗೂ ಸುತ್ತಣ ಸ್ಥಿತಿಗಳ ಬಗ್ಗೆ ಹಲವು ವಿವರಣೆ ಹಾಗೂ ವಿಶ್ಲೇಷಣೆಗಳನ್ನು ತಿಳಿಸುವುದು ಒಳ್ಳಿತಾಗಿ ಕಾಣುತ್ತಿದೆ. ಅಂದರೆ ಈ ಕಾದಂಬರಿಯ ಅಂತಃಸ್ಸತ್ವ ಅದರ ವಸ್ತುವಿನಿಂದ ಹೊರಗೆ ಬಂದಿದೆ. ಆದುದರಿಂದ ಈ ಮೂಲಕ ಅದನ್ನು ತಿಳಿಸುತ್ತೇನೆ ಎಂದೇನೂ ಅಲ್ಲ. ಅರಿವಿನತ್ತ ಕಲಾಕೃತಿಯ ಪ್ರಯತ್ನ ಬೇರೆ, ಆಲೋಚನೆಯ ಮಾರ್ಗ ಬೇರೆ ಅಷ್ಟೆ.'[38] ಎನ್ನುವ ಮಾತುಗಳು ಕೃತಿಕಾರನ ಜವಾಬ್ದಾರಿಯನ್ನು, ಕೃತಿಯೊಳಗೆ ಮಿಳಿತವಾಗಿರುವ ಅನಂತ ಸಾಧ್ಯತೆಗಳನ್ನು ಯಾವ ಕಾಲದಲ್ಲಿಯಾದರೂ ಸರಿ ಅರಿಯುವ ಪ್ರಯತ್ನ ನಿರಂತರವಾಗಿರುತ್ತದೆ ಎಂಬುದನ್ನು ಸೂಚಿಸುತ್ತದೆ.

**ಕೊನೆ ಟಿಪ್ಪಣಿಗಳು**

೧ ಹುಲಿಯೂರಿನ ಸರಹದ್ದು ಸ್ವರೂಪ ಆರನೆಯ ೨೦೦೭ ಪೂ.ಚಂ.ತೇ ಪು.ಸಂ ೫೬

೨ ಅದೇ ಪು.ಸಂ ೫೩, ೬೩

೩ ಅದೇ ಪು.ಸಂ ೭೦

೪ ಅದೇ ಪು.ಸಂ ೧೨೦

೫ ಹುಲಿಯೂರಿನ ಸರಹದ್ದು ನಿಗೂಢ ಮನುಷ್ಯರು ಆರನೆಯ ೨೦೦೭ ಪೂ.ಚಂ.ತೇ ಪು.ಸಂ ೧೨೫

೬ ಚಿದಂಬರ ರಹಸ್ಯ ಆರನೆಯ ಮುದ್ರಣ ೧೯೯೮ ಪೂ.ಚಂ.ತೇ ಪು.ಸಂ  ೬೧

೭ ಅದೇ ಪು.ಸಂ

೮ ಜುಗಾರಿ ಕ್ರಾಸ್; ಪೂ ಚಂ ತೇ ಪು.ಸಂ ೩೫

೯ ಕಾಡು ಮತ್ತು ಕ್ರೌರ್ಯ ಮುನ್ನುಡಿ ಎರಡನೆಯ ಮುದ್ರಣ ೨೦೧೩ ಪೂ.ಚಂ.ತೇ ಪು.ಸಂ ೭೭

೧೦ ಕರ್ವಾಲೊ ಪೂ.ಚಂ.ತೇ ಪುಟ ಸಂ.೨೯

೧೧ ತೇಜಸ್ವಿ ಕಥನ ಅಶೋಕ ಟಿ.ಪಿ, ಅಕ್ಷರಪ್ರಕಾಶನ, ಹೆಗ್ಗೋಡು ೨೦೦೪ ಪುಟ ಸಂ.೨೯

೧೨ ಕಾಡು ಮತ್ತು ಕ್ರೌರ್ಯ ಮುನ್ನುಡಿ ಪೂ.ಚಂ.ತೇ ಎರಡನೆಯ ಮುದ್ರಣ ೨೦೧೩

೧೩ ಅಬಚೂರಿನ ಪೋಸ್ಟಾಫೀಸು ಪೂ.ಚಂ.ತೇ ತ್ಯಕ್ತ ಪು.ಸಂಖ್ಯೆ ೧೧೦

೧೪ ಕಾಡು ಮತ್ತು ಕ್ರೌರ್ಯ ಮುನ್ನುಡಿ ಪೂ.ಚಂ.ತೇ ಎರಡನೆಯ ಮುದ್ರಣ ೨೦೧೩

೧೫ ಕನ್ನಡ ಕಥನ ಸಾಹಿತ್ಯ ಕಾದಂಬರಿ. ಪು.ಸಂ ೩೨೧

೧೬ ಕಾಡು ಮತ್ತು ಕ್ರೌರ್ಯ ಎರಡನೆಯ ಮುದ್ರಣ ೨೦೧೩ ಪೂ.ಚಂ.ತೇ ಪು.ಸಂ ೫೭

೧೭ ಚಿದಂಬರ ರಹಸ್ಯ : ಪೂ ಚಂ ತೇ; ೧೯೮೯: ಪು ಸಂ.

೧೮ ಜುಗಾರಿ ಕ್ರಾಸ್; ಪೂ ಚಂ ತೇ ಪು.ಸಂ ೩೫

೧೯ ಕಾಡು ಮತ್ತು ಕ್ರೌರ್ಯ ಎರಡನೆಯ ಮುದ್ರಣ ೨೦೧೩ ಪೂ.ಚಂ.ತೇ ಪು.ಸಂ ೬೩

೨೦ ಹೊಸವಿಚಾರಗಳು ಪೂ.ಚಂ.ತೇ ೨೦೧೩ ಪು ಸಂ ೫೨೨

೨೧ ಹುಲಿಯೂರಿನ ಸರಹದ್ದು ಸ್ವರೂಪ ಆರನೆಯ ೨೦೦೭ ಪೂ.ಚಂ.ತೇ ಪು.ಸಂ ೭೭

೨೨ ಅದೇ ಪು.ಸಂ ೭೮

೨೩ ಅದೇ ಪು.ಸಂ ೮೦

೨೪ ಅದೇ ಪು.ಸಂ ೮೮

೨೫ ಅದೇ ಪು.ಸಂ ೭೧

೨೬ ಪು.ಸಂಖ್ಯೆ ೧೧೧

೨೭ ತೇಜಸ್ವಿಲೋಕ ಪು.ಸಂ.೧೧೭

೨೮ ಜಿ.ಪ್ರಶಾಂತ್‌ನಾಯಕ್: ತೇಜಸ್ವಿ ಸಾಹಿತ್ಯ ಕೃಷಿ: ಪು ಸಂ ೧೨೨

೨೯ ಕಾಡು ಮತ್ತು ಕ್ರೌರ್ಯ ಮುನ್ನುಡಿ ಪೂ.ಚಂ.ತೇ ಎರಡನೆಯ ಮುದ್ರಣ ೨೦೧೩

# ಅಧ್ಯಾಯ ೬

## ಸಮಾರೋಪ

ಜಂಗಮವಾದ ಈ ಜಗತ್ತಿನಲ್ಲಿ ಪ್ರತಿಯೊಂದೂ ಕೂಡಾ ಚಲನಶೀಲವೇ. ಚಿರಸ್ಥಾಯಿಯಾಗಿ ಉಳಿದುಕೊಂಡು ಬಿಡುವಂತಹುದು ಯಾವುದೂ ಇಲ್ಲ. ಒಂದುವೇಳೆ ಈ ಭೌತ ಪ್ರಪಂಚದಲ್ಲಿ ಅದು ಚಲನಶೀಲವಾಗದೇ ಉಳಿದರೂ ಅದರ ಇರುವಿಕೆ ಮಾತ್ರ ಸ್ಥಾಯೀಭಾವವನ್ನು ಪಡೆಯಬಹುದು ಅಥವಾ ಆ ಭೌತವಸ್ತು ಭೌತಿಕವಾಗಿ ಸ್ಥಾಯಿಯಾಗಿ ಉಳಿದರೂ ಇನ್ನಾವುದೋ ಬೇರೆಯದ್ದೇ ರೀತಿಯಲ್ಲಿ ಚಿರಸ್ಥಾಯಿ ಆಗಲಾರದೇ ಚಲನಾತ್ಮಕತೆಯನ್ನು ಪಡೆದುಕೊಳ್ಳುತ್ತಲೇ ಇರುತ್ತದೆ. ಆ ಚಲನಾತ್ಮಕತೆ ಭೌತಿಕವಾಗಿರಬಹುದು ಅಥವಾ ಬೌದ್ಧಿಕ, ಸಾಮಾಜಿಕ, ರಾಜಕೀಯ, ಪಾರಂಪರಿಕ ಅಥವಾ ಸಾಂಸ್ಕೃತಿಕ, ಆರ್ಥಿಕ ಹೀಗೆ ಇನ್ನಾವುದೋ ನೆಲೆಯಲ್ಲಿ ಇರಬಹುದು. ಸ್ಥಿತಿ ಎಂದರೆ ಒಂದರ ಅಸ್ತಿತ್ವ ಅಥವಾ ನಿಲ್ಲುವಿಕೆ ಅಥವಾ ಇರುವಿಕೆ ಎಂದು ಭೌತಿಕವಾಗಿ ಪರಿಗಣಿಸಬಹುದೇ ವಿನಃ ಬೌದ್ಧಿಕವಾಗಿ ಅಲ್ಲ.

ಮಾನವನ ಬೌದ್ಧಿಕತೆ ವಿಕಾಸವಾಗುತ್ತಾ ಹೋದಂತೆ ಪ್ರತಿಯೊಂದು ಸಂದರ್ಭದಲ್ಲೂ ಅದು ಬದಲಾವಣೆಗೊಳ್ಳುತ್ತಾ ಸ್ಥಿತ್ಯಂತರಕ್ಕೆ ಒಳಪಡುತ್ತಲೇ ಇರುತ್ತದೆ. ಆ ಸ್ಥಿತ್ಯಂತರವು ವಿಕಾಸಶೀಲವಾಗಿರಲೂಬಹುದು ಅಥವಾ ಅವಸಾನೋನ್ಮುಖವಾಗಿರಲೂಬಹುದು. ಉದಾಹರಣೆಗಾಗಿ ಡಾರ್ವಿನ್ನನ ವಿಕಾಸವಾದವನ್ನಿಟ್ಟುಕೊಂಡರೂ ಮಾನವ ಆದಿಮಾನವನಿಂದ ಇಂದಿನ ಆಧುನಿಕ ಮಾನವನಾಗಿ ಎಷ್ಟೋ ಅವಸ್ಥೆಗಳನ್ನು ದಾಟಿ ಸ್ಥಿತ್ಯಂತರಗಳನ್ನೆದುರಿಸುತ್ತಾ ವಿಕಾಸಗೊಳ್ಳುತಿದ್ದಾನೆ. ಮುಂದೂ ಸ್ಥಿತ್ಯಂತರವನ್ನು ಪಡೆದುಕೊಳ್ಳುತ್ತಾನೆ. ಆಧುನಿಕ ಮಾನವ ಭೌತಿಕ, ಬೌದ್ಧಿಕ ಹಾಗೂ ಎಲ್ಲಾ ಆಯಾಮಗಳಲ್ಲಿಯೂ ವಿಕಸನಗೊಂಡು ಸ್ಥಿತ್ಯಂತರಕ್ಕೊಳಗಾಗಿದ್ದಾನೆ. ಭೌತಿಕ ವಸ್ತುವೊಂದು ಬದಲಾವಣೆಗಳನ್ನು ಪಡೆದು ಸ್ಥಿತ್ಯಂತರಗೊಳ್ಳುತ್ತಿದೆಯೆಂದರೆ ಅದು ಇನ್ನಾವುದೋ ನೆಲೆಯಿಂದಲೂ ಪರಿವರ್ತಿತವಾಗಿರಲೂಬಹುದು. ಹಾಗೆಯೇ ಭೌತಿಕವಸ್ತುವೊಂದು ಬದಲಾವಣೆಗಳನ್ನು ಪಡೆದು ಸ್ಥಿತ್ಯಂತರಗೊಳ್ಳುತ್ತಿದೆಯೆಂದರೆ ಅದು ಇನ್ನಾವುದೋ ನೆಲೆಯಲ್ಲಿ ಪರಿವರ್ತನೆಗೊಂಡಿರಬಹುದು.

ಅತೀ ವೇಗದ ನಾಗರಿಕತೆಯಿಂದಾಗಿ ಭಾರತೀಯ ಜನಜೀವನ ಅಸ್ತವ್ಯಸ್ತಗೊಂಡಿತು ಎಂಬುದು ನಿಜ. ಇದಕ್ಕೆ ಕಾರಣವಿಲ್ಲದೆ ಇಲ್ಲ. ಪೂರ್ವ ಪಶ್ಚಿಮಗಳ ಮುಖಾಮುಖಿಯಲ್ಲಿ ಸಮಾನತೆಯ ಅಂಶ ಹುಡುಕಲು ಸಾಧ್ಯವಿಲ್ಲ. ಪಶ್ಚಿಮ ಸಮಾಜದ ಸಂಸ್ಕೃತಿಯಿಂದ ಪ್ರಭಾವಿತವಾದ ನಮ್ಮ ಸಂಸ್ಕೃತಿ ಬದಲಾವಣೆಗಾಗಿ ತಹತಹಿಸುತಿತ್ತು. ಭಾರತದಂತಹ ತೃತೀಯ ಜಗತ್ತು ಪ್ರಭಾವಿತ ಬದಲಾವಣೆಗೆ ಸುಲಭವಾಗಿ ಸ್ಪಂದಿಸಿತು. ಸ್ಪಂದನದ ಪರಿಣಾಮವಾಗಿ ಉಂಟಾದ ಪ್ರಮಾದಗಳು ಅರಿವಿಗೆ ಬಾರದೆ ಸಂಸ್ಕೃತಿಯಲ್ಲಿ ಮಿಳಿತವಾಗಿ ಬಿಡುತ್ತವೆ. ಕ್ರಮೇಣ ಅಜ್ಞಾತ ಸೃಷ್ಟಿಯಿಂದಾಗುವ ಅನಾಹುತಗಳು ಮತ್ತು ಅದರ ಘೋರ ಪರಿಣಾಮ ಜನಸಾಮಾನ್ಯನಿಂದ ಹಿಡಿದು-ಬಂಡವಾಳವಾಳಶಾಹಿ ಸಮಾಜದವರೆಗೂ ಒಂದರ್ಥದಲ್ಲಿ ಸಾಮಾಜಿಕ-ಸಾಂಸ್ಕೃತಿಕ ಮೌಲ್ಯಗಳ ಮೇಲಾಗುತ್ತದೆ. ಪ್ರಸ್ತುತ ನಾಗರಿಕ ಜೀವನ ಎದುರಿಸುತ್ತಿರುವ ಬದುಕಿನ ಬವಣೆಗಳು ಅವುಗಳಿಂದ ಮುಕ್ತವಾಗಲಾರದ ಭೌತಿಕ ಪ್ರಪಂಚ ಎಲ್ಲವೂ ಒಂದಕ್ಕೊಂದು

ಬೆಸೆದುಕೊಂಡು ಇಂತಹ ಸ್ಥಿತಿ ಎಲ್ಲಿಯವರೆಗೆ ಉಳಿದೀತು? ಇದರಿಂದ ಬಿಡುಗಡೆ ಯಾವಾಗ? ಎನ್ನುವ ಪ್ರಶ್ನೆಗಳು ಕಾಡುತ್ತವೆ.

ಸಿದ್ಧ ಮತ್ತು ಶಾಸ್ತ್ರೀಯ ಸತ್ಯಗಳಿಂದ ತೇಜಸ್ವಿಯವರು ಬದುಕನ್ನು ಸಮೀಪಿಸುವುದೇ ಇಲ್ಲ. ಸದ್ಯದ, ತುರ್ತಿನ, ದೈನಂದಿನ ಜೀವನದ ಅಸಂಖ್ಯ ವಿವರಗಳಲ್ಲೇ ಅವರ ಅನುಭವವನ್ನು ಶೋಧಿಸಿಕೊಳ್ಳುತ್ತಾರೆ. ಇದು ಅವರ ಶೈಲಿಗೆ ಸಂಬಂಧಿಸಿಯೂ ನಿಜ. ಅವರ ಬರವಣಿಗೆಯ ಕ್ರಮವೇ ಶೋಧನಾತ್ಮಕವಾದದ್ದು. ಹಾಗಾಗಿ ಮೂರ್ತಗೊಳ್ಳುವ ಬಹಿರಂಗ ನಡವಳಿಕೆಗಳು ಅವರಿಗೆ ತುಂಬಾ ಮುಖ್ಯವಾಗಿರುತ್ತದೆ. ತೇಜಸ್ವಿಯವರ ವೈಚಾರಿಕ ಚಿಂತನೆಗಳಿಗೂ ಅವರ ಬರವಣಿಗೆಯ ತಂತ್ರ ಶೈಲಿಗಳಿಗೂ ಇಂತಹ ಅನ್ಯೋನ್ಯ ಸಂಬಂಧವಿರುವುದರಿಂದಲೇ ಅದಕ್ಕೊಂದು ಅಧಿಕೃತ ಸ್ವರೂಪ ಲಭ್ಯವಾಗಿರುವುದು. ಅಂದರೆ ಅನ್ವೇಷಣೆಯ ಸ್ವರೂಪ ಅವರ ಬರವಣಿಗೆಯ ಕ್ರಮದಲ್ಲೇ ಅವರ ಮಾನದಂಡಗಳು, ಕಾಳಜಿ ಹಾಗೂ ಕಳಕಳಿಗಳೂ ವ್ಯಕ್ತವಾಗುತ್ತ ಹೋಗುತ್ತವೆ.

ಪರಂಪರಾಗತ ಸಮಾಜವೊಂದು ವಸಾಹತುಶಾಹೀ ಪ್ರವೇಶದಿಂದುಂಟಾದ ಅರಿವಿನ ಪರಿಣಾಮವಾಗಿ ಕುಟುಂಬ, ಸಮಾಜ ಮತ್ತು ವ್ಯಕ್ತಿಗತ ಅಸಹನೆಯನ್ನು ಎದುರಿಸಲು ಸಜ್ಜುಗೊಂಡದ್ದು ಮೊದಲನೆಯ ಘಟ್ಟ. ಇದರಿಂದ ಹೊರಬರುವ ಪ್ರಯತ್ನವನ್ನು ಸ್ವರೂಪ ಶ್ರೀನಿವಾಸ, ನಿಗೂಢಮನುಷ್ಯರು ಕೃತಿಯ ಗೋಪಾಲಯ್ಯ..... ಹುಲಿಯೂರಿನ ಸರಹದ್ದುವಿನ ಸೋಮ ಇವರುಗಳಲ್ಲಿ ಕಾಣುತ್ತೇವೆ. ಅಬಚೂರಿನ ಪೋಸ್ಟಾಫೀಸು ಕಥೆಯ ಬೋಬಣ್ಣ, ಅವನತಿಯ ಸೂರಾಚಾರಿ, ತುಕ್ಕೋಜಿ, ಕುಬೇರಪ್ಪ ಇಂಥ ಸಂಘರ್ಷವನ್ನು ಎದುರುಗೊಳ್ಳುತ್ತಾರೆ. ವ್ಯಕ್ತಿನಿಷ್ಠ ಪ್ರಜ್ಞೆಯ ನೆಲೆಯಲ್ಲಿ ಆಯ್ಕೆ ವ್ಯಕ್ತಿಗತವಾಗಿ ಉಳಿಯದೆ ಇಲ್ಲಿ ಆಯ್ಕೆ ಅವನತಮುಖೀ ಸಮಾಜ ಮತ್ತು ಇನ್ನೂ ಅಸ್ಪಷ್ಟವಾಗಿರುವ ಆಧುನಿಕ ಮೌಲ್ಯ ವ್ಯವಸ್ಥೆಯ ನಡುವೆ ಆಗಬೇಕು ಎಂಬ ಹಂತದ ಮಾರ್ಗಾನ್ವೇಷಣೆಗೆ ಮುಂದಡಿಯಿಡುತ್ತದೆ.

ಆಧುನಿಕತೆಯು ಭಾರತೀಯ ಸಾಮಾಜಿಕ ಆರ್ಥಿಕ ಬದುಕಿನೊಳಗೆ ಹಲವು ಆಯಾಮಗಳ ಮೂಲಕ ಬಂದದ್ದು ಕ್ರಮೇಣವಾಗಿ ವ್ಯಕ್ತಿಯ ಬದುಕುವ ವಿಧಾನದಲ್ಲಿ, ಆಲೋಚನೆಯ ಕ್ರಮದಲ್ಲಿ ಮಾರ್ಪಡುಗಳನ್ನು ತಂದಿತು. ತೇಜಸ್ವಿ ಕಥನಗಳಲ್ಲಿ ಗುರುತಿಸುವಂತೆ ಸೋಮನಲ್ಲಿ ಬದುಕಿನ ಆಯ್ಕೆಯಾಗಿ, ನಿಗೂಢ ಮನುಷ್ಯರಲ್ಲಿ ರಹಸ್ಯ ಶೋಧನೆಯಾಗಿ, ಬೋಬಣ್ಣನಲ್ಲಿ ಲೈಂಗಿಕ ಕುತೂಹಲವಾಗಿ, ತುಕ್ಕೋಜಿಯಲ್ಲಿ ಮಹತ್ವಾಕಾಂಕ್ಷೆಯಾಗಿ, ಸರೋಜಳಲ್ಲಿ ಸ್ವಚ್ಛಂದತೆಗಾಗಿ ಹಾತೊರೆಯುವ ಹಕ್ಕಿಯಾಗಿ, ಶ್ರೀನಿವಾಸನಲ್ಲಿ ಅಸ್ತಿತ್ವದ ಶೋಧನೆಯಾಗಿ, ಮಂದಣ್ಣನ ನೌಕರಿ ಪಡೆಯುವ ಇಂಗಿತವಾಗಿ, ದಾನಮ್ಮನ ಪ್ರತಿಭಟನೆಯ ಪ್ರತೀಕವಾಗಿ, ಕರ್ವಾಲೋದಲ್ಲಿ ನೋಡುವ ನೋಟಕ್ರಮವಾಗಿ, ಮಾಯಾಲೋಕದಲ್ಲಿ ಪ್ರಕೃತಿಯ ರಹಸ್ಯಕ್ಕೆ ಮುಖಾಮುಖಿಯಾಗಿ ಹೀಗೆ ಸಾಮಾಜಿಕ ಬದುಕಿನಲ್ಲಿ ಹೊರರೂಪಿಯಾಗಿ-ಒಳರೂಪಿಯಾಗಿ ಆಧುನಿಕತೆ ಅನೇಕ ಬದಲಾವಣೆಗಳಿಗೆ ಒಗ್ಗಿಕೊಂಡಿತು.

ತಂತ್ರಜ್ಞಾನ, ಸಂಸ್ಕೃತಿ, ಶಿಕ್ಷಣ, ಕಾನೂನು, ವ್ಯವಸ್ಥೆ-ಸಂಸ್ಥೆಗಳು, ಕೃಷಿ, ಆರ್ಥಿಕ-ಸಾಮಾಜಿಕ-ರಾಜಕೀಯ ಹೀಗೆ ಹಲವು ಪ್ರಕ್ರಿಯೆಗಳ ಮೂಲಕ ಆಧುನಿಕತೆ, ಭಾರತೀಯ ಜನವರ್ಗದ ಮೇಲೆ ಪ್ರಭುತ್ವ ಸಾಧಿಸಿ ಅವರುಗಳನ್ನು ತನ್ನ ಸಾಂಸ್ಕೃತಿಕ ಚಹರೆಗಳಲ್ಲಿ ಭ್ರಮಾತ್ಮಕವಾಗಿ ವಿಹರಿಸುವಂತೆ ಮಾಡಿತು. ಇದರಿಂದ ಭಾರತೀಯ ಜನಜೀವನ ಎರಡು

ಬಗೆಯಲ್ಲಿ ಪ್ರಭಾವಿತಗೊಂಡಿತು. ಒಂದು ಸಮಾಜವೆನ್ನುವ ಅಮೂರ್ತ ಘಟಕದ ಮೇಲೆ ಸಾರ್ವತ್ರಿಕವಾಗಿ ಮಾಡಿದ ಭೌತಿಕ ಪರಿಣಾಮ, ಇನ್ನೊಂದು ಸಾಹಿತಿಗಳು, ಬರಹಗಾರರು, ಕಲಾವಿದರು, ಬುದ್ಧಿಜೀವಿಗಳ ಮೇಲೆ ಆದ ಭೌದ್ಧಿಕ ಪರಿಣಾಮ, ಈ ಪರಿಣಾಮಗಳಿಂದ ಮನುಷ್ಯನ ಬದುಕು ಮಾನವೀಯ ನೆಲೆಯಲ್ಲಿ ಹಸನುಗೊಂಡಿತು ಎಂದು ಖಚಿತವಾಗಿ ಹೇಳಲು ಸಾಧ್ಯವಾಗುವುದಿಲ್ಲ. ಭೌತಿಕ ಮತ್ತು ಬೌದ್ಧಿಕ ಸಿದ್ಧಿಗಳು ವ್ಯಕ್ತಿಗತವಾಗಿ ಮತ್ತು ಸಾಮೂಹಿಕವಾಗಿ ಬೀರುವ ಪ್ರಭಾವ ಏಕರೂಪವಾಗಿರುವುದಿಲ್ಲ. ಭಿನ್ನ ಭಿನ್ನ ಗ್ರಹಿಕೆ, ಮತ್ತು ಸ್ವೀಕೃತ ಮನೋಭಾವವನ್ನು ಅನುಸರಿಸಿಯೇ ಪರಿಣಾಮಗಳ ಫಲಿತಾಂಶವನ್ನು ನಿರ್ಣಯಿಸಲು ಸಾಧ್ಯವಾಗುವುದು.

ವಸಾಹತುಶಾಹಿ ತಂದ ಹೊಸ ಮೌಲ್ಯಗಳು ನಿಧಾನವಾಗಿ ಬೇರುಬಿಟ್ಟಿದ್ದು ಆ ಮೌಲ್ಯಗಳು ಜೀವನ ಸಾಫಲ್ಯದ ಮೌಲ್ಯಗಳೆಂದು, ಈಗಾಗಲೇ ಸ್ವೀಕರಿಸಲ್ಪಟ್ಟಿದ್ದವು. ಆಧುನಿಕ ಶಿಕ್ಷಣದೊಂದಿಗೆ ಸ್ವ ಅರಿವು ಮತ್ತು ಹೊಸ ರಾಷ್ಟ್ರೀಯ ಪ್ರಜ್ಞೆಯಿಂದಾಗಿ ವಸಾಹತುಶಾಹಿಯೊಂದಿಗೆ ಪ್ರೀತಿ-ದ್ವೇಷಗಳ ಸಂಘರ್ಷ ಆರಂಭವಾಗಿ ಬಿಟ್ಟಿತ್ತು. ವಸಾಹತುಶಾಹಿ ತಂದ ಹೊಸ ಸುರಕ್ಷಿತ ಬದುಕು ಮತ್ತು ಅಸ್ಪಷ್ಟವಾಗಿರುವ ಸ್ವರಾಜ್ಯಕ್ಕಾಗಿ ನೆಮ್ಮದಿ ರಹಿತ ಹೋರಾಟಗಳ ನಡುವೆ ಆಯ್ಕೆಯು ವ್ಯಕ್ತಿನಿಷ್ಠ ನೆಲೆಯಿಂದ ಸಾಮಾಜಿಕತೆಯೆಡೆಗೆ ಸರಿಯಿತು. ಇದು **ಎರಡನೆಯ ಘಟ್ಟ**. ಅಂತರ್ಮುಖತೆಯಿಂದ ಸಾರ್ವತ್ರಿಕತೆಗೆ ಬಾಗುವ ಇದರ ಸಾರ ಸ್ವರೂಪ ಕರ್ವಾಲೋ ಕೃತಿಯೊಳಗೇ ಮಿಳಿತವಾಗಿದೆ.

ಈಗಾಗಲೇ ಬೇರುಬಿಟ್ಟಿದ್ದ ವಸಾಹತುಶಾಹಿ ಆಳ್ವಿಕೆಯನ್ನು ಸ್ಥಳೀಯಶಕ್ತಿಗಳು ನಿರ್ಮೂಲನಗೊಳಿಸಲು ಸಶಕ್ತವಾಗಿದ್ದವು. ಸ್ಥಳೀಯ ಶಕ್ತಿಗಳು ಆಡಳಿತ ಸೂತ್ರ ಹಿಡಿದು ಹೊಸ ರಾಜಕೀಯ-ಸಾಮಾಜಿಕ ರಂಗವನ್ನು ಪ್ರವೇಶಿದ್ದವು. ಇನ್ನೊಂದು ಅರ್ಥದಲ್ಲಿ ನವವಸಾಹತುಶಾಹಿಯ ಆಗಮನವಾಯಿತು. ಈ ಹಂತದಲ್ಲಿ ಸಮಾಜದ ಸ್ಥಿತಿಯು ಯಾವುದೇ ಮೌಲ್ಯನಿರ್ಣಯಕ್ಕೆ ಸಿಲುಕದ ಮಟ್ಟ ಮೀರಿರುವುದು ನಡೆಯಿತು. ವಸಾಹತುಶಾಹಿ-ನವವಸಾಹತುಶಾಹಿಯ ನಡುವಣ ತುಲನೆಯ ಮೂಲಕ ಇವು ಹುಟ್ಟುಹಾಕಿರುವ ಮೌಲ್ಯಗಳು ಹೊಸ ಸಾಮಾಜಿಕ, ರಾಜಕೀಯ ವ್ಯವಸ್ಥೆಯಲ್ಲಿ ಹೇಗೆ ಫಲಿಸುತ್ತಿವೆ ಎಂದು ಪರಿಶೀಲಿಸುವುದು ಮುಖ್ಯವಾಯಿತು. ಅದು **ಈ ಮೂರನೆಯ ಘಟ್ಟದಲ್ಲಿ** ಅವಿರತವಾಗಿ ನಡೆದಿದೆ. ಚಿದಂಬರ ರಹಸ್ಯ, ಕಿರುಗೂರಿನ ಗಯ್ಯಾಳಿಗಳು, ಪರಿಸರ ಕಥೆ, ಜುಗಾರಿಕ್ರಾಸ್ ಇನ್ನಿತರ ಕಥನಗಳು-ಆಧುನೀಕರಣದ ಪ್ರಕಿಯೆಯ ಹಿನ್ನೆಲೆಯಲ್ಲಿ 'ರಾಷ್ಟ್ರೀಯತೆ'ಯ ಪ್ರಶ್ನೆಯನ್ನು ಪ್ರಧಾನ ಅಂಶವಾಗಿ ಒಳಗೊಂಡಿದೆ.

೧೯೮೦ ನಂತರದ ಕಥನಗಳನ್ನು ಅವಲೋಕಿಸಿದಾಗ ಅಂತರ್‌ರಾಷ್ಟ್ರೀಯ ರಾಜಕಾರಣದ ಹಿನ್ನೆಲೆಯಲ್ಲಿ, ಜಾಗತಿಕ ಅರ್ಥಶಾಸ್ತ್ರದ ನೆಲೆಯಲ್ಲಿ ಬಹುರಾಷ್ಟ್ರೀಯ ಸಂಸ್ಥೆಗಳು, ಯುದ್ಧ ಸಾಮಾಗ್ರಿಗಳ ಮಾರಾಟ, ಬೌದ್ಧಿಕವಲಸೆ, ಪರಿಸರ ವಿನಾಶ ಮುಂತಾದ ಹತ್ತು ಹಲವು ಮಾರ್ಗಗಳ ಮೂಲಕ ನವ ವಸಾಹತುಶಾಹೀ ಪ್ರಭಾವದಡಿಯಲ್ಲಿ ಭಾರತದಂತಹ ತೃತೀಯ ಜಗತ್ತಿನ ಬೆಳವಣಿಗೆಯ ಸ್ವರೂಪದ ಜೊತೆಗೆ ಅವುಗಳ ಪರಿಣಾಮದ ಬಗೆಗೆ ಗಾಢವಾಗಿ ಚಿಂತಿಸಿ ಅದರ ಕರಾಳತೆಯನ್ನು ಬಯಲು ಮಾಡುವ ರೀತಿಯಲ್ಲಿ ಅವರ ಬರಹಗಳು ರೂಪುಗೊಂಡಿವೆ.

**ನಾಲ್ಕನೆಯ ಘಟ್ಟದಲ್ಲಿ** ೧೯೮೦ ನಂತರದ ಕಥನಗಳ ಜಾಡಿನಲ್ಲೇ ಮುಂದುವರೆದರೂ ಬದಲಾವಣೆಗಳಿಗೆ ತಹತಹಿಸುವ ಇವರ ಕತೆಗಳ ಯತ್ನ ಸಾಮಾಜಿಕತೆಯೆಡೆಗೆ ಸರಿಯುತ್ತದೆ.

ಮಾನವೀಯ ಬದುಕನ್ನು ಅರ್ಥಪೂರ್ಣವಾಗಿ ಹಿಗ್ಗಿಸಬಹುದಾದ ಅರಿವು ಮತ್ತು ಇಂಥ ಅರಿವಿನ ಬೆಳಕಿನಲ್ಲಿ ರೂಪುಗೊಳ್ಳುವ ಹೊಸ ಆಲೋಚನೆಗಳು ಕಥೆಯಿಂದ ಕಥೆಗೆ ಸಾಮಾಜಿಕವಾದ ಗಂಭೀರ ಕಾಳಜಿಗಳಾಗಿ ಮುಂದುವರೆದು 'ಮಾಯಾಲೋಕ'ದಲ್ಲಿ ಒಂದು ನಿರ್ಣಾಯಕ ಘಟ್ಟಕ್ಕೆ ಬಂದು ನಿಲ್ಲುತ್ತದೆ.

ಸಾಂಸ್ಕೃತಿಕ ವಿಘಟನೆಗೆ ಆಧುನಿಕ ಶಿಕ್ಷಣ ಅಥವಾ ಉದ್ಯೋಗ, ಆಸೆ-ಆಕಾಂಕ್ಷೆ ಅಥವಾ ಹಣ ಇವಿಷ್ಟೇ ಮುಖ್ಯ ಕಾರಣ ಅಲ್ಲ. ಅದರ ಜೊತೆಗೆ ವ್ಯಕ್ತಿಯ ವ್ಯಕ್ತಿತ್ವವೂ ಕಾರಣವಾಗುತ್ತದೆ. ಅವನತಿಯ ಸೂರಚಾರಿ, ತುಕ್ಕೋಜಿ, ಬೋಬಣ್ಣ, ಸ್ವರೂಪದ ಶ್ರೀನಿವಾಸ, ಸೋಮ, ಹೀಗೆ ಕಥನಗಳಲ್ಲಿನ ಪಾತ್ರಗಳಂತೆಯೇ ಚಿದಂಬರ ರಹಸ್ಯದಲ್ಲಿನ ಅನೇಕ ಪಾತ್ರಗಳು ಕೂಡ ಸಮೂಹ ಸನ್ನಿಯಂತೆ ಸಾಂಸ್ಕೃತಿಕ ವಿಘಟನೆಗೆ ಪರೋಕ್ಷವಾಗಿ ಕಾರಣೀಕರ್ತವಾಗುತ್ತವೆ. ಸಾಮಾಜಿಕವಾಗಿ ಸಂಭವಿಸಿದ ಘಟನೆ ಯಾರೋ ಒಬ್ಬನ ಕುಕೃತ್ಯವಾಗಿದ್ದರೂ ಅದರೆಲ್ಲ ನೈತಿಕ ಹೊಣೆ ಸುತ್ತಲ ಸಮಾಜದ ಪ್ರಜ್ಞಾವಂತರದ್ದೂ ಆಗಿರುತ್ತದೆ. ಎಂತಹುದೇ ಸಂದರ್ಭಗಳು ಎದುರಾದರೂ ಅದನ್ನು ಆಳವಾದ ವಿಶ್ಲೇಷಣೆಗೆ ಒಳಪಡಿಸಿ ನೋಡುವ ಮನಸ್ಥಿತಿಯಲ್ಲಿ ಈ ಪ್ರಜ್ಞಾವಂತರ ಪಾಲು ಎಷ್ಟು? ಪರಾಮರ್ಶೆಗೆ ತೊಡಗುವ ವ್ಯವಧಾನ ಎಷ್ಟು ಜನರಿಗೆ ಇರಲು ಸಾಧ್ಯ! ಈ ಕಾರ್ಯಸಿದ್ಧಿ **ಸ್ವರೂಪ** ಕಥೆಯ ಎಂ ಡಿ ಶ್ರೀನಿವಾಸನಲ್ಲಾಗುತ್ತದೆ. ಅನುದ್ದೇಶಿತವಾದ ಹಲವು ಘಟನೆಗಳನ್ನು ವೈಚಾರಿಕವಾಗಿ ಮಂಡಿಸುತ್ತಾ ಸಾಮಾಜಿಕ-ಸಾಂಸ್ಕೃತಿಕ ಕೆಡುಕುಗಳನ್ನು ಪುನರ್ ವಿಮರ್ಶಗೆ ಒಳಪಡಿಸುತ್ತಾ ಪ್ರಜ್ಞಾವಂತರನ್ನು ಆತ್ಮಾವಲೋಕನ ಮಾಡಿಕೊಳ್ಳುವುದಕ್ಕೆ ಪ್ರೇರೇಪಿಸುತ್ತಾನೆ. ಇದು ಒಂದರ್ಥದಲ್ಲಿ ಮನುಷ್ಯನ ಪ್ರಜ್ಞೆಯನ್ನು ಅರಿವಿನ ಕಡೆಗೆ ತಿರುಗಿಸುವುದೇ ಆಗಿದೆ. ಪ್ರತಿಯೊಂದು ಸಂದರ್ಭದ ಹಿನ್ನೆಲೆಯಲ್ಲಿ ಅಡಗಿರುವ ಕಾರ್ಯಾಕಾರಣ ಸಂಬಂಧಗಳನ್ನು ಗುರುತಿಸುವುದು ಮತ್ತು ಅದರ ಸಾಧ್ಯತೆಗಳ ಕುರಿತು ಓದುಗನನ್ನು ಯೋಚನೆಗೆ ತೊಡಗುವಂತೆ ಮಾಡುವುದು ಇಲ್ಲಿ ಪ್ರಮುಖವಾಗಿದೆ.

ಹಿಂದಿನ ವಿಚಾರಗಳು ಇಂದಿನ ಬದುಕಿನ ಆಶಯಗಳೂ ಪರಸ್ಪರ ಘರ್ಷಣೆಗೀಡಾಗುತ್ತವೆ. ನಿಶ್ಚಲ ಜೀವನಕ್ಕೆ ಹೊಸ ಮೌಲ್ಯಗಳ ಪ್ರವೇಶದೊಂದಿಗೆ ಹೊಸ ಹೊಸ ಸಮಸ್ಯೆಗಳು ಸವಾಲುಗಳು ಎದುರಾಗುತ್ತವೆ. ಒಂದನ್ನೊಂದು ತನ್ನ ಪ್ರಭಾವಕ್ಕೆ ಒಳಗುಮಾಡಿಕೊಳ್ಳಲು ಪ್ರಯತ್ನಿಸುತ್ತ ಹೆಚ್ಚು ಶಕ್ತಿಶಾಲಿಯಾದದ್ದು ಉಳಿದುಕೊಳ್ಳುತ್ತದೆ. ಆ ಮೂಲಕ ಎರಡೂ ತಮ್ಮ ಅನೇಕ ವೈಯಕ್ತಿಕ ಗುಣಗಳನ್ನು ಕಳೆದುಕೊಂಡು ತಮ್ಮಿಂದ ಹೊರತಾದ ಹೊಸ ಮೌಲ್ಯಗಳ ಸೃಷ್ಟಿಗೆ ಅವಕಾಶ ಮಾಡಿಕೊಡುತ್ತವೆ. ಒಂದು ಸ್ಥಿತ್ಯಂತರವನ್ನು ಸಮಕಾಲೀನವಾಗಿ ಎದುರಿಸುವ ಸ್ಥಿತಿಗೂ, ಅದು ನಡೆದ ನಂತರಲ್ಲಿ ಖಚಿತವಾಗಿ ಸಿಗುವ ಸಾಧ್ಯಾಸಾಧ್ಯತೆಗಳನ್ನು ಬಳಸಿಕೊಂಡು ಎದುರಿಸುವ ಸ್ಥಿತಿಗೂ ಸಾಕಷ್ಟು ವ್ಯತ್ಯಾಸವಿದೆ. ಶ್ರೀನಿವಾಸನ ಬದುಕಿನಲ್ಲಿನ ಭೂತಪೂರ್ವ ಘಟನೆಗಳ ಪುನರಾವಲೋಕನ, ಗೋಪಾಲಯ್ಯನಿಗಾದ ದಾರ್ಶನಿಕ ಅರಿವು, ಕುಬೇರಪ್ಪ ಭೈರಾಪುರಕ್ಕೆ ಬಂದ ನಂತರದ ಬೆಳವಣಿಗೆಗಳು, ಇಯಾಲಾಳ ಕೊಲೆಯ ನಂತರದ ಸಾಧ್ಯಾಸಾಧ್ಯತೆಗಳು ಪಡೆದುಕೊಂಡ ತಿರುವುಗಳು. ತಬರನ ವೃತ್ತಿಜೀವನದ ಸ್ಥಿತ್ಯಂತರದ ಜೊತೆಜೊತೆಗೆ ಹಬ್ಬಿಹರಡುವ ವ್ಯಕ್ತಿಗತ ಸಮಸ್ಯೆಗಳು ಇತ್ಯಾದಿ ಸಂದರ್ಭಗಳು ಅನಿರೀಕ್ಷಿತವಾದ ಬೆಳವಣಿಯಲ್ಲಿ ಘಟಿಸಿದಂತಹವು.

ತೇಜಸ್ವಿ ಕಥನಗಳಲ್ಲಿ ಕಾಣಸಿಗುವ ಆಧುನಿಕತೆಯು ವೈಚಾರಿಕ ಸತ್ವದಿಂದ ಕೂಡಿದೆ. ತಬರ, ಬೋಬಣ್ಣ, ತುಕ್ಕೋಜಿ, ಸೂರಾಚಾರಿ ಮುಂತಾದ ವ್ಯಕ್ತಿಗತ ಪ್ರಾತಿನಿಧಿಕೆಯಲ್ಲಿ ಕಥೆ ಹೇಳುತ್ತಲೇ, ಆ ವ್ಯಕ್ತಿಯನ್ನು ಆವರಿಸಿರುವ ಇಡೀ ಸಾಮಾಜಿಕ ಪರಿಸರದ ಕಥೆಯನ್ನು ಹೇಳುತ್ತಾರೆ. ವ್ಯಕ್ತಿಯ ಜೊತೆಜೊತೆಯಲ್ಲಿ ಆ ವ್ಯಕ್ತಿಗೆ ಸಂಬಂಧಿಸಿದ ವಲಯವೂ ಕಥಾಕೇಂದ್ರಕ್ಕೆ ಬಂಧಿಯಾಗುತ್ತದೆ. ಹೀಗಾಗಿ ಇಡೀ ಸಾಮಾಜಿಕ ರಚನೆಯಲ್ಲಿ ನಡೆಯುತ್ತಿರುವ ಪರಿವರ್ತನೆಗಳು ತನ್ನ ಸಹಜ ರೂಪದಿಂದ ಕಥನಗಳಲ್ಲಿ ಮೈದಳೆಯುತ್ತವೆ.

ಆಧುನೀಕರಣಕ್ಕೆ ಸಂಬಂಧಪಟ್ಟದ್ದು ಎಂದಾಗ ಇಂದಿನ ಯುಗದ ಹೆಗ್ಗಳಿಕೆ; ಹಿಂದಿನ ಯುಗದ ತೆಗಳಿಕೆಗೆ ಸಂಬಂಧ ಪಟ್ಟದ್ದೇ ಅಲ್ಲ. ಭೂತ ಮತ್ತು ವರ್ತಮಾನಗಳು ಒಂದನ್ನೊಂದು ಕೂಡಿ ಮುನ್ನಡೆಯುವ ಕ್ರಮ. ಅಂದರೆ ಭೂತ ವರ್ತಮಾನವಾಗುತ್ತಾ; ವರ್ತಮಾನ ಭೂತವಾಗುತ್ತಾ ಮುಂದುವರಿಯುತ್ತಿರುತ್ತದೆ. ಕಾಲ ಒಂದನ್ನೊಂದು ಹೆಣೆದುಕೊಳ್ಳುತ್ತಾ, ರೂಪಿಸುತ್ತಾ ಮುಂದುವರೆಯುತ್ತಿರುತ್ತದೆ. ಕಾಲದ ಒತ್ತಡಕ್ಕೆ ಅನುಗುಣವಾದ ಬದುಕು ನಿರಂತರವಾಗಿ ಪರಿವರ್ತನೆಗೆ ಒಳಗಾಗುತ್ತಿರುತ್ತದೆ ಅನ್ನುವ ಕಾಲದ ಸ್ಥಿತಿಯನ್ನು ಅರಿತ ಪ್ರಜ್ಞೆ, ಸಾಂದರ್ಭಿಕವಾಗಿ ಪರಿವರ್ತನೆಗೊಳ್ಳುವ ಬದುಕನ್ನು ಅವಲೋಕಿಸುತ್ತಿರುತ್ತದೆ. 'ಮಾಯಾಲೋಕ' ಕಾದಂಬರಿ ಇಂತಹುದಕ್ಕೆ ಸ್ಪಷ್ಟ ಉದಾಹರಣೆ. ಇಡೀ ವಿಶ್ವದ ಪರಸ್ಪರ ಅವಲಂಬನೆಗೆ ಮತ್ತು ಸಮಗ್ರತೆಗೆ ಸಾಕ್ಷಿಯಾಗಿ ನಿಲ್ಲುತ್ತದೆ. ಮಾಯಾಲೋಕ ಕೃತಿ, ಆಧುನೀಕರಣವನ್ನು-ಜಾಗತೀಕರಣದ ಹಿನ್ನೆಲೆಯಲ್ಲೇ ವಿಶ್ಲೇಷಿಸಿದರೂ ಹೊರನೋಟಕ್ಕೆ ಒಂದಕ್ಕೊಂದು ಸಂಬಂಧವಿಲ್ಲದಂತೆ ತೋರ್ಪಡುವ ಘಟನೆಗಳು ಕ್ರಮೇಣ ಒಂದರಲ್ಲೊಂದು ಹೆಣೆದುಕೊಂಡು ಸರಪಳಿಯನ್ನು ನಿರ್ಮಿಸಿ ತ್ರಿಕಾಲಗಳನ್ನು ಬೆಸೆಯುತ್ತವೆ.

## ಫಲಿತಗಳು

ಚೈತನ್ಯಶೀಲವಾದ ಸಮುದಾಯಗಳ ಬದುಕಲ್ಲಿ ನಡೆವ ಆರ್ಥಿಕ ಸಾಮಾಜಿಕ ಬಿಕ್ಕಟ್ಟುಗಳ ಕಾರಣದಿಂದಾಗಿ ತನ್ನ ಮೂಲ ಆಕೃತಿಯನ್ನು ಕಳೆದುಕೊಂಡು ಹೊಸತನದಿಂದ ಹೊಸ ಹೊಸರೂಪವನ್ನು ಪಡೆದು ಬದಲಾಗುತ್ತದೆ. ಹಾಗೆಯೇ ಅನೇಕ ತತ್ವಗಳು, ಸಿದ್ಧಾಂತಗಳು ಕಾಲಕಾಲಕ್ಕೆ ತಮ್ಮದೇ ಕಾರಣಗಳನ್ನು ಒಡ್ಡಿಕೊಳ್ಳುತ್ತಾ ಮತ್ತೆ ಮತ್ತೆ ಒಡೆದುಕೊಂಡು ವಿಭಿನ್ನ ತತ್ವ/ಸಿದ್ಧಾಂತಗಳಾಗಿ ಬದಲಾಗುತ್ತಲೇ ಇರುತ್ತವೆ.

ಒಬ್ಬ ಲೇಖಕ ಸಂಘರ್ಷಕ್ಕೊಳಗಾಗಿ ಹೇಗೆ ಸ್ಥಿತ್ಯಂತರಗೊಳ್ಳುತ್ತಾನೆಂಬುದನ್ನು ಇಲ್ಲಿ ಸ್ಪಷ್ಟಪಡಿಸಬೇಕಿದೆ. ತೇಜಸ್ವಿ ಕಥನಗಳು ಸಾಮಾಜಿಕ ಸ್ಥಿತ್ಯಂತರಗಳ ವೀಕ್ಷಣೆ ಮಾತ್ರ ಆಗದೇ ನಿರೂಪಕನ ಅರಿವಿನ ವಿಕಾಸದ ಕಥನವೂ ಆಗಿದೆ. ತೇಜಸ್ವಿ ಕಥನಗಳಲ್ಲಿನ ವೈಚಾರಿಕತೆ ಆರಂಭದಿಂದ ಅಂತ್ಯದವರೆಗೂ ಒಂದೇ ರೀತಿಯಾಗಿಲ್ಲ. ಪರಿವರ್ತನೆಯ ಜೊತೆಗೆ ಪರಿಷ್ಕಾರವನ್ನು ನೀಡಿ ಸಂದರ್ಭಕ್ಕೆ ಅನುಗುಣವಾದ ವೈಚಾರಿಕ ಅಭಿಪ್ರಾಯವನ್ನು ಅವರು ಮಂಡಿಸಿದ್ದಾರೆ. ತೇಜಸ್ವಿಯವರ ಕಥನ ಮತ್ತು ಆ ಕಥನಗಳ ವ್ಯಕಿ–ವಿಚಾರಗಳು ಒಂದಕ್ಕಿಂತ ಒಂದರಲ್ಲಿ ಸಂಕೀರ್ಣತೆಯನ್ನು ಪಡೆದುಕೊಳ್ಳುತ್ತಾ ಜನಸಾಮಾನ್ಯರ ಬದುಕು ಬವಣೆಗಳನ್ನು ಮುಕ್ತವಾಗಿ ಚರ್ಚಿಸುತ್ತವೆ ಮತ್ತು ಪ್ರತಿಯೊಂದು ಪಾತ್ರಕ್ಕೂ ತನ್ನದೇ ಆದ ವಿಶಿಷ್ಟ ನೆಲೆಯನ್ನು, ತಾತ್ತ್ವಿಕತೆಯನ್ನು, ಅರ್ಥವಂತಿಕೆಯನ್ನು, ಒದಗಿಸುತ್ತವೆ.
ಇಂತಹ ಸಂಗತಿಗಳನ್ನು ಹೀಗೆ ಪಟ್ಟಿ ಮಾಡಬಹುದು.

**ವೈಯಕ್ತಿಕ ಹಿತಾಸಕ್ತಿಗಳಾಚೆಗೆ:** ಮನುಷ್ಯರ ಪ್ರಜ್ಞೆಯು ಮೇಲುನೋಟಕ್ಕೆ ಶಾಶ್ವತವಾದ ನೆಲೆಗಟ್ಟನ್ನು ಕಟ್ಟಿಕೊಂಡಂತಿದ್ದರೂ, ಅವರ ಸುಪ್ತಪ್ರಜ್ಞೆ ಪ್ರಾಕೃತಿಕ ಸ್ಥಿತಿಗಿಂತ ವಿಭಿನ್ನವಾಗಿ ಆಲೋಚಿಸುವ, ವಿವಿಧ ನೆಲೆಗಳಲ್ಲಿ ತೆರೆದುಕೊಳ್ಳುವ ಅವಕಾಶಕ್ಕಾಗಿ ಕಾದು ಕುಳಿತಿರುತ್ತದೆ. ಮನುಷ್ಯರು ಎಷ್ಟೇ ಸಂಘರ್ಷಗಳನ್ನು ಎದುರಿಸಿದರೂ, ನೈತಿಕ–ಅನೈತಿಕ ಪ್ರಜ್ಞೆಗಳ ಹೊಯ್ದಾಟಕ್ಕೆ ತೆರೆದುಕೊಂಡು ಉನ್ನತ ನೆಲೆಗೆ ಚಲಿಸುತಿದ್ದೇವೆ ಎಂದುಕೊಂಡರೂ ಚಲಿಸುವುದು ಅಧೋಮುಖಿಯಾಗಿಯೇ! ಇದರ ಅರಿವಿದ್ದರೂ, ಅರಿವು ಇರದೆ ಹೋದರೂ ಅಪಮೌಲ್ಯವಾದ ಸಂಸ್ಕೃತಿಗೆ ಶರಣಾಗುವುದು ಮತ್ತು ಅದೇ ವಿಷವರ್ತುಲದೊಳಗೇ ಬಂಧಿಯಾಗುವುದು ನಡೆದೇ ಇರುತ್ತದೆ.

**ಹೊಸಮಾರ್ಗಾನ್ವೇಷಣೆಯತ್ತ:** ವೈಯಕ್ತಿಕವಾಗಿ ಅನುಭವಿಸುವ ಆತಂಕಗಳು ಮತ್ತು ತಲ್ಲಣಗಳು ಹೊಸ ತತ್ವವನ್ನೇ ಸೃಷ್ಟಿಸಿ ವ್ಯಕ್ತಿವಿಶಿಷ್ಟ ಅನುಭವಕ್ಕಿಂತ ಬೇರೆಯದೇ ಆದ ಸತ್ಯಗಳನ್ನು, ಗ್ರಹಿಕೆಗೆ ನಿಲುಕದ ನಿಗೂಢಗಳನ್ನು ಶೋಧಿಸುವುದಕ್ಕೆ ಅನುವು ಮಾಡಿಕೊಡುತ್ತವೆ. ನಿಗೂಢತೆಯ ಶೋಧ ಮಾತ್ರ ವ್ಯಕ್ತಿಯ ವೈಯಕ್ತಿಕ ಅನ್ವೇಷಣೆಗೆ ಸಂಬಂಧಿಸಿದ್ದು. ಅಂದರೆ ಮನುಷ್ಯನ ಅಸ್ತಿತ್ವದ ಅಸ್ತಿತ್ವವಾದಿ ಹುಡುಕಾಟ; ಮನುಷ್ಯನ ಅವಸ್ಥೆಯನ್ನು ಭೇದಿಸಿ ಹೊಸ ಅರಿವಿನತ್ತ, ಹೊಸ ಪ್ರಜ್ಞೆಯತ್ತ ಸರಿಯುವುದೇ ತೇಜಸ್ವಿಯವರ ವಿಶಿಷ್ಟತೆ. ಅದು ಸಮಕಾಲೀನ ತಲ್ಲಣಗಳಿಗೆ, ಒತ್ತಡಗಳಿಗೆ ಸ್ಪಂದಿಸುತ್ತಿರುವೆವು ಎಂಬ ಭ್ರಮೆಯಿಂದ ಹೊರಬಂದು, ಮನುಷ್ಯನ ಮೂಲಭೂತವಾದ ಅಭೀಪ್ಸೆಯ ನೆಲೆಗಳನ್ನು ಅನುಭವದ ಮುಖೇನ ಶೋಧಿಸತೊಡಗಿದ್ದು ಮೊದಲನೆ ಹಂತ. ಆನಂತರದಲ್ಲಿ ವ್ಯಕ್ತಿ–ಸಮಾಜ–ಪರಿಸರ ಇವುಗಳನ್ನು ಹೊಸ ಹೊಸ

ಪರಿಭಾಷೆಯಲ್ಲಿ ಅರ್ಥೈಸಿಕೊಂಡದ್ದರಿಂದ ವ್ಯಕ್ತಿ ಮತ್ತು ಸಮಾಜವನ್ನು ನೋಡುವ ದೃಷ್ಟಿಕೋನದಲ್ಲಾದ ಬದಲಾವಣೆಗೆ ಸಂಬಂಧಿಸಿದ್ದು ಎರಡನೆಯ ಹಂತ.

**ಹುಡುಕಾಟವು ತಳೆದ ಅನುಭವ ರೂಪ:** ಸಾಮುದಾಯಿಕ ಜೀವನ ಶ್ರದ್ಧೆಯನ್ನು ನಿಯಂತ್ರಿಸುತ್ತಿರುವ ಶಕ್ತಿಗಳಾವುವು ಎಂಬುದನ್ನು ಅನ್ವೇಷಿಸಲು ತೇಜಸ್ವಿಯವರು ಅರಸುವ ಮಾರ್ಗ ವೈಜ್ಞಾನಿಕವಾದದ್ದು, ಹಾಗಾಗಿ ಅನುಭವಗಳ ಹಲವು ಮಗ್ಗುಲುಗಳನ್ನು ಪರೀಕ್ಷಿಸುತ್ತ ಏಕಕಾಲದಲ್ಲಿ ಒಂದು ಅನುಭವದ ವಿವಿಧ ಮುಖಗಳನ್ನು ಕಾಣಿಸುತ್ತಾ ಹೋಗುತ್ತಾರೆ. ಅನುಭವದ ಜೊತೆಜೊತೆಗೆ ಅರಿವಿನ ವಿಕಸನವು ಚಲನಶೀಲವಾಗಿ ಬಿಡುತ್ತದೆ. ಅದರಿಂದಾಗಿಯೇ ಮನುಷ್ಯರ ಸಮಸ್ಯೆಗಳು ತೇಜಸ್ವಿಯವರಿಗೆ ಕೇವಲ ವ್ಯಕ್ತಿ ವಿಶಿಷ್ಟ ಸಮಸ್ಯೆಗಳಾಗಿ ಕಾಣುವುದಿಲ್ಲ. ಮನುಷ್ಯ ಪರಿಸರದ ಕೂಸಾದ್ದರಿಂದ ಆ ಪರಿಸರವನ್ನು ನಿರ್ದಿಷ್ಟವಾಗಿ ಶೋಧಿಸುವ ತೇಜಸ್ವಿಯವರು ಸಮಸ್ಯೆಯ ಮೂಲವನ್ನು ಅದರ ಎಲ್ಲಾ ಸಂಕೀರ್ಣತೆ ಮತ್ತು ಸ್ವಯಂ ವಿರೋಧಗಳಲ್ಲಿ ಗುರುತಿಸುತ್ತಾರೆ. ಅವರ ವೈಚಾರಿಕ ಚಿಂತನೆಗಳು ವ್ಯಕ್ತಿ ವೈಪರೀತ್ಯಗಳನ್ನು ಅವುಗಳ ಸಾಮಾಜಿಕ ಸಂದರ್ಭಗಳ ಜೊತೆಗಿಟ್ಟು ಅರ್ಥಮಾಡಿಕೊಳ್ಳುವ ಸಾಧನವಾಗಿದೆ. ತೇಜಸ್ವಿಯವರು ಯಾವುದೇ ಸಂದರ್ಭಗಳನ್ನು ಅದರ ಸಾಪೇಕ್ಷತೆಯಲ್ಲೇ ಅರ್ಥಮಾಡಿಕೊಳ್ಳುವರಾದರೂ ಪರಿಪೂರ್ಣ ಸಾಮಾಜಿಕ ಸಂಬಂಧಗಳ ಬಗ್ಗೆ ಅವರಿಗೊಂದು ಆರೋಗ್ಯಕಾರಿ ಕಲ್ಪನೆಯಿರುವುದರಿಂದ ಅವರ ಕಥನಗಳಲ್ಲಿ ನಿರ್ವಹಿಸಲ್ಪಟ್ಟ ಪಾತ್ರಗಳು ಅನನ್ಯತೆಯನ್ನು ಪಡೆದುಕೊಳ್ಳುತ್ತವೆ. ಕಾಲಾತೀತ, ದೇಶಾತೀತ ಸಂದರ್ಭಗಳಲ್ಲಿ ಇಟ್ಟು ನೋಡಿದಾಗ ಸಾಂದರ್ಭಿಕವಾಗಿ ವ್ಯಕ್ತವಾಗುವ ಧೋರಣೆಗಳಲ್ಲಿ ಬದುಕಿನ ಅರ್ಥ ನೇತ್ಯಾತ್ಮಕತೆಯಿಂದ ಇತ್ಯಾತ್ಮಕತೆಯೆಡೆಗೆ ಸರಿಯುತ್ತದೆ.

**ಪ್ರಭಾವಿತ ಹಾಗೂ ಅನುಕರಣೆಯ ಜೀವನ:** ವಿಚಾರವಂತನೂ, ಬುದ್ಧಿವಂತನೂ, ಪ್ರಜ್ಞಾವಂತನೂ ಅನ್ನಿಸಿಕೊಂಡ ವ್ಯಕ್ತಿಯು ಮೂಢನಂಬಿಕೆಗಳ ಜಗತ್ತಿನೊಳಗೆ ಪದೇ ಪದೇ ಸಂಘರ್ಷಕ್ಕೆ ಮುಖಾಮುಖಿಯಾಗುತ್ತಾನೆ. ವ್ಯಕ್ತಿ ಸೈದ್ಧಾಂತಿಕವಾಗಿ ತಾನೆಷ್ಟೇ ಬೆಳೆದಿದ್ದರೂ, ಪ್ರಜ್ಞಾವಂತ ಎಂದುಕೊಂಡರೂ, ವಾದವಿವಾದಗಳಲ್ಲಿ ಪ್ರಕಾಂಡ ಪಂಡಿತನೇ ಆಗಿದ್ದರೂ ಕೆಲವು ಸಣ್ಣ ಪುಟ್ಟ ವಿಚಾರಗಳಲ್ಲಿ ಎಡವಿ ಬೀಳುತ್ತಾನೆ. ಆ ಸಂದರ್ಭಗಳಲ್ಲಿನ ಸಾಮಾನ್ಯ ಸಂಗತಿಗಳು ಕೂಡ ತಮ್ಮದೇ ಸಿದ್ಧಾಂತವನ್ನು ಅಲ್ಲಾಡಿಸಿ ಬಿಡುತ್ತವೆ.

ಬದುಕಿನ ಕ್ರಿಯಾತ್ಮಕ ಚಟುವಟಿಕೆಗಳು, ಆ ಬಗೆಗೆ ತೆಗೆದುಕೊಳ್ಳುವ ತೀರ್ಮಾನಗಳು, ವಿಚಾರ ವಿಮರ್ಶೆಗಳು ಏಷ್ಟೇ ಪ್ರಯತ್ನ ಪಟ್ಟರೂ ದಕ್ಕದೆ ಕಟ್ಟಕಡೆಗೆ ತರ್ಕಾತೀತವಾದ ನೆಲೆಗೆ ಬಂದು ನಿಂತು ಸೀಮಿತತೆಯನ್ನು ನಿರ್ಮಿಸಿಬಿಡುತ್ತದೆ. ಬೌದ್ಧಿಕ ಸಂಘರ್ಷಕ್ಕೆ ಈಡುಮಾಡುವ ಈ ಅಂಶ ತೇಜಸ್ವಿ ಕೃತಿಗಳಲ್ಲಿ ಪುನರಾವರ್ತನೆಗೊಳ್ಳುತ್ತವೆ. ಇವೆಲ್ಲ ಪುನರಾವರ್ತಿತ ಪ್ರಕ್ರಿಯೆ ಆದರೂ ಅರ್ಥವಿಸ್ತರಣೆಯ ವ್ಯಾಪ್ತಿ ಒಂದರಿಂದ ಮತ್ತೊಂದರಲ್ಲಿ ಹಿರಿದಾಗಿದೆ.

**ಕಳೆಗಟ್ಟಿದ ಪರಿಸರ ಮತ್ತು ದೇಸಿ ಪ್ರಜ್ಞೆ;** ಪ್ರತಿಯೊಂದು ಜೀವಿಗಳಲ್ಲೂ ತನ್ನದೇ ಜೈವಿಕ ಚೈತನ್ಯ ಶಕ್ತಿ ಅಡಗಿರುತ್ತದೆ. ಮಾನವೀಯ ಘಟನೆಗಳ ಹಿನ್ನೆಲೆಯಲ್ಲಿ ಅವುಗಳ ಪಾತ್ರ ಮಹತ್ತರವಾದದ್ದು. ಹಾಗಿದ್ದೂ ಅವುಗಳನ್ನು ಸೂಕ್ಷ್ಮವಾಗಿ ಗಮನಿಸುವ ಅಥವಾ ವಿಶ್ಲೇಷಿಸುವ ಕಾರ್ಯದಲ್ಲಿ ಮನುಷ್ಯರು ಅಪರಿಚಿತರಂತೆ ಉಳಿದುಬಿಟ್ಟಿದ್ದಾರೆ ಎನ್ನುವ ವಿಷಾದ ಕರ್ವಾಲೋ, ಪರಿಸರದಕಥೆ, ಏರೋಪ್ಲೇನ್ ಮತ್ತು ಚಿಟ್ಟೆ ಕಥೆಗಳಲ್ಲಿ ವ್ಯಕ್ತವಾಗುತ್ತದೆ. ಆಧುನಿಕ ವಿದ್ಯಾಭ್ಯಾಸದಿಂದ ರೂಪಿತಗೊಂಡ ಮಾನವರ

ಬೌದ್ಧಿಕತೆಯು ಪರಂಪರಾಗತವಾದ ದೇಸೀಯ ನಂಬಿಕೆಗಳೊಡನೆ ಸಮರಕ್ಕಿಳಿದು ಹೊಸ ದರ್ಶನವನ್ನು ಪಡೆಯಬೇಕಾದ ಮಹತ್ವವನ್ನು ಇಲ್ಲಿನ ಕಥೆಗಳು ತಿಳಿಸುತ್ತವೆ.

**ಪ್ರಕೃತಿಯ ಜೊತೆಗೆ ಅನುಸಂಧಾನ:** ಮನುಷ್ಯ ತಾನೆಷ್ಟೇ ಬೌದ್ಧಿಕವಾಗಿ ಬೆಳೆದಿದ್ದೇನೆಂದುಕೊಂಡರೂ ಪ್ರಕೃತಿಯ ಎದುರು ಸೆಣಸಾಟಕ್ಕೆ ನಿಲ್ಲಲಾಗುವುದಿಲ್ಲ. ಸದಾ ಅನಿರೀಕ್ಷಿತ ಸ್ಪರ್ಧೆಯನ್ನೊಡ್ಡುವ ಪ್ರಕೃತಿ ಸದಾಕಾಲ ಪ್ರಶ್ನೆಯಾಗಿಯೇ ಉಳಿದುಬಿಡುವುದು ವಿಪರ್ಯಾಸ! ಸಾವಿರ ಸಾವಿರ ಪಾಲು ನಿಗೂಢತೆಯನ್ನು ಉಳಿಸಿಕೊಂಡಿರುವ ಪ್ರಕೃತಿ ಶೋಧಿಸಿದಷ್ಟೂ ಆಳಕ್ಕಿಳಿದು ಮನುಷ್ಯನ ಅಂತರಂಗದ ಬಯಕೆಗಳನ್ನು ಕೆದುಕುತ್ತಾ ಇನ್ನೂ ಇನ್ನೂ ನಿಗೂಢವಾಗುತ್ತಾ ಕುತೂಹಲ, ರೋಮಾಂಚನಗಳಿಗೆ ಪುಷ್ಟಿನೀಡುತ್ತದೆ. ಪ್ರಕೃತಿಯೊಡನೆ ಮುಖಾಮುಖಿಯಾದ ಮನುಷ್ಯ ತನ್ನ ಬದುಕಿನೊಳಗೆ ಅಂತರ್ಗತಗೊಂಡಿರುವ ಪಾರಂಪರಿಕ ನಂಬಿಕೆ ಸಿದ್ಧಾಂತಗಳನ್ನು ಒರೆಗೆ ಹಚ್ಚಿ ಉನ್ನತ ಮೌಲ್ಯಗಳತ್ತ ದೃಷ್ಟಿ ಹರಿಸುವುದನ್ನು ಕಾಣುತ್ತೇವೆ.

**ಪರಿಮಿತತೆಯ ಚೌಕಟ್ಟನ್ನು ಮೀರಿ:** ವ್ಯವಸ್ಥೆಯಲ್ಲಿ ಅಸ್ತವ್ಯಸ್ಥತೆ, ಅಪಮೌಲ್ಯಗಳ ವಿಜೃಂಭಣೆ, ಮನುಷ್ಯನ ಅಸಹಾಯಕತೆ, ಅಸ್ಥಿರ ಬದುಕಿನ ಅನಿಶ್ಚಿಯತೆ, ಸಾಮಾಜಿಕ ಹೊಣೆಗಾರಿಕೆಗೆ ಹೆಗಲು ಕೊಡಲಾಗದಕ್ಕಾಗಿ ಪರಿತಪಿಸುವಿಕೆ ತೇಜಸ್ವಿ ಕಥನದ ಪ್ರಮುಖ ಅಂಶಗಳು. ಇಲ್ಲಿ ಪ್ರಮುಖವಾದದ್ದು ವ್ಯಕ್ತಿಕೇಂದ್ರಿತ ಚಿಂತನಯಾದರೂ ವಿಶ್ವವ್ಯವಸ್ಥೆಯ ಪ್ರಮುಖ ಕೇಂದ್ರ ಮನುಷ್ಯನೇ ಎಂಬುದರಿಂದ ಆರಂಭಿಸಿ ಮಿಕ್ಕಿದ್ದೆಲ್ಲ ಅವನ ಸಲುವಾಗಿ ಜನ್ಮತಳೆದದ್ದು ಎಂಬ ಭಾವ ಆತನನ್ನು ಎತ್ತರಕ್ಕೇರಿಸುತ್ತದೆ. ಭೌತಿಕ ಮತ್ತು ಬೌದ್ಧಿಕ ಸ್ವರೂಪದಲ್ಲಿ ಆತ ಪ್ರಾಮುಖ್ಯತೆಯನ್ನು ಪಡೆದುಕೊಂಡಿರುವಾಗ ಆತನಿಗೆ ಸಂಬಧಿಸಿದ್ದೆಲ್ಲವೂ ಇಲ್ಲಿ ಪ್ರಮುಖವಾಗುತ್ತವೆ. ಅಂದರೆ ಮನುಷ್ಯನ ಆಸೆ-ಆಕಾಂಕ್ಷೆಗಳು ಅವನಿಂದ ನಿರ್ಮಾಣಗೊಂಡಿರುವ ಸಾಮಾಜಿಕ-ಧಾರ್ಮಿಕ-ರಾಜಕೀಯ ವ್ಯವಸ್ಥೆಗಳು-ಸಮಸ್ಯೆಗಳು ಎಲ್ಲವೂ ಸದಾ ಮುಖಾಮುಖಿಯಾಗುತ್ತವೆ.

ತೇಜಸ್ವಿಯವರಲ್ಲಿ ಮನುಷ್ಯ ಜೀವನವೇ ಕಾಳಜಿಯ ಕೇಂದ್ರವಾಗಿದೆಯಾದರೂ ಅವರ ಬರವಣಿಗೆ ಮನುಷ್ಯ ಜೀವನದ ರಾಜಕೀಯ-ಸಾಮಾಜಿಕ-ನೈತಿಕ ಕಾಳಜಿಗಳನ್ನು ಹಲವು ರೀತಿಯಲ್ಲಿ ಮಂಥನಕ್ಕೊಳಪಡಿಸಿ ಚಿತ್ರಿತಗೊಂಡಿದೆ. ಇದರ ವಿಶೇಷವೇನೆಂದರೆ ಮನುಷ್ಯನೇ ಸೃಷ್ಟಿಯ ಕೇಂದ್ರಶಕ್ತಿಯಾಗಿರದೆ ಆತ ಸಣ್ಣಕೊಂಡಿ ಮಾತ್ರವಾಗಿ ಉಧೃತವಾಗಿರುವುದು. ಮಿಲಿಯಂತರ ವರ್ಷಗಳ ಈ ವಿಕಾಸಪಥದಲ್ಲಿ ಎದುರಾಗುವ ಪರಿಸರಚಿಂತನೆ, ನಿರಂತರ ಅಭ್ಯಾಸ, ವೈಜ್ಞಾನಿಕ ಅನ್ವೇಷಣೆಗಳ ಈ ಮಜಲುಗಳಲ್ಲಿ ಮನುಷ್ಯನ ಸ್ಥಾನ ಏನು ಎನ್ನುವುದನ್ನು ಅವರು ಸ್ಪಷ್ಟವಾಗಿ ಗುರುತಿಸಿಕೊಂಡಿದ್ದಾರೆ.

**ಸಂಶ್ಲೇಷಣಾತ್ಮಕ ಭಿನ್ನನೋಟ:** ದೇವರ ಅಸ್ತಿತ್ವದಲ್ಲಿ ನಂಬಿಕೆ, ಅಪನಂಬಿಕೆಯ ಬಗ್ಗೆ ಎಲ್ಲಿಯೂ ಪರ ಅಥವಾ ವಿರೋಧ ಇಲ್ಲ. ಅನೇಕ ಕಡೆಗಳಲ್ಲಿ ದೇವರು, ದೆವ್ವ, ಗ್ರಹಗತಿ, ಗ್ರಹಚಾರ......ಎಂಬಿತ್ಯಾದಿ ಪದಗಳು ಮೂಡಿ/ಕೇಳಿಬರುತ್ತವಾದರೂ, ಇವುಗಳನ್ನು ಅಂಗೀಕರಿಸುವ ಇಲ್ಲವೆ ನಿರಾಕರಿಸುವ ಗೋಜಿಗೆ ತೇಜಸ್ವಿಯವರು ಹೋಗುವುದಿಲ್ಲ. (ಮನುಷ್ಯ ಸಂದರ್ಭಾನುಸಾರ ತನ್ನ ಕಲ್ಪನೆಗಾಧಾರವಾಗಿ ಸೃಷ್ಟಿಸಿಕೊಳ್ಳುವುದು ಇಲ್ಲವೆ ಸ್ಮೃತಿಪಟಲದಿಂದ ಹೊರದೂಡುವುದು ನಡೆದೇ ಇರುತ್ತದೆ.) ತೇಜಸ್ವಿ ಕಥಾ ಜಗತ್ತಿನಲ್ಲಿ ಪ್ರಕೃತಿಯೇ ದೇವರು. ಪ್ರಕೃತಿಯೊಂದಿಗಿನ ಒಡನಾಟ

ಹತ್ತಿರವಾದಷ್ಟೂ, ಅದಮ್ಯವಾದಷ್ಟೂ ಬ್ರಹ್ಮಾಂಡವನ್ನು-ಬ್ರಹ್ಮತ್ವವನ್ನು ಅರ್ಥೈಸಿಕೊಳ್ಳುವ ಪ್ರಯತ್ನ ಅದರಲ್ಲೇ ಆಧ್ಯಾತ್ಮಿಕ ಶೋಧ, ಅನುಭವದ ಮೂಲಕ ಗ್ರಹಿಕೆಯ ಮಾರ್ಗಗಳ ಅನ್ವೇಷಣೆ, ಇದು ಮುಂದುವರೆಯುತ್ತಲೇ ಇರುತ್ತದೆ. ಮನುಷ್ಯರು ಸಾಂಸ್ಕೃತಿಕ, ಸಾಮಾಜಿಕ ಪಲ್ಲಟಗಳಿಗೆ ಒಳಗಾದಾಗ ಅವರ ವೈಚಾರಿಕ ನಿಲುವುಗಳು ಅದಕ್ಕೆ ತಕ್ಕಂತೆ ಬದಲಾಗುತ್ತವೆ. ಇಂತಹ ಬದಲಾವಣೆಗಳು ಹಿಂದಿನ ಮತ್ತು ಇಂದಿನ ಪ್ರತಿಕಿಯೆಗಳಲ್ಲಿ ವಿರೋಧವನ್ನು ಒಡ್ಡುತ್ತವೆ. ಮನುಷ್ಯ ಮತ್ತು ಪ್ರಕೃತಿಯ ನಡುವಣ ಸಂಬಂಧದ ರಹಸ್ಯವನ್ನು ತಿಳಿಯಬಯಸುವ ಪ್ರತಿಯೊಬ್ಬರೂ ಇವೆಲ್ಲ ಸಂಘರ್ಷಗಳಿಂದ ಮುಕ್ತರಾಗಿ ಸಂಶ್ಲೇಷಣೆಗೊಂಡ ಹೊಸ ದೃಷ್ಠಿಯನ್ನು ಮನಗಾಣಬೇಕು ಎಂದು ತೇಜಸ್ವಿ ತಮ್ಮ ವಿಚಾರವನ್ನು ಮಂಡಿಸುತ್ತಾರೆ.

ತೇಜಸ್ವಿಯವರು ಕ್ರಾಂತಿ/ಹೋರಾಟವನ್ನು ಜೀವನಪರ ಮೌಲ್ಯವಾಗಿ ಸ್ವೀಕರಿಸುವುದಿಲ್ಲ. ಅಂದರೆ ಕ್ರಾಂತಿಯನ್ನು ಬೋಧಿಸುವ, ಕ್ರಾಂತಿಯ ಮೂಲಕ ಸ್ಥಿತಿಯನ್ನು ಸುಧಾರಿಸುತ್ತೇವೆ ಎಂದು ಹೇಳಿಕೊಳ್ಳುವ ವ್ಯಕ್ತಿಗಳನ್ನು ತೇಜಸ್ವಿ ಸಂದೇಹದಿಂದಲೇ ನೋಡುತ್ತಾರೆ. ಕ್ರಾಂತಿಯನ್ನು ಬೋಧಿಸಲು ಇಲ್ಲವೆ ಪಾಲ್ಗೊಳ್ಳಲು ಹಾತೊರೆಯುವವರನ್ನು ಗೇಲಿ ಮಾಡುತ್ತಾರೆ. ಸಮಾಜ ಮತ್ತು ಸಾಮಾಜಿಕ ಹೋರಾಟ ಇವುಗಳ ಸಂಬಂಧಗಳನ್ನು ನಿರ್ಣಯಿಸುವಾಗಲೆಲ್ಲ ಕ್ರಾಂತಿ ಹೋರಾಟದಷ್ಟು ಕೃತಕವಾದ ಜೀವವಿರೋಧಿಯಾದ ಹುಸಿಮೌಲ್ಯ ಬೇರೊಂದಿಲ್ಲ ಎನಿಸಿ ತೀವ್ರ ಗುಮಾನಿ ಪಡುತ್ತಾರೆ. ಕ್ರಾಂತಿ ಸುಳ್ಳು ಭರವಸೆಯ ಒಂದು ಮುಖವೂ ಆಗಿರುವುದರಿಂದ ಅವನತಿ ಮೂಲವಾದ ಎಲ್ಲ ಹುಸಿ ವಿಚಾರಗಳನ್ನೂ ತೇಜಸ್ವಿ ಏಕೆ ತಿರಸ್ಕರಿಸುತ್ತಾರೆ ಎಂಬ ಪ್ರಶ್ನೆಗೆ ಚಿದಂಬರ ರಹಸ್ಯ, ಕೃಷ್ಣೇಗೌಡನ ಆನೆ, ಮಾಯಾಲೋಕದಲ್ಲಿನ ಅನೇಕ ಸಂದರ್ಭಗಳು ಸೂಚನೆಯಾಗಬಲ್ಲವು.

ಸ್ವಾರ್ಥ ಸಣ್ಣತನ, ಆಸೆ-ಆದರ್ಶ, ಛಲ ಪೈಪೋಟಿ ಇತ್ಯಾದಿಯಾಗಿ ಮನುಷ್ಯ ಸಹಜವಾದ ಎಲ್ಲ ನಡಾವಳಿಗಳನ್ನು ಬದುಕುವ ಪ್ರಬಲ ಇಚ್ಛೆಯಿಂದಾಗಿಯೇ ಪ್ರಕಟಿಸುತ್ತಾ ಹೋಗುವ ಮಾಯಾಲೋಕ ಮನುಕುಲದ ಸಹಜ ಬದುಕಿನ ಸಂಕೇತವಾಗಿದೆ. ಆದ್ದರಿಂದಲೇ ಮನುಷ್ಯ ಪ್ರಜ್ಞೆಯ ವಿಕಾಸದ ಯಾವುದೋ ಘಟ್ಟದಲ್ಲಿ ಹುಟ್ಟಿಕೊಂಡ ಕೆಲವಿಚಾರಗಳು ಸೃಷ್ಟಿಯ ಮೂಲ ಕಲ್ಪನೆಯನ್ನೇ ತಿರುಚಿ ಬಿಡುವ ಧ್ವಂಸಗೊಳಿಸುವ ವ್ಯಂಗವನ್ನು, ಇವುಗಳ ಸಾಂಸ್ಕೃತಿಕ ಸಾಮಾಜಿಕ ಅಪಾಯಗಳನ್ನೂ, ಮಾನವೀಯ ದುರಂತಗಳನ್ನೂ ತೇಜಸ್ವಿ ಬಯಲಿಗೆಳೆಯುತ್ತಾರೆ.
ಆಧುನಿಕ ಸಂಸ್ಕೃತಿ-ಸಮಾಜ ಇವುಗಳ ಕುರಿತ ಹಾಗೆ (ಹೊಸವಿಚಾರಗಳಲ್ಲಿ) ವ್ಯಾಖ್ಯಾನಿಸಿರುವ ತೇಜಸ್ವಿಯವರು ಸಂಸ್ಕೃತಿಯ ಹೊಸ ಆಶಯಗಳಿಗಾಗಿ ಕ್ರಿಯಾತ್ಮಕವಾಗುವುದಕ್ಕಿಂತ, ವ್ಯಕ್ತಿತ್ವದ ಹೊಸ ನೆಲೆಗಳಿಗಾಗಿ ಪ್ರಯತ್ನಿಸುವುದೇ ಹೆಚ್ಚು ಖಚಿತವಾದದ್ದು ಎಂಬ ಧೋರಣೆಯನ್ನು ತಳೆದಿರುವುದು ಮಾಯಾಲೋಕದಲ್ಲಿ ಸ್ಪಷ್ಟಗೊಳ್ಳುತ್ತದೆ.

**ಆವೃತ ರಹಸ್ಯಗಳ ಒಡಲಲ್ಲಿ:** ಮನುಷ್ಯನಿರ್ಮಿತ ಸಮಾಜದಲ್ಲಿ ವ್ಯಕ್ತಿಗತ ಸಮಸ್ಯೆಗಳಿಗಿಂತ ಪ್ರಮುಖವಾಗಿ ಕಂಡುಬರುವುದು ಸಾಮಾಜಿಕ ಸ್ವರೂಪದಲ್ಲಿ ಅಡಗಿರುವ ವಿಭಿನ್ನ ಅಭಿರುಚಿಯ ವೈರುಧ್ಯ ಮನೋಭಾವನೆಯನ್ನೊಳಗೊಂಡ ಮನುಷ್ಯ ಮನುಷ್ಯರ ನಡುವಿನ ಸಂಘರ್ಷ. ಇದರ ತೀವ್ರತೆ ಕೇವಲ ವ್ಯಕ್ತಿಗಳಿಗೆ ಮಾತ್ರ ಸೀಮಿತವಾಗುಳಿಯದೆ ತನ್ನ ಕುಟುಂಬವನ್ನು ಸಮಾಜವನ್ನು

